# ಯುಗಾವತಾರ ಶ್ರೀರಾಮಕೃಷ್ಣ



# ಯುಗಾವತಾರ ಶ್ರೀರಾಮಕೃಷ್ಣ

(ನಾಲ್ಕು ಸಂಪುಟಗಳಲ್ಲಿ)

**ಸಂಪುಟ-೪**

ಸ್ವಾಮಿ ಪುರುಷೋತ್ತಮಾನಂದ

ಶುಭಾಷಯಗಳೊಂದಿಗೆ
ಶಾರದಾ ಶಾಂತಿ ಆಶ್ರಮ
28/1. ಸೆಕ್ರೆಟರಿಯೇಟ್ ಲೇ ಔಟ್,
ವಿಜಯನಗರ, ಬೆಂಗಳೂರು-560040



ಶ್ರೀರಾಮಕೃಷ್ಣಾಶ್ರಮ
ಬೆಂಗಳೂರು

YUGAVATARA SRI RAMAKRISHNA (Vol. IV) – last of the four volumes of a comprehensive biography of Sri Ramakrishna in Kannada by Swami Purushottamananda. Published by Swami Harshananda, President, Sri Ramakrishna Ashrama, Bangalore 560 019.

First Edition: October 1991 Pp. 310 + xviii
Price: Limp: Rs. 30/- Calico: Rs. 50/-

ಎಲ್ಲ ಹಕ್ಕುಗಳೂ ಪ್ರಕಾಶಕರಿಗೆ ಸೇರಿವೆ.

ಪ್ರಥಮ ಮುದ್ರಣ: ಅಕ್ಟೋಬರ್ 1991
ಪ್ರತಿಗಳು: 10,000

ಮುಖಪುಟ ವಿನ್ಯಾಸ: ಚಂದ್ರನಾಥ

**ಬೆಲೆ:** **ಸಾಧಾರಣ ಪ್ರತಿ : ರೂ. 30/-**
**ಉತ್ತಮ ಪ್ರತಿ : ರೂ. 50/-**

ಟೈಪ್‌ಸೆಟ್ಟಿಂಗ್ : ಶ್ರೀನಿತ್ಯಾನಂದ ಪ್ರಿಂಟರ್ಸ್, ಬೆಂಗಳೂರು–50. ಫೋನ್: 626027
ಆಫ್‌ಸೆಟ್ : ಗುರುದತ್ ಪ್ರಿಂಟರ್ಸ್, ಬೆಂಗಳೂರು–28. ಫೋನ್: 622230

# ಮುನ್ನುಡಿ

'ಯುಗಾವತಾರ ಶ್ರೀರಾಮಕೃಷ್ಣ' ಉದ್ಗ್ರಂಥದ ಕೊನೆಯ ಸಂಪುಟವನ್ನು ನಿಮ್ಮ ಮುಂದಿಡಲು ಸಂತೋಷವೂ ತೃಪ್ತಿಯೂ ಆಗುತ್ತಿವೆ. ನಿಮಗೂ ಇದರಿಂದ ಸಂತೋಷವೂ ತೃಪ್ತಿಯೂ ಆದರೆ ನಾವು ಧನ್ಯರು.

ಯುಗಾವತಾರಪುರುಷರಲ್ಲಿ ಸಾಮಾನ್ಯವಾಗಿ ನಾವು ಮೂರು ಲಕ್ಷಣಗಳನ್ನು ಕಾಣುತ್ತೇವೆ. ಮಹತ್ ಸಾಧನೆಯನ್ನು ಮಾಡಿ ಮಹತ್ತತ್ತ್ವಗಳನ್ನು ಸಾಕ್ಷಾತ್ಕರಿಸಿ ಕೊಳ್ಳುವುದು ಮೊದಲನೆಯದು. ಅವನ್ನು ಸಾಮಾನ್ಯರಿಗೂ ಅರ್ಥವಾಗುವಂಥ ರೀತಿಯಲ್ಲಿ ಸರಳವಾದ ಮಾತುಗಳ ಮೂಲಕ ಉಪದೇಶಿಸುವುದು ಎರಡನೆಯದು. ತಮ್ಮ ಮಹತ್ಕಾರ್ಯವು ತಮ್ಮ ಜೀವಿತಕಾಲಕ್ಕೇ ಸೀಮಿತವಾಗದೆ ಮುಂದೆಯೂ ಉಪಯುಕ್ತವಾಗಲಿ ಎಂಬ ಉದ್ದಿಶ್ಯದಿಂದ ಯೋಗ್ಯ ಶಿಷ್ಯಪರಂಪರೆಯನ್ನು ನಿರ್ಮಿಸಿ ಅವರ ಮೂಲಕ ಅದನ್ನು ಮುಂದುವರಿಸಿಕೊಂಡು ಹೋಗುವುದು ಮೂರನೆಯದು. ನಮ್ಮ ಯುಗಾವತಾರರು ಈ ಮೂರನ್ನೂ ಬಹು ಸಮರ್ಪಕವಾಗಿ ನೆರವೇರಿಸಿರುತ್ತಾರೆ.

ಮೂರನೆಯ ಸಂಪುಟದಲ್ಲಿ ಮೊದಲಾಗಿದ್ದ ಶಿಷ್ಯಸಂಚಯನ ಶಿಷ್ಯಶಿಕ್ಷಣಗಳು ಇಲ್ಲಿ ಮುಂದುವರಿದು ಮುಗಿದಿವೆ. ತಮ್ಮ ಅವತಾರದ ಉದ್ದೇಶ ಪೂರ್ಣವಾಯಿ ತೆಂಬುದು ಅರಿವಾದದ್ದರಿಂದ ಯುಗಾವತಾರರು ತಮ್ಮ ಲೀಲಾನಾಟಕವನ್ನು ಅಂತ್ಯ ಗೊಳಿಸಿದ್ದರ ವಿವರಣೆಯೂ ಇಲ್ಲಿದೆ.

ಇನ್ನು ಉತ್ತರಕಾಂಡ! 'ಉತ್ತರಕಾಂಡ'ವೆಂದ ಕೂಡಲೇ ನಮಗೆ ನೆನಪಿಗೆ ಬರುವುದು ವಾಲ್ಮೀಕಿ ರಾಮಾಯಣದ ಉತ್ತರಕಾಂಡ. ಅದಾದರೋ ಒಂದು ರೀತಿ ಯಲ್ಲಿ ಗೋಳಿನ ಕಾಂಡ. ಆದರೆ ಈ ಉತ್ತರಕಾಂಡ ಹಾಗಲ್ಲ. ರಾಮಕೃಷ್ಣಸಾಮ್ರಾಜ್ಯದ, ಅದನ್ನಾಳಿದ ಲವಕುಶಸದೃಶ ವಿವೇಕಾನಂದ-ಬ್ರಹ್ಮಾನಂದರ ಆಡಳಿತ ಕೌಶಲ, ಅದರ ಬಲದಿಂದ ಆ ಸಾಮ್ರಾಜ್ಯವು ಸಮೃದ್ಧವಾಗುತ್ತಿರುವ ವಿಷಯ ಇಲ್ಲಿದೆ. ಇದು ಗೋಳಿನ ಕಥೆಯಲ್ಲ, ಬಾಳಿನ ಕಥೆ.

ಪುಸ್ತಕವನ್ನು ಓದಲು ಕೈಗೆತ್ತಿಕೊಂಡರೆ ಮುಗಿಸುವವರೆಗೂ ಎತ್ತಿಡಲು ಮನ ಬಾರದ ರೀತಿಯಲ್ಲಿ, ಆತ್ಯಾಕರ್ಷಕ ಶಿರೋನಾಮಗಳ ಅಡಿಯಲ್ಲಿ, ರಸವತ್ತಾದ ಶೈಲಿ ಯಲ್ಲಿ ಸ್ವಾಮಿ ಪುರುಷೋತ್ತಮಾನಂದರು ಎಲ್ಲವನ್ನೂ ನಿರೂಪಿಸಿದ್ದಾರೆ. ನೀವೂ ಈ ರಸಾಸ್ವಾದವನ್ನು ಅನುಭವಿಸಿ ಆನಂದಿಸಿ.

ಈ ಸಂಪುಟದ ಪ್ರಕಟಣೆಯೊಂದಿಗೆ ಒಂದು ಮಹಾಯಜ್ಞ ಮುಗಿದಿದೆ. ಇಂಥ ಮಹತ್ಕಾರ್ಯ ನಿರ್ವಿಘ್ನವಾಗಿ ಸಾಂಗವಾಗಿ ನೆರವೇರಲು ಹತ್ತಾರು ಜನ ಹಲವು ರೀತಿ ಯಲ್ಲಿ ಸಹಕರಿಸಿದ್ದಾರೆ. ಅವರೆಲ್ಲರಿಗೂ ನಾವು ಆಭಾರಿ; ವಿಶೇಷವಾಗಿ, ಧನಸಹಾಯ ವಿತ್ತಿರುವ ಮಹನೀಯರಿಗೂ ಮುದ್ರಣವನ್ನು ಸಕಾಲದಲ್ಲಿ ಅತೀವ ಶ್ರದ್ಧೆಯಿಂದ ಮಾಡಿಕೊಟ್ಟಿರುವ ಶ್ರೀನಿತ್ಯಾನಂದ ಪ್ರಿಂಟರ್ಸ್ ಅವರಿಗೂ ನಮ್ಮ ಕೃತಜ್ಞತೆಗಳು.

*ಸರ್ವಧರ್ಮಸ್ಥಾಪಕಸ್ತ್ವಂ ಸರ್ವಧರ್ಮಸ್ವರೂಪಕಃ।*
*ಆಚಾರ್ಯಾಣಾಂ ಮಹಾಚಾರ್ಯೋ ರಾಮಕೃಷ್ಣಾಯ ತೇ ನಮಃ॥*

**ಸ್ವಾಮಿ ಹರ್ಷಾನಂದ**
ಅಧ್ಯಕ್ಷರು, ಶ್ರೀರಾಮಕೃಷ್ಣಾಶ್ರಮ, ಬೆಂಗಳೂರು

# ಕೊನೆಯ ಸಂಪುಟದ ಮೊದಲ ಮಾತು

ಈ ನಾಲ್ಕನೆಯ ಹಾಗೂ ಕೊನೆಯ ಸಂಪುಟವನ್ನು ಬೆಳಕಿಗೆ ತರುವುದರ ಮೂಲಕ "ಯುಗಾವತಾರ ಶ್ರೀರಾಮಕೃಷ್ಣ" ಎಂಬ ಸಮಗ್ರ ಜೀವನಚರಿತ್ರೆಯನ್ನು ಕನ್ನಡ ಬಾಂಧವರ ಮುಂದಿಡಲು ಸಾಧ್ಯವಾದುದು ಈ ಗ್ರಂಥದ ಕಥಾನಾಯಕನ ಕೃಪಾವಿಶೇಷದಿಂದಲೇ ಎಂಬ ಅಂಶವನ್ನು ಪ್ರಾರಂಭದಲ್ಲೇ ಸ್ಮರಿಸಿಕೊಳ್ಳುತ್ತೇನೆ.

ಇದಾದ ಬಳಿಕ ತಕ್ಷಣವೇ ನಾನು ಸ್ಮರಿಸಿಕೊಳ್ಳಬೇಕಾದುದು ಶ್ರೀ ಸ್ವಾಮಿ ಹರ್ಷಾನಂದಜಿಯವರನ್ನು. ಈ ಕಾರ್ಯಕ್ಕೆ ಬೇಕಾದ ನಿರಂತರ ಸ್ಫೂರ್ತಿಯ ಸೆಲೆಯಾಗಿ ನಿಂತವರು ಅವರು.

ದಿವ್ಯತ್ರಯರಾದ ಶ್ರೀರಾಮಕೃಷ್ಣ, ಶ್ರೀಶಾರದಾದೇವಿ, ಶ್ರೀ ಸ್ವಾಮಿ ವಿವೇಕಾನಂದ—ಇವರ ಪವಿತ್ರ ಜೀವನಚರಿತ್ರೆಗಳ ಕುರಿತು, ಬೆಂಗಳೂರು ಶ್ರೀರಾಮಕೃಷ್ಣಾಶ್ರಮದಲ್ಲಿ ಪ್ರತಿ ಶನಿವಾರದಂದು ಸಂಜೆ ಉಪನ್ಯಾಸ ಕೊಡಲು ಹೊರಟಿದ್ದವನು ನಾನು. ಈ ಕಾರ್ಯವನ್ನು ಯಾರ ಜೀವನಚರಿತ್ರೆಯಿಂದ ಪ್ರಾರಂಭಿಸಲೆಂದು ಆಲೋಚಿಸಿ, ಸರ್ವಮಂಗಳೆಯಾದ ಮಾತೆ ಶ್ರೀಶಾರದಾದೇವಿಯವರ ಜೀವನವನ್ನೇ ಆರಿಸಿಕೊಂಡೆ. ಉಪನ್ಯಾಸಮಾಲಿಕೆ ಮುಗಿಯುತ್ತಿದ್ದಂತೆ ವಿಶ್ವಾಸಿಗರಿಂದ ಬೇಡಿಕೆ ಮೊದಲಾಯಿತು—ಇದನ್ನು ಗ್ರಂಥರೂಪದಲ್ಲಿ ತಂದುಕೊಡಿ ಎಂದು. ಗ್ರಂಥ ರಚಿಸಬೇಕೆಂಬ ಭಾವನೆ ಕನಸಿನಲ್ಲೂ ಇಲ್ಲದ ನನ್ನಿಂದ "ಶ್ರೀಶಾರದಾದೇವೀ ಜೀವನಗಂಗಾ" ಹರಿದುಬಂತು; ಓದುಗರ ಆದರ ಪಡೆಯಿತು. ಆ ಮಹಾತಾಯಿ ಮುಂದಿಟ್ಟ ಹೆಜ್ಜೆ ಅದೆಷ್ಟು ಮಂಗಳಕರವೆಂದರೆ, ಕೆಲಕಾಲದಲ್ಲೇ ಸ್ವಾಮಿ ವಿವೇಕಾನಂದರ ಸಮಗ್ರ ಜೀವನಚರಿತ್ರೆಯನ್ನೊಳಗೊಂಡ ಮೂರು ಮಹಾಸಂಪುಟಗಳು ಸುಗಮವಾಗಿ ಉದಯಿಸಿದುವು. ಇದೀಗ ಗ್ರಂಥರೂಪದಲ್ಲಿ ಶ್ರೀರಾಮಕೃಷ್ಣರ ಆವಿರ್ಭಾವ.

ನಾಲ್ಕು ಸಂಪುಟಗಳಲ್ಲಿ ವರ್ಣಿತವಾದ ಶ್ರೀರಾಮಕೃಷ್ಣರ ಈ ಜೀವನಚರಿತ್ರೆಯನ್ನು ಕೈಗೆತ್ತಿಕೊಂಡ ಕನ್ನಡಿಗರು, ಶ್ರೀರಾಮಕೃಷ್ಣರ ಕುರಿತು ಆಮೂಲಾಗ್ರ ಪರಿಚಯ ದೊರೆತಂತಾಯಿತು ಎಂದು ಹರ್ಷಗೊಂಡರೆ ಅಚ್ಚರಿಯೇನಿಲ್ಲ. ಆದರೆ ಅವರ ಕುರಿತು ಇನ್ನೂ ಒಂದು ಸಂಪುಟ ಬರೆಯುವಷ್ಟು ವಿಷಯಗಳಿವೆ ಎಂದು ಹೇಳಿದರೆ ಕಣ್ಣಗಲವಾಗದಿದ್ದೀತೆ ?

ಇನ್ನೊಂದು ವಿಷಯ: ಶ್ರೀರಾಮಕೃಷ್ಣರ ಮಹತ್ವಪೂರ್ಣ ದೈವೀಜೀವನದ ಒಂದೊಂದು ಘಟನೆಯೂ ಅರ್ಥಪೂರ್ಣ, ಒಂದೊಂದು ಮಾತೂ ಬೋಧಪ್ರದ. ಆದರೆ ಸಾಮಾನ್ಯ ಓದುಗರು ಅದನ್ನು ಯಥಾವತ್ತಾಗಿ ಅರ್ಥೈಸಿಕೊಂಡು ಅದರ ಭಾವವನ್ನು ಗ್ರಹಿಸಿ ಆನಂದಿಸಬಲ್ಲರೆ ? ಬಲ್ಲರಾದರೂ ಅದು ಒಮ್ಮೆಗೇ ಸಾಧ್ಯವಾಗುವ ಮಾತಂತೂ ಅಲ್ಲ. ಅನೇಕ ಬಾರಿ ಓದಿದ ಮೇಲೆ ಸಿದ್ಧಿಸುವ ಅಂಶ ಅದು. ಆದರೆ ಈ ನಾಲ್ಕೂ ಸಂಪುಟಗಳನ್ನು ಒಂದು ಸಲ ಓದಿಮುಗಿಸುವುದೇ ಪ್ರಯಾಸಕರವಾಗಿರುವಾಗ ಇನ್ನು ಹಲವು ಬಾರಿ ಓದಬಲ್ಲವರೆಷ್ಟು ಜನ ? ಆದ್ದರಿಂದ ಇಲ್ಲಿನ ಎಷ್ಟೋ ಘಟನೆಗಳ ಹಾಗೂ ಬೋಧಪ್ರದ ವಾಕ್ಯಗಳ ವಿವರಣೆಯನ್ನು ಕೊಡಬಹುದಾಗಿತ್ತು. ಆದರೆ ಮತ್ತದೇ ಸಮಸ್ಯೆ—ಗ್ರಂಥವಿಸ್ತಾರ, ಆರ್ಥಿಕ ಪ್ರಶ್ನೆ.

ಆದಕಾರಣ, ಭಕ್ತರು ಮುಮುಕ್ಷುಗಳು ಸಾಧಕರು ಆಗಾಗ ಸೇರಿ ಇಂಥ ಗ್ರಂಥಗಳ ಕುರಿತು ಸಾಮೂಹಿಕ ಅಧ್ಯಯನ ನಡೆಸುವುದು ಮೇಲು. ಮತ್ತು ಅದರಿಂದ ದೊರಕುವ ಲಾಭವೂ ಅಮೂಲ್ಯ.

ಇನ್ನು ವಯಸ್ಸಾದವರು ಹಾಗೂ ಹೆಚ್ಚು ಕೆಲಸಕಾರ್ಯಗಳ ಒತ್ತಡವಿಲ್ಲದವರು ಈ ಗ್ರಂಥವನ್ನು ಎಷ್ಟು ಸಲವಾದರೂ ಓದಬಹುದು, ಎಷ್ಟು ಪ್ರಯೋಜನವನ್ನಾದರೂ ಪಡೆಯಬಹುದು. ಅದಕ್ಕೆ ಮಿತಿಯೆಂಬುದಿಲ್ಲ. ಉದಾಹರಣೆಗೆ, ಒಮ್ಮೆ ಮೈಸೂರಿನ ವಯಸ್ಕ ಜಿಜ್ಞಾಸುವೊಬ್ಬರು ನನ್ನನ್ನು ಭೇಟಿಯಾದಾಗ "ನಾನು ಈಗಾಗಲೇ ಎಷ್ಟೋ ಗ್ರಂಥಗಳನ್ನು ಕೊಂಡಿದ್ದೇನೆ, ಓದಿದ್ದೇನೆ. ಆದರೆ ಅವುಗಳನ್ನು ನಾನಿಟ್ಟುಕೊಳ್ಳಲಿಲ್ಲ, ಇತರರಿಗೆ ಓದಲು ಕೊಟ್ಟುಬಿಟ್ಟೆ. ಆದರೆ 'ಯುಗಾವತಾರ ಶ್ರೀರಾಮಕೃಷ್ಣ'—ಇದನ್ನು ಮಾತ್ರ ನಾನೇ ಇಟ್ಟುಕೊಂಡಿದ್ದೇನೆ. ಇದು ಮತ್ತೆಮತ್ತೆ ಓದಿ ಆಸ್ವಾದಿಸಬೇಕಾದ ಗ್ರಂಥ" ಎಂದು ತಮ್ಮ ಅನಿಸಿಕೆಯನ್ನು ವ್ಯಕ್ತಪಡಿಸಿದರು.

ಇಳಿವಯಸ್ಸು ಬಂದಮೇಲೆ ಧ್ಯಾನಾಭ್ಯಾಸ ಮಾಡಿ ಧ್ಯಾನಾನಂದವನ್ನು ಪಡೆಯುವುದು ಶ್ರಮಸಾಧ್ಯ, ಅಥವಾ ಅಸಾಧ್ಯವೆಂದೇ ಹೇಳಬಹುದು. ಆದ್ದರಿಂದ ಅದಕ್ಕೆ ಬದಲಾಗಿ, ಶ್ರೀರಾಮಕೃಷ್ಣರು ಮಾಡಿದ ಸಾಧನೆ, ನೀಡಿದ ಬೋಧನೆ, ಅವರಿಂದ ಜನರಲ್ಲುಂಟಾದ ಪರಿವರ್ತನೆ ಹಾಗೂ ಮುಮುಕ್ಷುಗಳು ಅವರಿಗೆ ಮಾಡಿಕೊಂಡ ಸರ್ವಸಮರ್ಪಣೆ—ಇವುಗಳಿಂದ ಕೂಡಿದ ವಿವರಗಳನ್ನು ಶಾಂತಮಾನಸರಾಗಿ ಅಧ್ಯಯನ ಮಾಡುತ್ತಬಂದರೆ ಅದು ಯಾವ ಧ್ಯಾನ ಜಪ ಭಜನೆಗಳಿಗೂ ಕಡಿಮೆಯಲ್ಲ. ಅಲ್ಲದೆ, ಪರಮಪರಿಶುದ್ಧ ಚರಿತ್ರರಾದ ಪರಮಹಂಸರ ಪವಿತ್ರ ವ್ಯಕ್ತಿತ್ವದಲ್ಲೇ ಮನಸ್ಸು ಕ್ರಮೇಣ ನೆಲೆನಿಂತು ಹೃದಯದಲ್ಲಿ ಅವರ ಪ್ರೇಮಾಮೃತಪಾನ ಮಾಡುವಂತಾಗುವುದರಲ್ಲಿ ಸಂದೇಹವಿಲ್ಲ.

ಅಲ್ಲದೆ, ಮತ್ತೊಂದು ಮಾತು: ಶ್ರೀರಾಮಕೃಷ್ಣರ ಜೀವನ ಚರಿತ್ರೆಯನ್ನು ಒಮ್ಮೆ ಓದುವಷ್ಟರಲ್ಲೇ ಅವರ ಜನ್ಮಕರ್ಮಗಳ ಮಹಿಮೆ-ಉದ್ದೇಶಗಳು ಸ್ವಲ್ಪವಾದರೂ ಮನವರಿಕೆಯಾಗದಿರದು. ಆದರೆ ನಾಲ್ಕು ಸಂಪುಟಗಳಲ್ಲಿ ಆ ಮಹಿಮೆ-ಉದ್ದೇಶಗಳಿಂದ ಕೂಡಿದ ವಿಧವಿಧದ ಘಟನೆಗಳು ವಿಸ್ತಾರವಾಗಿ ಹರಡಿಕೊಂಡಿರುವುದರಿಂದ, ಕೇವಲ ಒಮ್ಮೆ ಓದಿದ ಮಾತ್ರಕ್ಕೆ ಅವು ನೆನಪಿನಲ್ಲಿ ಉಳಿದಾವೆ? ನೆನಪಿನಲ್ಲುಳಿಯದಿದ್ದರೆ ಅವನ್ನು ಆಗಾಗ ಸ್ಮರಿಸಿಕೊಂಡು ಆನಂದಿಸಲು ಸಾಧ್ಯವಾಗಬಲ್ಲುದೆ? ಅಲ್ಲದೆ, ಸಮಾನಮನಸ್ಕರೊಂದಿಗೆ ಆ ಘಟನೆಗಳನ್ನು ಕುರಿತು ಮಾತನಾಡುತ್ತ ಅವುಗಳ ರಸಾಸ್ವಾದ ಮಾಡಲು ಸಾಧ್ಯವೆ? ಆದ್ದರಿಂದ ನಮ್ಮ ಹೃದಯವನ್ನು ಭಾವಸಂಪನ್ನಗೊಳಿಸಿಕೊಳ್ಳುವ ಉದ್ದೇಶದಿಂದಲಾದರೂ ಈ ಸಂಪುಟಗಳನ್ನು ಪದೇಪದೇ ಓದುವುದು ಲಾಭದಾಯಕ.

ಸಾಮಾಜಿಕರು, ಸಾಧಕರು, ವಿದ್ಯಾವಂತರು, ನಾಸ್ತಿಕರು, ಆಸ್ತಿಕರು ಇವರೇ ಮೊದಲಾದ ವಿಭಿನ್ನ ಮನೋಮಟ್ಟದ ಜನಕ್ಕೆ ಈ ಜೀವನಚರಿತ್ರೆ ವಿಧವಿಧದ ಅನುಭವಗಳನ್ನೊದಗಿಸುವುದು ಖಂಡಿತ. ಭಕ್ತಿಮನೋಭಾವದವರು ಈ ಜೀವನವನ್ನೋದಿ ಶ್ರೀರಾಮಕೃಷ್ಣರನ್ನು ಸಾಕ್ಷಾತ್ ಅವತಾರಪುರುಷರೆಂದೇ ಪರಿಗಣಿಸಿ, ಭಾವಿಸಿ, ತಮ್ಮ ಭಕ್ತಿರಸವನ್ನು ಅವರೆಡೆಗೆ ಹರಿಸುತ್ತಾರೆ; ಸಾಧಕವರ್ಗದ ಜನ ಶ್ರೀರಾಮಕೃಷ್ಣರ ಅಭೂತಪೂರ್ವ ಸಾಧನಾವೈಭವವನ್ನು ಗುರುತಿಸಿ, ಗ್ರಹಿಸಿ, ತಮ್ಮ ಸಾಧನೆ

ಯನ್ನು ತೀವ್ರಗೊಳಿಸಿಕೊಂಡು ಸಿದ್ಧರಾಗುತ್ತಾರೆ; ವಿದ್ಯಾವಂತರು, ಚಿಂತಕರು ಶ್ರೀರಾಮಕೃಷ್ಣರನ್ನು ಮಾನವೀಯ ದೃಷ್ಟಿಯಿಂದಲೇ ನೋಡಿ, ಅವರು ಸಹಮಾನವರೊಂದಿಗೆ ಸಹಜವಾಗಿ-ಸಮರಸತೆಯಿಂದ ಒಡನಾಡುವ, ಪರಿಸ್ಪಂದಿಸುವ ನಯುವನ್ನು ಗಮನಿಸಿ ಅವರಲ್ಲಿ ಒಬ್ಬ ಆದರ್ಶ ಮಾನವನನ್ನು ಕಂಡುಕೊಳ್ಳುತ್ತಾರೆ; ಇನ್ನು, ತಮ್ಮನ್ನು ನಾಸ್ತಿಕರೆಂದು ಗುರುತಿಸಿಕೊಳ್ಳುವವರೂ ಈ ಜೀವನದಿಂದ ಅಪಾರ ಲಾಭ ಪಡೆಯಲು ಅವಕಾಶವಿದೆ. ಆದರೆ ಅವರು ಇಂಥ ಗ್ರಂಥಕ್ಕೆ ಕೈಹಚ್ಚುವುದೇ ಕಷ್ಟ! ಅಂಥವರು ಈ ಗ್ರಂಥವನ್ನು ಕೈಗೆ ತೆಗೆದುಕೊಂಡರೂ ತಮ್ಮ ಸ್ವಭಾವಸಹಜವಾದ ಪರೀಕ್ಷಾತ್ಮಕ ದೃಷ್ಟಿಯಿಂದಲೇ ಓದುತ್ತಾರೆ, ಓದಲಿ. ಹಾಗೆ ಓದುವಾಗ ಅವಶ್ಯವಾಗಿ ಅವರಿಗೆ ಗ್ರಂಥದ ಕೂಲಂಕಷ ಪರಿಚಯವಾಗುತ್ತದೆ. ಇಷ್ಟಾದರೆ ಸಾಕು. ಇನ್ನು ಅವರ ಮೇಲೆ ಯಾವ ಪ್ರಭಾವವುಂಟಾಗಬೇಕೋ ಅದನ್ನು ಕಥಾನಾಯಕನೇ ನೋಡಿಕೊಳ್ಳುತ್ತಾನೆ! ಹೀಗೆ, ಶ್ರೀರಾಮಕೃಷ್ಣರ ಜೀವನಚರಿತ್ರೆಯೆಂಬುದು ಮಾನುಷಸಮಾಜದಲ್ಲಿ ಒಂದು ಮಹತ್ ಕ್ರಾಂತಿಯನ್ನೇ ಮಾಡುತ್ತ ಸಾಗುತ್ತದೆ.

ಸರಿಯಾಗಿ ಹೇಳಬೇಕೆಂದರೆ, ಈ ಪ್ರಸ್ತುತ ಜೀವನಚರಿತ್ರೆಯೋ ಆಗಲಿ, ಆ 'ಶ್ರೀರಾಮಕೃಷ್ಣ ವಚನವೇದ'ವೇ ಆಗಲಿ ಶ್ರೀರಾಮಕೃಷ್ಣರ ಅಂದಿನ ಆಧ್ಯಾತ್ಮಿಕ ಲೀಲಾವಿನೋದಗಳನ್ನು ಎಷ್ಟೊಂದು ಬಣ್ಣಿಸಿದೆಯೋ, ಕೀರ್ತನ-ನರ್ತನ-ಸಂಭಾಷಣಗಳನ್ನು ಎಷ್ಟೊಂದು ಚಿತ್ರಿಸಿದೆಯೋ, ಅದೆಲ್ಲವೂ, ಅಂದು ಆ ದಕ್ಷಿಣೇಶ್ವರ–ಕಾಶೀಪುರಗಳಲ್ಲಿ ನಿರ್ಮಾಣಗೊಂಡಿದ್ದ ಆನಂದ-ವೈಭವಗಳಿಗೆ ಹೋಲಿಸಿದರೆ, ನೂರರಲ್ಲಿ ಕೇವಲ ಒಂದಿಪ್ಪತ್ತು ಅಂಶ ಮಾತ್ರವೇ ಎನ್ನಬೇಕಾಗುತ್ತದೆ. ಏಕೆಂದರೆ, ದಿವ್ಯಾದ್ಭುತ ಆಧ್ಯಾತ್ಮಿಕ ಅನುಭವಗಳಿಂದ ಪರಿಪೂರ್ಣರಾಗಿದ್ದ ಹಾಗೂ 'ನ ಭೂತೋ ನ ಭವಿಷ್ಯತಿ' ಎಂಬಂತಹ ತಪಶ್ಚರ್ಯೆಯಿಂದ ತಪ್ತಕಾಂಚನದಂತೆ ಕಾಂತಿಯುಕ್ತರಾಗಿದ್ದ, ಮತ್ತು ಇವೆಲ್ಲಕ್ಕೂ ಮಿಗಿಲಾಗಿ, ಭಗವತ್‌ಪ್ರೇಮದೊಂದಿಗೆ ಮಾನವಪ್ರೇಮವೂ ಮಿಳಿತಗೊಂಡು ಕರುಣಾರ್ದ್ರಹೃದಯರಾಗಿದ್ದ ಶ್ರೀರಾಮಕೃಷ್ಣರ ಆ ಸ್ವರ್ಗಸದೃಶ ಸಾನ್ನಿಧ್ಯದ ಸೊಬಗನ್ನು ಯಾವ ಲೇಖನಿ ತಾನೆ ಸೆರೆಹಿಡಿದೀತು? ಆದರೂ, ಓದುಗರು ಒಮ್ಮೆ ಓದುತ್ತ, ಬಳಿಕ ಭಾವಿಸುತ್ತ, ಮತ್ತೆ ಓದುತ್ತ, ಪುನಃ ಭಾವಿಸುತ್ತ ಆ ಪರಮಪಾವನಕರ, ಪರಮಾನಂದಕರ ಪರಿಸರವನ್ನು ತಮ್ಮ ಮನೋರಾಜ್ಯದಲ್ಲೇ ನಿರ್ಮಾಣ ಮಾಡಿಕೊಳ್ಳಬಹುದು ಮತ್ತು ಶ್ರೀರಾಮಕೃಷ್ಣರ ಸಾಕ್ಷಾತ್ ಸಾನ್ನಿಧ್ಯದ ಸುಖವನ್ನು ಅನುಭವಿಸಬಹುದು. ಆದರಿದು ಓದುಗರ ಭಾವುಕಹೃದಯದ ಹಂಬಲಕ್ಕೆ ಸಂಬಂಧಿಸಿದ ವಿಷಯ.

ನಾಲ್ಕು ಸಂಪುಟಗಳಲ್ಲಿ ಚಿತ್ರಿತವಾದ ಶ್ರೀರಾಮಕೃಷ್ಣರ ಈ ಮಾನವಮಂಗಲಕಾರೀ ಜೀವನಚರಿತ್ರೆಯ ಆಧಾರದ ಮೇಲೆ, ಕನ್ನಡ ಸಾಹಿತಿಗಳಲ್ಲಿ ಯಾರಾದರೂ ಒಂದು ಕಾದಂಬರಿಯನ್ನು ರಚಿಸಿದರೆ ಪ್ರಾಯಶಃ ಸಾಹಿತ್ಯಲೋಕದಲ್ಲಿ ಅದೊಂದು ಮೌಲ್ಯಪೂರ್ಣ ಕೃತಿಯಾಗಿ ರಾರಾಜಿಸುವುದರಲ್ಲಿ ಸಂದೇಹವಿಲ್ಲ. ನಾಟಕಕರ್ತರೂ ಮನಮಾಡಿದರೆ ನಾಲ್ಕಾರು ನಾಟಕಗಳು ನಿರ್ಮಾಣಗೊಂಡು ರಂಗಮಂದಿರದಲ್ಲಿ ಒಂದು ನವನೂತನ ಪರಿಸರವೇ ಸೃಷ್ಟಿಯಾಗುತ್ತದೆ. ಶ್ರೇಷ್ಠಮಟ್ಟದ ಹರಿಕಥೆಗೂ ಈ ಜೀವನಚರಿತ್ರೆಯಲ್ಲಿ ರಸಭರಿತ ಹಾಗೂ ಉದ್ಬೋಧಕ ಪ್ರಸಂಗಗಳು ಹೇರಳವಾಗಿದೆ. ಹರಿಕಥಾ ವಿದ್ವಾಂಸರು ಈ ದಿಸೆಯಲ್ಲಿ ಶ್ರಮವಹಿಸಿದರೆ ಅವರು ಜನಸ್ತೋಮದ

ಪ್ರೀತ್ಯಾದರಗಳಿಗೆ ಪಾತ್ರರಾಗುವುದು ದಿಟ. ಇನ್ನು ಕವಿಗಳೇನಾದರೂ ಈ ಜೀವನದ ಅಧ್ಯಯನ ಮಾಡಿದರೆಂದರೆ ಅವರಿಂದ ಭಾವಪೂರಿತ ಕಾವ್ಯಗಳೂ ಕವನಗಳೂ ಹರಿದುಬರದಿರಲಾರವು. ಈಗಾಗಲೇ ರಾಷ್ಟ್ರಕವಿ ಕುವೆಂಪು, ಶ್ರೀ ದ.ರಾ. ಬೇಂದ್ರೆ, ಶ್ರೀ ಜಿ.ಎಸ್. ಶಿವರುದ್ರಪ್ಪ, ಶ್ರೀ ಪ್ರಭುಪ್ರಸಾದ್, ಶ್ರೀ ನಿಸ್ಸಾರ್ ಅಹಮದ್ ಇವರೇ ಮೊದಲಾದ ಅನೇಕ ರಸಜ್ಞರು ಶ್ರೀರಾಮಕೃಷ್ಣ, ಶ್ರೀಶಾರದಾದೇವಿ ಹಾಗೂ ಶ್ರೀ ಸ್ವಾಮಿ ವಿವೇಕಾನಂದರ ಮೇಲೆ ಬರೆದ ಕೆಲವಾರು ಕವನಗಳು ಜನಮನದಲ್ಲಿ ಮುದ್ರಿತ ವಾಗಿವೆ. ಇನ್ನು, ಅಧಿಕಾರವರ್ಗದವರೂ ರಾಜಕಾರಣಿಗಳೂ ಈ ಜೀವನಚರಿತ್ರೆಯನ್ನು ಅಧ್ಯಯನಮಾಡಿದ್ದೇ ಆದರೆ ಅವರ ಮೂಲಕ ನಿಜವಾದ ಅರ್ಥದಲ್ಲಿ ಜಾತ್ಯತೀತ ಭಾರತದ ನಿರ್ಮಾಣವಾಗುವುದು ನಿಶ್ಚಯ.

ಶ್ರೀರಾಮಕೃಷ್ಣರ ಮೂರು ಸಂಪುಟಗಳನ್ನು ಈಗಾಗಲೇ ಕನ್ನಡ ಸಹೃದಯರು ಪರಮಾದರದಿಂದ ಸ್ವೀಕರಿಸಿದ್ದಾರೆ. ಅವರ ಆದರಪೂರ್ಣ ಹೃದಯದ ಆಕರ್ಷಣೆಗೆ ಮಾರುಹೋಗಿ ಇದೀಗ ಈ ನಾಲ್ಕನೆಯ ಸಂಪುಟವೂ ಅವರ ಮಡಿಲಿಗೆ ಧಾವಿಸುತ್ತಿದೆ.

ಸ್ವಾಮಿ ಪುರುಷೋತ್ತಮಾನಂದ

# ಚಿತ್ರಗಳ ವಿವರಣೆ

# ಪರಿವಿಡಿ

# ವಿಶ್ವಾಸಿಯ ವಿಯೋಗ ೧

ಶ್ರೀರಾಮಕೃಷ್ಣರ ಪರಮಾಪ್ತನೂ, ಒಂದು ವಿಧದಲ್ಲಿ ಅಗ್ರಗಣ್ಯ ಅನುಯಾಯಿಯೂ ಆದ ಕೇಶವಚಂದ್ರ ಸೇನನ ದೇಹಾರೋಗ್ಯ ೧೮೮೪ರ ಆದಿಯಿಂದಲೂ ಇಳಿಮುಖ ವಾಗತೊಡಗಿತ್ತು. ಅದನ್ನು ತಿಳಿದು ಶ್ರೀರಾಮಕೃಷ್ಣರು ತುಂಬ ಕಳವಳಗೊಂಡಿದ್ದರು. ಆತ ತನ್ನ ಆರೋಗ್ಯ ಸುಧಾರಣೆಗಾಗಿ ಅನೇಕ ವೈದ್ಯರಿಂದ ಚಿಕಿತ್ಸೆ ಪಡೆದ; ಹವಾ ಬದಲಾವಣೆಗಾಗಿ ಕೆಲಕಾಲ ಸಿಮ್ಲಾಕ್ಕೂ ಹೋದ. ಅಲ್ಲಿ ದೇಹಸ್ಥಿತಿ ಸ್ವಲ್ಪ ಮೇಲಾಯಿತಾದರೂ ಮಳೆಗಾಲ ಪ್ರಾರಂಭವಾದ ಮೇಲೆ ಪೂರ್ತಿ ಹದಗೆಟ್ಟಿತು. ಅವನ 'ನವ ವಿಧಾನ' ಸಮಾಜದಲ್ಲಿ ಹೊಸದಾಗಿ ಒಡಕುಂಟಾಗಿದ್ದುದೂ ಅದಕ್ಕೊಂದು ಕಾರಣ. ಆದರೂ ಶ್ರೀರಾಮಕೃಷ್ಣರ ಪ್ರಭಾವದಿಂದಾಗಿ ಅವನಿಗೆ ದೈವದಲ್ಲಿ, ದೈವಶಕ್ತಿಯಲ್ಲಿ ಅಚಲ ವಿಶ್ವಾಸವುಂಟಾಗಿತ್ತು. ಅದೊಂದೇ ಅವನ ಜೀವಕ್ಕೆ ನೆಮ್ಮದಿ, ಶಕ್ತಿ ಕೊಡುತ್ತಿದ್ದ ಅಂಶ.

ಕಲ್ಕತ್ತಕ್ಕೆ ಮರಳಿದ ಮೇಲೂ ಕೇಶವನ ಆರೋಗ್ಯ ದಿನೇದಿನೇ ಕೆಡುತ್ತ ಬಂತು. ಅದನ್ನು ಕೇಳಿ ಶ್ರೀರಾಮಕೃಷ್ಣರು ತುಂಬ ದುಃಖಿತರಾಗಿ, ಅವನನ್ನು ನೋಡಿಬರಲು ತಾವೇ ಕಲ್ಕತ್ತಕ್ಕೆ ಹೊರಟರು. ಅದೇ ಅವರಿರ್ವರ ಕಟ್ಟಕಡೆಯ ಸಮಾಗಮವೂ ಆಯಿತು.

ಅಂದು ೧೮೮೩ರ ನವೆಂಬರ್ ೨೮. ಸಂಜೆ ಐದು ಗಂಟೆಯ ವೇಳೆಗೆ, ಶ್ರೀರಾಮಕೃಷ್ಣರು ರಾಖಾಲ, ಲಾಟು, ಮಾಸ್ಟರ್ ಮತ್ತಿತರರೊಂದಿಗೆ ಕೇಶವಸೇನನ 'ಕಮಲ ಕುಟೀರ'ಕ್ಕೆ ಬಂದರು. ಅವರನ್ನೆಲ್ಲ ಒಳಗೆ ಬರಮಾಡಿಕೊಂಡು ಬೈಠಕ್‌ಖಾನೆಯ ಪಕ್ಕದ ವರಾಂಡದಲ್ಲಿ ಕುಳ್ಳಿರಿಸಲಾಯಿತು. ಕೇಶವನಿನ್ನೂ ಒಳಗೆ ತನ್ನ ಕೋಣೆಯಲ್ಲಿ ಮಲಗಿದ್ದ. ಶ್ರೀರಾಮಕೃಷ್ಣರಿಗೆ ಮೊದಲು ಹೋಗಿ ಅವನನ್ನು ನೋಡುವ ಕಾತರ. ಆದರೆ ಕೇಶವನ ಶಿಷ್ಯರಿಗೆ ಆ ಸಮಯದಲ್ಲೂ ಶಿಷ್ಟಾಚಾರದ ಚಿಂತೆ. ಅಂತೂ ಶ್ರೀರಾಮಕೃಷ್ಣರು ಬಹಳ ಹೊತ್ತು ಅಲ್ಲೇ ಕಾದು ಕುಳಿತಿರಬೇಕಾಯಿತು. ಅಲ್ಲಿದ್ದ ಒಬ್ಬಾತ ಅವರನ್ನುದ್ದೇಶಿಸಿ ಹೇಳಿದ: "ಕೇಶವಸೇನರೀಗ ಒಬ್ಬ ಹೊಸ ಮನುಷ್ಯರೇ ಆಗಿಬಿಟ್ಟಿದ್ದಾರೆ. ನಿಮ್ಮ ಹಾಗೆ ಅವರೂ ಭಗವತಿಯೊಡನೆ ಮಾತನಾಡುತ್ತಾರೆ! ಭಗವತಿಯ ಮಾತು ಕೇಳುತ್ತ ಒಮ್ಮೊಮ್ಮೆ ನಗುತ್ತಾರೆ, ಒಮ್ಮೊಮ್ಮೆ ಅಳುತ್ತಾರೆ."

ಅವನು ಹಾಗೆಂದೊಡನೆಯೇ ಶ್ರೀರಾಮಕೃಷ್ಣರಿಗೆ ಭಾವೋದ್ದೀಪನವಾಯಿತು; ಗಾಢ ಸಮಾಧಿಸ್ಥಿತಿಗೇರಿದರು. ದೇಹ ನೆಟ್ಟಗೆ ಕುಳಿತಿತ್ತು, ದೃಷ್ಟಿ ಸ್ಥಿರವಾಗಿತ್ತು. ಹೀಗೇ ಬಹಳ ಹೊತ್ತು ಕಳೆದುಹೋದರೂ ಅವರು ಪ್ರಕೃತಿಸ್ಥರಾಗುವ ಸೂಚನೆ ಕಾಣಲಿಲ್ಲ. ಕಡೆಗೆ ಅವರಿಗೆ ಭಾಗಶಃ ಬಾಹ್ಯಪ್ರಜ್ಞೆ ಮರಳಿತು. ಅವರನ್ನೀಗ ಬಹಳ ಪ್ರಯಾಸದಿಂದ ಬೈಠಕ್‌ಖಾನೆಗೆ ಕರೆತರಲಾಯಿತು. ಅಲ್ಲಿ ಒಪ್ಪವಾಗಿ ಜೋಡಿಸಿದ್ದ ಪೀಠೋಪಕರಣಗಳನ್ನೆಲ್ಲ ಕಂಡು ಅವರು ಮೆಲ್ಲನೆ ಮಟಗುಟ್ಟಿದರು: "ಹಿಂದೆ ಇವೆಲ್ಲ ಬಹಳ ಬೇಕಾಗಿದ್ದುವು. ಆದರೆ ಈಗ ಇವುಗಳ ಅಗತ್ಯವೇನಿದೆ?" ಬಳಿಕ ಮತ್ತೆ ತಮ್ಮಷ್ಟಕ್ಕೇ ಎಂಬಂತೆ ಹೇಳಿಕೊಂಡರು: "ದೇಹ ಮತ್ತು ಆತ್ಮ—ದೇಹ ಹುಟ್ಟುತ್ತದೆ, ಸಾಯುತ್ತದೆ. ಆದರೆ

ಆತ್ಮಕ್ಕೆ ಸಾವಿಲ್ಲ. ಅದು ಹಣ್ಣಾದ ಅಡಕೆಯ ಹಾಗೆ. ಅಡಕೆ ಹಣ್ಣಾದಾಗ ಅದು ಸಿಪ್ಪೆಗೆ ಅಂಟಿಕೊಂಡಿರುವುದಿಲ್ಲ. ಆದರೆ ಅದು ಕಾಯಾಗಿರುವಾಗ ಅದನ್ನು ಸಿಪ್ಪೆಯಿಂದ ಬೇರ್ಪಡಿಸಬೇಕಾದರೆ ಬಹಳ ಕಷ್ಟಪಡಬೇಕಾಗುತ್ತದೆ. ಭಗವಂತನ ಸಾಕ್ಷಾತ್ಕಾರ ದೊರೆತ ಬಳಿಕ ದೇಹಬುದ್ಧಿ ಹೊರಟುಹೋಗುತ್ತದೆ. ಆಗ ದೇಹ ಪ್ರತ್ಯೇಕ, ಆತ್ಮ ಪ್ರತ್ಯೇಕ ಎಂಬ ಬೋಧೆಯಾಗುತ್ತದೆ.''

ಈ ಸಮಯಕ್ಕೆ ಸರಿಯಾಗಿ, ಕೊಠಡಿಯ ಪೂರ್ವ ಬಾಗಿಲಿನಿಂದ ಕೇಶವಸೇನ ಪ್ರವೇಶಿಸಿದ. ಅವನು ಸೊರಗಿ ಮೂಳೆಚಕ್ಕಳವಾಗಿಬಿಟ್ಟಿದ್ದ. ಹಿಂದೆ ಅವನನ್ನು ನೋಡಿದ್ದವರಿಗೆ ಅವನ ಈ ರೂಪವನ್ನು ಕಂಡಾಗ ಹೃದಯ ಹಿಂಡಿದಂತಾಗುತ್ತಿತ್ತು. ಅವನಿಗೆ ನಿಂತುಕೊಳ್ಳಲೂ ತ್ರಾಣವಿರಲಿಲ್ಲ. ಗೋಡೆ ಹಿಡಿದುಕೊಂಡು ಬಹಳ ಕಷ್ಟಪಡುತ್ತ ಬಂದು ಶ್ರೀರಾಮಕೃಷ್ಣರೆದುರು ನೆಲದ ಮೇಲೆ ಕುಳಿತ. ಇನ್ನೂ ಭಾವಾವಸ್ಥೆಯಲ್ಲೇ ಇದ್ದ ಶ್ರೀರಾಮಕೃಷ್ಣರು ಸೋಫಾದಿಂದಿಳಿದು ನೆಲದ ಮೇಲೆ ಕುಳಿತುಕೊಂಡರು. ಕೇಶವ ಅವರ ಪಾದದ ಮೇಲೆ ಬಹಳ ಹೊತ್ತು ತಲೆಯಿರಿಸಿ ಪ್ರಣಾಮ ಮಾಡುತ್ತಿದ್ದು ಮತ್ತೆ ಎದ್ದು ಕುಳಿತ. ಆದರೂ ಅವರು ತನ್ನನ್ನು ಗುರುತಿಸಲಿಲ್ಲವೆಂದರಿತು, ''ನಾನು ಬಂದಿದ್ದೇನೆ'' ಎಂದು ಗಟ್ಟಿಯಾಗಿ ಹೇಳಿದ. ಪ್ರೀತಿಯಿಂದ ಅವರ ಎಡಗೈಯನ್ನು ತನ್ನ ಕೈಗಳಲ್ಲಿರಿಸಿಕೊಂಡು ಮೃದುವಾಗಿ ಒತ್ತತೊಡಗಿದ.

ಶ್ರೀರಾಮಕೃಷ್ಣರ ಭಾವದಲ್ಲಿ ಯಾವ ಬದಲಾವಣೆಯೂ ಇರಲಿಲ್ಲ. ಅವರು ಸ್ವಗತವೆಂಬಂತೆ ಮಾತನಾಡತೊಡಗಿದರು. ಕೇಶವನೂ ಸೇರಿದಂತೆ ಎಲ್ಲರೂ ನಿಶ್ಶಬ್ದವಾಗಿ ಆಲಿಸುತ್ತ ಕುಳಿತರು.

ಶ್ರೀರಾಮಕೃಷ್ಣರು: ''ಎಲ್ಲಿಯವರೆಗೆ ಉಪಾಧಿ ಇರುತ್ತದೆಯೊ ಅಲ್ಲಿಯವರೆಗೂ ನಾನಾತ್ವದ ಬೋಧೆಯೂ ಇರುತ್ತದೆ—ಕೇಶವ, ಪ್ರಸನ್ನ ಇತ್ಯಾದಿ. ಪೂರ್ಣಜ್ಞಾನ ದೊರೆಯಿತೆಂದರೆ ಎಲ್ಲೆಲ್ಲೂ ಒಂದೇ ಚೈತನ್ಯವಿರುವಂತೆ ಬೋಧೆಯಾಗುತ್ತದೆ. ಬಳಿಕ, ಆ ಒಂದು ಚೈತನ್ಯವಸ್ತುವೇ ಈ ಜೀವ, ಜಗತ್ತು, ಚತುರ್ವಿಂಶತಿ (ಇಪ್ಪತ್ತನಾಲ್ಕು) ತತ್ತ್ವಗಳು ಎಲ್ಲವೂ ಆಗಿದೆ ಎಂದು ನಮ್ಮ ಅನುಭವಕ್ಕೆ ಬರುತ್ತದೆ.''

ಹೀಗೇ ಅನೇಕ ವಿಷಯಗಳ ಸಂಬಂಧವಾಗಿ ಮಾತನಾಡುತ್ತ ಆಡುತ್ತ ಶ್ರೀರಾಮಕೃಷ್ಣರು ಸ್ವಲ್ಪಸ್ವಲ್ಪವಾಗಿ ಸಾಮಾನ್ಯಸ್ಥಿತಿಗೆ ಇಳಿದುಬಂದು ಕೇಶವನಿಗೆ ಹೇಳತೊಡಗಿದರು:

''ಯಾರು ಪರಬ್ರಹ್ಮವೋ ಆತನೇ ಆದ್ಯಾಶಕ್ತಿಯೂ ಆಗಿದ್ದಾನೆ. ನಿಷ್ಕ್ರಿಯನಾಗಿರುವಾಗ ಅವನಿಗೆ ಬ್ರಹ್ಮ ಅಥವಾ ಪುರುಷ ಅಂತ ಹೆಸರು. ಸೃಷ್ಟಿ-ಸ್ಥಿತಿ-ಪ್ರಳಯ ಕಾರ್ಯಗಳನ್ನು ಮಾಡುವಾಗ ಆತನಿಗೇ ಶಕ್ತಿ ಅಥವಾ ಪ್ರಕೃತಿ ಅಂತ ಹೆಸರು. ಪುರುಷ ಮತ್ತು ಪ್ರಕೃತಿ—ಯಾರು ಪುರುಷನೋ ಅವನೇ ಪ್ರಕೃತಿ; ಆನಂದಮಯನೇ ಆನಂದಮಯಿಯೂ ಕೂಡ.

''ಯಾರಿಗೆ ಪುರುಷಜ್ಞಾನವಿರುತ್ತದೆಯೋ ಅವನಿಗೆ ಪ್ರಕೃತಿಜ್ಞಾನವೂ ಇದ್ದೇ ಇರುತ್ತದೆ. ತಂದೆಯ ಬೋಧೆ ಇರುವವರಿಗೆ ತಾಯಿಯ ಬೋಧೆಯೂ ಇದ್ದೇ ಇರುತ್ತದೆ. (ಕೇಶವ ನಗುತ್ತಾನೆ.) ಯಾರಿಗೆ ಬೆಳಕಿನ ಜ್ಞಾನವಿರುತ್ತದೆಯೋ ಅವರಿಗೆ ಕತ್ತಲಿನ ಜ್ಞಾನವೂ ಇರುತ್ತದೆ. ಸುಖದ ಜ್ಞಾನ ಇರುವವರಿಗೆ ದುಃಖದ ಜ್ಞಾನವೂ ಇರುತ್ತದೆ. ನಿನಗಿದು ಅರ್ಥವಾಗಿರಬೇಕು, ಅಲ್ಲವೆ ?''

ಕೇಶವಸೇನ: "ಹೌದು, ಅರ್ಥವಾಯಿತು."

ಶ್ರೀರಾಮಕೃಷ್ಣರು: "ನನ್ನ ತಾಯಿ. . . ! ಯಾರು ನನ್ನ ತಾಯಿ ? ಓ, ಆಕೆ ಜಗಜ್ಜನನಿ ! ಈ ಜಗತ್ತನ್ನು ಸೃಷ್ಟಿಸಿರುವವಳು, ಪಾಲಿಸುತ್ತಿರುವವಳು ಅವಳೇ. ಅವಳೇ ಸರ್ವದಾ ತನ್ನ ಮಕ್ಕಳನ್ನು ನೋಡಿಕೊಳ್ಳುತ್ತಿರುತ್ತಾಳೆ. ಧರ್ಮ ಅರ್ಥ ಕಾಮ ಮೋಕ್ಷ ಇವುಗಳಲ್ಲಿ ಯಾರಿಗೆ ಯಾವುದು ಬೇಕಾದರೂ ಅವರಿಗದನ್ನು ಕೊಡುತ್ತಾಳೆ. ಮಗು ತಾಯಿಯನ್ನು ಬಿಟ್ಟು ಇರಲಾರದು. ತಾಯಿಗೆಲ್ಲಾ ಗೊತ್ತು—ತನ್ನ ಮಗು ತಿಂದುಂಡು ಆನಂದದಿಂದ ತಿರುಗಾಡಿಕೊಂಡಿರುತ್ತದೆ; ಈ ಜಗತ್ತಿನ ಸಂಬಂಧವಾಗಿ ಅದು ಏನನ್ನೂ ತಲೆಗೆ ಹಚ್ಚಿಕೊಳ್ಳುವುದಿಲ್ಲ ಅಂತ."

ಕೇಶವಸೇನ: "ಹೌದು, ನಿಜ."

ಶ್ರೀರಾಮಕೃಷ್ಣರು ಹೀಗೆ ಮಾತನಾಡುತ್ತ ಪೂರ್ಣವಾಗಿ ಪ್ರಕೃತಿಸ್ಥರಾಗಿದ್ದಾರೆ. ಈಗ ಕೇಶವಸೇನನೊಡನೆ ಆನಂದದಿಂದ ಮಾತುಕತೆಯಾಡುತ್ತಿದ್ದಾರೆ. ಕೊಠಡಿಯಲ್ಲಿ ಕಿಕ್ಕಿರಿದು ಕುಳಿತಿದ್ದ ಜನ ಕಿವಿ ನೆಟ್ಟಗೆ ಮಾಡಿಕೊಂಡು ಎಲ್ಲವನ್ನೂ ಕೇಳುತ್ತಿದ್ದಾರೆ; ಅವರ ಕಡೆಗೇ ದಿಟ್ಟಿಸಿ ನೋಡುತ್ತಿದ್ದಾರೆ. ಕೇಶವ-ಶ್ರೀರಾಮಕೃಷ್ಣರಿಬ್ಬರೂ ದೇಹಾರೋಗ್ಯದ ವಿಷಯವನ್ನೇ ಎತ್ತದೆ ಭಗವತ್ಸಂಬಂಧವಾಗಿಯೇ ಮಾತನಾಡುತ್ತಿರುವುದನ್ನು ಕಂಡು ಎಲ್ಲರಿಗೂ ಆಶ್ಚರ್ಯವಾಗಿಬಿಟ್ಟಿದೆ.

ಈಗ ಶ್ರೀರಾಮಕೃಷ್ಣರು ಕೇಶವನಿಗೆ ಹೇಳಿದರು:

"ಬ್ರಾಹ್ಮಸಮಾಜದ ಅನುಯಾಯಿಗಳು ಭಗವಂತನ ಮಹಿಮೆಯನ್ನು ಆ ಪಾಟಿ ವರ್ಣನೆ ಮಾಡುತ್ತಾರಲ್ಲ, ಅದೇಕೆ ? 'ಹೇ ಭಗವಂತ, ನೀನು ಚಂದ್ರನನ್ನು ಸೃಷ್ಟಿಸಿದ್ದೀಯೆ, ಸೂರ್ಯನನ್ನು ಸೃಷ್ಟಿಸಿದ್ದೀಯೆ, ನಕ್ಷತ್ರಗಳನ್ನು ಸೃಷ್ಟಿಸಿದ್ದೀಯೆ' ಎಂಬ ಈ ವಿಧದ ವರ್ಣನೆ ಯಾವ ಪ್ರಯೋಜನಕ್ಕೆ ಬಂದದ್ದು ? ಅನೇಕರು ತೋಟವನ್ನು ಕಂಡೇ ತೃಪ್ತರಾಗಿಬಿಡುತ್ತಾರೆ. ತೋಟದ ಯಜಮಾನನನ್ನು ನೋಡಬೇಕೆಂದು ಹಂಬಲಿಸುವವರು ಎಷ್ಟು ಕಡಿಮೆ ! ನಿಜಕ್ಕೂ ಮಹಿಮೆಯಿರುವುದು ತೋಟದಲ್ಲೋ ಅದರ ಯಜಮಾನನಲ್ಲೋ, ಹೇಳು ?

"ಸತ್ಯ ಹೇಳಲೆ ? ಮನುಷ್ಯ ತಾನು ಧನಕನಕಗಳನ್ನು ಅಷ್ಟೊಂದಾಗಿ ಪ್ರೀತಿಸುವುದರಿಂದ ಭಗವಂತನೂ ಅದನ್ನೇ ಪ್ರೀತಿಸುತ್ತಾನೆ ಎಂದು ಭಾವಿಸುತ್ತಾನೆ. ಆದ್ದರಿಂದಲೇ, ಭಗವಂತನ ಐಶ್ವರ್ಯವನ್ನು-ವೈಭವವನ್ನು ಹೊಗಳಿದರೆ ಅವನಿಗೆ ಖುಷಿಯಾಗಿಬಿಡುತ್ತದೆ ಎಂದು ತಿಳಿಯುತ್ತಾನೆ. ಒಮ್ಮೆ ಶಂಭುಮಲ್ಲಿಕ ಹೇಳಿದ: 'ನಾನು ನನ್ನ ಈ ಐಶ್ವರ್ಯವನ್ನೆಲ್ಲ ಭಗವಂತನ ಪಾದಪದ್ಮಗಳಲ್ಲಿ ಅರ್ಪಿಸಿ ಶಾಂತಿಯಿಂದ ಸಾಯುವ ಹಾಗೆ ಆಶೀರ್ವಾದ ಮಾಡಿ' ಅಂತ. ನಾನು ಹೇಳಿದೆ, 'ಅಯ್ಯಾ, ಇವು ನಿನಗೇನೋ ದೊಡ್ಡ ಐಶ್ವರ್ಯವಾಗಿರಬಹುದು. ಆದರೆ ನೀನು *ಭಗವಂತನಿಗೆ* ಯಾವ ಐಶ್ವರ್ಯವನ್ನು ಕೊಡಬಲ್ಲೆ ? ಆತನ ದೃಷ್ಟಿಯಲ್ಲಿ ಇವೆಲ್ಲ ಕೇವಲ ಕಸಕಡ್ಡಿ' ಅಂತ.

"ಒಮ್ಮೆ ವಿಷ್ಣುದೇವಾಲಯದ ಒಡವೆಗಳನ್ನೆಲ್ಲ ಯಾರೋ ಕದ್ದುಕೊಂಡು ಹೋದಾಗ ನಾನೂ ಮಥುರಬಾಬುವೂ ದೇವಾಲಯದೊಳಕ್ಕೆ ಹೋಗಿ ನೋಡಿದೆವು. ಮಥುರ ಹೇಳಿದ, 'ಛೆ, ದೇವರೇ ! ನೀನು ಯಾತಕ್ಕೂ ಆಗದವನು ಬಿಡು. ಕಳ್ಳರು ನಿನ್ನ ಮೈಮೇಲಿದ್ದ ಒಡವೆಗಳನ್ನೆಲ್ಲ ಕಳಚಿಕೊಂಡು ಹೋಗಿಬಿಟ್ಟಿದ್ದಾರೆ, ಆದರೂ ನಿನ್ನ ಕೈಲಿ ಏನು ಮಾಡುವುದಕ್ಕೂ ಆಗದೆಹೋಯಿತಲ್ಲ !' ಅಂತ. ಆಗ ನಾನು ಆತನಿಗೆಂದೆ,

'ಇದೇನು ಮಾತಯ್ಯ ನಿನ್ನದು ! ಒಡವೆಯೆಲ್ಲ ನಿನಗೆ ಬಹಳ ದೊಡ್ಡದು ನಿಜ. ಆದರೆ ಭಗವಂತನಿಗೆ ಅದು ಕೇವಲ ಮಣ್ಣುಹೆಂಟೆಗೆ ಸಮಾನ. ಭಾಗ್ಯದೇವತೆಯಾದ ಲಕ್ಷ್ಮಿಯೇ ಆತನ ರಾಣಿ ! ಅಂಥ ಭಗವಂತ ನಿನ್ನ ಈ ಕೆಲವು ರೂಪಾಯಿಗಳ ಒಡವೆ ಕಳವಾದುದಕ್ಕಾಗಿ ಹಗಲಿರುಳು ಚಿಂತಿಸಬೇಕಾಗಿತ್ತೇನು ? ಇಂಥ ಮಾತುಗಳನ್ನು ನೀನು ಇನ್ನೆಂದಿಗೂ ಆಡಕೂಡದು.'

"ಭಗವಂತ ಐಶ್ವರ್ಯಕ್ಕೆ ವಶನಾಗುವವನೇನು ? ಇಲ್ಲ, ಆತ ಭಕ್ತಿಗೆ ವಶನಾಗು ತ್ತಾನೆ. ಆತನಿಗೇನು ಬೇಕು ? ಹಣವೆ ? ಖಂಡಿತ ಅಲ್ಲ. ಅವನು ನಿರೀಕ್ಷಿಸುವುದು ಭಾವ, ಭಕ್ತಿ, ವಿವೇಕ, ವೈರಾಗ್ಯ—ಇವುಗಳನ್ನು.

"ಪ್ರತಿಯೊಬ್ಬನೂ ಅವನವನ ಭಾವದಂತೆ ಭಗವಂತನನ್ನು ಕಲ್ಪಿಸಿಕೊಳ್ಳುತ್ತಾನೆ. ಉದಾಹರಣೆಗೆ ತಾಮಸಿಕ ಭಕ್ತನನ್ನು ತೆಗೆದುಕೊ. ಆತ ಭಾವಿಸುತ್ತಾನೆ, ಭಗವತಿ ಆಡಿನ ಮಾಂಸ ತಿನ್ನುತ್ತಾಳೆ ಅಂತ. ಆದ್ದರಿಂದ ಆಕೆಗೆ ಆಡನ್ನೇ ಬಲಿಕೊಡುತ್ತಾನೆ. ಹಾಗೆಯೇ, ರಾಜಸಿಕ ಭಕ್ತ ಅನೇಕ ಬಗೆಯ ಭಕ್ಷ್ಯಭೋಜ್ಯಗಳನ್ನು ಅರ್ಪಿಸುತ್ತಾನೆ. ಆದರೆ ಸಾತ್ವಿಕ ಭಕ್ತನಲ್ಲಿ ಯಾವ ವಿಧವಾದ ಬಾಹ್ಯ ಪೂಜಾಡಂಬರವೂ ಇರುವುದಿಲ್ಲ. ಆತ ಪೂಜೆ ಮಾಡುವುದು ಜನರಿಗೆ ಗೊತ್ತೇ ಆಗುವುದಿಲ್ಲ. ಪೂಜೆಗೆ ಹೂವು ಸಿಗದೆಹೋದರೆ ಆತ ಬಿಲ್ವಪತ್ರೆ-ಗಂಗಾಜಲಗಳಿಂದಲೇ ಪೂಜೆ ಮಾಡಿ ಮುಗಿಸಿಬಿಡುತ್ತಾನೆ. ನೈವೇದ್ಯಕ್ಕೆ ಸ್ವಲ್ಪ ಬೆಲ್ಲವೋ ಬತ್ತಾಸೋ ಇದ್ದರೆ ಆಯಿತು. ಎಲ್ಲೋ ಅಪರೂಪಕ್ಕೆ ಒಮ್ಮೊಮ್ಮೆ ಭಗವಂತ ನಿಗೆ ಪಾಯಸ ಮಾಡಿ ಬಡಿಸುತ್ತಾನೆ.

"ಈ ಮೂವರಲ್ಲದೆ ತ್ರಿಗುಣಾತೀತ ಭಕ್ತರೂ ಇದ್ದಾರೆ. ಅವರದು ಬಾಲಕನ ಸ್ವಭಾವ. ಅವರ ಪೂಜೆಯೆನ್ನುವುದು ಭಗವನ್ನಾಮೋಚ್ಚಾರ ಮಾಡುವುದರಲ್ಲೇ ಮುಗಿದುಹೋಗುತ್ತದೆ."

ಹೀಗೆ ಶ್ರೀರಾಮಕೃಷ್ಣರು ಭಗವದ್ಭಾವದಲ್ಲಿದ್ದುಕೊಂಡು, ಕೇಶವನೊಡನೆ ಬಹಳ ಹೊತ್ತು ಭಗವತ್ಸಂಬಂಧವಾದ ಮಾತುಗಳನ್ನೇ ಆಡುತ್ತ ಬಂದರು. ನಿಜಕ್ಕೂ ಅವರು ಅವನಲ್ಲಿಗೆ ಬಂದದ್ದು ಅವನ ಆರೋಗ್ಯವನ್ನು ವಿಚಾರಿಸಿಕೊಂಡು ಹೋಗುವುದಕ್ಕೆಂದು. ಆದರೆ ಉನ್ನತ ಮಟ್ಟದ ಸಾಧಕನಾದ ಅವನನ್ನು ಕಂಡೊಡನೆ ಅವರ ಮನಸ್ಸು ಅಲೌಕಿಕ ಸಾಮ್ರಾಜ್ಯಕ್ಕೇರಿಬಿಟ್ಟಿತು. ಆದ್ದರಿಂದಲೇ ಆ ದೈವಿಕವಾದ ಮಾತುಕತೆಗಳು. ಈಗ ಅವರ ಮನಸ್ಸು ಸಹಜಸ್ಥಿತಿಗೆ ಬಂದಿದೆ. ಮುಗುಳ್ನಗುತ್ತ ಅವನಿಗೆಂದರು:

"ಕೇಶವ, ನಿನ್ನ ದೇಹಾರೋಗ್ಯ ಕೆಟ್ಟಿದೆಯಲ್ಲ, ಏಕೆ ಹೇಳು ? ಇದಕ್ಕೆ ಕಾರಣವಿದೆ. ನಿನ್ನ ಶರೀರದ ಮೂಲಕ ಅನೇಕ ಭಾವಗಳು ಪ್ರವಹಿಸಿಹೋಗಿವೆ. ಅದರಿಂದ ಹೀಗಾಗಿ ಬಿಟ್ಟಿದೆ. ಭಾವ ಉಂಟಾದಾಗ ಅದರ ಪರಿಣಾಮ ಅಷ್ಟಾಗಿ ಗೊತ್ತಾಗುವುದಿಲ್ಲ. ಬಹಳ ದಿನಗಳ ಮೇಲಷ್ಟೇ ಅದು ಶರೀರದ ಮೇಲೆ ಮಾಡಿದ ಆಘಾತ ಅರಿವಿಗೆ ಬರುತ್ತದೆ. ಗಂಗೆಯಲ್ಲಿ ದೊಡ್ಡದೊಡ್ಡ ಜಹಜುಗಳು ಹೋಗುವುದನ್ನು ನೋಡಿದ್ದೇನೆ. ಅವು ಹೋಗುವ ಸಮಯದಲ್ಲಿ ಏನೂ ಗೊತ್ತೇ ಆಗುವುದಿಲ್ಲ. ಆದರೆ ಏನು ಹೇಳುತ್ತಿ ! ಸ್ವಲ್ಪ ಹೊತ್ತಿನಲ್ಲೇ ಅಲೆಗಳು ಬಂದು 'ಥಬಾರ್, ಥಬಾರ್' ಅಂತ ರಭಸದಿಂದ ದಡ ವನ್ನು ಬಡಿಯಲಾರಂಭಿಸುತ್ತವೆ. ಆ ಏಟಿಗೆ ದಡದ ಸ್ವಲ್ಪ ಭಾಗ ಕುಸಿದು ಬೀಳಲೂ ಬಹುದು.

"ಆನೆ ಗುಡಿಸಲನ್ನು ಹೊಕ್ಕರೆ ಒಳಗೆಲ್ಲ ದಾಂಧಲೆಯೆಬ್ಬಿಸಿ ಕೊನೆಗೆ ಅದನ್ನು

ಮುರಿದೇಹಾಕುತ್ತದೆ. ಹಾಗೆಯೇ ಭಾವವೆಂಬ ಆನೆ ಈ ದೇಹವನ್ನು ಪ್ರವೇಶಿಸಿದ್ದೇ ಆದರೆ ಅದನ್ನು ಛಿದ್ರಛಿದ್ರ ಮಾಡಿಬಿಡುತ್ತದೆ.

"ನಿಜವಾಗಿ ಏನಾಗುತ್ತದೆ ಗೊತ್ತೆ? ಮನೆಗೆ ಬೆಂಕಿ ಹೊತ್ತಿಕೊಂಡಾಗ ಮೊದಲು ಕೆಲಕೆಲವು ವಸ್ತುಗಳು ಬೇಗ ಉರಿದುಹೋಗುತ್ತವೆ. ಬಳಿಕ ದೊಡ್ಡ ಲಂಕಾದಹನವೇ ಶುರುವಾಗುತ್ತದೆ. ಅದೇ ರೀತಿ ಜ್ಞಾನಾಗ್ನಿ ಮೊದಲು ಸಾಧಕನ ಕಾಮ, ಕ್ರೋಧ ಮೊದಲಾದ ರಿಪುಗಳನ್ನು ನಾಶಮಾಡುತ್ತದೆ. ಬಳಿಕ ಅಹಂಬುದ್ಧಿಯ ಸರದಿ. ಅನಂತರ ದೇಹದಲ್ಲೊಂದು ದೊಡ್ಡ ತುಮುಲವೇಳುತ್ತದೆ."

"ನೀನು ಭಾವಿಸಬಹುದು, 'ಸದ್ಯ! ತೊಂದರೆಯೆಲ್ಲ ಕಳೆಯಿತು' ಅಂತ. ಆದರೆ ಇಲ್ಲ! ನಿನ್ನಲ್ಲಿ 'ರೋಗ'ದ ಛಾಯೆ ಒಂದು ಕಿಂಚಿತ್ ಇರುವವರೆಗೂ ಭಗವಂತ ನಿನ್ನನ್ನು ಬಿಡಲೊಲ್ಲ. ಇದು ಆಸ್ಪತ್ರೆಗೆ ಸೇರಿಕೊಂಡಹಾಗೆ. ಒಮ್ಮೆ ಆಸ್ಪತ್ರೆಗೆ ಹೋಗಿ ದಾಖಲಾದೆಯೆಂದರೆ, ಆಮೇಲೆ ರೋಗದ ಕೊಸರು ಸ್ವಲ್ಪ ಇದ್ದರೂ ಡಾಕ್ಟರು ನಿನ್ನನ್ನು ಬಿಟ್ಟುಕೊಡುವುದಿಲ್ಲ. ಅಯ್ಯೋ, ಆಸ್ಪತ್ರೆಯಲ್ಲಿ ಇನ್ನೆಷ್ಟು ದಿನ ಕಳೆಯಬೇಕಪ್ಪಾ ಎನ್ನುವೆಯಾದರೆ, ಅಲ್ಲಿಗೇಕೆ ಹೋಗಿ ದಾಖಲಾಗಬೇಕಿತ್ತು ಮತ್ತೆ?"

ಆಸ್ಪತ್ರೆಯ ಸಾಮತಿ ಕೇಳಿ ಎಲ್ಲರೂ ನಕ್ಕರು. ಕೇಶವನಿಗಂತೂ ಅದು ಬಹಳ ಇಷ್ಟವಾಯಿತು. ಆತ ಅದನ್ನು ಜ್ಞಾಪಿಸಿಕೊಂಡು ಮತ್ತೆಮತ್ತೆ ನಗುತ್ತಲೇ ಇದ್ದ.

ಪುನಃ ಶ್ರೀರಾಮಕೃಷ್ಣರು ಕೇಶವನಿಗೆಂದರು: "ಬೇರಿಗೆ ಹಿಮ ಬೀಳುವಂತಾಗಲಿ ಅಂತ ತೋಟಗಾರ ಗುಲಾಬಿ ಗಿಡದ ಸುತ್ತ ಮಣ್ಣನ್ನು ತೆಗೆದುಬಿಡುತ್ತಾನೆ. ಅದು ಇಬ್ಬನಿ ಕುಡಿದರೆ ಚೆನ್ನಾಗಿ ಹೂ ಬಿಡುತ್ತದೆ. ಬಹುಶಃ ಅದಕ್ಕೇ ಇರಬೇಕು, ಭಗವತಿ ನಿನ್ನ ಬೇರಿನ ಬಹು ಭಾಗವನ್ನು ತೋಡಿಬಿಟ್ಟಿರುವುದು. (ಇಬ್ಬರೂ ನಗುತ್ತಾರೆ.) ನೀನೂ ಕೂಡ ಗುಣಹೊಂದಿದ ಮೇಲೆ ಯಾವುದೋ ಮಹತ್ಕಾರ್ಯವನ್ನು ಸಾಧಿಸಲಿಕ್ಕಿರಬಹುದು.

"ನಿನಗೆ ಕಾಯಿಲೆಯಾಗಿದೆ ಅಂತ ಕೇಳಿದರೆ ಸಾಕು, ನನ್ನ ಜೀವ ಚಡಪಡಿಸುತ್ತದೆ. ಕಳೆದ ಬಾರಿ ನೀನು ಕಾಯಿಲೆ ಬಿದ್ದಾಗ, ನಾನು ನಸುಕಿನಲ್ಲೆದ್ದು ಅಳುತ್ತ ಭಗವತಿಯಲ್ಲಿ ಮೊರೆಯಿಡುತ್ತಿದ್ದೆ: 'ಅಮ್ಮ ಕೇಶವನಿಗೇನಾದರೂ ಹೆಚ್ಚುಕಡಿಮೆಯಾದರೆ, ನಾನು ಕಲ್ಕತ್ತಕ್ಕೆ ಹೋದಾಗ ಇನ್ಯಾರ ಹತ್ತಿರ ಮಾತನಾಡಲಿ?' ಅಂತ. ಕಲ್ಕತ್ತಕ್ಕೆ ಬಂದು ಸಿದ್ಧೇಶ್ವರೀ ದೇವಿಗೆ ನಿನ್ನ ಆರೋಗ್ಯಕ್ಕಾಗಿ ಎಳನೀರು ಸಕ್ಕರೆ ಅರ್ಪಿಸಿದೆ."

ಶ್ರೀರಾಮಕೃಷ್ಣರು ಕೇಶವನ ಮೇಲಿಟ್ಟಿದ್ದ ಪ್ರೀತಿಯ ಆಳವನ್ನು ಕಂಡು ಅಲ್ಲಿದ್ದವರೆಲ್ಲ ಮೂಕವಿಸ್ಮಿತರಾದರು.

ಶ್ರೀರಾಮಕೃಷ್ಣರು: "ಆದರೆ, ನಿಜ ಹೇಳಬೇಕೆಂದರೆ, ಈ ಸಲ ಮನಸ್ಸು ಹಿಂದಿನಷ್ಟು ವ್ಯಾಕುಲ ಪಡಲಿಲ್ಲ. ಎಲ್ಲೋ ಎರಡು ಮೂರು ದಿನ ಸ್ವಲ್ಪ ವ್ಯಾಕುಲಪಟ್ಟಿತು."

ಏಕೆ? ಅವರಿಗೆ ಕೇಶವನ ಅಂತ್ಯಕಾಲ ಸಮೀಪಿಸಿರುವುದರ ಸೂಚನೆ ಸಿಕ್ಕಿರಬಹುದೆ..?

ಕೇಶವನ ವೃದ್ಧಮಾತೆ ಕೋಣೆಯ ಬಾಗಿಲಿಗೆ ಬಂದು ನಿಂತಳು. ಸೆರಗಿನಿಂದ ಮುಖ ಮರೆಮಾಡಿಕೊಂಡಿದ್ದಳು. ಅವಳೊಂದಿಗಿದ್ದ ಉಮಾನಾಥ ಎಂಬವನು ಶ್ರೀರಾಮಕೃಷ್ಣರ ಗಮನವನ್ನು ಸೆಳೆಯುತ್ತ ಗಟ್ಟಿಯಾಗಿ ಹೇಳಿದ: "ಇಲ್ಲಿ ತಾಯಿಯವರು ನಿಮಗೆ ಪ್ರಣಾಮ ಮಾಡುತ್ತಿದ್ದಾರೆ."

ಶ್ರೀರಾಮಕೃಷ್ಣರು ಅತ್ತ ತಿರುಗಿ ಮುಗುಳ್ನಕ್ಕರು.

ಉಮಾನಾಥ: "ತಾಯಿಯವರು ಕೇಳಿಕೊಳ್ಳುತ್ತಿದ್ದಾರೆ, ಕೇಶವಸೇನರು ಗುಣ ಹೊಂದುವ ಹಾಗೆ ತಾವು ಆಶೀರ್ವಾದ ಮಾಡಬೇಕು ಅಂತ."

ಶ್ರೀರಾಮಕೃಷ್ಣರು: "ಆನಂದಮಯಿ ಭಗವತಿಯಲ್ಲಿ ಮೊರೆಯಿಡಿ. ಅವಳು ದುಃಖವನ್ನೆಲ್ಲ ದೂರ ಮಾಡುತ್ತಾಳೆ."

ಈಗ ಅವರು ಕೇಶವನನ್ನುದ್ದೇಶಿಸಿ ಗಂಭೀರವಾಗಿ ಹೇಳಿದರು: "ನೋಡು, ಅಂತಃ ಪುರದಲ್ಲಿ (ಹೆಂಡತಿಯ ಜೊತೆಯಲ್ಲಿ) ಬಹಳ ಕಾಲ ಕಳೆಯಬೇಡ.* ಸ್ತ್ರೀಯರ ಸಹವಾಸ ದಲ್ಲಿದ್ದರೆ ನೀನು ಇನ್ನೂ ಆಳಕ್ಕೆ ಮುಳುಗಿಹೋಗುತ್ತೀಯೆ. ಭಗವತ್ಸಂಬಂಧವಾದ ಮಾತುಕತೆಯೇ ಕಿವಿಗೆ ಬೀಳುತ್ತಿದ್ದರೆ ನೀನು ಉತ್ತಮಗೊಳ್ಳುವೆ."

ಶ್ರೀರಾಮಕೃಷ್ಣರು ಮತ್ತೀಗ ಸಣ್ಣ ಬಾಲಕನಂತಾಗಿ ತಮಾಷೆ ಮಾಡಿ ನಗತೊಡ ಗಿದರು. ಉಮಾನಾಥ ಬಾಗಿಲ ಬಳಿಯಿಂದಲೇ ಪುನಃ ನುಡಿದ:

"ತಾಯಿಯವರು ಕೇಳಿಕೊಳ್ಳುತ್ತಿದ್ದಾರೆ, ತಾವು ಕೇಶವರಿಗೆ ಆಶೀರ್ವಾದ ಮಾಡ ಬೇಕು ಅಂತ."

ಶ್ರೀರಾಮಕೃಷ್ಣರು (ಗಂಭೀರವಾಗಿ): "ನನ್ನ ಕೈಲೇನುತಾನೆ ಸಾಧ್ಯ ? ಭಗವಂತ ಮಾತ್ರವೇ ಆಶೀರ್ವದಿಸಬಲ್ಲ.

*'ನಿನ್ನ ಇಚ್ಛೆಯ ನೀನು ಪೂರೈಸುತಿರಲು*
*ತಮ್ಮ ಗ್ಮೆಮೆಯಿದೆಂದು ತಿಳಿವರೀ ಜನರು!'*

"ಭಗವಂತ ಎರಡು ಸಂದರ್ಭಗಳಲ್ಲಿ ನಗುತ್ತಾನೆ. ಸೋದರರಿಬ್ಬರು ಪಿತ್ರಾರ್ಜಿತ ಜಮೀನನ್ನು ಹಂಚಿಕೊಳ್ಳುವಾಗೊಮ್ಮೆ ಆತ ನಗುತ್ತಾನೆ. ಅವರು ಜಮೀನಿನ ಮೇಲೆ ದಾರ ಎಳೆಯುತ್ತ, 'ಈ ಭಾಗ ನನ್ನದು, ಆ ಭಾಗ ನಿನ್ನದು' ಎಂದು ಮಾತಾಡಿಕೊಳ್ಳು ವಾಗ ಭಗವಂತ ನಗುತ್ತ ತನಗೆ ತಾನೇ ಹೇಳಿಕೊಳ್ಳುತ್ತಾನೆ: 'ಏನು ! ಈ ಇಡೀ ಜಗತ್ತೇ ನನ್ನದು. ಹಾಗಿರುವಾಗ, ಇದೊಂದಿಷ್ಟು ಮಣ್ಣಿನ ಸಂಬಂಧವಾಗಿ ಇವರು ಹೇಳುತ್ತಿದ್ದಾ ರಲ್ಲ, "ಈ ಭಾಗ ನನ್ನದು, ಆ ಭಾಗ ನಿನ್ನದು" ಅಂತ !'

"ಭಗವಂತ ಇನ್ನೊಮ್ಮೆ ನಗುತ್ತಾನೆ: ತಾಯಿಯೊಬ್ಬಳು ತನ್ನ ಮಗು ಕಠಿಣವಾದ ಕಾಯಿಲೆಗೆ ಗುರಿಯಾಗಿರುವುದನ್ನು ಕಂಡು ಬಹಳವಾಗಿ ವಿಲಾಪಿಸುತ್ತಿರುತ್ತಾಳೆ; ಡಾಕ್ಟರ್ ಬಂದು ಹೇಳುತ್ತಾನೆ, 'ತಾಯಿ, ಭಯ ಪಡಬೇಕಾಗಿಲ್ಲ, ನಾನು ಗುಣಪಡಿಸಿಕೊಟ್ಟು ಬಿಡುತ್ತೇನೆ.' ಆಗ ಭಗವಂತ ನಗುತ್ತ ಅಂದುಕೊಳ್ಳುತ್ತಾನೆ, 'ಎಲಾ, ನಾನು ಈ ಮಗು ವಿನ ಪ್ರಾಣವನ್ನು ಇಂದೇ ತೆಗೆದುಕೊಳ್ಳಬೇಕು ಅಂತ ತೀರ್ಮಾನಿಸಿದ್ದೇನೆ. ಆದರೆ ಈ ಡಾಕ್ಟರ್ ತಾನು ಅದನ್ನು ಗುಣಪಡಿಸಿಬಿಡುತ್ತೇನೆ ಅಂತನ್ನುತ್ತಿದ್ದಾನಲ್ಲ !' "

ಅಷ್ಟರಲ್ಲಿ ಕೇಶವನಿಗೆ ಕೆಮ್ಮು ಹತ್ತಿಕೊಂಡಿತು. ಎಡೆಬಿಡದೆ ಕೆಮ್ಮಲಾರಂಭಿಸಿದ. ಆ ದೃಶ್ಯ ಬಹಳ ವಿಷಾದಕರವಾಗಿತ್ತು. ಇನ್ನು ಕುಳಿತುಕೊಳ್ಳಲಾಗದೆ ಅವನು ಶ್ರೀರಾಮ ಕೃಷ್ಣರಿಗೆ ಮತ್ತೆ ಸಾಷ್ಟಾಂಗ ಪ್ರಣಾಮಮಾಡಿ ಗೋಡೆ ಹಿಡಿದುಕೊಂಡು ಮೆಲ್ಲನೆ ನಡೆ

*ಅವರು ಹಿಂದೆ ಅಣ್ಣ ರಾಮೇಶ್ವರನಿಗೂ ಇದೇ ರೀತಿಯಲ್ಲಿ ಎಚ್ಚರಿಕೆ ನೀಡಿದ್ದನ್ನು ನೆನಪಿಸಿಕೊಳ್ಳ ಬಹುದು. ಅವರು ಈಗ ಕೇಶವನಿಗೆ ಈ ಮಾತು ಹೇಳಲು ಬಹುಶಃ ಕಾರಣವಿಲ್ಲದಿರಲಿಲ್ಲ. ಅವನಿಗೀಗ ನಲವತ್ತೈದು ವರ್ಷ; ಒಂದು ವರ್ಷದ ಹಿಂದೆಯಷ್ಟೇ ಅವನು ಹತ್ತನೆಯ ಮಗುವಿನ ತಂದೆಯಾಗಿದ್ದ.

ಯುತ್ತ ಒಳಕ್ಕೆ ಹೊರಟುಹೋದ.

ಶ್ರೀರಾಮಕೃಷ್ಣರು ಆಮೇಲೂ ಸ್ವಲ್ಪ ಹೊತ್ತು ಕೇಶವನ ಬಂಧುಮಿತ್ರರೊಡನೆ ಮಾತನಾಡುತ್ತ ಕುಳಿತಿದ್ದು ಉಪಾಹಾರ ಸ್ವೀಕರಿಸಿದರು. ಈಗ ಅವರಿಗೆ ಕೇಶವಸೇನನ ಹಿರಿಯ ಮಗನನ್ನು ಪರಿಚಯಿಸಿ ಅವನಿಗೆ ಆಶೀರ್ವಾದ ಮಾಡುವಂತೆ ಕೇಳಿಕೊಳ್ಳಲಾಯಿತು. ಶ್ರೀರಾಮಕೃಷ್ಣರು ಪ್ರೀತಿಯಿಂದ ಅವನ ಮೈದಡವುತ್ತ ಮುಗುಳ್ನಕ್ಕು ನುಡಿದರು: "ಆ ಕಾರ್ಯ (ಆಶೀರ್ವದಿಸುವ ಕಾರ್ಯ) ನನ್ನದಲ್ಲ, ಭಗವಂತನದು."

ಕೇಶವನ ಶಿಷ್ಯ ಅಮೃತ (ಮುಗುಳ್ನಗುತ್ತ): "ಒಳ್ಳೇದು, ನಿಮಗೆ ಸರಿಯೆಂದು ತೋರಿದಹಾಗೆ ಮಾಡಿ."

ಶ್ರೀರಾಮಕೃಷ್ಣರು (ಭಕ್ತರಿಗೆ): "ನೋಡಿ, 'ನಿನಗೆ ಗುಣವಾಗಲಿ' ಅಂತ ಹೀಗೆಲ್ಲ ಹೇಳಲು ನನ್ನ ಕೈಯಲ್ಲಿ ಸಾಧ್ಯವಿಲ್ಲ. 'ಕಾಯಿಲೆಯನ್ನು ಗುಣಪಡಿಸುವ ಶಕ್ತಿ ಕೊಡು' ಅಂತ ನಾನೆಂದೂ ಭಗವತಿಯನ್ನು ಬೇಡಲಾರೆ. ಅವಳಲ್ಲಿ ನಾನು ಶುದ್ಧಭಕ್ತಿಯನ್ನು ಮಾತ್ರ ಬೇಡುತ್ತೇನೆ.

"ಕೇಶವನೇನು ಸಾಮಾನ್ಯನೆ? ಅವನು ಎಲ್ಲರ ಮನ್ನಣೆಗೆ ಪಾತ್ರನಾಗಿದ್ದಾನೆ. ಅವನನ್ನು ಲೌಕಿಕರೂ ಗೌರವಿಸುತ್ತಾರೆ, ಸಾಧುಗಳೂ ಗೌರವಿಸುತ್ತಾರೆ. . .

"ಕೇಶವನಲ್ಲಿ ಇತರ ಅನೇಕ ಧರ್ಮಬೋಧಕರಿಗೆ ಇರುವಂಥ ಸಂಕುಚಿತ ಬುದ್ಧಿ ಇಲ್ಲ. ಎಷ್ಟೋ ಜನಕ್ಕೆ ಅವನು ಹೇಳಿದ್ದಾನೆ, 'ನಿಮಗೇನಾದರೂ ಸಂದೇಹಗಳಿದ್ದರೆ ಅವರ (ಶ್ರೀರಾಮಕೃಷ್ಣರ) ಹತ್ತಿರ ಹೋಗಿ' ಅಂತ. ಹಾಗೆಯೇ ನಾನೂ ಪ್ರಾರ್ಥಿಸುತ್ತೇನೆ, 'ಕೇಶವನ ಕೀರ್ತಿ ಸಾವಿರಪಾಲು ಹೆಚ್ಚಾಗಿ ಬೆಳಗಲಿ' ಅಂತ. ನಿಶ್ಚಯವಾಗಿಯೂ ಕೇಶವನೊಬ್ಬ ಬಹಳ ದೊಡ್ಡ ವ್ಯಕ್ತಿ."

ಹೀಗೆ ಕೇಶವಸೇನ ಮತ್ತು ಅವನ ಮನೆಮಂದಿಯೊಂದಿಗೆ ಕೆಲವು ಆತ್ಮೀಯ ಘಳಿಗೆಗಳನ್ನು ಕಳೆದು ಶ್ರೀರಾಮಕೃಷ್ಣರು ಅಲ್ಲಿಂದ ನಿರ್ಗಮಿಸಿದರು. ದಕ್ಷಿಣೇಶ್ವರಕ್ಕೆ ಹಿಂದಿರುಗಿದ ಮೇಲೆ, ಕೇಶವನ ದೇಹಸ್ಥಿತಿಯ ಪ್ರಸ್ತಾಪವೆತ್ತಿ ಜೊತೆಯಿದ್ದವರ ಮುಂದೆ ನುಡಿದರು: "ಈ ಬಾರಿ ಜಗನ್ಮಾತೆಯ ಇಚ್ಛೆ ಏನು ಅಂತ ನನಗೆ ಗೊತ್ತಾಗುತ್ತಿಲ್ಲ..."

ಇದಾದ ಕೆಲವೇ ವಾರಗಳಲ್ಲಿ—೧೮೮೪ರ ಜನವರಿ ೮ರಂದು—ಕೇಶವಸೇನ ತೀರಿಹೋದ. ಆತನ ಸಾವು ಶ್ರೀರಾಮಕೃಷ್ಣರಿಗೊಂದು ದೊಡ್ಡ ಆಘಾತ. "ಆಗ ನನ್ನ ಕೈಕಾಲುಗಳಿಗೆ ಲಕ್ವ ಹೊಡೆದಂತಾಗಿತ್ತು" ಎನ್ನುತ್ತಾರೆ ಅವರು. ಆತನಿಗಾಗಿ ಅವರು ಬಹುವಾಗಿ ಕಣ್ಣೀರ್ಗರೆದು ಶೋಕಿಸಿದರು. ಮೂರು ದಿನಗಳ ಪರ್ಯಂತ ಅವರಿಗೆ ಹಾಸಿಗೆ ಬಿಟ್ಟೇಳಲೂ ಸಾಧ್ಯವಾಗಲಿಲ್ಲ.

## ಸ್ವಾರಸ್ಯದ ಸನ್ನಿವೇಶಗಳು ೨

೧೮೮೪ರ ಜನವರಿಯಲ್ಲೊಂದು ದಿನ; ಶ್ರೀರಾಮಕೃಷ್ಣರು ಕಾಳೀ ಮಂದಿರದ ತೋಟದಲ್ಲಿ ಓಡಾಡುತ್ತಿದ್ದವರು ಇದ್ದಕ್ಕಿದ್ದಂತೆ ಭಾವಾವಿಷ್ಟರಾದರು. ಅವರ ನೆರವಿಗೆ ಯಾರೂ ಬದಿಯಲ್ಲಿರಲಿಲ್ಲ. ಆಗ ಅವರು ಕೆಳಮಟ್ಟದಲ್ಲಿದ್ದ ಕಂಬಿಯೊಂದನ್ನು ಎಡವಿ ಬಿದ್ದುಬಿಟ್ಟರು. ಅವರ ಎಡತೋಳಿನ ಮೂಳೆ ಕೀಲು ತಪ್ಪಿಹೋಯಿತು. ಸಾಮಾನ್ಯ ಪ್ರಜ್ಞೆ ಮರಳಿದ ಮೇಲೆ ಅದರ ನೋವು ಅಸಹನೀಯವೆನಿಸಿತು. ಮೊದಲೇ ದುರ್ಬಲ ವಾದ ಅವರ ಶರೀರಕ್ಕೆ ಇಂತಹ ತೊಂದರೆ ಬರಬೇಕೆ? ಭಕ್ತರೆಲ್ಲ ಅತ್ಯಂತ ವ್ಯಾಕುಲಿತ ರಾದರು. ಡಾಕ್ಟರುಗಳನ್ನು ಕರೆಸಿ ಚಿಕಿತ್ಸೆಗೆ ಏರ್ಪಾಡು ಮಾಡಲಾಯಿತು. ಏನೇ ಮಾಡಿ ದರೂ ಹಲವಾರು ತಿಂಗಳವರೆಗೂ ಕೈ ಸರಿಹೋಗಲಿಲ್ಲ. ಕೆಲವೊಮ್ಮೆ ಶ್ರೀರಾಮಕೃಷ್ಣರು ಆ ನೋವಿನಿಂದ ಬಹಳ ಕಷ್ಟ ಪಡುತ್ತಿದ್ದರು; ಇನ್ನು ಕೆಲವೊಮ್ಮೆ ಅದರ ಬಗ್ಗೆ ತಾವೇ ಹಾಸ್ಯ ಮಾಡಿಕೊಳ್ಳುತ್ತಿದ್ದರು. ಇಲ್ಲವೆ ಸಮಾಧಿಯಲ್ಲಿ ಮುಳುಗಿ ಶರೀರವನ್ನೂ ಅದ ರೊಂದಿಗೆ ನೋವನ್ನೂ ಮರೆತುಬಿಡುತ್ತಿದ್ದರು.

ಕೆಲದಿನಗಳ ಬಳಿಕ ಅವರ ದರ್ಶನಕ್ಕಾಗಿ ಬಂದ ಶಿಷ್ಯ ತಾರಕನಾಥ, ಪಟ್ಟಿಕಟ್ಟಿದ ಅವರ ಕೈಯನ್ನು ಕಂಡು, ದುಃಖದಿಂದ ಕೇಳುತ್ತಾನೆ: "ಇದು ಹೇಗಾಯಿತು?"

ಶ್ರೀರಾಮಕೃಷ್ಣರು: "ನಾನು ಚಂದ್ರನ ಕಡೆ ನೋಡುತ್ತಿದ್ದೆ. ಆಗ ಕಟಕಟೆಯ ಕಂಬಿಯನ್ನು ಎಡವಿ ಬಿದ್ದುಬಿಟ್ಟೆ. ತೋಳಿಗೆ ಘಾಸಿಯಾಯಿತು. ನೋವಿನ್ನೂ ಕಡಿಮೆ ಯಾಗಿಲ್ಲ."

ತಾರಕ: "ಮೂಳೆ ಹೊರಳಿದೆಯೋ ಅಥವಾ ಮುರಿದೇಹೋಗಿದೆಯೊ?"

ಶ್ರೀರಾಮಕೃಷ್ಣರು: "ನನಗೇನೂ ಗೊತ್ತಿಲ್ಲ. ಇವರೆಲ್ಲ ಸುಮ್ಮನೆ ಕೈಗೆ ಪಟ್ಟಿ ಕಟ್ಟಿ ದ್ದಾರೆ. ನಿರಾಳವಾದ ಮನಸ್ಸಿನಿಂದ ತಾಯಿಯ ಹೆಸರು ಹೇಳಿಕೊಂಡಿರಬೇಕು ಅಂತ ನನಗಿಷ್ಟ. ಆದರೆ ನೋಡು, ಇದೆಂಥ ತರಲೆಯಾಗಿದೆ! ಪಟ್ಟಿಯನ್ನು ಕಿತ್ತುಕೊಳ್ಳೋಣ ಎಂದರೆ ಬಿಡುವುದಿಲ್ಲ. ಈ ನೋವಿನಲ್ಲಿ ಜಗನ್ಮಾತೆಯನ್ನು ಕರೆಯುವುದಕ್ಕೆ ಸಾಧ್ಯವೆ? ಕೆಲವು ಸಲ ಅಂದುಕೊಳ್ಳುತ್ತೇನೆ, 'ಇದೇನು ಕಿರಿಕಿರಿಯಪ್ಪಾ ಈ ಪಟ್ಟಿ ಗಿಟ್ಟಿ ಎಲ್ಲ! ಇದನ್ನೆಲ್ಲ ಕಿತ್ತುಹಾಕಿಬಿಟ್ಟು ಭಗವಂತನಲ್ಲಿ ಮುಳುಗಿಬಿಡೋಣ' ಅಂತ. ಆದರೆ, ಮತ್ತೆ ಅನ್ನಿಸುತ್ತದೆ, 'ಇದು ಕೂಡ ಆತನ ಲೀಲೆಯ ಇನ್ನೊಂದು ದೃಶ್ಯವಲ್ಲವೆ' ಅಂತ. ಇದರಲ್ಲೂ ಒಂದು ಆನಂದವಿದೆ."

ತಾರಕ: "ನೀವು ಸುಮ್ಮನೆ ಇಷ್ಟಪಟ್ಟರೆ ಸಾಕು, ಕೈಯನ್ನು ವಾಸಿಮಾಡಿಕೊಳ್ಳ ಬಹುದು."

ಶ್ರೀರಾಮಕೃಷ್ಣರು (ಆಶ್ಚರ್ಯದಿಂದ): "ಏನೆಂದೆ! ನಾನು ಸುಮ್ಮನೆ ಇಷ್ಟಪಟ್ಟರೆ ವಾಸಿಯಾಗಿಬಿಡುತ್ತದೆಯೆ? (ಒಂದು ಘಳಿಗೆ ಸುಮ್ಮನಿದ್ದು) ಇಲ್ಲ; ಹೀಗೆ ನರಳು ವುದೂ ಒಳ್ಳೆಯದೇ. ಏಕೆಂದರೆ, ಎಷ್ಟೋ ಬಯಕೆಗಳನ್ನು ಹೊತ್ತು ಇಲ್ಲಿಗೆ ಬರುವ ಜನರೆಲ್ಲ ನನ್ನ ಅವಸ್ಥೆಯನ್ನು ಕಂಡು ಸುಮ್ಮನೆ ಹೊರಟುಹೋಗುತ್ತಾರೆ—ಇವರಿಂದ ಏನೂ ಕೆಲಸವಾಗುವುದಿಲ್ಲ ಅಂತ ತೀರ್ಮಾನಿಸಿ. ಅವರಿಂದ ನನಗಾಗುವ ತೊಂದರೆ

ತಪ್ಪುತ್ತದೆ... (ಭಗವತಿಯನ್ನುದ್ದೇಶಿಸಿ) ಅಮ್ಮಾ! ನೀನು ಒಳ್ಳೇ ಉಪಾಯ ಮಾಡಿದೆ!"

ಹೀಗೆನ್ನುತ್ತ ಅವರು ಹಾಡೊಂದನ್ನು ಹಾಡಲಾರಂಭಿಸಿದರು. ಬಹುಬೇಗನೆ ಸಮಾಧಿಯಲ್ಲಿ ಮುಳುಗಿಹೋದರು.

ಈ ದಿನಗಳಲ್ಲಿ ನಡೆದ ಹಲವಾರು ಪ್ರಸಂಗಗಳನ್ನು, ಸ್ವಾರಸ್ಯಕರ ಸಂಭಾಷಣೆಗಳನ್ನು 'ಶ್ರೀರಾಮಕೃಷ್ಣ ವಚನವೇದ'ದಲ್ಲಿ ನೋಡಬಹುದು.

ಫೆಬ್ರವರಿ ೨, ೧೮೮೪. ಶ್ರೀರಾಮಕೃಷ್ಣರು ತಮ್ಮ ಕೋಣೆಯಲ್ಲಿ ಕುಳಿತಿದ್ದಾರೆ. ರಾಖಾಲ, ಮಹಿಮಾಚರಣ, ಮಹೇಂದ್ರನಾಥ, ಹಾಜರಾ ಮೊದಲಾದವರಿದ್ದಾರೆ.

ಶ್ರೀರಾಮಕೃಷ್ಣರು (ಮಹಿಮನಿಗೆ): ". . . ಇರಲಿ. 'ನಾನು ಯಂತ್ರ, ನೀನದರ ಚಾಲಕಿ' ಎನ್ನುತ್ತಿರುವವನು ನಾನು. ಆದರೂ ನನಗೇಕೆ ಹೀಗಾಯಿತು ?"

ಮಹಿಮ ಏನೂ ಉತ್ತರಿಸಲಿಲ್ಲ.

ಶ್ರೀರಾಮಕೃಷ್ಣರಿಗೆ ಹಸಿವಾಯಿತು. ಮಗುವಿನಂತೆ ನಿಸ್ಸಂಕೋಚದಿಂದ, "ಎಲ್ಲಿ, ಏನಾದರೂ ತಿಂಡಿ ತಂದಿದ್ದೀಯಾ ?" ಎಂದು ಮಹೇಂದ್ರನಾಥನನ್ನು ಕೇಳಿದರು. ತಮ್ಮ ಮಾನಸಪುತ್ರ ರಾಖಾಲನ ಕಡೆಗೆ ದೃಷ್ಟಿ ಹರಿದು, ಇದ್ದಕ್ಕಿದ್ದಂತೆ ಸಮಾಧಿಸ್ಥರಾಗಿಬಿಟ್ಟರು. ಸ್ವಲ್ಪ ಪ್ರಜ್ಞೆ ಮರಳಿದಾಗ, ಮತ್ತೆ ಬಾಹ್ಯ ಪರಿಸರಕ್ಕೆ ಹೊಂದಿಕೊಳ್ಳಲೋಸುಗ ಗಟ್ಟಿಯಾಗಿ ಎರಡುಮೂರು ಸಲ ಹೇಳಿದರು: "ನಾನು ಜಿಲೇಬಿ ತಿನ್ನುತ್ತೇನೆ, ನಾನು ನೀರು ಕುಡಿಯುತ್ತೇನೆ. . ."

ಮತ್ತೆ ಮಗುವಿನಂತಾಗಿಬಿಟ್ಟರು. ಅಳುತ್ತ ಜಗನ್ಮಾತೆಯಲ್ಲಿ ಮೊರೆಯಿಟ್ಟರು: "ಹೇ ಬ್ರಹ್ಮಮಯಿ, ನನಗೇಕೆ ಹೀಗೆ ಮಾಡಿಬಿಟ್ಟೆ ? ತೋಳು ಬಹಳವಾಗಿ ನೋಯುತ್ತಿದೆಯಲ್ಲಾ ?"

ಈಗ ಭಕ್ತರ ಕಡೆ ನೋಡಿ ಆತಂಕದಿಂದ ಕೇಳಿದರು: "ಇದು ಮತ್ತೆ ಸರಿಹೋದೀತೆ ?"

ಚಿಕ್ಕ ಮಗುವನ್ನು ಸಮಾಧಾನ ಪಡಿಸುವ ರೀತಿಯಲ್ಲಿ ಭಕ್ತರೆಲ್ಲ ಹೇಳಿದರು: "ಓ, ಖಂಡಿತ ! ಬೇಗ ಸರಿಹೋಗಿಬಿಡುತ್ತದೆ."

ಶ್ರೀರಾಮಕೃಷ್ಣರು ಮತ್ತೆ ಭಾವಸ್ಥರಾಗಿ ತಮ್ಮಷ್ಟಕ್ಕೆ ಮಾತನಾಡಿಕೊಂಡರು:

"ಓಂ. . . ಓಂ. . . ಓಂ. . . ಅಮ್ಮಾ, ಮಾತನಾಡುತ್ತಿರುವವನು ನಾನೆ ? ನನಗೆ ಬ್ರಹ್ಮಜ್ಞಾನ ಕೊಟ್ಟು ಬಾಹ್ಯಪ್ರಜ್ಞೆಯಿಲ್ಲದಂತೆ ಮಾಡಬೇಡ. ನಾನು ನಿನ್ನ ಕಂದನಲ್ಲವೆ ? ನನಗೆ ತುಂಬ ಅಂಜಿಕೆ. ನನಗೆ ಅಮ್ಮ ಬೇಕು. ಬ್ರಹ್ಮಜ್ಞಾನಕ್ಕೆ ಕೋಟಿ ನಮಸ್ಕಾರ. ಅದು ಯಾರಿಗೆ ಬೇಕೋ ಅವರಿಗೆ ಕೊಟ್ಟುಕೊ. ಆನಂದಮಯೀ ! ಆನಂದಮಯೀ !"

ಅಳುತ್ತಳುತ್ತಲೇ ಒಂದು ಹಾಡಿನ ಚರಣವನ್ನು ಹೇಳಿಕೊಂಡರು:

*ಎದೆಯ ಕೊರೆಯುತಿಹುದೊಂದೆ ವ್ಯಥೆ ನನಗೆ*
*ನೀನೊಡನೆಯಿದ್ದರೂ ನಾನೆಚ್ಚರಿದ್ದರೂ*
*ಕಳ್ಳತನವಾಯ್ತಲ್ಲ ನನ್ನ ಮನೆಯೊಳಗೆ!*

"ತಾಯಿ, ನಾನೇನಾದರೂ ತಪ್ಪು ಮಾಡಿದೆನೆ ? ನಾನು ಯಾವುದನ್ನಾದರೂ ಸ್ವತಃ ಮಾಡುತ್ತೇನೆಯೆ ? ಎಲ್ಲವನ್ನೂ ಮಾಡುವವಳು **ನೀನೇ** ಅಲ್ಲವೆ ? ನಾನು ಯಂತ್ರ, ನೀನು ಚಾಲಕಿ."

ಪುನಃ, "ನನಗೆ ಪೆಟ್ಟಾದದ್ದಕ್ಕಾಗಿ ಅಳುತ್ತಿದ್ದೇನೆಯೆ ? ಖಂಡಿತ ಇಲ್ಲ. 'ಎದೆಯ

ಕೊರೆಯುತಿಹುದೊಂದೆ ವ್ಯಥೆ ನನಗೆ; ನೀನೊಡನೆಯಿದ್ದರೂ ನಾನೆಚ್ಚರಿದ್ದರೂ ಕಳ್ಳತನ ವಾಯ್ತಲ್ಲ ನನ್ನ ಮನೆಯೊಳಗೆ !' "

ಈಗ ಅವರು ಮತ್ತೆ ನಗುತ್ತ ಮಾತನಾಡತೊಡಗಿದರು. ಮಗು ಕಾಯಿಲೆಯಿಂದ ನರಳುತ್ತಿದ್ದರೂ ಒಮ್ಮೊಮ್ಮೆ ತನ್ನ ಕಾಯಿಲೆಯನ್ನು ಮರೆತು ನಗುವುದು, ಆಟವಾಡು ವುದು, ಸುತ್ತಾಡುವುದು ಇವನ್ನೆಲ್ಲ ಮಾಡುವುದಿಲ್ಲವೆ, ಹಾಗೆ.

ಸ್ವಲ್ಪ ಹೊತ್ತಿನ ಬಳಿಕ ಅವರಾಗಿಯೇ ಒಂದು ಮಾತೆಂದರು:

"ಸಚ್ಚಿದಾನಂದನ ಸಾಕ್ಷಾತ್ಕಾರ ಪಡೆದುಕೊಳ್ಳದಿದ್ದರೆ ಜೀವನ ಬರಿದೆ ವ್ಯರ್ಥ. ವಿವೇಕ ವೈರಾಗ್ಯಗಳಂಥ ವಸ್ತು ಇನ್ನಾವುದೂ ಇಲ್ಲ. ಸಂಸಾರಸ್ಥರ ಭಕ್ತಿಯೆನ್ನುವುದು ಕೇವಲ ಕ್ಷಣಿಕ—ಕಾದ ಬಾಣಲೆಯ ಮೇಲೆ ಬಿದ್ದ ನೀರಿನ ಹನಿಯ ಹಾಗೆ. ಅವರು ಯಾವಾಗಲಾದರೊಮ್ಮೆ ಒಂದು ಹೂವನ್ನು ನೋಡಿ, 'ಆಹ ! ಏನದ್ಭುತ ಈ ಭಗ ವಂತನ ಸೃಷ್ಟಿ !' ಅಂತ ಉದ್ಗರಿಸುತ್ತಾರೆ. ಅಷ್ಟೆ, ಅಲ್ಲಿಗೆ ಮುಗಿಯಿತು."

ಬಳಿಕ ಸ್ವಲ್ಪ ಹೊತ್ತಿಗೆ ದೂರದೂರಿನಿಂದ ಬಂದ ಕೆಲವು ಭಕ್ತರೊಂದಿಗೆ ಭಗವತ್ಸಲ್ಲಾಪ ಪ್ರಾರಂಭವಾಯಿತು.

ಶ್ರೀರಾಮಕೃಷ್ಣರು: "ಭಗವಂತನೊಬ್ಬನೇ ಸತ್ಯ, ಉಳಿದುದೆಲ್ಲ ಅನಿತ್ಯ ಎಂಬ ಸಂಬಂಧವಾಗಿ ಸದಾ ವಿಚಾರ ಮಾಡುತ್ತಿರಬೇಕು."

ಒಬ್ಬ ಭಕ್ತ: "ಆದರೆ, ಅದಕ್ಕೆ ನಮಗೆಲ್ಲಿ ಸಮಯವಿರುತ್ತದೆ ?"

ಶ್ರೀರಾಮಕೃಷ್ಣರು: "ಯಾರಿಗೆ ಸಮಯವಿರುತ್ತದೆಯೋ ಅವರು ಧ್ಯಾನ ಭಜನೆ ಮಾಡಲೇಬೇಕು. ಆದರೆ ಯಾರಿಗೆ ಸಮಯವಿಲ್ಲವೋ ಅವರು ದಿನಕ್ಕೆ ಎರಡು ವೇಳೆ ಹೃತ್ಪೂರ್ವಕವಾಗಿ ಭಗವಂತನಿಗೆ ನಮಸ್ಕಾರ ಹಾಕಲಿ. ಆತ ಅಂತರ್ಯಾಮಿ. ಆತನಿಗೆ ಗೊತ್ತಿದೆ, 'ಇವರು ಇನ್ನೇನು ತಾನೆ ಮಾಡಿಯಾರು ? ಇವರಿಗೆ ಬೇಕಾದಷ್ಟು ಕೆಲಸ ಕಾರ್ಯ ಇವೆಯಲ್ಲ ಪಾಪ' ಅಂತ. ಆತನನ್ನು ಪ್ರಾರ್ಥಿಸಲು ನಿಮಗೆ ಸಮಯವಿಲ್ಲ ದಿದ್ದರೆ ಆತನಿಗೆ ನಿಮ್ಮ ವಕಾಲತ್ತನ್ನು ವಹಿಸಿಬಿಡಿ. ಆದರೆ ನೋಡಿಕೊಳ್ಳಿ, ಆತನ ಸಾಕ್ಷಾತ್ಕಾರ ಪಡೆದುಕೊಳ್ಳದೆ ಹೋದಿರೆಂದರೆ ಜೀವನ ಬರಿದೆ ವ್ಯರ್ಥವಾದಂತೆಯೆ."

ಭಕ್ತ: "ಭಗವಂತನೇಕೆ ನಮ್ಮನ್ನು ಹೀಗೆ ಸಂಸಾರದಲ್ಲಿ ಇಟ್ಟಿದ್ದಾನೆ ?"

ಶ್ರೀರಾಮಕೃಷ್ಣರು: "ತನ್ನ ಸೃಷ್ಟಿಯನ್ನು ಮುಂದುವರಿಸಲು. ಅದು ಆತನ ಇಚ್ಛೆ, ಆತನ ಮಾಯೆ. ಅವನು ಬೇಕೆಂದೇ ಕಾಮಕಾಂಚನಗಳಿಂದ ಮನುಷ್ಯನನ್ನು ಭ್ರಾಂತಿ ಗೊಳಿಸಿ ಇಟ್ಟಿದ್ದಾನೆ."

ಭಕ್ತ: "ಆತನೇಕೆ ಹಾಗೆ ಇಚ್ಛಿಸಿದ ?"

ಶ್ರೀರಾಮಕೃಷ್ಣರು: "ತನ್ನ ಆನಂದವನ್ನು—ದಿವ್ಯಾನಂದವನ್ನು—ಸವಿಯಲು ಒಮ್ಮೆ ಆತ ನಮಗೆ ಅವಕಾಶ ಕೊಟ್ಟುದೇ ಆದರೆ, ಬಳಿಕ ಯಾರಿಗೂ ಈ ಸಂಸಾರವನ್ನು ನಡೆಯಿಸಿಕೊಂಡು ಹೋಗಲು ಇಚ್ಛೆಯಾಗುವುದಿಲ್ಲ. ಸೃಷ್ಟಿ ನಿಂತೇ ಹೋಗಿಬಿಡುತ್ತದೆ.

"ದಿನಸಿ ವ್ಯಾಪಾರಿ ತನ್ನ ಉಗ್ರಾಣದಲ್ಲಿ ದೊಡ್ಡ ದೊಡ್ಡ ಚೀಲಗಳಲ್ಲಿ ಅಕ್ಕಿಯನ್ನು ತುಂಬಿಟ್ಟಿರುತ್ತಾನೆ. ಇಲಿಗಳು ಆ ಮೂಟೆಗಳ ಹತ್ತಿರ ಹೋಗದಿರಲಿ ಅಂತ ಅವುಗಳ ಹತ್ತಿರವೇ ಆತ ಒಂದು ಮೊರದಲ್ಲಿ ಪುರಿಯನ್ನು ಇಡುತ್ತಾನೆ. ಇಲಿಗಳಿಗೆ ಆ ಪುರಿ ಬಹಳ ಸಿಹಿಯಾಗಿ ತೋರುತ್ತದೆ. ಆದ್ದರಿಂದ ಅವು ಇಡೀ ರಾತ್ರಿಯೆಲ್ಲಾ 'ಕರ್‌ಕ್, ಕರ್‌ಕ್' ಅಂತ ಆ ಪುರಿಯನ್ನು ತಿನ್ನುತ್ತಲೇ ಇರುತ್ತವೆ, ಅಕ್ಕಿಮೂಟೆಗಳ ಕಡೆಗೆ

ಹೋಗುವುದೇ ಇಲ್ಲ. ಆದರೆ ನೋಡು ! ಒಂದು ಸೇರು ಅಕ್ಕಿಯನ್ನು ಹುರಿದರೆ ಹದಿನಾರು ಸೇರು ಪುರಿಯಾಗುತ್ತದೆ. ಕಾಮಕಾಂಚನಗಳ ಸುಖದೊಡನೆ ಹೋಲಿಸಿ ನೋಡಿದರೆ, ಭಗವದಾನಂದ ಎಷ್ಟು ಅಮಿತವಾದದ್ದು ! ಭಗವಂತನ ರೂಪವನ್ನು ಚಿಂತಿಸಿದುದೇ ಆದರೆ, ರಂಭೆ ತಿಲೋತ್ತಮೆಯರ ರೂಪವೂ ಹೆಣಸುಟ್ಟ ಬೂದಿಯ ಹಾಗೆ ತೋರಿಬರುತ್ತದೆ.''

ಭಕ್ತ: ''ಆತನ ಸಾಕ್ಷಾತ್ಕಾರ ಮಾಡಿಕೊಳ್ಳಬೇಕು ಅನ್ನುವ ವ್ಯಾಕುಲತೆ ನಮಗೇಕೆ ಉಂಟಾಗುತ್ತಿಲ್ಲ ?''

ಶ್ರೀರಾಮಕೃಷ್ಣರು: ''ಭೋಗ ಮುಗಿಯುವವರೆಗೆ ವ್ಯಾಕುಲತೆ ಉಂಟಾಗುವುದಿಲ್ಲ. ಕಾಮಕಾಂಚನಗಳ ಭೋಗವನ್ನು ಎಷ್ಟು ಅನುಭವಿಸಬೇಕಾಗಿರುವುದೋ ಅಷ್ಟನ್ನು ಅನುಭವಿಸುವವರೆಗೆ ಜಗನ್ಮಾತೆಯ ಭಾವನೆಯೇ ಮನಸ್ಸಿನಲ್ಲಿ ಏಳದು. ಮಗು ಆಟದಲ್ಲಿ ನಿರತವಾಗಿರುವಾಗ ಅದಕ್ಕೆ ತಾಯಿ ಬೇಕಾಗದು. ಆಟ ಮುಗಿಯಿತು ಎಂದರೆ ಆಗ ಹೇಳುತ್ತದೆ, 'ಅಮ್ಮನ ಹತ್ತಿರಕ್ಕೆ ಹೋಗಬೇಕು' ಅಂತ.

''ಆದರೆ, ಯಾರು ನಿತ್ಯಸಿದ್ಧರೋ ಅವರು ಸಂಸಾರಕ್ಕೆ ಕಾಲಿಡಬೇಕಾಗಿರುವುದಿಲ್ಲ. ಅವರು ಹುಟ್ಟುವುದಕ್ಕೆ ಮುನ್ನವೇ ಅವರ ಭೋಗವಾಸನೆ ಪೂರ್ಣಗೊಂಡುಬಿಟ್ಟಿರುತ್ತದೆ.''

ಅಂದು ಸಂಜೆ ಐದು ಗಂಟೆಗೆ ಡಾಕ್ಟರ್ ಮಧುಸೂದನ ಎಂಬಾತ ಬಂದು ಶ್ರೀರಾಮಕೃಷ್ಣರ ಘಾಸಿಗೊಂಡ ಕೈಗೆ ಬ್ಯಾಂಡೇಜ್ ಕಟ್ಟಿದ.

ದೇವಾಲಯಗಳಲ್ಲಿ ಸಾಯಂ ಆರತಿಯಾಯಿತು. ಅಧರಸೇನ ಬಂದು ಶ್ರೀರಾಮಕೃಷ್ಣರಿಗೆ ಪ್ರಣಾಮ ಮಾಡಿ ಕುಳಿತ. ಮಹಿಮಾಚರಣ, ರಾಖಾಲ ಮತ್ತು ಮಹೇಂದ್ರ ಇವರೂ ಅಲ್ಲಿದ್ದರು.

ಅಧರಸೇನ: ''ಹೇಗಿದೆ ನಿಮ್ಮ ಆರೋಗ್ಯ ?''

ಶ್ರೀರಾಮಕೃಷ್ಣರು: ''ಇಲ್ಲಿ ನೋಡು, ತೋಳಿಗೆ ಹೇಗೆ ಪೆಟ್ಟು ಬಿದ್ದಿದೆ ! (ಮುಗುಳ್ನಗುತ್ತ) ಇನ್ನು ಹೇಗಿದ್ದೀರಿ ಅಂತ ಬೇರೆ ಕೇಳಬೇಕೆ ?''

ಈಗ ಅವರು ಮಹಿಮನೊಂದಿಗೆ ಮಾತುಕತೆಯಾಡತೊಡಗಿದರು.

ಶ್ರೀರಾಮಕೃಷ್ಣರು: ''. . . ನಿನ್ನ ಭಾವಕ್ಕನುಗುಣವಾದ ಕೆಲವು ಮಾತುಗಳನ್ನು ಹೇಳುತ್ತೇನೆ ಕೇಳು. ವೇದಾಂತದ ಪ್ರಕಾರ, ಒಬ್ಬನು ತನ್ನ ನಿಜಸ್ವರೂಪವನ್ನು ಅರಿತುಕೊಳ್ಳಬೇಕು. ಆದರೆ 'ಅಹಂ' ಎಂಬುದನ್ನು ತ್ಯಜಿಸಿದ ಹೊರತು ಆತ್ಮಜ್ಞಾನ ಲಭಿಸದು. ಈ ಅಹಂಕಾರವೆಂಬುದು ನೀರಿನ ಮೇಲೆ ತೇಲುತ್ತಿರುವ ಕೋಲಿನಂತೆ; ಅದರಿಂದಾಗಿ ನೀರು ಎರಡು ಭಾಗವಾಗಿರುವಂತೆ ತೋರುತ್ತದೆ. . . 'ನಾನು ಮಹಿಮಾಚರಣ,' 'ನಾನು ವಿದ್ವಾಂಸ' ಎಂಬ ಈ 'ಅಹಂ' ಅನ್ನು ತ್ಯಾಗಮಾಡಬೇಕು. ಆದರೆ 'ವಿದ್ಯಾ ಅಹಂ'ನಿಂದ ಯಾವ ತೊಂದರೆಯೂ ಇಲ್ಲ. ಶ್ರೀಶಂಕರಾಚಾರ್ಯರು ಲೋಕಶಿಕ್ಷಣಕ್ಕಾಗಿ ಈ 'ವಿದ್ಯಾ ಅಹಂ' ಅನ್ನು ಇಟ್ಟುಕೊಂಡಿದ್ದರು.

''ಹೆಂಗಸರ ಸಂಬಂಧವಾಗಿ ಬಹಳ ಎಚ್ಚರಿಕೆಯಿಂದ ಇರದಿದ್ದರೆ ಬ್ರಹ್ಮಜ್ಞಾನ ದೊರೆಯದು. ಆದ್ದರಿಂದ ಸಂಸಾರದಲ್ಲಿದ್ದುಕೊಂಡು ಬ್ರಹ್ಮಜ್ಞಾನ ದೊರಕಿಸಿಕೊಳ್ಳುವುದು ಬಹಳ ಕಠಿಣ. ಎಷ್ಟೇ ಬುದ್ಧಿವಂತನಾದರೂ, ಮಸಿ ಹಿಡಿದ ಕೊಠಡಿಯಲ್ಲಿ ಇದ್ದರೆ ಮೈ ಕೈಗೆ ಮಸಿ ಬಳಿದೇ ಬಳಿದುಕೊಳ್ಳುತ್ತದೆ. ಯುವತಿಯ ಸಹವಾಸ ಕಾಮ

ವಿಹೀನನಲ್ಲೂ ಕಾಮೋದ್ರೇಕವನ್ನುಂಟುಮಾಡಿಬಿಡುತ್ತದೆ.

"ಆದರೆ ಸಂಸಾರದಲ್ಲಿರುವ ಜ್ಞಾನಮಾರ್ಗಿ ಯಾವಾಗಲಾದರೂ ಒಮ್ಮೊಮ್ಮೆ ತನ್ನ ಸ್ವಂತ ಸತಿಯ ಸಹವಾಸ ಮಾಡುವುದು ಕೆಡುಕಾದ್ದೇನಲ್ಲ. ಸ್ವಾಭಾವಿಕ ದೇಹ ಬಾಧೆಯನ್ನು ತೀರಿಸಿಕೊಳ್ಳುವ ಹಾಗೆ, ಈ ಬಾಧೆಯನ್ನೂ ತೀರಿಸಿಕೊಂಡಂತಾಗುತ್ತದೆ! ಇದು, ಲಾಡು ಜಿಲೇಬಿಯನ್ನು ಅಪರೂಪಕ್ಕೆ ಒಮ್ಮೊಮ್ಮೆ ತಿಂದಹಾಗೆ. (ಮಹಿಮಾಚರಣ ನಗುತ್ತಾನೆ.) ಇದು ಗೃಹಸ್ಥರಿಗೆ ಅಷ್ಟು ಕೆಡುಕಾದ್ದೇನಲ್ಲ. ಆದರೆ ಸಂನ್ಯಾಸಿಗೆ ಕಠಿಣ ನಿಯಮಗಳು."

ರಾತ್ರಿ ಗಂಟೆ ಎಂಟಾಯಿತು. ಶ್ರೀರಾಮಕೃಷ್ಣರ ಆದೇಶದಂತೆ ಮಹಿಮಾಚರಣ ಕೆಲವು ಸ್ತೋತ್ರಗಳನ್ನು ಪಠಿಸತೊಡಗಿದ. 'ಉತ್ತರಗೀತೆ'ಯಿಂದ ಪರಬ್ರಹ್ಮದ ವರ್ಣನೆಗೆ ಸಂಬಂಧಿಸಿದ ಶ್ಲೋಕಗಳನ್ನು ಪಠಿಸುತ್ತ, ಮೂರನೇ ಅಧ್ಯಾಯದ ಈ ಶ್ಲೋಕಕ್ಕೆ ಬಂದ:

*ಅಗ್ನಿರ್ದೇವೋ ದ್ವಿಜಾತೀನಾಂ ಮುನೀನಾಂ ಹೃದಿ ದೈವತಮ್ ।*
*ಪ್ರತಿಮಾ ಸ್ವಲ್ಪಬುದ್ಧೀನಾಂ ಸರ್ವತ್ರ ಸಮದರ್ಶಿನಾಮ್ ॥*

(ದ್ವಿಜರು ಅಗ್ನಿಯ ಮೂಲಕ ದೇವರನ್ನು ಆರಾಧಿಸುತ್ತಾರೆ; ಮುನಿಗಳು ಆತನನ್ನು ಹೃದಯದಲ್ಲಿ ಧ್ಯಾನಿಸುತ್ತಾರೆ; ಬುದ್ಧಿಸೂಕ್ಷ್ಮವಿಲ್ಲದ ಜನ ಅವನನ್ನು ಪ್ರತಿಮೆಯಲ್ಲಿ ಮಾತ್ರ ಕಾಣುತ್ತಾರೆ; ಸಮದರ್ಶಿಗಳಾದ ಯೋಗಿಗಳು ಆತನನ್ನು ಎಲ್ಲೆಲ್ಲಿಯೂ ಕಾಣುತ್ತಾರೆ.)

'ಸರ್ವತ್ರ ಸಮದರ್ಶಿನಾಮ್' ಎಂಬ ಕಡೆಯ ಪಾದ ಕಿವಿಗೆ ಬಿದ್ದೊಡನೆ ಶ್ರೀರಾಮಕೃಷ್ಣರು ಎದ್ದುನಿಂತು ಸಮಾಧಿಸ್ಥರಾಗಿಬಿಟ್ಟರು. ಪಟ್ಟಿ ಕಟ್ಟಿದ್ದ ತೋಳು ಅದೇ ಸ್ಥಿತಿಯಲ್ಲೇ ಇದೆ. ಭಕ್ತರೆಲ್ಲ ಆಶ್ಚರ್ಯಚಕಿತರಾಗಿ ಅವರ ಮೂಲಕ ಸಮದರ್ಶಿಯ ಸ್ಥಿತಿಯನ್ನು ಕಣ್ಣೆವೆಯಿಕ್ಕದೆ ನೋಡತೊಡಗಿದರು.

ಬಹಳ ಹೊತ್ತಾದ ಮೇಲೆ ಶ್ರೀರಾಮಕೃಷ್ಣರು ಪ್ರಕೃತಿಸ್ಥರಾಗಿ ಕುಳಿತುಕೊಂಡರು. ಮತ್ತೆ ಅವರ ಕೋರಿಕೆಯಿಂತೆ ಮಹಿಮಾಚರಣ ಇತರ ಗ್ರಂಥಗಳಿಂದಾಯ್ದ ಶ್ಲೋಕಗಳನ್ನು ಪಠಿಸಿದ. 'ನಿರ್ವಾಣಷಟ್ಕ'ದ ಒಂದು ಶ್ಲೋಕ—ಅದರ ಕನ್ನಡ ಅನುವಾದ:

*ಮನೋಬುದ್ಧ್ಯಹಂಕಾರ ಚಿತ್ತಗಳು ನಾನಲ್ಲ*
*ಕಣ್ಣು ಕಿವಿ ಮೂಗಲ್ಲ, ನಾಲಿಗೆಯು ಅಲ್ಲ*
*ನಭವಲ್ಲ, ಧರೆಯಲ್ಲ, ಶಿಖಿ ವಾಯುವಲ್ಲ*
*ಸಚ್ಚಿದಾನಂದಾತ್ಮ ಶಿವ ನಾನು ನಾನು!*

ಈ ಶ್ಲೋಕಗಳ ಪ್ರತಿಚರಣವೂ 'ಸಚ್ಚಿದಾನಂದಾತ್ಮ ಶಿವ ನಾನು ನಾನು' ಎಂದು ಕೊನೆಗೊಳ್ಳುತ್ತದೆ. ಮಹಿಮಾಚರಣ ಪ್ರತಿಸಲ ಅದನ್ನು ಹೇಳಿದಾಗಲೂ ಶ್ರೀರಾಮಕೃಷ್ಣರು ನಗುತ್ತ "ನಾನಲ್ಲ! ನಾನಲ್ಲ! ಸಚ್ಚಿದಾನಂದಾತ್ಮ ಶಿವ ನೀನು ನೀನು!" ಎನ್ನುತ್ತಿದ್ದರು.

ಮಾರನೆಯ ದಿನ ಮಧ್ಯಾಹ್ನದ ಊಟವಾದ ಬಳಿಕ ಶ್ರೀರಾಮಕೃಷ್ಣರು ಮಂಚದ ಮೇಲೆ ಕುಳಿತಿದ್ದರು; ಆಗ ರಾಮಚಂದ್ರ ದತ್ತ, ಸುರೇಂದ್ರನಾಥ ಮಿತ್ರ ಮೊದಲಾದ ಭಕ್ತರು ಬಂದರು. ಅವರೆಲ್ಲ ಶ್ರೀರಾಮಕೃಷ್ಣರ ತೋಳಿನ ಬಗ್ಗೆ ಚಿಂತಾಕ್ರಾಂತರಾಗಿದ್ದರು. ಶ್ರೀರಾಮಕೃಷ್ಣರು ಮಾತ್ರ ಎಂದಿನಂತೆ ಹಸನ್ಮುಖಿಗಳಾಗಿ ಮಾತನಾಡುತ್ತಿದ್ದರು:

"ಜಗನ್ಮಾತೆ ನನ್ನನ್ನು ಎಂತಹ ಮಾನಸಿಕ ಅವಸ್ಥೆಯಲ್ಲಿಟ್ಟಿದ್ದಾಳೆಂದರೆ ನಾನು ಯಾವುದನ್ನೂ ಮನಸ್ಸಿನಲ್ಲಿ ಮುಚ್ಚಿಟ್ಟುಕೊಳ್ಳುವ ಹಾಗಿಲ್ಲ. ನನ್ನದು ಬಾಲಕನ ಅವಸ್ಥೆ. ರಾಖಾಲನಿಗೆ ಇದು ಅರ್ಥವಾಗುವುದಿಲ್ಲ. ಜನ ನನ್ನ ಕೀಲುತಪ್ಪಿದ ತೋಳನ್ನು ನೋಡಿ ಆಡಿಕೊಳ್ಳಬಹುದು ಅಂತ ಅವನು ಅದು ಕಾಣದ ರೀತಿಯಲ್ಲಿ ಬಟ್ಟೆ ಹೊದಿಸುತ್ತಾನೆ. ಆತ ಡಾಕ್ಟರ್ ಮಧುಸೂದನನನ್ನು ಒಂದು ಬದಿಗೆ ಕರೆದುಕೊಂಡು ಹೋಗಿ ನನ್ನ ತೋಳಿನ ವಿಷಯವಾಗಿ ಪಿಸುಮಾತಿನಲ್ಲಿ ಹೇಳುತ್ತಿದ್ದ. ಆದರೆ ನಾನು 'ಓ ಮಧು ಸೂದನ, ಇಲ್ಲಿ ಬಂದು ನೋಡು, ನನ್ನ ಕೈಯ ಕೀಲು ತಪ್ಪಿಬಿಟ್ಟಿದೆ' ಅಂತ ಗಟ್ಟಿಯಾಗಿ ಕೂಗಿ ಹೇಳಿಬಿಟ್ಟೆ."

ಶ್ರೀರಾಮಕೃಷ್ಣರ ತೋಳು ಸರಿಯಾಗುವುದಕ್ಕೆ ಸುಮಾರು ನಾಲ್ಕು ತಿಂಗಳೇ ಬೇಕಾಯಿತು. ಆದರೂ ಅವರ ವಚನಾಮೃತದ ಪ್ರವಾಹ ಮಾತ್ರ ಸ್ವಲ್ಪವೂ ಅಡ್ಡಿ ಗೊಳಗಾಗದೆ ಅವ್ಯಾಹತವಾಗಿ ಹರಿಯುತ್ತ ಭಕ್ತರ ಹೃದಯಗಳನ್ನು ಆನಂದದಲ್ಲಿ ತೋಯಿಸಿತು.

೧೮೮೧ರಿಂದ ಆರಂಭಿಸಿ ಪ್ರತಿವರ್ಷವೂ ಭಕ್ತರು ದಕ್ಷಿಣೇಶ್ವರದಲ್ಲಿ ಶ್ರೀರಾಮ ಕೃಷ್ಣರ ಜನ್ಮದಿನೋತ್ಸವವನ್ನು ಸಂಭ್ರಮದಿಂದ ಆಚರಿಸುತ್ತಿದ್ದರು. ಮೊಟ್ಟಮೊದಲು ಇದನ್ನು ನಡೆಸಬೇಕೆಂಬ ಯೋಜನೆ ಹಾಕಿದವನು ಸುರೇಂದ್ರನಾಥ. ಮೊದಲ ಎರಡು ವರ್ಷ ಅವನೇ ಈ ಬಗ್ಗೆ ಆಸಕ್ತಿ ವಹಿಸಿ, ಖರ್ಚನ್ನೂ ತಾನೇ ವಹಿಸಿಕೊಂಡು ಯಶಸ್ವಿ ಯಾಗಿ ನಿರ್ವಹಿಸಿದ್ದ. ಅನಂತರದ ವರ್ಷಗಳಲ್ಲಿ ಇನ್ನೂ ಅನೇಕ ಭಕ್ತರು ಉತ್ಸವದ ವೆಚ್ಚವನ್ನು ಹಂಚಿಕೊಳ್ಳತೊಡಗಿದ್ದರು. ಈ ವರ್ಷ—ಎಂದರೆ ೧೮೮೪ರಲ್ಲಿ—ಶ್ರೀರಾಮ ಕೃಷ್ಣರ ತೋಳು ಊನಗೊಂಡಿದ್ದ ಕಾರಣ, ಅವರು ಗುಣ ಹೊಂದಿದ ಮೇಲೆ, ಮೇ ೨೫ರಂದು ಅವರ ವರ್ಧಂತಿಯನ್ನು ಆಚರಿಸಲಾಯಿತು. ಭಕ್ತರೆಲ್ಲ ಸೇರಿ ಶ್ರೀರಾಮಕೃಷ್ಣ ರಿಗೆ ಕಾವಿ ಬಟ್ಟೆಯನ್ನು ಉಡಿಸಿದರು; ಕೊರಳಿಗೆ ಹೂಮಾಲೆ ಹಾಕಿ ಅಲಂಕರಿಸಿದರು. ಬಳಿಕ ಎಲ್ಲರೂ ಅವರ ಪಾದಗಳಿಗೆ ಗಂಧ-ಪುಷ್ಪಗಳಿಂದ ಪೂಜೆ ಸಲ್ಲಿಸಿ ನಮಸ್ಕರಿ ಸಿದರು. ದಿನವೆಲ್ಲ ಸಂಕೀರ್ತನೆ, ನರ್ತನ, ಪ್ರವಚನಗಳು ನಡೆದುವು. ಭಕ್ತರು ನಾನಾ ತಿಂಡಿತೀರ್ಥಗಳನ್ನು ತಂದು ಶ್ರೀರಾಮಕೃಷ್ಣರಿಗೆ ನಿವೇದಿಸಿ, ಪ್ರಸಾದವೆಂದು ಸ್ವೀಕರಿ ಸಿದರು. ಹೀಗೆ ಇಡೀ ದಿನ ಆನಂದಮಯವಾಗಿ ಕಳೆಯಿತು.

* * * *

ಪ್ರತಿವಾರದಲ್ಲೂ ಒಂದೆರಡು ಬಾರಿ ಕಲ್ಕತ್ತದ ಭಕ್ತರ ಮನೆಗಳಿಗೆ ಹೋಗಿಬರು ವುದು ಶ್ರೀರಾಮಕೃಷ್ಣರ ಪದ್ಧತಿ. ಅದು ಭಕ್ತರ ಮೇಲಿನ ಅವರ ಅಪಾರ ಕರುಣೆ ಪ್ರೇಮಗಳ ದ್ಯೋತಕ. ಏಕೆಂದರೆ ಕಲ್ಕತ್ತದಿಂದ ದಕ್ಷಿಣೇಶ್ವರಕ್ಕೆ ಕಡಿಮೆಯೆಂದರೆ ಆರು ಮೈಲಿ. ಅಷ್ಟು ದೂರ ಬಂದುಹೋಗಬೇಕಾದರೆ ತುಂಬ ಸಮಯ ಹಿಡಿಯುತ್ತದೆ. ಜೊತೆಗೆ ಶ್ರಮ, ಖರ್ಚು. ಗಾಡಿಗಾಗಲಿ ದೋಣಿಗಾಗಲಿ ಖರ್ಚು ಮಾಡುವಷ್ಟು ಶಕ್ತಿ ಎಲ್ಲರಿಗೂ ಇರುತ್ತಿರಲಿಲ್ಲ. ಅಂಥವರಿಗೆಲ್ಲ ಪಾದಯಾತ್ರೆಯೇ ಉಪಾಯ. ಹಗಲು ಹೊತ್ತಿನಲ್ಲಿ ಸುಡುಬಿಸಿಲು; ರಾತ್ರಿಯಲ್ಲಿ ಕತ್ತಲು, ನಿರ್ಜನತೆಗಳ ಆತಂಕ. ಆದರೂ ಎಷ್ಟೋ ಜನ ಭಕ್ತರು-ಶಿಷ್ಯರು ನಡೆದು ಬರುವುದನ್ನೇ ರೂಢಿಸಿಕೊಂಡಿದ್ದರು. ಅವರೆಲ್ಲ ಬಳಲಿ ಬೆಂಡಾಗಿ ಬರುವುದನ್ನು ಕಂಡರೆ ಶ್ರೀರಾಮಕೃಷ್ಣರ ತಾಯಿಕರುಳು

ಚುರುಗುಟ್ಟುತ್ತಿತ್ತು. ತಾವೇ ಆ ಧಗೆಯಲ್ಲಿ ನಡೆದು ಬಂದರೇನೋ ಎಂಬಂತೆ ಕಷ್ಟಪಡುತ್ತಿದ್ದರು. ತಮ್ಮ ಪ್ರಿಯಭಕ್ತರಿಗೆ ಈ ತೊಂದರೆಗಳನ್ನು ತಪ್ಪಿಸುವುದಕ್ಕಾಗಿಯೇ ಅವರು ಸಾಧ್ಯವಾದಾಗಲೆಲ್ಲ ತಾವೇ ಕಲ್ಕತ್ತಕ್ಕೆ ಹೋಗುತ್ತಿದ್ದುದು. ಇದೂ ಅಲ್ಲದೆ ನರೇಂದ್ರನೇ ಮೊದಲಾದ ತರುಣಶಿಷ್ಯರು ಬಹಳ ದಿನ ಬಾರದಿದ್ದರೆ, ಅಥವಾ ಅವರುಗಳ ಕ್ಷೇಮ ಸಮಾಚಾರ ಸಿಗದೆಹೋದರೆ ಅವರಿಗಾಗಿ ಕಾತರಗೊಂಡು ಅವರನ್ನು ನೋಡಲು ತಾವೇ ಹೊರಟುಬಿಡುತ್ತಿದ್ದರು.

ಹಾಗೆಯೇ ಆ ಭಕ್ತರೂ ಕೂಡ ಶ್ರೀರಾಮಕೃಷ್ಣರ ದರ್ಶನಕ್ಕಾಗಿ ಅದೆಷ್ಟು ಉತ್ಸುಕರಾಗಿರುತ್ತಿದ್ದರು, ಹೇಗೆ ಸದಾ ಸರ್ವದಾ ಅವರ ಕುರಿತಾದ ಚಿಂತನೆಯಲ್ಲೇ ತೊಡಗಿರುತ್ತಿದ್ದರು ಎಂಬುದನ್ನು ಬಣ್ಣಿಸಿ ಮುಗಿಸಲಾಗದು. ಕೆಲಸಕಾರ್ಯಗಳ ಅಡಚಣೆಯಿಂದಾಗಿ ಎಷ್ಟೋ ದಿನಗಳ ಕಾಲ ದಕ್ಷಿಣೇಶ್ವರಕ್ಕೆ ಹೋಗಲು ಸಾಧ್ಯವಾಗದಿದ್ದರೂ ಭಕ್ತರು ಪರಸ್ಪರರ ಮನೆಗಳಿಗೆ ಹೋಗಿ, ಕಲೆತು, ತಮ್ಮ ಗುರುದೇವನ ಸಂಬಂಧವಾಗಿ ಮಾತನಾಡುತ್ತ ಆನಂದಿಸುತ್ತಿದ್ದರು. ಈ ಎಲ್ಲ ಭಕ್ತರನ್ನು ಒಂದು ಅಲೌಕಿಕ ಪ್ರೇಮದ ಕಟ್ಟು ಬಿಗಿಯಾಗಿ ಬಂಧಿಸಿಟ್ಟಂತಿತ್ತು. ಭಕ್ತರ ಪೈಕಿ ಹೆಚ್ಚಿನವರು ವಾಸವಾಗಿದ್ದುದು ಬಾಗ್‌ಬಜಾರ್, ಸಿಮ್ಲಾ, ಅಹಿರಿತೊಲಾ ಈ ಮೂರು ಮೊಹಲ್ಲಾಗಳಲ್ಲಿ. ಆದ್ದರಿಂದ ಶ್ರೀರಾಮಕೃಷ್ಣರು ಸಾಮಾನ್ಯವಾಗಿ ಬರುತ್ತಿದ್ದುದು ಈ ಮೊಹಲ್ಲಾಗಳಿಗೇ. ಅದರಲ್ಲೂ ಹೆಚ್ಚಾಗಿ ಬಾಗ್‌ಬಜಾರಿಗೆ. ಅವರು ಯಾವೊಬ್ಬ ಭಕ್ತನ ಮನೆಗೇ ಬಂದರೂ, ಅದು ಹೇಗೋ ಏನೋ ಆ ಸುದ್ದಿ ಮಿಂಚಿನ ವೇಗದಲ್ಲಿ ಆ ಪ್ರದೇಶದ ಭಕ್ತರಿಗೆಲ್ಲ ತಲುಪಿಬಿಡುತ್ತಿತ್ತು! ಹೀಗಾಗಿ ಸ್ವಲ್ಪ ಹೊತ್ತಿನಲ್ಲೆಲ್ಲ ಅಲ್ಲಿ ಬಹಳಷ್ಟು ಜನ ನೆರೆದುಬಿಡುತ್ತಿದ್ದರು.

ಕಲ್ಕತ್ತ-ದಕ್ಷಿಣೇಶ್ವರಗಳ ನಡುವೆ ಪ್ರಯಾಣಕ್ಕೆ ಎರಡು ಮುಖ್ಯೋಪಾಯಗಳಿದ್ದುವು—ಕುದುರೆ ಸಾರೋಟು, ದೋಣಿ. ಸಾರೋಟಿಗಿಂತ ದೋಣಿ ಬಾಡಿಗೆ ಕಮ್ಮಿ. ಆದರೆ ದೋಣಿ ಮನೆಬಾಗಿಲಿಗೆ ಹೋಗಲಾರದು. ಯಾವುದಾದರೊಂದು ಘಟ್ಟದಲ್ಲಿ ಇಳಿದು ಅಲ್ಲಿಂದ ಮುಂದಿನ ದಾರಿ ನೋಡಿಕೊಳ್ಳಬೇಕು. ಸಾರೋಟಾದರೆ, ಕೇಳಿದಷ್ಟು ಕಾಸು ಕೊಟ್ಟರೆ ಸರಿ, ಬೇಕಾದಾಗ ಸಿಗುತ್ತದೆ, ಬೇಕೆಂಬಲ್ಲಿಗೆ ಬರುತ್ತದೆ. ಆದರೆ ಆ ದಿನಗಳಲ್ಲಿ ಬಾಡಿಗೆಯ ಸಾರೋಟಿನದು ಒಂದು ದೊಡ್ಡ ಹಗರಣ. ಈಗಿನ ಕಾಲದ ಆಟೋರಿಕ್ಷಾಗಳಿಗಿಂತಲೂ ಹೆಚ್ಚು ತರಲೆ ಎನ್ನಬೇಕು! ಮೊದಲನೆಯದಾಗಿ ಒಳ್ಳೆಯ ಗಾಡಿಯೂ ಒಳ್ಳೆಯ ಕುದುರೆಯೂ ಸಿಗುವುದು ಕಷ್ಟ. ಸಿಕ್ಕಮೇಲೆ, ಬಾಡಿಗೆ ಎಷ್ಟು ಎಂಬ ಚರ್ಚೆ. ವಾಪಸು ಬರುವಾಗ ತಡವಾದರೆ ಹೆಚ್ಚುವರಿ ಕೊಡಬೇಕೆ, ಬೇಡವೆ ಎನ್ನುವ ವಿವಾದ. ಇದರ ಜೊತೆಗೆ, ಆ ಬಾಡಿಗೆ ಹಣದ ಖರ್ಚು ವಹಿಸಿಕೊಳ್ಳಬೇಕಾದವರು ಯಾರು—ಅತಿಥಿಯಾಗಿ ಹೋದವರೋ ಅಥವಾ ಆತಿಥೇಯರೋ?—ಎಂಬುದೇ ಒಂದು ಪ್ರತ್ಯೇಕವಾದ ವಿಚಾರ. ಮನೆಗೆ ಗೌರವಾನ್ವಿತ ಅತಿಥಿಗಳು—ಅದರಲ್ಲೂ ಸಾಧುಗಳು—ಬಂದರೆ, ಆತಿಥೇಯರೇ ಬಾಡಿಗೆ ಕೊಡುವ ಸತ್ಸಂಪ್ರದಾಯವೇನೋ ಇತ್ತು. ಶ್ರೀರಾಮಕೃಷ್ಣರ ಬಳಿಯಂತೂ ಹಣ ಇರುತ್ತಲೇ ಇರಲಿಲ್ಲವಲ್ಲ! ಆದರೆ ಎಷ್ಟೇ ಭಕ್ತಿಯುಳ್ಳವರಾದರೂ, ಗಾಡಿಯುವನಿಗೆ ಬಾಡಿಗೆ ಕೊಡುವಾಗ ಮಾತ್ರ ಕೆಲವರಿಗೆ ಹೇಳಿಕೊಳ್ಳಲಾಗದ ಸಂಕಟ. ಏಕೆಂದರೆ ಆ ಕಾಲಕ್ಕೆ ಅಷ್ಟು ಬಾಡಿಗೆ ಹೆಚ್ಚೇ. ಮೊದಲೇ ಬಾಡಿಗೆ ನಿರ್ಧಾರವಾಗಿರದಿದ್ದರೆ, ಹಣ ಪಾವತಿ ಮಾಡುವಾಗ ಚೌಕಾಸಿ,

ವಾದ-ವಿವಾದ ಕಟ್ಟಿಟ್ಟದ್ದು. ಶ್ರೀರಾಮಕೃಷ್ಣರಿಗೆ ಮಾತ್ರ ಗಾಡಿಯದು ಅಷ್ಟೇನೂ ದೊಡ್ಡ ತೊಂದರೆಯಾಗಿ ಬರಲಿಲ್ಲ ಎನ್ನಬೇಕು. ಏಕೆಂದರೆ ಅವರು ಪದೇ ಪದೇ ಕಲ್ಕತ್ತಕ್ಕೆ ಹೋಗುತ್ತಿದ್ದುದರಿಂದ, ಬಾಡಿಗೆಯ ಗಾಡಿಗಳಿಗಾಗಿ ಒಂದು ನಿಯತ ವ್ಯವಸ್ಥೆ ಮಾಡ ಲಾಗಿತ್ತು. ದಕ್ಷಿಣೇಶ್ವರಕ್ಕೆ ಅನತಿದೂರದ ಬಾರಾನಾಗೋರಿನ ವೇಣೀ ಸಾಹ ಎಂಬಾತ ಒಳ್ಳೆಯ ಗಾಡಿಗಳನ್ನು ಬಾಡಿಗೆಗೆ ಕೊಡುತ್ತಿದ್ದ. ಹೇಳಿಕಳಿಸಿದ ಕೂಡಲೇ ಗಾಡಿ ಕಳಿಸಿ ಕೊಡಬೇಕು; ಕಲ್ಕತ್ತದಿಂದ ಹಿಂದಿರುಗುವುದು ಎಷ್ಟೇ ತಡವಾದರೂ ಗೊಣಗುಟ್ಟ ಬಾರದು, ತೊಂದರೆ ಕೊಡಬಾರದು; ಆದರೆ ಹೆಚ್ಚಾದ ಸಮಯಕ್ಕೆ ಲೆಕ್ಕ ಪ್ರಕಾರ ಹೆಚ್ಚು ಬಾಡಿಗೆ ಕೊಡಲಾಗುತ್ತದೆ—ಎಂದು ಹೀಗೆ ಅವನ ಜೊತೆ ಒಪ್ಪಂದವಾಗಿತ್ತು. ಆದರೆ ಕುದುರೆಗಳಿಗೇನಾದರೂ ಸವಾರನಿಂದ ಚಾಟಿಯೇಟು ಬಿದ್ದರೆ ಶ್ರೀರಾಮಕೃಷ್ಣರ ಕಣ್ಣು ಗಳು ಹನಿಗೂಡುತ್ತಿದ್ದುವು. ಕೆಲವೊಮ್ಮೆ, "ಅಯ್ಯೋ! ನನಗೆ ಹೊಡೆಯುತ್ತಿದ್ದಾರೆ!" ಎಂದು ನೋವಿನಿಂದ ಚೀತ್ಕರಿಸುತ್ತಿದ್ದರು. ಇದನ್ನರಿತಿದ್ದ ವೇಣೀ ಸಾಹ ಶ್ರೀರಾಮಕೃಷ್ಣರಿ ಗಾಗಿ ಸ್ವ-ಇಚ್ಛೆಯಿಂದಲೇ ಓಡುವ, ಗಟ್ಟಿಮುಟ್ಟಾದ ಕುದುರೆಗಳನ್ನೇ ಕಳಿಸಿಕೊಡುತ್ತಿದ್ದ.

ಶ್ರೀರಾಮಕೃಷ್ಣರ ಗಾಡಿಬಾಡಿಗೆಯ ಖರ್ಚನ್ನು ವಹಿಸಿಕೊಂಡವರಲ್ಲಿ ಕ್ರಮವಾಗಿ ಮಥುರಾನಾಥ, ಪಾನಿಹಾಟಿಯ ಮಣಿಸೇನ ಎಂಬಾತ, ಶಂಭು ಮಲ್ಲಿಕ ಮತ್ತು ಸಿಂದೂರಿಯಾಪಟಿಯ ಜಯಗೋಪಾಲ ಸೇನ—ಇವರುಗಳು ಮುಖ್ಯರು. ಇವ ರಲ್ಲದೆ, ಶ್ರೀರಾಮಕೃಷ್ಣರ ಆತಿಥೇಯರು ಅನುಕೂಲಸ್ಥರಾದರೆ ಆಯಾ ದಿನದ ಬಾಡಿ ಗೆಯ ಖರ್ಚನ್ನು ಅವರವರೇ ನೋಡಿಕೊಳ್ಳುತ್ತಿದ್ದರು.

ಉನ್ನತ ಭಾವಾವಸ್ಥೆಯಲ್ಲಿದ್ದಾಗ ಕೆಲವೊಮ್ಮೆ ಶ್ರೀರಾಮಕೃಷ್ಣರ ವರ್ತನೆ ಬಹಳ ಆಶ್ಚರ್ಯಕರವಾಗಿರುತ್ತಿತ್ತು ಎಂಬುದನ್ನು ಅದಾಗಲೇ ಕಂಡಿದ್ದೇವೆ. ಇಂತಹ ಭಾವಾ ವಸ್ಥೆಯ ಪರಿಣಾಮವಾಗಿ, ಈ ದಿನಗಳಲ್ಲಿ ನಡೆದ ಕೆಲವು ಸ್ವಾರಸ್ಯಕರ ಪ್ರಸಂಗಗಳನ್ನೀಗ ನೋಡೋಣ.

ಅಂದು ಶ್ರೀರಾಮಕೃಷ್ಣರು ಕಲ್ಕತ್ತದಲ್ಲಿ ಯದುಮಲ್ಲಿಕನ ಮನೆಗೆ ಹೋಗ ಲಿದ್ದರು. ಮುಖ್ಯವಾಗಿ ಯದುಮಲ್ಲಿಕನ ತಾಯಿಗೆ ಅವರ ಮೇಲೆ ವಿಶೇಷ ಭಕ್ತ್ಯಾ ದರ. ಬಹಳ ದಿನಗಳಿಂದಲೂ ಅವಳ ಸುದ್ದಿಯೇ ಇಲ್ಲವಾದ್ದರಿಂದ ಶ್ರೀರಾಮಕೃಷ್ಣರು ತಾವೇ ಹೊರಟಿದ್ದರು. ಗಾಡಿ ಬಂದು ನಿಂತಿತ್ತು. ಆ ಸಮಯಕ್ಕೆ ಸರಿಯಾಗಿ ಅವನೀಂದ್ರ ಎಂಬ ಭಕ್ತ ಅವರ ದರ್ಶನಕ್ಕಾಗಿ ಬಂದ. ಅವನು ಹೊಸದಾಗಿ ಅವರ ಸಂಪರ್ಕಕ್ಕೆ ಬಂದವನು. ಅವರ ಭಾವ-ಸ್ವಭಾವಗಳಿನ್ನೂ ಅವನಿಗೆ ಪರಿಚಯವಾಗಿರಲಿಲ್ಲ. ಶ್ರೀರಾಮ ಕೃಷ್ಣರು ಅವನನ್ನು ಕಂಡು ಸಂತೋಷಪಟ್ಟು ಕುಶಲೋಪರಿ ನಡೆಸಿದರು. ಅನಂತರ, "ನೀನು ಬಂದದ್ದು ಒಳ್ಳೆಯದಾಯಿತು. ನಾನೀಗ ಯದುಮಲ್ಲಿಕನ ಮನೆಗೆ ಹೋಗು ತ್ತಿದ್ದೇನೆ. ಹಾಗೆಯೇ ನಿಮ್ಮ ಮನೆಯ ಹತ್ತಿರ ಇಳಿದು ಗಿರೀಶನನ್ನು ನೋಡಬೇಕು. ಬಾ, ಒಟ್ಟಿಗೆ ಹೋಗೋಣ" ಎಂದರು. ಅವನೀಂದ್ರ ಅದಕ್ಕೊಪ್ಪಿ ಹೊರಟ.

ಶ್ರೀರಾಮಕೃಷ್ಣರು ಗಾಡಿ ಹತ್ತಿದರು. ಅವರ ಅಡಿಕೆಚೀಲ, ಚೌಕ ಇತ್ಯಾದಿಗಳನ್ನು ತೆಗೆದುಕೊಂಡು ಲಾಟುವೂ ಹೊರಟ. ಗಾಡಿಯೊಳಗೆ ಒಂದು ಬದಿಯಲ್ಲಿ ಶ್ರೀರಾಮ ಕೃಷ್ಣರೂ ಇನ್ನೊಂದು ಬದಿಯಲ್ಲಿ ಲಾಟು-ಅವನೀಂದ್ರರೂ ಕುಳಿತರು. ಗಾಡಿ ಹೊರ ಟಿತು. ಕ್ರಮೇಣ ಅದು ಬಾರಾನಾಗೋರಿನ ಬಜಾರನ್ನು ದಾಟಿತು. ದಾರಿಯಲ್ಲಿ ವಿಶೇಷ ವೇನೂ ಸಂಭವಿಸಲಿಲ್ಲ. ಶ್ರೀರಾಮಕೃಷ್ಣರು ಆಗಾಗ ಏನನ್ನಾದರೂ ಕಂಡು 'ಅದೇನು'

'ಇದೇನು' ಎಂದು ಬಾಲಕನಂತೆ ಕೇಳುತ್ತಿದ್ದರು; ಇಲ್ಲವೆ ನಾನಾ ವಿಷಯಗಳ ಬಗ್ಗೆ ರಸಮಯವಾಗಿ ಮಾತನಾಡುತ್ತಿದ್ದರು.

ಅದೇ ದಾರಿಯಲ್ಲಿ ಒಂದೆಡೆ ಒಂದು ಸಣ್ಣ ಪೇಟೆ; ಅದರಲ್ಲಿ ಔಷಧಾಲಯ, ದಿನಸಿ ಅಂಗಡಿಗಳು, ಕುದುರೆ ಲಾಯ, ಜೊತೆಗೊಂದು ಹೆಂಡದಂಗಡಿ ಇತ್ಯಾದಿಗಳಿದ್ದುವು. ಅಷ್ಟೊತ್ತಿಗಾಗಲೇ ಹೆಂಡದಂಗಡಿಯಲ್ಲಿ ಗಿರಾಕಿಗಳು ಸೇರಿಬಿಟ್ಟಿದ್ದರು. ಚೆನ್ನಾಗಿ ಕುಡಿದು ಮತ್ತೇರಿ ಕೆಲವರು ಹಾಡುತ್ತಿದ್ದರು; ಇನ್ನು ಕೆಲವರು ಅಂಗಭಂಗಿಗಳೊಂದಿಗೆ ಆನಂದತಾಂಡವದಲ್ಲಿ ತೊಡಗಿದ್ದರು. ಹೆಂಡ ಮಾರುವ ಕೆಲಸವನ್ನು ತನ್ನ ಆಳಿಗೆ ಒಪ್ಪಿಸಿ ಅಂಗಡಿಯ ಯಜಮಾನ ಅನ್ಯಮನಸ್ಕನಾಗಿ ಆಚೆ ನಿಂತಿದ್ದ. ಆತನ ಹಣೆಯಲ್ಲಿ ಅಗಲವಾದ ಕುಂಕುಮದ ಬೊಟ್ಟಿತ್ತು. ಅಷ್ಟರಲ್ಲಿ ಇವರ ಗಾಡಿ ಅಂಗಡಿಯ ಮುಂದೆ ಹೋಯಿತು. ಅವನಿಗೆ ಶ್ರೀರಾಮಕೃಷ್ಣರ ಪರಿಚಯವಿತ್ತೆಂದು ಕಾಣುತ್ತದೆ; ಗಾಡಿಯಲ್ಲಿ ಅವರನ್ನು ಕಂಡೊಡನೆ ಕೈಯೆತ್ತಿ ನಮಸ್ಕರಿಸಿದ.

ಹೆಂಡದಂಗಡಿಯಲ್ಲಿ ನಡೆಯುತ್ತಿದ್ದ ಕೋಲಾಹಲ ಶ್ರೀರಾಮಕೃಷ್ಣರ ಗಮನವನ್ನು ಸೆಳೆಯಿತು. ಏನದು ಎಂದು ನೋಡುತ್ತಾರೆ—ಹೆಂಡಕುಡುಕರು 'ಕಾರಣ' (ಮದ್ಯ)ವನ್ನು ಸೇವಿಸಿ ಕಾರಣಾನಂದದಲ್ಲಿ ಮುಳುಗಿಹೋಗಿದ್ದಾರೆ! ಮರುಕ್ಷಣದಲ್ಲೇ ಅವರ ಮನಸ್ಸಿನಲ್ಲಿ ಜಗತ್ಕಾರಣನಾದ ಭಗವಂತನ ಆನಂದದ ಉದ್ದೀಪನವಾಯಿತು. ಮಾತ್ರವಲ್ಲ, ಸ್ವತಃ ಆ ದಿವ್ಯಾನಂದವನ್ನು ಅನುಭವಿಸುತ್ತ ಅವರು ಪ್ರಮತ್ತರಾದರು. ಮಾತು ನಿಂತು ಹೋಯಿತು. ಇದ್ದಕ್ಕಿದ್ದ ಹಾಗೆ ತಮ್ಮ ಬಲಗಾಲನ್ನು ಗಾಡಿಯ ಹೊರತುದಿಯಲ್ಲಿಟ್ಟು ನಿಂತುಬಿಟ್ಟರು; ಜೊತೆಗೆ ಕೈಯನ್ನು ಚಾಚಿ, "ಭಲೆ ಭಲೆ! ಚೆನ್ನಾಗಿದೆ!" ಎಂದು ಗಟ್ಟಿಯಾಗಿ ಉದ್ಗರಿಸಿದರು.

ಅಂತೂ ನಿಮಿಷಾರ್ಧದಲ್ಲಿ ಇಷ್ಟೆಲ್ಲ ನಡೆದುಹೋಯಿತು. ಲಾಟುವಿಗೆ ಶ್ರೀರಾಮಕೃಷ್ಣರ ಇಂತಹ ಭಾವಗಳ ಪರಿಚಯ ಚೆನ್ನಾಗಿಯೇ ಇದ್ದುದರಿಂದ ಅವನಿಗೇನೂ ಗಾಬರಿಯಾಗಲಿಲ್ಲ. ಆದರೆ ಅವನೀಂದ್ರನಿಗೆ ಮಾತ್ರ ಇದು ತೀರ ಹೊಸತು. ಮುಂದಾದುದನ್ನು ಅವನ ಬಾಯಿಂದಲೇ ಕೇಳಬೇಕು:

"ಶ್ರೀರಾಮಕೃಷ್ಣರು ಹಾಗೇನಾದರೂ ಮಾಡಿಯಾರೆಂಬ ಸುಳಿವೇ ಸಿಕ್ಕಿರಲಿಲ್ಲ ನನಗೆ. ಅಷ್ಟು ಹೊತ್ತೂ ಎಲ್ಲರಂತೆ ಮಾತುಕತೆಯಾಡುತ್ತಿದ್ದರು; ಆದರೆ ಆ ಹೆಂಡಕುಡುಕರನ್ನು ಕಂಡೊಡನೆಯೇ ಅವರಿಗೆ ಹಾಗಾಗಿಹೋಯಿತು! ನಾನು ಭಯದಿಂದ ನಡುಗಿದೆ. 'ಅಯ್ಯಯ್ಯೋ ಬಿದ್ದುಹೋಗುತ್ತಾರಲ್ಲಪ್ಪಾ!' ಎಂದುಕೊಂಡು, ಅವರನ್ನು ಎಳೆದು ಕೂಡಿಸಲು ಕೈಚಾಚಿದೆ. ಅಷ್ಟರಲ್ಲಿ ಲಾಟು ನನ್ನನ್ನು ತಡೆದು, 'ಅದೆಲ್ಲ ಏನೂ ಬೇಡ, ಅವರು ತಮ್ಮನ್ನು ತಾವು ನೋಡಿಕೊಳ್ಳುತ್ತಾರೆ; ಅವರೇನೂ ಬೀಳುವುದಿಲ್ಲ, ಬನ್ನಿ' ಎಂದ. ನಾನು ಸುಮ್ಮನೆ ಕುಕ್ಕರಿಸಿದೆ. ಆದರೆ ನನ್ನೆದೆ ಡವಡವ ಹೊಡೆದುಕೊಳ್ಳಲು ಶುರುವಾಯಿತು. 'ಈ ಹುಚ್ಚು ಠಾಕೂರರ ಜೊತೆಯಲ್ಲಿ ಬಂದು ಎಂಥಾ ಮುಟ್ಠಾಳ ಕೆಲಸ ಮಾಡಿದೆ! ಇದೇ ಕಡೆಯಪ್ಪ. ಸದ್ಯ, ಇನ್ನಾವತ್ತೂ ಹೀಗೆ ಬರುವುದಿಲ್ಲ' ಅಂತ ಹೇಳಿಕೊಂಡೆ. ನಮ್ಮ ಗಾಡಿ ಅಂಗಡಿಯಿಂದ ಮುಂದಕ್ಕೆ ಹೋದಂತೆ, ಶ್ರೀರಾಮಕೃಷ್ಣರು ಮೊದಲಿನ ಹಾಗೇ ಸಾಮಾನ್ಯಸ್ಥಿತಿಗೆ ಬಂದು ಕುಳಿತುಕೊಂಡರು. ಮುಂದೆ ಸರ್ವಮಂಗಲಾದೇವಿಯ ಮಂದಿರ ಬಂದಿತು. ಶ್ರೀರಾಮಕೃಷ್ಣರು ಅದನ್ನು ತೋರಿಸಿ, "ಅಗೋ, ಆಕೆ ಬಹಳ ಜಾಗೃತ ದೇವಿ. ನಮಸ್ಕಾರ ಮಾಡು' ಎನ್ನುತ್ತ

ತಾವು ಸ್ವತಃ ನಮಸ್ಕರಿಸಿದರು. ಆಗ ನಾವೂ ದೇವಿಗೆ ಪ್ರಣಾಮ ಸಲ್ಲಿಸಿದೆವು. ಬಳಿಕ ಅವರೆಡೆಗೆ ನೋಡುತ್ತೇನೆ—ಮತ್ತೆ ಸಹಜಾವಸ್ಥೆಯಲ್ಲಿದ್ದಾರೆ, ಮುಖದಲ್ಲಿ ಮಂದಹಾಸ! ಆದರೆ, 'ಅಯ್ಯೋ, ಗಾಡಿಯಿಂದ ಕೆಳಗೆ ಬಿದ್ದು ರಕ್ತಪಾತವಾಗಿಬಿಡುತ್ತಿತ್ತಲ್ಲ' ಅಂತ ಆಗ ಹುಟ್ಟಿದ್ದ ಭಯಕ್ಕೆ ಎದೆಬಡಿತ ಶುರುವಾದದ್ದು ಬಹಳ ಹೊತ್ತಿನವರೆಗೆ ಸರಿಹೋಗಲೇ ಇಲ್ಲ."

ಗಾಡಿ ಅವನೀಂದ್ರನ ಮನೆಯ ಹತ್ತಿರ ಬಂದು ನಿಂತಿತು. "ಗಿರೀಶ ಮನೆಯಲ್ಲಿದ್ದಾನೋ, ನೋಡು" ಎಂದು ಶ್ರೀರಾಮಕೃಷ್ಣರು ಅವನನ್ನು ಕಳಿಸಿದರು. ಅವನು ನೋಡಿಕೊಂಡು ಬಂದು, "ಇಲ್ಲ ಮಹಾಶಯರೆ" ಎಂದುತ್ತರಿಸಿದ. ಆಗ ಅವರೆಂದರು:

"ಓ! ಹಾಗಾದರೆ ಗಿರೀಶನ ಭೇಟಿ ಆಗಲಿಲ್ಲ ಇವತ್ತು. ಏನು ಮಾಡಲಿ? ಗಾಡಿ ಬಾಡಿಗೆಗೆ ಒಂದು ರೂಪಾಯಿ ಕೊಡು ಅಂತ ಅವನನ್ನು ಕೇಳೋಣವೆಂದಿದ್ದೆ. ಯದು ಮಲ್ಲಿಕನೇನೋ ಎರಡೂಕಾಲು ರೂಪಾಯಿ ಕೊಡುತ್ತಾನೆ. ಆದರೆ ಅದರ ಮೇಲೆ ಒಂದು ಪೈಸೆಯನ್ನೂ ಬಿಚ್ಚುವುದಿಲ್ಲ. ನಿನಗೇ ಗೊತ್ತಲ್ಲವೆ, ಆತ ಮಹಾಜಿಪುಣ ಅಂತ. ನಾನಾದರೋ ಅವರಿವರನ್ನೆಲ್ಲ ನೋಡಿಕೊಂಡು ಮಾತನಾಡಿಸಿಕೊಂಡು ವಾಪಸ್ಸು ಹೋಗುವಾಗ ರಾತ್ರಿ ಎಷ್ಟು ಹೊತ್ತಾಗುತ್ತದೋ ಹೇಳಲಿಕ್ಕಾಗದು. ಈ ಕಡೆ ಗಾಡಿಯವನು ಬೇರೆ 'ಹೊತ್ತಾಯಿತು ಸ್ವಾಮೀ' ಅಂತ ಕೂಗಾಡುತ್ತಾನೆ. ಅದಕ್ಕೇ ಗಾಡಿಯ ಯಜಮಾನನ ಹತ್ತಿರ ಒಪ್ಪಂದವಾಗಿದೆ—ರಾತ್ರಿ ಎಷ್ಟು ಹೊತ್ತಾದರೂ ಸರಿ, ಒಟ್ಟು ಮೂರೂಕಾಲು ರೂಪಾಯಿ ಕೊಟ್ಟುಬಿಟ್ಟರೆ ಅವನು ತೊಂದರೆ ಕೊಡಬಾರದು ಅಂತ. ಆದ್ದರಿಂದ ಈಗ ಇನ್ನೊಂದು ರೂಪಾಯಿಯ ಕೊರತೆ. ಹೋಗಲಿ, ಈಗ ನಿನ್ನೊಂದಿಗೆ ಪರಿಚಯವಾಗಿದೆಯಲ್ಲ, ನೀನೇ ಕೊಡುತ್ತೀಯಾ ಆ ಒಂದು ರೂಪಾಯಿಯನ್ನು?"

"ಆಗಲಿ ಸ್ವಾಮಿ" ಎನ್ನುತ್ತ ಅವನೀಂದ್ರ ಜೇಬಿನಿಂದ ಒಂದು ರೂಪಾಯಿ ತೆಗೆದು ಲಾಟುವಿನ ಕೈಗೆ ಕೊಟ್ಟು ಶ್ರೀರಾಮಕೃಷ್ಣರಿಗೆ ಪ್ರಣಾಮ ಮಾಡಿದ. ಗಾಡಿ ಹೊರಟಿತು.

ಮತ್ತೊಂದು ಸ್ವಾರಸ್ಯದ ಪ್ರಸಂಗ: ಒಮ್ಮೆ ಕೆಲವು ಭಕ್ತೆಯರು ಶ್ರೀರಾಮಕೃಷ್ಣರ ದರ್ಶನಕ್ಕಾಗಿ ಹೊರಟರು. ಶ್ರೀರಾಮಕೃಷ್ಣರಿಗೆ ಹಾಲುಕೆನೆ (ತುಂಬ ರುಚಿಕರವಾದ ಒಂದು ಬಂಗಾಳೀ ಸಿಹಿತಿಂಡಿ) ತಿನ್ನಲು ಇಷ್ಟವೆಂದು ಅವರಿಗೆ ತಿಳಿದಿತ್ತು; ಆದ್ದರಿಂದ ಒಂದು ಕುಡಿಕೆಯ ತುಂಬ ಒಳ್ಳೆಯ ಕೆನೆ ಕೊಂಡುಕೊಂಡು ದಕ್ಷಿಣೇಶ್ವರಕ್ಕೆ ಹೋದರು. ಅಲ್ಲಿಗೆ ತಲುಪಿದಾಗ, ಶ್ರೀರಾಮಕೃಷ್ಣರು ಮಹೇಂದ್ರನಾಥ ಗುಪ್ತನನ್ನು ನೋಡಲು ಕಲ್ಕತ್ತಕ್ಕೆ ಹೋಗಿರುವುದಾಗಿ ತಿಳಿಯಿತು. ಆಗ ಅವರಿಗಾದ ನಿರಾಶೆ ಅಷ್ಟಿಷ್ಟಲ್ಲ. ಆಗಿನ ಕಾಲದಲ್ಲಿ ಮನೆತನಸ್ಥ ಸ್ತ್ರೀಯರಿಗೆ ಹಾಗೆ ಮನೆಬಿಟ್ಟು ಹೊರಬರುವುದೇ ದೊಡ್ಡ ಸಾಹಸ. ಇಷ್ಟು ಕಷ್ಟಪಟ್ಟುಕೊಂಡು ಅಷ್ಟು ಮೈಲಿ ದೂರದಿಂದ ಬಂದರೆ ಹೀಗಾಗಬೇಕೆ? ಸರಿ. ಈಗೇನು ಮಾಡುವುದು? ಮಹೇಂದ್ರನ ಮನೆಯ ದಾರಿ ಸ್ವಲ್ಪಮಟ್ಟಿಗೆ ತಿಳಿದಿತ್ತು. ಆದ್ದರಿಂದ ಅಲ್ಲಿಗೇ ಹೋಗಲು ನಿಶ್ಚಯಿಸಿದರು. ಕೆನೆಯ ಕುಡಿಕೆಯನ್ನು ರಾಮಲಾಲನ ಕೈಗೆ ಕೊಟ್ಟು, ಅದನ್ನು ಶ್ರೀರಾಮಕೃಷ್ಣರಿಗೆ ತಲುಪಿಸಲು ಹೇಳಿ ಹೊರಟರು. ಆದರೆ ಅವರು ಯಾವ ದೋಣಿಯಲ್ಲಿ ದಕ್ಷಿಣೇಶ್ವರಕ್ಕೆ ಬಂದಿದ್ದರೋ ಅದು ವಾಪಸು ಹೊರಟುಹೋಗಿತ್ತು. ಮತ್ತೊಂದು ದೋಣಿ ಸಿಗಬೇಕೆಂದರೆ ಇನ್ನೆಷ್ಟು ಹೊತ್ತೋ ಗೊತ್ತಿಲ್ಲ. ಬೇರೆ ಉಪಾಯಗಾಣದೆ ನಡೆದುಕೊಂಡೇ ಸಾಗಿದರು. ಅವರ ಅದೃಷ್ಟ; ಸ್ವಲ್ಪ ದೂರ ಹೋಗುವಷ್ಟರಲ್ಲೇ ಗಾಡಿ ಸಿಕ್ಕಿತು. ಆದರೆ ಮಹೇಂದ್ರನಾಥನ

ಮನೆ ಹುಡುಕುವುದಕ್ಕೆ ಕಷ್ಟವಾಯಿತು. ಅಂತೂ ಹೇಗೋ ಮಾಡಿ ಮನೆಯನ್ನು ತಲುಪಿದರು. ಶ್ರೀರಾಮಕೃಷ್ಣರೊಬ್ಬರೇ ಒಂದು ಸಣ್ಣ ಕೋಣೆಯಲ್ಲಿ ಮಂಚದ ಮೇಲೆ ಕುಳಿತಿರುವುದನ್ನು ಕಂಡರು. ಈ ಭಕ್ತೆಯರೆಲ್ಲ ಒಳಹೊಕ್ಕು ಅವರಿಗೆ ಪ್ರಣಾಮ ಸಲ್ಲಿಸಿದರು. ಶ್ರೀರಾಮಕೃಷ್ಣರು ಇವರನ್ನು ಕಂಡು ನಕ್ಕು ಕೇಳಿದರು, "ಇಲ್ಲಿಗೆ ಹೇಗೆ ಬಂದಿರಿ ?" ಸ್ತ್ರೀಯರು ನಡೆದದ್ದನ್ನೆಲ್ಲ ವಿವರಿಸಿದರು. ಶ್ರೀರಾಮಕೃಷ್ಣರು ತುಂಬ ಸಂತೋಷಪಟ್ಟು, ಅವರೊಂದಿಗೆ ಮಾತುಕತೆಯಲ್ಲಿ ತೊಡಗಿದರು.

ಈ ಸ್ತ್ರೀಯರು ಒಟ್ಟು ಐವರು. ಅವರಲ್ಲಿ ಹೆಚ್ಚು ವಯಸ್ಸಾದ ಇಬ್ಬರು ಬಾಗಿಲೆದುರೇ ಕುಳಿತಿದ್ದರು. ಇನ್ನು ಮೂವರು ಯುವತಿಯರು; ಕೋಣೆಯೊಳಗೆ ಒಂದು ಪಕ್ಕದಲ್ಲಿ ಕುಳಿತಿದ್ದರು. ಈ ಹೊತ್ತಿಗೆ, ಶ್ರೀರಾಮಕೃಷ್ಣರು 'ಧಡಿಯ ಬ್ರಾಹ್ಮಣ' ಎಂದು ಕರೆಯುತ್ತಿದ್ದ ಪ್ರಾಣಕೃಷ್ಣ ಮುಖರ್ಜಿ ಅಲ್ಲಿಗೆ ಬಂದುಬಿಟ್ಟ. ಘೋಷಾ ಪದ್ಧತಿ ಆಚರಣೆಯಲ್ಲಿದ್ದ ಕಾಲ ಅದು. ಹೆಂಗಸರು ಪರಪುರುಷರೆದುರಿಗೆ ಇರುವುದಾಗಲಿ, ಒಟ್ಟಿಗೆ ಕುಳಿತುಕೊಳ್ಳುವುದಾಗಲಿ ಲಜ್ಜಾಸ್ಪದವೆಂದು ಪರಿಗಣಿಸಲ್ಪಡುತ್ತಿತ್ತು. ಆದ್ದರಿಂದ ಪ್ರಾಣಕೃಷ್ಣ ಬಂದೊಡನೆ ಈ ಸ್ತ್ರೀಯರೆಲ್ಲರೂ ಅಲ್ಲಿಂದೆದ್ದು ಕಣ್ಮರೆಯಾಗಲು ನೋಡಿದರು. ಬೇಗಬೇಗ ಅತ್ತಿತ್ತ ಕಣ್ಣು ಹಾಯಿಸಿದರು. ಆದರೆ ಎಲ್ಲೂ ಜಾಗ ಕಾಣಲಿಲ್ಲ. ಮನೆಯೂ ಸಣ್ಣದು, ಜೊತೆಗೆ ಮನೆಮಂದಿಯ ಪರಿಚಯವೂ ಅವರಿಗಿರಲಿಲ್ಲ. ಆದ್ದರಿಂದ ಇಬ್ಬರು ಹಿರಿಯ ಸ್ತ್ರೀಯರು ಬಾಗಿಲ ಮುಂದೆಯೇ ಇದ್ದ ಒಂದು ಕಿಟಕಿ ಗೂಡಿನಲ್ಲಿ ಹತ್ತಿ ಕುಳಿತರು. ಉಳಿದ ಮೂವರು ಬೇಗಬೇಗನೆ ಶ್ರೀರಾಮಕೃಷ್ಣರು ಕುಳಿತಿದ್ದ ಮಂಚದ ಕೆಳಕ್ಕೆ ನುಸುಳಿ ಉದ್ದಕ್ಕೆ ಮಲಗಿಬಿಟ್ಟರು ! ಪ್ರಾಣಕೃಷ್ಣ ಆರಾಮವಾಗಿ ಮಾತನಾಡುತ್ತ ಕುಳಿತ. ಇತ್ತ ಈ ಹೆಂಗಳೆಯರು ಮಂಚದ ಕೆಳಗೆ ವಾಸವಾಗಿದ್ದ ಸೊಳ್ಳೆಗಳ ಕಡಿತವನ್ನೂ ಸಹಿಸಿಕೊಂಡು, ತುಟಿಪಿಟಕ್ಕೆನ್ನದೆ ಸುಮ್ಮನೆ ಮಲಗಿದ್ದರು. ಆದರೆ ಶ್ರೀರಾಮಕೃಷ್ಣರ ಅಮೃತವಾಣಿಯನ್ನಾಲಿಸುತ್ತಿದ್ದ ಅವರಿಗೆ ಆ ನರಕವೂ ಸ್ವರ್ಗವಾಗಿ ತೋರಿತೇನೋ ! ಒಂದು ಗಂಟೆಯ ಮೇಲೆ ಆ ಪುಣ್ಯಾತ್ಮ ಹೊರಟ. ಆಮೇಲೆ ಮೂವರೂ ಆಚೆ ಬಂದರು. ತಮ್ಮ ಸ್ಥಿತಿಯನ್ನು ಜ್ಞಾಪಿಸಿಕೊಳ್ಳುತ್ತ ಮತ್ತೆಮತ್ತೆ ನಕ್ಕರು. ಅಂತೂ ಒಂದು ಅವಿಸ್ಮರಣೀಯ ಅನುಭವ !

ಅಂದು ಅವರಿಗೆಲ್ಲ ಮಹೇಂದ್ರನಾಥನ ಮನೆಯಲ್ಲೇ ಊಟೋಪಚಾರವಾಯಿತು. ಊಟ ಮುಗಿದ ಮೇಲೆ ಅವರು ಮತ್ತೆ ಶ್ರೀರಾಮಕೃಷ್ಣರೊಂದಿಗೆ ಮಾತನಾಡುತ್ತ ಕುಳಿತರು. ಆ ದಿವ್ಯಾನಂದಮೂರ್ತಿಯ ಮುಖಾರವಿಂದದಿಂದ ಹರಿಯುತ್ತಿರುವ ಮಧುಸ್ರೋತವನ್ನು ಎಷ್ಟು ಪಾನಮಾಡಿದರೂ ಅವರಿಗೆ ತೃಪ್ತಿಯಿಲ್ಲ. ಹೊತ್ತು ಸರಿದುದಂತೂ ಗೊತ್ತೇ ಇಲ್ಲ! ಕೊನೆಗವರು ತಮ್ಮತಮ್ಮ ಮನೆಗಳಿಗೆ ಹೊರಟು ನಿಂತಾಗ ರಾತ್ರಿ ಒಂಬತ್ತು ಗಂಟೆ; ಶ್ರೀರಾಮಕೃಷ್ಣರು ದಕ್ಷಿಣೇಶ್ವರ ಮುಟ್ಟಿದಾಗ ಹತ್ತೂವರೆ.

ಈಗ ಮತ್ತೊಂದು ಅದ್ಭುತ ನಡೆಯಿತು. ಭಾವಾವಸ್ಥೆಯಲ್ಲಿದ್ದಾಗ ಕೆಲವೊಮ್ಮೆ ಶ್ರೀರಾಮಕೃಷ್ಣರಿಗೆ ವಿಪರೀತ ಹಸಿವಾಗುತ್ತಿದ್ದುದನ್ನು, ಆಗ ಅವರು ಎಷ್ಟೇ ತಿಂದರೂ ತೊಂದರೆಯೇನೂ ಆಗುತ್ತಿರಲಿಲ್ಲ ಎಂಬುದನ್ನು ಹಿಂದೆ ನೋಡಿದ್ದೇವೆ. ಈಗ ಅವರಿಗೆ ಮತ್ತೊಮ್ಮೆ ಅಂಥ ಅವಸ್ಥೆಯೊದಗಿತು. ಅರ್ಧ ಬಾಹ್ಯಾವಸ್ಥೆಯಲ್ಲಿ ರಾಮಲಾಲನನ್ನು ಕರೆದು, "ನೋಡು, ತುಂಬ ಹಸಿವಾಗುತ್ತಿದೆ. ತಿನ್ನುವುದಕ್ಕೆ ಏನಾದರೂ ಇದ್ದರೆ

ಕೊಡು" ಎಂದರು. ಅವನು ಆ ಹೆಂಗಸರು ಕೊಟ್ಟಿದ್ದ ಕೆನೆಯ ಕುಡಿಕೆಯನ್ನು ತಂದು ಮುಂದಿಟ್ಟರೆ, ಅವರು ಅದರಲ್ಲಿ ಬಹು ಭಾಗವನ್ನು ತಿಂದು ಮುಗಿಸಿಬಿಟ್ಟರು! ರಾಮಲಾಲ ಬೆರಗಾದ. ಮರುದಿನ ಆ ಸ್ತ್ರೀಯರು ಪುನಃ ದಕ್ಷಿಣೇಶ್ವರಕ್ಕೆ ಬಂದರು. ಆಗ ಶ್ರೀರಾಮಕೃಷ್ಣರು ಅವರಿಗೆ, "ನೀವು ತಂದುಕೊಟ್ಟಿದ್ದ ಕೆನೆಯಲ್ಲಿ ಸ್ವಲ್ಪ ಬಿಟ್ಟು ಉಳಿದದ್ದನ್ನೆಲ್ಲ ತಿಂದುಬಿಟ್ಟೆ. ಆದರಿಂದ ದೇಹಕ್ಕೆ ತೊಂದರೆಯೇನೂ ಆಗಿಲ್ಲ. ಹೊಟ್ಟೆ ಮಾತ್ರ ಸ್ವಲ್ಪ ಬಿಸಿಯಾಗಿದೆ" ಎಂದು ಹೇಳಿದರು. ಶ್ರೀರಾಮಕೃಷ್ಣರು ಹಾಗೆ ತಿಂದದ್ದು ಭಾವಾಸ್ಥೆಯಲ್ಲಿದ್ದಾಗ ಎಂದು ಆ ಸ್ತ್ರೀಯರಿಗೆ ಆಮೇಲೆ ತಿಳಿಯಿತು. ಹೀಗೆ ಅವರಿಗೆ ಶ್ರೀರಾಮಕೃಷ್ಣರ ಭಾವಪ್ರಪಂಚದ ವಿಸ್ಮಯವೊಂದನ್ನು ಕಾಣುವ ಅವಕಾಶವೊದಗಿತು.

ಶ್ರೀರಾಮಕೃಷ್ಣರ ಆಪ್ತವರ್ಗಕ್ಕೆ ಸೇರಿದ ಭಾಗ್ಯಶಾಲೀ ಭಕ್ತರಲ್ಲೊಬ್ಬನು ದೇವೇಂದ್ರನಾಥ. ಈತ ಹೆಸರಾಂತ ವಂಗಕವಿ ಸುರೇಂದ್ರನಾಥ ಮಜುಮ್ದಾರನ ತಮ್ಮ. ವಿಪ್ರಕುಲದಲ್ಲಿ ಜನಿಸಿದ ದೇವೇಂದ್ರನಲ್ಲಿ ಚಿಕ್ಕಂದಿನಿಂದಲೂ ಧಾರ್ಮಿಕ ಪ್ರವೃತ್ತಿ ಎದ್ದುಕಾಣುತ್ತಿತ್ತು. ಶಾಲಾದಿನಗಳಿಂದಲೇ ಸಾಹಿತ್ಯಾಭಿರುಚಿಯನ್ನು ಬೆಳೆಸಿಕೊಂಡ. ಆದರೆ ಕ್ರಮೇಣ ಭಗವತ್ಸಂಬಂಧವಾದ ಜಿಜ್ಞಾಸೆಯೇ ಅವನ ಭಾವನಾರಾಜ್ಯವನ್ನೆಲ್ಲ ಆಕ್ರಮಿಸಿತು. ಯಾವಜ್ಜೀವವೂ ಬ್ರಹ್ಮಚಾರಿಯಾಗಿಯೇ ಉಳಿಯಬೇಕೆಂಬ ಇಚ್ಛೆ ಅವನಿಗಿತ್ತಾದರೂ 'ಪ್ರಾಯೋಪವೇಶ' ಮಾಡುತ್ತೇನೆಂಬ ತಾಯಿಯ ಬೆದರಿಕೆಗೆ ಮಣಿದು ಕಡೆಗೆ ಮದುವೆಯಾದ. ಜೊರಾಸಂಕೊ ಎಂಬಲ್ಲಿ ವಾಸವಾಗಿದ್ದ ಪ್ರಸಿದ್ಧ ಟಾಗೋರ್ ಮನೆತನದವರ ಬಳಿ ಗುಮಾಸ್ತೆಯ ಕೆಲಸಕ್ಕೆ ಸೇರಿದ. ತನ್ನ ನಿಷ್ಕಪಟತೆಯಿಂದಾಗಿ ಯಜಮಾನರ ಆದರಕ್ಕೆ ಪಾತ್ರನಾದ. ಆದರೂ ಆತನ ಸಂಸಾರರಥ ಬಹಳ ಕಷ್ಟನಷ್ಟಗಳಲ್ಲೇ ಸಾಗುತ್ತಿತ್ತು.

ಈ ವೇಳೆಗಾಗಲೇ ದೇವೇಂದ್ರನಾಥ ತನ್ನ ಅಣ್ಣನಿಂದ ಯೋಗದಲ್ಲಿ ದೀಕ್ಷೆ ಪಡೆದುಕೊಂಡಿದ್ದ. ಅದರ ಆಧಾರದ ಮೇಲೆ ಆತ ಹನ್ನೊಂದು ವರ್ಷಗಳ ಕಾಲ ನಿಷ್ಠೆಯಿಂದ ಸಾಧನೆ ಮಾಡಿದ. ತತ್ಫಲವಾಗಿ ಹಲವಾರು ಬಗೆಯ ದರ್ಶನಾನುಭವಗಳನ್ನೂ ಪಡೆದುಕೊಂಡಿದ್ದ. ಆದರೆ ಅವುಗಳಿಂದಾಗಿ ಅವನ ಜಿಜ್ಞಾಸೆ ತಣ್ಣಗಾಗುವ ಬದಲಿಗೆ ಮತ್ತಷ್ಟು ಭುಗಿಲೆದ್ದಿತು. 'ದೇವರೆಂಬವನೊಬ್ಬ ನಿಜವಾಗಿಯೂ ಇರುವನೆ? ಇರುವನಾದರೆ ನಾನು ಕಂಡೇ ತೀರಬೇಕು' ಎಂಬ ಕಾತರತೆಯುಂಟಾಯಿತು. ಬ್ರಾಹ್ಮಸಮಾಜಕ್ಕೆ ಹೋಗಲಾರಂಭಿಸಿದ. ಕೇಶವಚಂದ್ರ ಸೇನನ ಪರಿಚಯವೂ ಆಯಿತು. ಆದರೆ ಯಾವ ಅಧ್ಯಾತ್ಮದ ಶೀತಲಜಲವನ್ನು ಅವನು ಅರಸುತ್ತಿದ್ದನೋ ಅದು ಅವನಿಗೆಲ್ಲೂ ದೊರಕಲಿಲ್ಲ.

ಒಂದು ದಿನ ಅವನು ತನ್ನ ಸೋದರಮಾವ ಹರೀಶ ಮುಸ್ತಾಫಿಯ ಮನೆಯಲ್ಲಿ ಕುಳಿತು, ಬ್ರಾಹ್ಮಸಮಾಜಕ್ಕೆ ಸೇರಿದ್ದವನಾದ ಸಾಧು ಅಘೋರನಾಥ ಎಂಬ ಮಹಾತ್ಮನ ಜೀವನಕಥೆಯನ್ನು ಓದುತ್ತಿದ್ದ. ಅದರಲ್ಲಿ, ಕ್ರೂರ ಡಕಾಯಿತರ ಕೈಗೆ ಸಿಕ್ಕಿದ ಆ ಸಾಧು ಆಶ್ಚರ್ಯಕರ ರೀತಿಯಲ್ಲಿ ಬದುಕುಳಿಯುವ ಪ್ರಸಂಗದ ವರ್ಣನೆಯಿತ್ತು. ಅವನ್ನು ಓದುತ್ತ ಓದುತ್ತ ದೇವೇಂದ್ರನ ಮೈ ನವಿರೆದ್ದಿತು. "ದೇವರಿಲ್ಲ ಅಂತ ಯಾವನು ಹೇಳುತ್ತಾನೆ? ದೇವರು ಇರಲೇಬೇಕು! ಇಲ್ಲದಿದ್ದರೆ ಅಘೋರನಾಥನನ್ನು ಯಾರು ಕಾಪಾಡಿದರು?" ಎಂದು ಹುಚ್ಚನಂತೆ ಗಟ್ಟಿಯಾಗಿ ಕೂಗಿಕೊಂಡ. ಬಳಿಕ ಅದೇ ಭಾವದಲ್ಲಿ ಮನೆಗೆ ಧಾವಿಸಿ ಬಂದು, ಕೋಣೆಯಲ್ಲಿ ಸೇರಿಕೊಂಡು ಚಿಲಕ ಹಾಕಿಕೊಂಡುಬಿಟ್ಟ. "ಓ ದೇವರೇ! ನೀನಿರುವೆಯಾದರೆ ಮೈದೋರು!" ಎಂದು ಆರ್ತನಾಗಿ ಮೊರೆಯಿಟ್ಟ. ಉದ್ವೇಗದ ಭರದಲ್ಲಿ ಆಗಾಗ ಗೋಡೆಗೆ ತಲೆ ಚಚ್ಚಿಕೊಳ್ಳುತ್ತಿದ್ದ. ನಿದ್ರಾಹಾರಗಳಿಲ್ಲದೆ ಮೂರು ಹಗಲು ಮೂರು ರಾತ್ರಿ ಕಳೆದುಹೋದುವು. ಆಗ ಅವನೊಳಗೆ ಎಂತೆಂಥ ಭಾವಗಳ ಚಂಡಮಾರುತ ಬೀಸಿತೆಂಬುದನ್ನು ಅವನೇ ಬಲ್ಲ. ನಾಲ್ಕನೆಯ ದಿನ ಮುಂಜಾನೆ ಆತ ಹೊರಬಂದ; ಮನೆಯ ಮಾಳಿಗೆಯ ಮೇಲೆ ನಿಂತು, ದಿಗಂತದ ಮೇಲೇಳುತ್ತಿದ್ದ ಬಾಲಸೂರ್ಯನನ್ನು ದಿಟ್ಟಿಸುತ್ತ ಉದ್ಗರಿಸಿದ: "ದೇವರಿಲ್ಲ ಅಂತ

ಯಾವನು ಹೇಳುತ್ತಾನೆ? ಇಲ್ಲೇ ಇದೆಯಲ್ಲ ದೇವರ ಮಹಿಮೆಗೆ ಸಾಕ್ಷಿ!"

'ಇನ್ನಾದರೂ ತಡ ಮಾಡದೆ, ಪರಮಾರ್ಥದೆಡೆಗೆ ದಾರಿ ತೋರಬಲ್ಲ ಗುರುವನ್ನು ಕಂಡುಕೊ' ಎಂದು ಅವನ ಒಳಧ್ವನಿ ಅವನನ್ನು ಪ್ರೇರೇಪಿಸತೊಡಗಿತು.

ಈ ತುಮುಲದಲ್ಲಿರುವಾಗ ದೇವೇಂದ್ರನಾಥ ಒಂದು ದಿನ (೧೮೮೪ರ ಫೆಬ್ರವರಿ) ಕಾಲ್ನಾ ಕ್ಷೇತ್ರದ ಪ್ರಸಿದ್ಧ ವೈಷ್ಣವಗುರು ಭಗವಾನ್‌ದಾಸ್ ಬಾಬಾಜಿಯವರನ್ನು ದರ್ಶಿಸುವ ಮನಸ್ಸು ಮಾಡಿ ಹೊರಟ. ಕಾಲ್ನಾ ಕ್ಷೇತ್ರಕ್ಕೆ ಉಗಿ ಹಡಗಿನ ಮೂಲಕ ಪ್ರಯಾಣ. ಆದರೆ ಅವನು ಹೊರಟದ್ದು ತಡವಾದ್ದರಿಂದ ಸ್ವಲ್ಪದರಲ್ಲಿ ಹಡಗು ತಪ್ಪಿಹೋಯಿತು. ಹಿಂದಿರುಗಿ ಬರುತ್ತ ದಾರಿಯಲ್ಲಿ ಅವನು ತನ್ನ ಸ್ನೇಹಿತ ನಾಗೇಂದ್ರನಾಥ ಎಂಬವನನ್ನು ನೋಡಲು ಹೋದ. ಆ ಸ್ನೇಹಿತ ಮನೆಯಲ್ಲಿರಲಿಲ್ಲ. ಅವನಿಗಾಗಿ ಕಾಯುತ್ತ ಇವನು ಮೇಜಿನ ಮೇಲಿದ್ದ ಒಂದು ಪುಸ್ತಕವನ್ನು ಕೈಗೆತ್ತಿಕೊಂಡು ಕುಳಿತ. ಒಂದು ಪುಟದಲ್ಲಿ ಆತ, 'ದಕ್ಷಿಣೇಶ್ವರದ ಕಾಳೀ ಮಂದಿರದಲ್ಲಿರುವ ಪರಮಹಂಸ ರಾಮಕೃಷ್ಣರ ಬೋಧನೆ ಇದೇ' ಎಂಬ ಟಿಪ್ಪಣಿ ಬರೆದುಕೊಂಡಿದ್ದ. ಅದನ್ನು ಕಂಡೊಡನೆ ದೇವೇಂದ್ರನ ಮನಸ್ಸು ಅಲ್ಲೇ ನಿಂತಿತು. ಅವನು ಆಲೋಚಿಸಿದ: 'ಪರಮಹಂಸ! ಹಾಗೆಂದರೆ ಅತ್ಯುನ್ನತ ಆಧ್ಯಾತ್ಮಿಕ ಅವಸ್ಥೆಯನ್ನು ಮುಟ್ಟಿದವರೆಂದಲ್ಲವೆ? ಅಂಥವರೊಬ್ಬರು ಇರುವುದಾದಲ್ಲಿ, ಅವರು ನನಗೆ ನೆರವಾಗಲಾರರೆ?' ಹೀಗೆಂದುಕೊಳ್ಳುತ್ತ ಅವನು ಅಲ್ಲಿಂದೆದ್ದು ಮನೆಯೆಡೆಗೆ ಹೊರಟ. ದಾರಿಯಲ್ಲಿ ಎದುರಾದ ಮತ್ತೊಬ್ಬ ಪರಿಚಯಸ್ಥನಿಂದ ಪರಮಹಂಸರ ವಾಸಸ್ಥಳ ಇತ್ಯಾದಿ ವಿಷಯಗಳು ತಿಳಿದುಬಂದುವು. ಇನ್ನು ತಡ ಮಾಡಲು ಅವನ ಮನಸ್ಸೊಪ್ಪಲಿಲ್ಲ; ಸೀದಾ ಆಹಿರಿತೊಲ ಎಂಬಲ್ಲಿಗೆ ಹೋಗಿ ದೋಣಿ ಹತ್ತಿ ದಕ್ಷಿಣೇಶ್ವರಕ್ಕೆ ಹೊರಟೇಬಿಟ್ಟ.

ಆದರೆ ಆಮೇಲೆ ಅವನಿಗನ್ನಿಸಿತು: 'ಇದೇನಿದು, ನಾನು ಇಷ್ಟೊಂದು ಅವಸರದಲ್ಲಿ ಹೊರಟುಬಿಟ್ಟೆನಲ್ಲ! ಆ ಪರಮಹಂಸರ ವಿಚಾರ ನನಗೆ ತಿಳಿದಿರುವುದೇ ಸ್ವಲ್ಪ. ಆದರೂ ಹಿಂದೆಮುಂದೆ ನೋಡದೆ ಹೊರಟುಬಿಟ್ಟಿದ್ದೇನೆ! ಅವರು ಎಂಥ ತಪಸ್ವಿಗಳೋ ಏನೋ. ಅಂಥವರನ್ನು ಹೀಗೆ ಪೂರ್ವಸಿದ್ಧತೆಯಿಲ್ಲದೆ ಹೋಗಿ ಭೇಟಿಮಾಡುವುದು ತಪ್ಪಾಗಬಹುದು... ಈಗಲೂ ವಾಪಸು ಹೋಗಿಬಿಡಲೆ?...' ಅವನು ಹೀಗೆ ಆಲೋಚಿಸುತ್ತಿರುವಾಗಲೇ ದೋಣಿ ದಕ್ಷಿಣೇಶ್ವರದ ಘಟ್ಟವನ್ನು ತಲುಪಿಯಾಗಿತ್ತು. ಆಗ ಸೂರ್ಯ ನಡುನೆತ್ತಿಯ ಮೇಲಿದ್ದ.

ದೋಣಿಯಿಂದ ಇಳಿದೊಡನೆ ಅವನು, ಕೈಗೆ ಬ್ಯಾಂಡೇಜು ಕಟ್ಟಿಕೊಂಡಿದ್ದ ವ್ಯಕ್ತಿಯೊಬ್ಬರನ್ನು ಕಂಡ. ಆದರೆ ಅವರ ಅತಿ ಸಾಮಾನ್ಯ ವೇಷಭೂಷಣವನ್ನು ಕಂಡಾಗ, ಅವರೇ ಪರಮಹಂಸರು ಎಂದು ಅವನಿಗೆ ತೋಚಲಿಲ್ಲ. ಅವರು ಯಾರನ್ನೋ ಇದಿರು ನೋಡುತ್ತಿರುವಂತೆ ಘಟ್ಟದಲ್ಲಿ ನಿಂತಿದ್ದರು. ದೇವೇಂದ್ರ ಒಬ್ಬ ಯುವಕನನ್ನು ಕೇಳಿಕೊಂಡು ಶ್ರೀರಾಮಕೃಷ್ಣರ ಕೋಣೆಗೆ ಹೋದ. ಅಲ್ಲಿ ಯಾರೂ ಇರಲಿಲ್ಲ. ಅವನು ಆಚೆ ನಿಂತು ಕಾಯುತ್ತಿದ್ದಾಗ ಶ್ರೀರಾಮಕೃಷ್ಣರು ಅಲ್ಲಿಗೇ ಬಂದರು. ಈಗ ಅವರನ್ನು ನೋಡಿದ ಮೇಲೆ ಅವನಿಗೆ ಹಠಾತ್ತಾಗಿ ಹೊಳೆಯಿತು—ಇವರೇ ಇರಬೇಕು ಪರಮಹಂಸರು, ಎಂದು. ಅವನು ಕಲ್ಪಿಸಿಕೊಂಡಿದ್ದ ಸಾಧುವಿಗಿಂತ ಶ್ರೀರಾಮಕೃಷ್ಣರು ತೀರಾ ಭಿನ್ನವಾಗಿದ್ದರು. ಆದ್ದರಿಂದ ಸ್ವಲ್ಪ ಅಚ್ಚರಿಪಡುತ್ತಲೇ ಅವರಿಗೆ ಪ್ರಣಾಮ ಮಾಡಿದ. ಅವರು ಅವನನ್ನು ಕೇಳಿದರು, "ಎಲ್ಲಿಂದ ಬರುತ್ತಿರುವುದು?"

ದೇವೇಂದ್ರ: "ಕಲ್ಕತ್ತದಿಂದ, ಮಹಾಶಯರೆ."

ಶ್ರೀರಾಮಕೃಷ್ಣರು (ಕೈಯಲ್ಲಿ ಕೊಳಲು ಹಿಡಿದಂತೆ ನಟಿಸುತ್ತ): "ಇವನನ್ನು* ನೋಡಲು ಬಂದೆಯಾ ?"

ದೇವೇಂದ್ರ: "ಇಲ್ಲ ಇಲ್ಲ. ನಿಮ್ಮನ್ನು ನೋಡಲೆಂದೇ ಬಂದೆ."

ಶ್ರೀರಾಮಕೃಷ್ಣರು: "ನನ್ನನ್ನು ನೋಡಲು ? ನೋಡಲು ನನ್ನಲ್ಲೇನಿದೆ ಅಂತ !"

ಈಗ ಅವರು ಮಗುವಿನಂತೆ ದೂರುವ ದನಿಯಲ್ಲಿ ನುಡಿದರು: "ಇಲ್ಲಿ ನೋಡು, ನಾನು ಕೈ ಮುರಿದುಕೊಂಡಿರುವುದನ್ನು ! ಹಾ... ! ಎಷ್ಟು ನೋವು ! ಎಲ್ಲಿ, ಕೈಯನ್ನು ಮುಟ್ಟಿನೋಡು. . . ಮೂಳೆ ಜರುಗಿದೆಯೋ ಅಥವಾ ಮುರಿದೇಹೋಗಿ ದೆಯೋ ಹೇಳುತ್ತೀಯಾ ? ಅಬ್ಬಾ, ಯಮಯಾತನೆ !"

ದೇವೇಂದ್ರ ಅವರ ಕೈಯನ್ನು ಮೆತ್ತಗೆ ಮುಟ್ಟಿನೋಡಿದ; ಅದು ಶಿಶುವಿನ ಕೈಯಂತೆ ಮೃದುವಾಗಿರುವುದನ್ನು ಕಂಡು ತುಂಬ ಆಶ್ಚರ್ಯಪಟ್ಟ. ಕೇಳಿದ, "ಇದು ಹೇಗಾಯಿತು ?"

ಪುನಃ ದೂರುವ ದನಿಯಲ್ಲಿ ಅವರೆಂದರು: "ಓಹ್. . . ನೋಡು, ಆಗಾಗ ನನಗೆ ಒಂದು ಬಗೆಯ ಸ್ಥಿತಿ ಬಂದುಬಿಡುತ್ತದೆ. ಕೆಲವು ದಿನಗಳ ಕೆಳಗೆ ಅಂಥ ಸ್ಥಿತಿ ಯಲ್ಲಿದ್ದಾಗ ಬಿದ್ದುಬಿಟ್ಟು ಹೀಗಾಯಿತು. ಏನಾದರೂ ಔಷಧ ಉಪಯೋಗಿಸಿದರೆ ನೋವು ಇನ್ನೂ ಹೆಚ್ಚಾಗುತ್ತದೆ. ಅದಕ್ಕೇ ನಾನು ಔಷಧ ತೆಗೆದುಕೊಳ್ಳುವುದನ್ನೇ ಬಿಟ್ಟು ಬಿಟ್ಟಿದ್ದೇನೆ. (ಕಾತರದಿಂದ) ಏನಪ್ಪಾ, ಇದು ಗುಣವಾಗುತ್ತದೆ ಅಂತೀಯಾ ?"

ದೇವೇಂದ್ರ ಕ್ಷಣಕಾಲ ಆಲೋಚಿಸಿದ—ಸಾಧುಗಳಲ್ಲವೇ ? ಬೇಗ ವಾಸಿ ಯಾಗಲೇಬೇಕು ಎನ್ನಿಸಿತು. ಬಳಿಕ, ಅವರನ್ನು ಸಾಂತ್ವನಗೊಳಿಸಲು ಹೇಳಿದ: "ಓ, ಖಂಡಿತ ! ಬೇಗ ಹುಷಾರಾಗಿಬಿಡುತ್ತೀರಿ."

ಒಡನೆಯೇ ಶ್ರೀರಾಮಕೃಷ್ಣರ ಮುಖ ಗೆಲುವಾಯಿತು. ನೋವೆಲ್ಲ ಮಾಯ ವಾಯಿತು. ಉಲ್ಲಾಸದಿಂದ ಬಳಿಯಿರುವವರನ್ನು ಉದ್ದೇಶಿಸಿ, "ನೋಡಿ ನೋಡಿ ! ಈತ ಕಲ್ಕತ್ತದಿಂದ ಬಂದ ಬಾಬು ! ಹೇಳುತ್ತಿದ್ದಾನೆ, ನನ್ನ ಕೈ ಸರಿಹೋಗಿಬಿಡುತ್ತದೆ ಅಂತ !" ಎಂದು ಗಟ್ಟಿಯಾಗಿ ಹೇಳತೊಡಗಿದರು.

ದೇವೇಂದ್ರ ಬೆರಗಾಗಿ ತನ್ನೊಳಗೇ ಹೇಳಿಕೊಂಡ: 'ಎಂಥ ವಿಚಿತ್ರ ಮನುಷ್ಯರಪ್ಪ ಇವರು ! ಅಲ್ಲಾ, ಇವರನ್ನು ನಾನು ಪರಮಹಂಸರು ಅಂತ ಭಾವಿಸಿ ನೋಡಲು ಬಂದರೆ, ಇವರು ನನ್ನನ್ನೇ ಒಳ್ಳೇ ಸರ್ವಜ್ಞನೆಂಬಂತೆ ನೋಡುತ್ತಿದ್ದಾರಲ್ಲ ! ಮಗುವಿನ ತರಹ, ನಾನು ಹೇಳಿದ್ದನ್ನು ತಕ್ಷಣ ನಂಬಿಬಿಟ್ಟರಲ್ಲ ! ಯಾರಾದರೂ ಇಷ್ಟೊಂದು ಮುಗ್ಧರಾಗಿರುವುದಕ್ಕೆ ಸಾಧ್ಯವೆ ? ಇದೇ ಏನು ಪರಮಹಂಸರ ಲಕ್ಷಣವೆಂದರೆ ? ಅಥವಾ ಇದೆಲ್ಲ ಬರೀ ಬೂಟಾಟಿಕೆಯೊ ?'

ಶ್ರೀರಾಮಕೃಷ್ಣರ ಮುಖವನ್ನೇ ಅವನು ದಿಟ್ಟಿಸಿ ನೋಡಿದ; ಅವರ ವರ್ತನೆ ಯನ್ನು ಸೂಕ್ಷ್ಮವಾಗಿ ಗಮನಿಸಿದ. ಆದರೆ ಎಲ್ಲೂ ಕಪಟತೆಯ ಚಿಹ್ನೆ ಕಾಣಲಿಲ್ಲ.

---

*ದೇವೇಂದ್ರನನ್ನು ನೋಡಿದೊಡನೆಯೇ ಶ್ರೀರಾಮಕೃಷ್ಣರಿಗೆ ಆತ ಶ್ರೀಕೃಷ್ಣಭಕ್ತನೆಂಬ ವಿಷಯ ತಿಳಿದು ಹೋಗಿರಬೇಕು. ಆದ್ದರಿಂದಲೇ 'ದೇವಾಲಯದಲ್ಲಿರುವ ರಾಧಾಕಾಂತನನ್ನು ನೋಡಲು ಬಂದೆಯಾ?' ಎಂಬರ್ಥದಲ್ಲಿ ಹೀಗೆ ಕೇಳುತ್ತಿದ್ದಾರೆ.

ಈಗ ಶ್ರೀರಾಮಕೃಷ್ಣರು ಅವನೊಂದಿಗೆ ಮಾತನಾಡುತ್ತ, ಅವನ ಭಾವಕ್ಕನುಗುಣ ವಾಗಿ ಭಗವತ್ಪ್ರೇಮದ ಕುರಿತಾಗಿ ಹೇಳತೊಡಗಿದರು: "ಪ್ರೇಮಾಭಕ್ತಿ ಎಂದರೆ ಎಂಥದು ಗೊತ್ತೆ? ಆ ಉತ್ಕಟ ಭಾವ ನಮ್ಮೊಳಗೆ ಜಾಗೃತ ವಾಯಿತೆಂದರೆ ಹೊರಗಿನ ವಸ್ತುಗಳೆಲ್ಲ ಮರೆತುಹೋಗುತ್ತವೆ, ಜಗತ್ತೇ ಮರೆತುಹೋಗುತ್ತದೆ. ಸುಂಟರಗಾಳಿಯೆದ್ದರೆ ಹೇಗೆ ಎಲ್ಲೆಲ್ಲೂ ಧೂಳು ತುಂಬಿಕೊಂಡು, ಮನೆ ಗಳನ್ನು ಮರಗಳನ್ನು ಬೇರೆಬೇರೆಯಾಗಿ ಗುರುತಿಸಲು ಸಾಧ್ಯವಿಲ್ಲದಂತಾಗುವುದೋ, ಹಾಗೆಯೇ ಭಗವತ್ಪ್ರೇಮ ಉತ್ಕಟವಾದಾಗ ಎಲ್ಲ ಭೇದಭಾವಗಳೂ ಹೊರಟುಹೋಗುತ್ತವೆ."

ಈ ವಿವರಣೆಗಳನ್ನು ಕೇಳಿ ದೇವೇಂದ್ರ ಬಹಳ ಸಂತುಷ್ಟನಾದ. ಅಷ್ಟು ಸ್ಪಷ್ಟವಾದ ಮಾತುಗಳನ್ನು ಅವನೆಂದೂ ಕೇಳಿರಲಿಲ್ಲ.

ಈಗ ಊಟದ ಸಮಯವಾಗಿದೆ. ಉಳಿದ ಭಕ್ತರೇನೋ ಅಲ್ಲೇ ಊಟ ಮಾಡಲು ಸಿದ್ಧ. ಆದರೆ ಈತ ತುಂಬ ಮಡಿಯ ಮನುಷ್ಯ, ಇವನು ಇಲ್ಲಿ ಉಣ್ಣಲಾರ ಎಂಬ ಸಂಗತಿಯನ್ನು ಶ್ರೀರಾಮಕೃಷ್ಣರು ಆದಾಗಲೇ ಪತ್ತೆಹಚ್ಚಿದ್ದರು. ಆದ್ದರಿಂದ ಅವ ರೆಂದರು: "ನೋಡು, ಆಗಲೇ ಸಾಕಷ್ಟು ಹೊತ್ತಾಗಿಬಿಟ್ಟಿದೆ. ನೀನಿವತ್ತು ಇಲ್ಲೇ ಊಟ ಮಾಡು. ಮನೆಗೆ ಹೋಗುವ ಯೋಚನೆ ಮಾಡಬೇಡ. ಅಲ್ಲದೆ ಇದು ದೇವಸ್ಥಾನ; ಕುಲವಂತರಾದ ಬ್ರಾಹ್ಮಣರು ಕೂಡ ಇಲ್ಲಿ ಪ್ರಸಾದ ಸ್ವೀಕರಿಸುತ್ತಾರೆ. ಆದ್ದರಿಂದ, ಇಲ್ಲಿ ಉಂಡರೆ ದೋಷ ಬಂದೀತೆಂಬ ಶಂಕೆಯನ್ನೇನೂ ಇಟ್ಟುಕೊಳ್ಳಬೇಡ."

ಅವರು ಇಷ್ಟು ಹೇಳಿದ ಮೇಲೆ ಒಲ್ಲೆ ಎನ್ನಲಾಗದೆ ದೇವೇಂದ್ರ ಒಪ್ಪಿಕೊಂಡ. ಶ್ರೀರಾಮಕೃಷ್ಣರು ರಾಮಲಾಲನನ್ನು ಕರೆದು ಹೇಳಿದರು:

"ನೋಡು, ಇವನು ಬಹಳ ಆಚಾರವಂತ. ಇವತ್ತು ಇಲ್ಲೇ ಊಟ ಮಾಡು ತ್ತಾನೆ. ಇವನಿಗೆ ವಿಷ್ಣುಮಂದಿರದ ಪ್ರಸಾದ* ಕೊಡು."

ದೇವೇಂದ್ರನಿಗೆ ಪರಮಾಶ್ಚರ್ಯವಾಯಿತು. 'ಇದೇನಿದು! ನನ್ನ ಸ್ವಭಾವ, ಮನ ಸ್ಸಿನ ಆಲೋಚನೆಗಳು ಎಲ್ಲವನ್ನೂ ಇವರು ಅರಿತುಕೊಂಡುಬಿಟ್ಟಂತಿದೆಯಲ್ಲ! ನಾನು ಕಟ್ಟುನಿಟ್ಟಿನ ಸಸ್ಯಾಹಾರಿ ಎಂಬುದನ್ನಾಗಲಿ, ನನಗೆ ಶ್ರೀಕೃಷ್ಣನ ಮೇಲೆ ಭಕ್ತಿ ಎಂಬ ವಿಷಯವನ್ನಾಗಲಿ ಇವರು ಹೇಗೆ ಕಂಡುಕೊಂಡರು? ಇವರಿಗೆ ಇತರರ ಮನಸ್ಸನ್ನು ಓದುವ ಶಕ್ತಿಯಿರುವಂತೆ ತೋರುತ್ತಿದೆ!' ಹೀಗೆ ಆಶ್ಚರ್ಯ ಪಡುತ್ತಲೇ ಅವನು ರಾಮ ಲಾಲ ತಂದುಕೊಟ್ಟ ಪ್ರಸಾದವನ್ನು ಸ್ವೀಕರಿಸಿದ.

ಅನಂತರ ಶ್ರೀರಾಮಕೃಷ್ಣರು ಮತ್ತೆ ಅವನೊಂದಿಗೆ ಆತ್ಮೀಯತೆಯಿಂದ ಸಂಭಾಷಿ ಸುತ್ತ, ಅವನ ಕೃಷ್ಣಭಕ್ತಿಯನ್ನು ಪ್ರಚೋದಿಸುವ ಮಾತುಗಳನ್ನಾಡಿದರು. ಗೋಪ ಗೋಪಿಯರ ಸಖ್ಯ-ವಾತ್ಸಲ್ಯ ಭಾವವನ್ನು ಅವನ ಹೃದಯ ಕರಗುವಂತೆ ಬಣ್ಣಿಸಿದರು.

ಸ್ವಲ್ಪ ಹೊತ್ತಿನ ಮೇಲೆ ಶ್ರೀರಾಮಕೃಷ್ಣರು ಅವನನ್ನು ನೋಡಿ, "ಏಕೆ, ಬಹಳ ಸಪ್ಪಗೆ ಕಾಣುತ್ತಿದ್ದೀಯಲ್ಲ? ಮೈಯಲ್ಲಿ ಸ್ವಾಸ್ಥ್ಯವಿಲ್ಲವೆ?" ಎಂದು ಕೇಳಿದರು. ಅಷ್ಟು ಹೊತ್ತೂ ತನ್ಮಯತೆಯಿಂದ ಅವರ ಮಾತುಗಳನ್ನಾಲಿಸುತ್ತ ಕುಳಿತಿದ್ದ ಅವನಿಗೆ

---

*ಬಂಗಾಳದ ವೈಷ್ಣವರು ಸಸ್ಯಾಹಾರಿಗಳು. ಆದರೆ ಶಾಕ್ತರಿಗೆ, ಎಂದರೆ ದೇವಿಯ ಆರಾಧಕರಿಗೆ ಮಾಂಸಾಹಾರ ವರ್ಜ್ಯವಲ್ಲ. ಅದರಲ್ಲೂ ಮತ್ಸ್ಯಾಹಾರ ತುಂಬ ಸಾಮಾನ್ಯ. ಅಂತೆಯೇ, ವಿಷ್ಣುಮಂದಿರಗಳಲ್ಲಿ ಸಸ್ಯಾಹಾರವನ್ನೂ ದೇವೀಮಂದಿರಗಳಲ್ಲಿ ಮಾಂಸಾಹಾರವನ್ನು ನೈವೇದ್ಯ ಮಾಡುವುದು ಪದ್ಧತಿ.

ಶರೀರದ ಪರಿವೆಯೇ ಇರಲಿಲ್ಲ. ಈಗ ಅವರು ಆ ಬಗ್ಗೆ ವಿಚಾರಿಸಿದಾಗ ಅದರ ಮೇಲಿನ ಪ್ರಜ್ಞೆ ಮರಳಿತು. ಹೌದು, ಅವನಿಗೆ ಜ್ವರ ಬರುವಂತಿತ್ತು. ಹಿಂದೆ ಅವನು ಮಲೇರಿಯಾಗೆ ಬಲಿಯಾಗಿದ್ದ. ಈಗ ಮತ್ತೆ ಅದೇ ಲಕ್ಷಣ ಕಾಣುತ್ತಿದೆ... ಅದನ್ನು ತಿಳಿದಾಗ ಶ್ರೀರಾಮಕೃಷ್ಣರು ಉದ್ವಿಗ್ನರಾಗಿ, ಏನು ಮಾಡಬೇಕೆಂದು ತಿಳಿಯದೆ ಕೋಣೆಯಲ್ಲಿ ಅತ್ತಿತ್ತ ಅಡ್ಡಾಡತೊಡಗಿದರು. ಯಾರನ್ನಾದರೂ ಜೊತೆಮಾಡಿ ಮನೆಗೆ ಕಳಿಸಿಕೊಡೋಣವೆಂದರೆ ಯಾರೂ ಇರಲಿಲ್ಲ. ಆ ಹೊತ್ತಿಗೆ ತರುಣ ಬಾಬುರಾಮ ಅಲ್ಲಿಗೆ ಬಂದ. ತಕ್ಷಣ ಶ್ರೀರಾಮಕೃಷ್ಣರು, ದೇವೇಂದ್ರನನ್ನು ದೋಣಿಯಲ್ಲಿ ಮನೆಗೆ ತಲುಪಿಸಿ ಬರುವಂತೆ ಅವನನ್ನು ತುಂಬ ವಿನಯದಿಂದ ಕೇಳಿಕೊಂಡು ಒಪ್ಪಿಸಿದರು. ಅವರು ಸುಮ್ಮನೆ ಒಂದು ಮಾತು ಹೇಳಿದ್ದರೂ ಸಾಕಾಗಿತ್ತು; ಬಾಬುರಾಮ ಅದನ್ನು ಅತ್ಯಂತ ಸಂತೋಷದಿಂದ ನಡೆಸುತ್ತಿದ್ದ. ಆದರೆ ಶ್ರೀರಾಮಕೃಷ್ಣರದು ಅಂಥಾ ವಿನಯ.

ಈಗ ಅವರು ಗಂಗೆಗೆ ಅಭಿಮುಖವಾಗಿರುವ ಪಶ್ಚಿಮ ದಿಕ್ಕಿನ ವರಾಂಡದಲ್ಲಿ ನಿಂತು, ಯಾವುದಾದರೊಂದು ದೋಣಿಯು ಬರವನ್ನೇ ನಿರೀಕ್ಷಿಸುತ್ತ ನದಿಯು ಕಡೆಗೆ ನೋಡತೊಡಗಿದರು. ಕಡೆಗೆ, ಭಾವಣಿಯಿರುವ ದೋಣಿಯೊಂದು ಬರುತ್ತಿರುವುದು ಕಂಡಿತು. ಬಾಬುರಾಮ ಓಡಿಹೋಗಿ ಅದರ ಅಂಬಿಗನನ್ನು ಕೂಗಿ ಕರೆದು ಪ್ರಯಾಣಕ್ಕೆ ಗೊತ್ತುಪಡಿಸಿದ. ದೇವೇಂದ್ರ ಶ್ರೀರಾಮಕೃಷ್ಣರಿಗೆ ಪ್ರಣಾಮ ಮಾಡಿ ಹೊರಟ. ಅವರು ಪ್ರೀತಿಪೂರ್ಣ ದನಿಯಲ್ಲಿ, "ಬೇಗ ಒಬ್ಬ ಒಳ್ಳೇ ಡಾಕ್ಟರನ್ನು ನೋಡು. ಗುಣವಾದ ಮೇಲೆ ಇನ್ನೊಮ್ಮೆ ಇಲ್ಲಿಗೆ ಬಾ. ಬರುತ್ತೀ ತಾನೆ ?" ಎನ್ನುತ್ತ ಅವನನ್ನು ಬೀಳ್ಕೊಂಡರು.

ಅಲ್ಲಿಂದ ಹೊರಡುತ್ತಿದ್ದಂತೆಯೇ ದೇವೇಂದ್ರ ನಿತ್ರಾಣನಾಗಿಬಿಟ್ಟ. ಹೇಗೋ ಮಾಡಿ ತನ್ನ ಸಂಬಂಧಿಕರೊಬ್ಬರ ಮನೆ ಸೇರಿದ. ಕಾಯಿಲೆ ಮರುಕಳಿಸಿತು. ಅದು ಆರು ವಾರಗಳ ಕಾಲ ಎಡೆಬಿಡದೆ ಸತಾಯಿಸಿತು. ಅರ್ಧಂಬರ್ಧ ಪ್ರಜ್ಞೆಯಲ್ಲಿ ಅವನು ಶ್ರೀರಾಮಕೃಷ್ಣರ ಹೆಸರನ್ನು ಕನವರಿಸುತ್ತಿದ್ದ. ತಾನು ದಕ್ಷಿಣೇಶ್ವರದಲ್ಲಿರುವಂತೆ ಅವನಿಗೆ ಅನ್ನಿಸುತ್ತಿತ್ತು. ಯಾವಾಗಲಾದರೂ ಅತಿಯಾದ ವೇದನೆಯಿಂದ ಕಣ್ತೆರೆದರೆ, ಶ್ರೀರಾಮಕೃಷ್ಣರು ತನ್ನ ಹಾಸಿಗೆಯ ಮೇಲೆ ಕುಳಿತಿರುವಂತೆ ಕಾಣುತ್ತಿದ್ದ.

ಅಂತೂ ಕಡೆಗೆ ಜ್ವರ ಬಿಟ್ಟಿತು. ಅವನಿಗೆ ಹೊಸ ಜೀವವೇ ಬಂದಂತಿತ್ತು. ಆದರೆ ಅದೇಕೋ ಅವನಿಗೆ, ದಕ್ಷಿಣೇಶ್ವರಕ್ಕೆ ಹೋಗಿ ಶ್ರೀರಾಮಕೃಷ್ಣರನ್ನು ನೋಡಲು ಮನಸ್ಸೇ ಬರಲಿಲ್ಲ. 'ಅವರನ್ನು ನೋಡಿದ ದಿನವೇ ಅಲ್ಲವೆ ನನಗೆ ಕಾಯಿಲೆ ಶುರುವಾದದ್ದು ?' ಎಂದು ಆಲೋಚಿಸಿದ. ಮತ್ತು ಕಾಯಿಲೆಯ ಅವಧಿಯಲ್ಲಿ ತನಗಾದ ಅನುಭವಗಳನ್ನೆಲ್ಲ ಚಿತ್ತವಿಭ್ರಮೆಯ ಪರಿಣಾಮವಷ್ಟೇ ಎಂದು ನಿರ್ಧರಿಸಿ ಮನಸ್ಸಿನಿಂದ ಕೊಡವಿಕೊಳ್ಳುವ ಪ್ರಯತ್ನ ಮಾಡಿದ.

ಹೀಗೆ ಕೆಲತಿಂಗಳು ಕಳೆದುವು. ದೇಹಕ್ಕಾದ ಆಘಾತದ ಪರಿಣಾಮವೋ ಏನೋ, ಭಗವತ್ಸಾಕ್ಷಾತ್ಕಾರ ಮಾಡಿಕೊಳ್ಳಬೇಕೆಂಬ ಆ ಹಿಂದಿನ ಹುಮ್ಮಸ್ಸು ಸ್ವಲ್ಪ ತಣ್ಣಗಾಗಿತ್ತು. ದಕ್ಷಿಣೇಶ್ವರಕ್ಕೆ ಹೋಗುವ ಆಲೋಚನೆ ಬಂದೊಡನೆ, ಕಾಯಿಲೆಯನ್ನು ನೆನಪಿಸಿಕೊಂಡು ಸುಮ್ಮನಾಗುತ್ತಿದ್ದ.

ಈಗ, ಒಂದು ಬದಲಾವಣೆಗಾಗಿ ಗಾಯತ್ರೀ ಜಪ ಮಾಡತೊಡಗಿದ. ಇದರಿಂದ ಅನಿರೀಕ್ಷಿತ ಫಲವುಂಟಾಯಿತು. ಅವನ ಭಗವದ್ವ್ಯಾಕುಲತೆಯೂ, ಗುರುವನ್ನು ಪಡೆದುಕೊಳ್ಳುವ ಹಂಬಲವೂ ಮತ್ತೆ ಭುಗಿಲೆದ್ದುವು. ಆದರೂ ಶ್ರೀರಾಮಕೃಷ್ಣರ ಬಳಿಗೆ

ಹೋಗುವ ಇಚ್ಛೆಯನ್ನು ತಡೆಹಿಡಿದುಕೊಂಡ.

ಒಂದು ದಿನ ಆಫೀಸಿನಿಂದ ಹಿಂದಿರುಗುತ್ತಿದ್ದವನು ದಾರಿಯಲ್ಲಿ ತನ್ನ ಸ್ನೇಹಿತನ ಮನೆಗೆ ಹೋದ. ಆತ ಮನೆಯಲ್ಲಿರಲಿಲ್ಲ. ಅವನಿಗಾಗಿ ಕಾಯುತ್ತ, ದೇವೇಂದ್ರ ಅಂದಿನ ಪತ್ರಿಕೆಯ ಮೇಲೆ ಕಣ್ಣಾಡಿಸುತ್ತ ಕುಳಿತ. ಅದರಲ್ಲಿ ಒಂದೆಡೆ "ಶ್ರೀರಾಮಕೃಷ್ಣ ಪರಮಹಂಸರು ಇಂದು ಸಂಜೆ ಬಾಗ್‌ಬಜಾರಿನಲ್ಲಿರುವ ಶ್ರೀಯುತ ಬಲರಾಮರ ಮನೆಯಲ್ಲಿ ಭಕ್ತರನ್ನು ಭೇಟಿಯಾಗಲಿದ್ದಾರೆ" ಎಂಬ ಸುದ್ದಿಯಿತ್ತು. ಸರಿ, ಅಷ್ಟೇ ಸಾಕಾಯಿತು. ಇನ್ನು ಅವನ ಮನಸ್ಸು ತಡೆಯಲಿಲ್ಲ. ಎಲ್ಲ ಸಂಕಲೆಗಳನ್ನೂ ಹರಿದುಕೊಂಡು ಅದು ಶ್ರೀರಾಮಕೃಷ್ಣರೆಡೆಗೆ ನುಗ್ಗಿತು. ಅವನು ಸೀದಾ ಬಾಗ್‌ಬಜಾರಿಗೆ ನಡೆದ. ಬಲರಾಮನ ಮನೆಯಲ್ಲಿ ಭಾರೀ ಸಂದಣಿ. ಶ್ರೀರಾಮಕೃಷ್ಣರು ಜನರೊಂದಿಗೆ ಸೇರಿ ಭಗವನ್ನಾಮ ಸಂಕೀರ್ತನೆ ಮಾಡುತ್ತ ಆನಂದನರ್ತನದಲ್ಲಿ ತೊಡಗಿದ್ದರು. ಎಲ್ಲೆಲ್ಲೂ ಉತ್ಸಾಹ! ಎಲ್ಲೆಲ್ಲೂ ಆನಂದ!! ಆ ದೃಶ್ಯ ದೇವೇಂದ್ರನ ಭಾವಗಳನ್ನು ಉಮ್ಮಳಿಸಿತು. ಆದರೆ ಶ್ರೀರಾಮಕೃಷ್ಣರ ಕಣ್ಣಿಗೆ ಕಾಣಿಸಿಕೊಳ್ಳುವ ಧೈರ್ಯವಿಲ್ಲದೆ ಅವನು ದೂರದಲ್ಲೇ ನಿಂತು ನೋಡುತ್ತಿದ್ದ. ಕಡೆಗೆ ಶ್ರೀರಾಮಕೃಷ್ಣರು ಸಮಾಧಿಸ್ಥಿತಿಗೇರಿ ನಿಶ್ಚಲರಾಗಿ ನಿಂತುಬಿಟ್ಟರು. ಆಗ ಎಲ್ಲರೂ ಅವರ ಪಾದಧೂಳಿ ಸ್ವೀಕರಿಸಲು ಮುನ್ನುಗ್ಗಿದರು. ಇದೇ ತಕ್ಕ ಸಮಯ ಎಂದುಕೊಂಡು ದೇವೇಂದ್ರ ತಾನೂ ನುಗ್ಗಿದ. ಇನ್ನೇನು ಅವನು ಪ್ರಣಾಮ ಸಲ್ಲಿಸಿ ಮೇಲೇಳಬೇಕು, ಬೆನ್ನ ಮೇಲೆ ಮೃದು ಕರಸ್ಪರ್ಶ! ಶ್ರೀರಾಮಕೃಷ್ಣರು ಪ್ರಕೃತಿಸ್ಥರಾಗಿ ಮಧುರಧ್ವನಿಯಲ್ಲಿ ಮಾತನಾಡಿದರು:

"ಏನಪ್ಪಾ, ಹೇಗಿದ್ದೀ? ಯಾಕಿಷ್ಟು ದಿನ ಬರಲೇ ಇಲ್ಲ? ನಾನು ಎಷ್ಟೋ ಸಲ ನಿನ್ನ ಬಗ್ಗೆಯೇ ಚಿಂತಿಸುತ್ತಿರುತ್ತೇನೆ. ಈಗ ನೀನು ಆರೋಗ್ಯದಿಂದಿರುವೆ ತಾನೆ?"

ದೇವೇಂದ್ರ ನಾಚಿ ತಡವರಿಸುತ್ತ ನುಡಿದ: "ಸ್ವಾಮಿ ನಾನು. . . ಬಹಳ ದಿನ ಕಾಯಿಲೆ ಮಲಗಿಬಿಟ್ಟಿದ್ದೆ."

"ಹೋಗಲಿ, ಇನ್ನಾದರೂ ಬಾ. ಬರುತ್ತೀ ತಾನೆ?"

ದೇವೇಂದ್ರನ ಹೃದಯ ಕರಗಿಹೋಯಿತು. "ಬರುತ್ತೇನೆ, ಖಂಡಿತವಾಗಿಯೂ."

ಆಗಿನಿಂದ ಅವನು ಮತ್ತೆ ಶ್ರೀರಾಮಕೃಷ್ಣರ ಆಶ್ರಯಕ್ಕೆ ಬಂದ. ಅಲ್ಲಿಂದಾಚೆಗೆ ಅವನು ದಕ್ಷಿಣೇಶ್ವರಕ್ಕೆ ಹೋಗುವ ಒಂದು ಅವಕಾಶವನ್ನೂ ಬಿಡುತ್ತಿರಲಿಲ್ಲ. ಶ್ರೀರಾಮಕೃಷ್ಣರು ಕೇವಲ ಒಬ್ಬ ಸಾಮಾನ್ಯ ಸಾಧುವೋ ಸಂತನೋ ಅಲ್ಲ, ತಮ್ಮ ಒಂದು ದೃಷ್ಟಿಪಾತದಿಂದಲೇ ಜೀವರನ್ನು ಉದ್ಧರಿಸಬಲ್ಲ ಮಹಾತ್ಮರು ಅವರು ಎಂಬ ವಿಶ್ವಾಸ ಕ್ರಮೇಣ ಅವನಲ್ಲಿ ಮೂಡಿತು.

ಒಮ್ಮೆ ಅವನು ತನಗೆ ಮಂತ್ರೋಪದೇಶ ನೀಡುವಂತೆ ಶ್ರೀರಾಮಕೃಷ್ಣರನ್ನು ಕೇಳಿಕೊಂಡ. ಆದರೆ ಅವರು ಆ ಕೋರಿಕೆಯನ್ನು ನಯವಾಗಿಯೇ ನಿರಾಕರಿಸಿದರು. ದೇವೇಂದ್ರನಿಗೆ ಕಾರಣ ತಿಳಿಯಲಿಲ್ಲ; ತುಂಬ ನಿರಾಶೆಯಾಯಿತು. ಆದರೂ ಆ ಇಚ್ಛೆ ಅವನ ಮನಸ್ಸಿನಲ್ಲಿ ಹಾಗೆಯೇ ಇತ್ತು. ಇದನ್ನು ಕಂಡುಕೊಂಡು ಒಂದು ದಿನ ಶ್ರೀರಾಮಕೃಷ್ಣರು ಅವನಿಗೆಂದರು: "ನೋಡು, ನೀನು ಯಾವುದೇ ವಿಶೇಷ ಸಾಧನೆಯನ್ನೂ ಮಾಡಬೇಕಾಗಿಲ್ಲ. ಸುಮ್ಮನೆ ಕರತಾಲ ತಟ್ಟುತ್ತ ಹರಿನಾಮವನ್ನು ಹೇಳಿಕೊಂಡಿರು. ನಿನಗೆ ಅಷ್ಟೇ ಸಾಕಾಗುತ್ತದೆ." ಆ ಸರಳ ಸೂಚನೆಯ ಪ್ರಕಾರ ನಡೆದುಕೊಂಡಂತೆ ದೇವೇಂದ್ರ ಅಪಾರ ಮನಶ್ಶಾಂತಿಯನ್ನು ಅನುಭವಿಸಿದ. ಕ್ರಮೇಣ ಅವನಿಗೆ ಶ್ರೀರಾಮಕೃಷ್ಣರಲ್ಲಿ

ಭಕ್ತಿ, ಶ್ರದ್ಧೆ ಮತ್ತೂ ಹೆಚ್ಚಾಯಿತು.

ಒಂದು ದಿನ ಶ್ರೀರಾಮಕೃಷ್ಣರು—ತಮ್ಮೆಲ್ಲ ಭಕ್ತರನ್ನೂ ಒಂದಲ್ಲ ಒಂದು ಸಲ ಕೇಳುತ್ತಿದ್ದಂತೆ—ದೇವೇಂದ್ರನನ್ನು ಕೇಳಿದರು:

"ಏನಪ್ಪ, ನೀನಿಲ್ಲಿಗೆ ಇಷ್ಟೊಂದು ಬಂದುಹೋಗುತ್ತಿದ್ದೀಯೆ. ನಿನಗೆ ಇದರ (ತಮ್ಮ) ಬಗ್ಗೆ ಏನೆನ್ನಿಸುತ್ತದೆ? ನೀನು ಏನು ಕಂಡುಕೊಂಡಿದ್ದೀಯೆ?"

ಅವನು ತನ್ನ ಅನಿಸಿಕೆಯನ್ನು ಪ್ರಾಮಾಣಿಕವಾಗಿ ಮುಂದಿಟ್ಟ:

"ತುಂಬಾ ಅದ್ಭುತವಾದದ್ದೇನನ್ನೂ ನಾನು ಕಂಡುಕೊಂಡಿಲ್ಲ. ಆದರೆ ಒಂದು ವಿಷಯ: ಹಿಂದೆ ನಾನು ಭಗವತ್ಸಾಕ್ಷಾತ್ಕಾರಕ್ಕಾಗಿ ಎಲ್ಲೆಲ್ಲೋ ಅಲೆದಾಡುತ್ತಿದ್ದೆ; ಈಗ ಹಾಗೆ ಅಲೆದಾಡುವ ಬಯಕೆ ನನಗಿಲ್ಲ. ಅಲ್ಲದೆ ಹಿಂದಿನ ನನ್ನ ಚಿತ್ತಕ್ಷೋಭೆಯಿಂದಲೂ ನಾನು ಮುಕ್ತನಾಗಿದ್ದೇನೆ."

ಶ್ರೀರಾಮಕೃಷ್ಣರು: "ಒಳ್ಳೆಯದು, ನೀನು ಸಾಕಷ್ಟು ಪ್ರಯತ್ನಪೂರ್ವಕವಾಗಿ ಸಾಧನೆ ಮಾಡಿದ್ದೀಯೆ, ಸಂಶಯವಿಲ್ಲ. (ಅವನ ಎರಡೂ ಅಂಗೈಗಳನ್ನು ತಮ್ಮ ಕೈಯಲ್ಲಿ ಒತ್ತಿ ಹಿಡಿದು) ಆದರೆ ನಿನ್ನ ಕತ್ತಿಯನ್ನಿನ್ನೂ ಸರಿಯಾದ ಒರೆಯೊಳಕ್ಕೆ ಸೇರಿಸಿಲ್ಲ. ಪ್ರತಿಯೊಬ್ಬನಿಗೂ ಅವನವನದೇ ಆದ ವೈಶಿಷ್ಟ್ಯಗಳಿರುತ್ತವೆ, ಅಲ್ಲವೆ? ಆದ್ದರಿಂದ ಎಲ್ಲರೂ ತಮತಮಗೆ ಹೇಳಿಸಿದ ಮಾರ್ಗದಲ್ಲಿ ಮುಂದುವರಿದು ಗುರಿಮುಟ್ಟಬೇಕು."

ಇನ್ನೊಂದು ದಿನ ಅವನು ಶ್ರೀರಾಮಕೃಷ್ಣರಿಗೆ ಸಾಷ್ಟಾಂಗ ಪ್ರಣಾಮ ಮಾಡಿ, "ನನಗೆ ಸಂನ್ಯಾಸದೀಕ್ಷೆ ಕೊಡಿ" ಎಂದು ಅಂಗಲಾಚಿದ. ಶ್ರೀರಾಮಕೃಷ್ಣರು ಅದಕ್ಕುತ್ತರವಾಗಿ ಒಂದು ಹಾಡನ್ನು ಹಾಡತೊಡಗಿದರು. ಶ್ರೀಚೈತನ್ಯನು ಪರಿವ್ರಾಜಕನಾಗಿ ಹೋಗಲು ಅಣಿಯಾದಾಗ ಅವನ ತಾಯಿ ಶಚೀದೇವಿ ಹೇಳುವ ಹಾಡು ಅದು:

"ಓ ಗೌರಾಂಗ, ನೀನೇಕೆ ಬೈರಾಗಿಯಾಗಿ ನದಿಯಾಕ್ಕೆ ಹೋಗಬೇಕು? ಓಹ್! ನಿನ್ನ ಸತಿ ವಿಷ್ಣುಪ್ರಿಯೆಯ ಗತಿ ಏನಾದೀತು? ಸಂನ್ಯಾಸಿಯಾಗಿ ಹೋದ ನಿನ್ನ ಅಣ್ಣ ವಿಶ್ವರೂಪನ ವಿಯೋಗದುಃಖವೇ ನನ್ನನ್ನಿನ್ನೂ ಕಾಡುತ್ತಿದೆ. ಈಗ ನೀನೂ ನಿನ್ನೀ ಹತಭಾಗ್ಯ ತಾಯಿಯನ್ನು ನೋಯಿಸಲು ಬಯಸುವೆಯಾ?"

ಕೆಲವರ್ಷಗಳ ಹಿಂದಷ್ಟೇ ದೇವೇಂದ್ರನ ಅಣ್ಣ ಸುರೇಂದ್ರನಾಥ ತೀರಿಹೋಗಿದ್ದ. ಅವನ ತಾಯಿ ಆ ದುಃಖವನ್ನಿನ್ನೂ ಮರೆತಿರಲಾರಳು ಎಂದೂಹಿಸಿ ಶ್ರೀರಾಮಕೃಷ್ಣರು ಈ ಹಾಡನ್ನು ಹೇಳಿದ್ದರು. ಅಲ್ಲದೆ ದೇವೇಂದ್ರ ತನ್ನ ಪತ್ನಿಯನ್ನು ನೋಡಿಕೊಳ್ಳಬೇಕಾದ ಅಗತ್ಯವಿತ್ತು. ಇದನ್ನೆಲ್ಲ ಮನಗಂಡು ಅವನು ಸುಮ್ಮನಾದ. ಸಂನ್ಯಾಸಮಾರ್ಗ ತನಗೆ ಹೇಳಿಸಿದ್ದಲ್ಲ ಎಂದು ಅವನು ಕ್ರಮೇಣ ಅರ್ಥಮಾಡಿಕೊಂಡ. ಮತ್ತೊಂದು ಸಂದರ್ಭದಲ್ಲಿ, ಅವನದು ಸಖ್ಯಭಾವ—ಗೋಪಿಕಾಸ್ತ್ರೀಯರು ಶ್ರೀಕೃಷ್ಣನ ಮೇಲಿಟ್ಟಂತಹ ಭಾವ—ಎಂದು ಶ್ರೀರಾಮಕೃಷ್ಣರೇ ತಿಳಿಸಿಕೊಟ್ಟರು. ಆಗ ಅವನಿಗೆ ಇದ್ದಕ್ಕಿದ್ದಂತೆ ಆ ಮಾತಿನ ಸತ್ಯತೆ ಅರಿವಾಯಿತು. ತನ್ನ ನಿಜಸ್ವಭಾವವನ್ನು ಕಂಡುಕೊಂಡ ಮೇಲೆ ಅವನಿಗೆ ಅದಕ್ಕನುಗುಣವಾಗಿ ಮುಂದುವರಿಯಲು ಹೆಚ್ಚು ಕಷ್ಟವಾಗಲಿಲ್ಲ.*

---

*ಮುಂದೆ ಅವನು ಶ್ರೀರಾಮಕೃಷ್ಣರ ಸಂದೇಶಪ್ರಸಾರಕಾರ್ಯದಲ್ಲಿ ಒಂದು ಮಹತ್ವದ ಪಾತ್ರವಹಿಸಿದ. ಕಲ್ಕತ್ತದ ಎಂಟ್ಯಾಲಿ ಎಂಬಲ್ಲಿ ಶ್ರೀರಾಮಕೃಷ್ಣ ಮಂದಿರವೊಂದನ್ನು ಕಟ್ಟಿಸಿದ. ಅನೇಕ ಹಾಡುಗಳನ್ನೂ 'ಗುರುಸ್ತವಾಷ್ಟಕ' ಎಂಬ ಪ್ರಸಿದ್ಧ ಸ್ತೋತ್ರವನ್ನೂ ರಚಿಸಿದ.

# ಮತ್ತೇಕೆ ಮದ್ಯದ ಮತ್ತು? ೪

ಶ್ರೀಚೈತನ್ಯ ಮಹಾಪ್ರಭುವಿನ ಚರಿತ್ರೆಯಲ್ಲಿ ಜಗಾಯಿ ಮತ್ತು ಮಾಧಾಯಿ ಎಂಬಿಬ್ಬರು ತಂಟೆಕೋರ ದುಷ್ಟರ ಪ್ರಸ್ತಾಪ ಬರುತ್ತದೆ. ಶ್ರೀಚೈತನ್ಯನು ಇವರ ಮೇಲೂ ತನ್ನ ಅಹೈತುಕ ಕರುಣೆಯನ್ನು ಹರಿಸಿ ಉದ್ಧರಿಸುತ್ತಾನೆ. ಈಗ ಶ್ರೀರಾಮಕೃಷ್ಣಲೀಲೆ ಯಲ್ಲಿ, ಈ ಎರಡು ಪಾತ್ರಗಳ ಪೈಕಿ ಒಂದು ಗಿರೀಶನಾದರೆ—ಹೀಗೆಂದು ಅವನೂ ಹೇಳಿಕೊಳ್ಳುತ್ತಿದ್ದ, ಜನರೂ ಹೇಳುತ್ತಿದ್ದರು—ಮತ್ತೊಬ್ಬ ಪಾತ್ರಧಾರಿ ಆತನ ಗೆಳೆಯ ಕಾಳೀಪದ ಘೋಷ್.

ಕಾಳೀಪದ ಹುಟ್ಟಿದ್ದು ಕೆಳ ಮಧ್ಯಮವರ್ಗದ ಕುಟುಂಬವೊಂದರಲ್ಲಿ. ತಂದೆ ತಾಯಿಗಳು ಸಾಮಾನ್ಯರಾದರೂ ಸದಾಚಾರವಂತರು. ಅದರಲ್ಲೂ ತಾಯಿ ಭಕ್ತಿಮತಿ, ಉದಾರಚರಿತೆ, ಕರುಣಾಳು. ಮಗನ ಎಳೆಯ ಮನಸ್ಸಿನ ಮೇಲೆ ತಾಯಿ ಬಹಳಷ್ಟು ಪ್ರಭಾವ ಬೀರಿದಳು. ಆದರೆ ಕಾಳೀಪದ ವಿಪರೀತ ಚಟುವಟಿಕೆಯ ಬಾಲಕ. ಅವನ ಆಸಕ್ತಿಗಳು ವೈವಿಧ್ಯಮಯ. ಹಾಡುಗಾರಿಕೆ, ಗೀತಾರಚನೆ, ನಾಟಕಕಲೆ, ಅಡುಗೆ—ಎಲ್ಲದ ರಲ್ಲೂ ಜಾಣ. ಚಪಲತೆ ಚುರುಕುತನಗಳೊಂದಿಗೆ ಅವನ ಸ್ವಭಾವದ ಮತ್ತೊಂದು ಅತಿ ಮುಖ್ಯ ಅಂಶವೆಂದರೆ ಹಟಮಾರಿತನ.

ಮನೆಯ ಬಡತನದಿಂದಾಗಿ ಕಾಳೀಪದನಿಗೆ ಎಂಟನೇ ತರಗತಿಯ ಮೇಲೆ ಓದಲು ಸಾಧ್ಯವಾಗಲಿಲ್ಲ. ಆದ್ದರಿಂದ ಆಂಗ್ಲ ಸಂಸ್ಥೆಯೊಂದರಲ್ಲಿ ಅಂಗಡಿಯ ಕೆಲಸ ಗಾರನಾಗಿ ಸೇರಿಕೊಂಡ. ಇನ್ನು ಅವನ ಜೀವನ ಅಷ್ಟಕ್ಕೇ ಸೀಮಿತವಾಯಿತೋ ಎಂಬಂತಿತ್ತು. ಆದರೆ ಆತ ಸಾಮಾನ್ಯನಲ್ಲ. ಅದಮ್ಯ ಚೈತನ್ಯ ಅವನದು. ತನ್ನ ಕಾರ್ಯ ಶ್ರದ್ಧೆ, ಉತ್ಸಾಹಗಳಿಂದ ಅವನು ಮೇಲಧಿಕಾರಿಗಳ ಮೆಚ್ಚುಗೆ ಗಳಿಸಿದ. ಎಡೆಬಿಡದ ಪ್ರಯತ್ನದಿಂದಲೂ ಬುದ್ಧಿವಂತಿಕೆಯಿಂದಲೂ ಬೇಗಬೇಗ ಮೇಲೇರಿದ. ಯಥೇಚ್ಛವಾಗಿ ಹಣ ಸಂಪಾದಿಸಿ ಎರಡಂತಸ್ತಿನ ಮನೆ ಕಟ್ಟಿಸಿಕೊಂಡ. ಕ್ರಮೇಣ ಅವನು ಯಾವ ಹಂತವನ್ನು ಮುಟ್ಟಿದನೆಂದರೆ, ಅವನ ಕಂಪೆನಿ ತಾನು ತಯಾರಿಸುತ್ತಿದ್ದ ಕಾಗದದ ಮೇಲೆ ಜಲಚಿಹ್ನೆ*ಯಲ್ಲಿ ಆತನ ಮುಖಚಿತ್ರವನ್ನು ಮುದ್ರಿಸತೊಡಗಿತು!

ಕಾಳೀಪದನು ಬೇಕೆಂಬಷ್ಟು ಹಣ-ಪ್ರತಿಷ್ಠೆಗಳನ್ನೇನೋ ಗಳಿಸಿದ. ಆದರೆ ಇತ್ತ ಅವನ ವೈಯಕ್ತಿಕ ಜೀವನ ಮಾತ್ರ ಕುಲಗೆಡುತ್ತ ಬಂತು. ಕುಡಿತ, ಸ್ತ್ರೀಲಂಪಟತನ ಮುಂತಾದ ವ್ಯಸನಗಳು ಪಿಶಾಚದಂತೆ ಅಂಟಿಕೊಂಡುವು. ಎಷ್ಟಾದರೂ ಧನಿಕ, ದುಂದುಗಾರ. ಸರಿ, ಅವನಿಗೆ ತಕ್ಕ ಜೊತೆಗಾರರೂ ಒದಗಿಬಂದರು. ಸಂಪಾದನೆಯ ಅರ್ಧಭಾಗ ಗಡಂಗಿನಲ್ಲೇ ಸೋರಿಹೋಗಲಾರಂಭವಾಯಿತು. ಪರಸ್ತ್ರೀ-ಸುರೆ ಇವುಗಳ ಮರೆಹೊಕ್ಕವನಿಗೆ ಮನೆಯ ಗೊಡವೆಯುಂಟೆ? ಮನೆಮಂದಿಯ ಚಿಂತೆಯುಂಟೆ? ಕಾಳೀಪದನ ಸಂಸಾರ ಯಾವಾಗಲೋ ಹಾಳುಬಿದ್ದುಹೋಗಬೇಕಿತ್ತು. ಆದರೆ ಹೆಂಡತಿ

---

*ಜಲಚಿಹ್ನೆ = Water Mark. ರುಪಾಯಿ ನೋಟುಗಳ ಮೇಲಿರುವಂತಹ ಅರೆಪಾರದರ್ಶಕ ಗುರುತು.

ಕೃಷ್ಣಪ್ರಿಯಾಂಗಿನಿ ಧೃತಿಗೆಡಲಿಲ್ಲ. ಅವಳು ನಾನಾ ಉಪಾಯಗಳಿಂದ ಗಂಡನನ್ನು ಸರಿ ದಾರಿಗೆ ತರುವ ಯತ್ನ ಮಾಡಿದಳು; ಕಂಡಕಂಡ ದೇವರುಗಳಿಗೆಲ್ಲ ಹರಕೆ ಹೊತ್ತಳು. ಪೂಜೆ ಪುರಸ್ಕಾರ ವ್ರತಗಳನ್ನಾಚರಿಸಿದಳು. ಆದರೂ ಕಾಳೀಪದನ ನಡವಳಿಕೆ ಬದ ಲಾಗಲೇ ಇಲ್ಲ.

ಈ ದಿನಗಳಲ್ಲೇ ಅವಳೊಮ್ಮೆ ದಕ್ಷಿಣೇಶ್ವರದ ಕಾಳೀ ದೇವಾಲಯಕ್ಕೂ ಬಂದು ದೇವಿಗೆ ಪೂಜೆ-ಅರ್ಚನೆ ಮಾಡಿಸಿದಳು. ಅಲ್ಲೇ ಸಾಧುಗಳೊಬ್ಬರು ಇದ್ದಾರೆಂದು ತಿಳಿ ಯಿತು. ಶ್ರೀರಾಮಕೃಷ್ಣರನ್ನು ಕಂಡು ಅವರ ಮುಂದೆ ತನ್ನ ಗೋಳಿನ ಕಥೆಯನ್ನು ಹೇಳಿ ಕೊಂಡು, ತನ್ನ ಕಷ್ಟಗಳೆಲ್ಲ ಪರಿಹಾರವಾಗುವಂತೆ ಏನಾದರೊಂದು ತಾಯಿತವನ್ನು ಕೊಡುವಂತೆ ಯಾಚಿಸಿದಳು. ಶ್ರೀರಾಮಕೃಷ್ಣರು ಅವಳನ್ನು ತುಂಬ ಸಹಾನುಭೂತಿ ಯಿಂದ ಮಾತನಾಡಿಸಿದರಾದರೂ, ಅಂತಹ ತಾಯಿತವನ್ನೇನೂ ಕೊಡಲೊಪ್ಪಲಿಲ್ಲ. ಬದಲಾಗಿ, ಸ್ವಲ್ಪ ತಮಾಷೆ ಮಾಡಲೆಂದೋ ಅಥವಾ ಬೇರಾವ ಉದ್ದೇಶದಿಂದಲೋ ಹೀಗೆ ಹೇಳಿದರು:

"ನೋಡಮ್ಮ, ಅಗೊ ಆ ಕಡೆ ನಹಬತ್‌ಖಾನೆ ಇದೆಯಲ್ಲ, ಅದರಲ್ಲಿ ಒಬ್ಬಾಕೆ ವಾಸವಾಗಿದ್ದಾಳೆ. ಅವಳಿಗೆ ಈ ಬಗೆಯ ಮಾಯಾಮಂತ್ರಗಳೆಲ್ಲ ಬಹಳ ಚೆನ್ನಾಗಿ ಗೊತ್ತು. ಈ ವಿಷಯದಲ್ಲಿ ಆಕೆ ನನಗಿಂತ ಗಟ್ಟಿಗಿತ್ತಿ. ಅವಳನ್ನು ಹೋಗಿ ಕೇಳು; ಏನಾ ದರೂ ಮಾಡುತ್ತಾಳೆ."

ಕೃಷ್ಣಪ್ರಿಯಾಂಗಿನಿ ಈ ಮಾತನ್ನು ನಂಬಿಕೊಂಡು, ಹೋಗಿ ಶ್ರೀಶಾರದಾದೇವಿ ಯವರನ್ನು ಕಂಡಳು. ಅವರು ಅತ್ಯಂತ ಕರುಣೆಯಿಂದ ಅವಳ ವೃತ್ತಾಂತವನ್ನು ಕೇಳಿ ದರು. ಶ್ರೀರಾಮಕೃಷ್ಣರು ಅವಳನ್ನು ಬಹುಶಃ ತಮಾಷೆಗಾಗಿ ತಮ್ಮ ಬಳಿಗೆ ಕಳಿಸಿರ ಬೇಕೆಂದು ಊಹಿಸಿ, "ಅಮ್ಮಾ, ನನಗೆ ಮಂತ್ರ ತಂತ್ರಗಳ ವಿಷಯ ಏನೇನೂ ತಿಳಿ ಯದು. ನೀನು ಹೋಗಿ ಅವರನ್ನೇ ಕೇಳಿಕೊ" ಎಂದು ಹೇಳಿಕಳಿಸಿದರು. ಈ ಸಲವೂ ಶ್ರೀರಾಮಕೃಷ್ಣರು "ಇಲ್ಲ ಇಲ್ಲ, ಅವಳಿಗೆಲ್ಲ ಗೊತ್ತಿದೆ. ನೀನು ಹೋಗಿ ಅವಳನ್ನೇ ಹಿಡಿಮುಕೊ!" ಎಂದು ಹೇಳಿ ವಾಪಸು ಕಳಿಸಿದರು. ಶಾರದಾದೇವಿಯವರು, "ಇಲ್ಲಮ್ಮಾ ನನಗೇನೂ ಗೊತ್ತಿಲ್ಲ" ಎಂದು ಮತ್ತೆ ಹಿಂದೆ ಕಳಿಸಿದರು! ಹೀಗೆ ಅತ್ತಿಂದಿತ್ತ ಸುತ್ತಾಡಿ ಆ ಬಡಪಾಯಿ ಹೆಂಗಸಿಗೆ ಏನು ಮಾಡಬೇಕೆಂದೇ ತಿಳಿಯ ದಾಯಿತು. ಅವಳ ಅವಸ್ಥೆಯನ್ನು ಕಂಡು ಶಾರದಾದೇವಿಯವರ ಹೃದಯ ಕರಗಿತು. ಅವಳು ಮೂರನೆಯ ಸಲ ಬಂದಾಗ ಅವರು, "ಆಗಲಿ, ಕೊಡುತ್ತೇನೆ, ಕುಳಿತು ಕೊಳ್ಳಮ್ಮಾ" ಎಂದು ಹೇಳಿ ಸಂತೈಸಿದರು; ಬಳಿಕ, ಪೂಜೆಗೆ ಉಪಯೋಗಿಸಿದ್ದ ಬಿಲ್ವ ಪತ್ರೆಯೊಂದರ ಮೇಲೆ ಶ್ರೀರಾಮಕೃಷ್ಣರ ಹೆಸರನ್ನು ಬರೆದುಕೊಟ್ಟು "ಇಕೊ, ನೀನು ಕೇಳಿದ ತಾಯಿತ. ಇದನ್ನಿಟ್ಟುಕೊ, ಮತ್ತು ಸುಮ್ಮನೆ ಭಗವನ್ನಾಮವನ್ನು ಜಪಿಸುತ್ತಾ ಇರು. ಎಲ್ಲವೂ ಸರಿಹೋಗುತ್ತದೆ" ಎಂದು ಹೇಳಿ ಧೈರ್ಯದುಂಬಿದರು. ಬಳಿಕ ಶ್ರೀರಾಮಕೃಷ್ಣರು ಕೂಡ, "ನಿನ್ನ ಗಂಡ ಇಲ್ಲಿಗೆ ಸೇರಿದವನೇ. ಏನೂ ಯೋಚಿಸಬೇಡ. ಅವನಿಲ್ಲಿಗೆ ಬಂದೇ ಬರುತ್ತಾನೆ" ಎಂದು ಆಕೆಗೆ ಸಮಾಧಾನ ಹೇಳಿ ಕಳಿಸಿಕೊಟ್ಟರು.

ಅಂದಿನಿಂದ ಕೃಷ್ಣಪ್ರಿಯಾಂಗಿನಿ ಹೆಚ್ಚಿನ ಶ್ರದ್ಧೆಯಿಂದ ಭಗವನ್ನಾಮ ಜಪ ಮಾಡುತ್ತ ಕಾಲ ತಳ್ಳತೊಡಗಿದಳು. ವರ್ಷಗಳು ಉರುಳಿದುವು. ಕಾಳೀಪದನ ವರ್ತನೆ ಯಲ್ಲಿ ಬಹಳ ಸಮಯದವರೆಗೆ ಅಂಥಾ ಸುಧಾರಣೆಯೇನೂ ಕಾಣಲಿಲ್ಲ. ಆದರೆ

ಅವನಿಗೆ ತನ್ನ ಹೀನಸ್ಥಿತಿಯು ಅರಿವಿರಲಿಲ್ಲವೆಂದಲ್ಲ. ಅಪರಾಧೀ ಪ್ರಜ್ಞೆ ಒಳಗೊಳಗೇ ಕೊರೆಯುತ್ತಿತ್ತು. ದುರಭ್ಯಾಸಗಳ ಸಂಕೋಲೆಗಳಿಂದ ಬಿಡಿಸಿಕೊಳ್ಳುವ ಉಪಾಯ ಗಾಣದೆ ಕೊರಗುತ್ತಿದ್ದ. ಆಗಾಗ ಪಾಪಭೀತಿ ಕಾಡುತ್ತಿತ್ತು. ಕ್ರಮೇಣ ಹೆಂಡತಿಯ ಬುದ್ಧಿವಾದ ಅಲ್ಪಸ್ವಲ್ಪ ಪರಿಣಾಮವನ್ನುಂಟುಮಾಡಲಾರಂಭಿಸಿತು. ಘಾಸಿಗೊಂಡ ತನ್ನ ಅಂತರ್ಯವನ್ನು ಸಾಂತ್ವನಗೊಳಿಸುವ ಪ್ರಯತ್ನದಲ್ಲಿ, ಕಾಳೀಪದ ಆಗಾಗ ಧಾರ್ಮಿಕ ಉತ್ಸವಗಳಲ್ಲೂ ಸಂಕೀರ್ತನೆಗಳಲ್ಲೂ ಭಾಗವಹಿಸತೊಡಗಿದ. ಇಷ್ಟೆಲ್ಲ ಆದರೂ ಅವನ ದುರ್ವ್ಯಸನಗಳು ಮಾತ್ರ ಅವನಿಂದ ದೂರವಾಗುವ ಸೂಚನೆಗಳು ಕಾಣಲಿಲ್ಲ.

ಈ ವೇಳೆಗಾಗಲೇ ಕಾಳೀಪದನಿಗೆ ಗಿರೀಶಚಂದ್ರ ಘೋಷನೊಂದಿಗೆ ನಿಕಟ ಸ್ನೇಹ ಬೆಳೆದಿತ್ತು. ಇಬ್ಬರ ಸ್ವಭಾವ-ಹವ್ಯಾಸಗಳಲ್ಲೂ ಅಷ್ಟೊಂದು ಸಾಮ್ಯವಿದ್ದದ್ದು ಅದಕ್ಕೊಂದು ಕಾರಣ. ಇಬ್ಬರೂ ಶ್ರೇಷ್ಠ ಕಲಾವಿದರು, ಬುದ್ಧಿವಂತರು, ರಸಿಕರು, ಭಾವುಕರು; ಮತ್ತು ಇಬ್ಬರೂ ಸುಖಲೋಲುಪರು, ಲಂಪಟರು! ಇವರಲ್ಲಿ ಗಿರೀಶ ಅಣ್ಣನಂತೆ; ಆತ ಕಾಳೀಪದನ ಶ್ರೇಯೋಕಾಂಕ್ಷಿ. ಹಾಗೆಯೇ ಗಿರೀಶನನ್ನು ಕಾಳೀಪದ ಅಣ್ಣನೆಂಬಂತೆ ಗೌರವಾದರಗಳಿಂದ ಕಾಣುತ್ತಿದ್ದ.

ಈ ನಡುವೆ ಶ್ರೀರಾಮಕೃಷ್ಣರ ಸಂಪರ್ಕಕ್ಕೆ ಬಂದು ಅವರ ಸಂಮೋಹಿನಿಗೊಳಗಾದ ಗಿರೀಶ ತಾನು ಕಂಡ ಅದ್ಭುತವನ್ನು ತನ್ನ ಗೆಳೆಯನಿಗೂ ಬಣ್ಣಿಸಿದ. ಕಾಳೀಪದನೇನೂ ಆ ಬಣ್ಣನೆಯನ್ನು ಕೇಳಿ ಬೆರಗಾಗಲಿಲ್ಲ. ಆದರೂ ಒಮ್ಮೆ ನೋಡಿ ಬರುವುದರಲ್ಲಿ ನಷ್ಟವೇನೂ ಇಲ್ಲವಲ್ಲ ಎಂದುಕೊಂಡು ಒಂದು ದಿನ ದಕ್ಷಿಣೇಶ್ವರದತ್ತ ಹೊರಟ.

ಕಾಳೀಪದ ಚೆನ್ನಾಗಿ ಮೈತುಂಬಿಕೊಂಡ ಎತ್ತರದ ಆಳು, ಹಸನ್ಮುಖಿ. ವಿಶಾಲವಾದ ಕಣ್ಣುಗಳು ಆತ್ಮವಿಶ್ವಾಸವನ್ನು ಸೂಸುತ್ತಿದ್ದುವು. ದಕ್ಷಿಣೇಶ್ವರದ ಕಾಳೀ ಮಂದಿರಕ್ಕೆ ಬಂದು, ಭಕ್ತರೊಡನಿದ್ದ ಶ್ರೀರಾಮಕೃಷ್ಣರನ್ನು ಕಂಡ. ಅವರಲ್ಲೇನೋ ಒಂದು ಅನಿರ್ವಚನೀಯವಾದ ವಿಶಿಷ್ಟ ಆಕರ್ಷಣೆಯನ್ನು ಗುರುತಿಸಿ, ಬೆರಗಾಗಿ ಅವರನ್ನೇ ದಿಟ್ಟಿಸಿದ. ಶ್ರೀರಾಮಕೃಷ್ಣರು ಆಗ ಭಾವಾವಸ್ಥೆಯಲ್ಲಿದ್ದರು; ಭಗವದಾನಂದದಿಂದ ಮತ್ತರಾಗಿ ಸ್ವಲ್ಪ ತೂರಾಡುತ್ತಿದ್ದರು. ಅವರ ಅರೆಬಿರಿದ ನಯನಗಳು ಆನಂದೋನ್ಮತ್ತತೆಯನ್ನು ಸಾರಿಹೇಳುತ್ತಿದ್ದುವು. ಪಾನಪ್ರಿಯ ಕಾಳೀಪದನಿಗೆ ತಕ್ಷಣ ತಿಳಿದುಹೋಯಿತು — ಇವರು ಪಾನ ಮಾಡಿರುವುದು ಶ್ರೇಷ್ಠ ದರ್ಜೆಯ ಮದ್ಯವನ್ನೇ ಸರಿ ಎಂದು.

ಶ್ರೀರಾಮಕೃಷ್ಣರು ದಿವ್ಯ ಭಾವದಿಂದ ಅವನನ್ನು ನೋಡುತ್ತಿದ್ದಂತೆಯೇ ಅವನಾರೆಂದು ಗುರುತಿಸಿದರು. ಬಳಿಯಿದ್ದವರನ್ನು ಉದ್ದೇಶಿಸಿ ಅವರೆಂದರು: "ಈ ಮನುಷ್ಯ ತನ್ನ ಹೆಂಡತಿಯನ್ನು ಹನ್ನೆರಡು ವರ್ಷ ಗೋಳುಹೊಯ್ದುಕೊಂಡು ಈಗ ಇಲ್ಲಿಗೆ ಬಂದಿದ್ದಾನೆ."

ಅದನ್ನು ಕೇಳಿ ಕಾಳೀಪದ ದಂಗಾಗಿಹೋದ. ಆದರೆ ಏನೂ ಮಾತಾಡಲಿಲ್ಲ.

ಶ್ರೀರಾಮಕೃಷ್ಣರು ಅವನಿಗೆಂದರು, "ಏನಪ್ಪಾ, ನಿನಗೇನು ಬೇಕು?"

ಕಾಳೀಪದ ನಿರ್ಲಜ್ಜನಾಗಿ ಕೇಳಿದ: "ನನಗೆ ನಿಮ್ಮ ಮದ್ಯವನ್ನಿಷ್ಟು ಕೊಡಬಲ್ಲಿರಾ?"

ಶ್ರೀರಾಮಕೃಷ್ಣರು (ಮುಗುಳ್ನಕ್ಕು): "ಓಹೊ, ಕೊಡಬಲ್ಲೆ. ಆದರೆ ನನ್ನ ಮದ್ಯದ ಜೋರು ಎಷ್ಟೆಂದರೆ ನೀನು ಆ ನಶೆಯನ್ನು ತಡೆದುಕೊಳ್ಳಲಾರೆ!"

ಕಾಳೀಪದ ಈ ಮಾತನ್ನು ಅಕ್ಷರಶಃ ನಿಜವೆಂದು ಭಾವಿಸಿದ.

"ಓ ಹಾಗೇನು! ನಾನು ಎಂತೆಂಥಾ ಮದ್ಯವನ್ನೆಲ್ಲ ಕುಡಿದಿದ್ದೇನೆ, ಆದರೆ ಸರಿಯಾಗಿ ನಶೆ ಏರುವುದೇ ಇಲ್ಲ! ಎಲ್ಲಿ, ದಯವಿಟ್ಟು ಸ್ವಲ್ಪ ಕೊಡಿ, ಗಂಟಲೊದ್ದೆ ಮಾಡಿಕೊಳ್ಳುತ್ತೇನೆ. ಬಹುಶಃ ನಿಮ್ಮದು ಒಳ್ಳೇ ವಿಲಾಯತಿ ಮದ್ಯವೇ ಇರಬೇಕು!"

ಶ್ರೀರಾಮಕೃಷ್ಣರು: "ಅಲ್ಲಲ್ಲ, ಅದು ಪಕ್ಕಾ ನಾಟೀ ಮದ್ಯವೇ! ಆದರೆ ಅದನ್ನು ಯಾರೆಂದರೆ ಅವರಿಗೆ ಕೊಡಲು ಬರುವುದಿಲ್ಲ. ಏಕೆಂದರೆ ಎಲ್ಲರೂ ಅದನ್ನು ತಡೆದುಕೊಳ್ಳಲಾರರು. ಅದನ್ನು ಒಂದೇ ಒಂದು ಸಲ ರುಚಿ ನೋಡಿದರೂ ಸಾಕು, ಆಮೇಲೆ ವಿದೇಶೀ ಮದ್ಯವೂ ಸಪ್ಪೆಯಾಗಿಬಿಡುತ್ತದೆ. ನೀನು ಅವನ್ನೆಲ್ಲ ಬಿಟ್ಟು ನನ್ನ ಈ ಮದ್ಯವನ್ನೇ ಕುಡಿಯಲು ಸಿದ್ಧನಿರುವೆಯಾ?"

ಕಾಳೀಪದ ಇದನ್ನು ಹೇಗೆ ಅರ್ಥಮಾಡಿಕೊಂಡನೋ ಏನೋ; ಒಂದು ಕ್ಷಣ ಸುಮ್ಮನಿದ್ದು ನುಡಿದ:

"ದಯವಿಟ್ಟು ನನಗೆ ಜೀವಮಾನಪರ್ಯಂತ ನನ್ನನ್ನು ಮತ್ತನನ್ನಾಗಿಯೇ ಇರಿಸುವಂಥ ಮದ್ಯವನ್ನು ಕೊಡಿ."

ಶ್ರೀರಾಮಕೃಷ್ಣರು ಮುಗುಳ್ನಗುತ್ತಲೇ ಎದ್ದುಬಂದು ಒಮ್ಮೆ ಅವನನ್ನು ಸ್ಪರ್ಶಿಸಿದರು, ಅಷ್ಟೆ! ಮರುಕ್ಷಣವೇ ಅವನಲ್ಲಿ ಪ್ರಚಂಡ ಭಾವಸಂಚಾರವಾಯಿತು; ದಿವ್ಯಾನಂದದ ಆವೇಗವನ್ನು ತಾಳಲಾರದೆ ಅವನು ಕಣ್ಣೀರ ಕೋಡಿ ಹರಿಸುತ್ತ ಬಿಕ್ಕಿಬಿಕ್ಕಿ ಅಳಲಾರಂಭಿಸಿದ.

ಅಲ್ಲಿದ್ದವರಿಗೆಲ್ಲ ಈ ಹಠಾತ್ ಪರಿವರ್ತನೆಯನ್ನು ಕಂಡು ಪರಮಾಶ್ಚರ್ಯ! ಲಾಟುವೇ ಮೊದಲಾದವರು ಅವನನ್ನು ಸಮಾಧಾನಗೊಳಿಸುವ ಪ್ರಯತ್ನ ಮಾಡಿದರು. ಆದರೆ ಎಷ್ಟೋ ಹೊತ್ತಿನವರೆಗೆ ಅತ್ತು ಕಣ್ಣೀರ ಮಳೆ ಸುರಿಸಿದ ಮೇಲೆಯೇ ಅವನೆದೆಯ ಆಕಾಶ ನಿರ್ಮಲವಾದುದು.

ಶ್ರೀರಾಮಕೃಷ್ಣರಿಂದ ಬೀಳ್ಕೊಂಡು ಬಂದಮೇಲೆ ಕಾಳೀಪದನ ಮನಸ್ಸು ಸದಾ ಅವರನ್ನೇ ಚಿಂತಿಸುತ್ತ ಮತ್ತೊಮ್ಮೆ ಅವರೆಡೆಗೆ ಹೋಗಲು ತವಕಪಡಲಾರಂಭಿಸಿತು. ಕೆಲವೇ ದಿನಗಳ ಬಳಿಕ ಅವನು ಒಂದು ದೋಣಿಯನ್ನು ಬಾಡಿಗೆಗೆ ಗೊತ್ತು ಮಾಡಿಕೊಂಡು ಒಬ್ಬನೇ ದಕ್ಷಿಣೇಶ್ವರಕ್ಕೆ ಹೋದ. ಶ್ರೀರಾಮಕೃಷ್ಣರು ಅವನನ್ನು ಆದರದಿಂದ ಬರಮಾಡಿಕೊಂಡು ಮಾತನಾಡಿಸಿ, "ನಾನೀಗ ಕಲ್ಕತ್ತಕ್ಕೆ ಹೋಗಬೇಕಾಗಿದೆ" ಎಂದರು. ಕಾಳೀಪದ, "ಹೌದೆ! ಹೇಗಿದ್ದರೂ ನಾನೇ ಗೊತ್ತುಪಡಿಸಿ ತಂದಿರುವ ದೋಣಿ ಘಟ್ಟದಲ್ಲಿದೆ. ಬನ್ನಿ, ಹೋಗೋಣ" ಎಂದ.

ಶ್ರೀರಾಮಕೃಷ್ಣರು ಲಾಟುವನ್ನು ಜೊತೆಮಾಡಿಕೊಂಡು ಕಾಳೀಪದನೊಂದಿಗೆ ಹೊರಟರು. ದೋಣಿಯೇರಿದರು. ಕಾಳೀಪದ ಅಂಬಿಗನ ಕಿವಿಯಲ್ಲಿ ಏನೋ ಪಿಸುಗುಟ್ಟಿದ.

ದೋಣಿ ಹೊರಟಿತು. ದಕ್ಷಿಣೇಶ್ವರ ಕಲ್ಕತ್ತಗಳೆರಡೂ ಗಂಗಾನದಿಯ ಒಂದೇ ಬದಿಗಿರುವುದರಿಂದ, ದೋಣಿಯು ನದಿಯ ಮತ್ತೊಂದು ತೀರಕ್ಕೆ ಹೋಗಬೇಕಾದ ಅಗತ್ಯವಿರಲಿಲ್ಲ. ಆದರೆ ಇಂದು ದೋಣಿ ನದೀತಟದ ಬದಿಯಲ್ಲೇ ಹೋಗುವುದರ ಬದಲು ನದಿಯ ನಡುವಿನತ್ತ ಚಲಿಸತೊಡಗಿತು. ಮಾತಿನ ನಡುವೆ ಕಾಳೀಪದ ತನಗೆ ಕಾಳೀಮಾತೆಯಲ್ಲಿ ಭಕ್ತಿಯಿರುವುದಾಗಿಯೂ, ಸಾಮಾನ್ಯ ಗುರುಗಳಲ್ಲಿ ನಂಬಿಕೆಯಿಲ್ಲದಿರುವುದರಿಂದ ಇಷ್ಟು ದಿನ ಯಾರಿಂದಲೂ ಮಂತ್ರದೀಕ್ಷೆ ಪಡೆದುಕೊಳ್ಳಲು ಇಷ್ಟಪಡಲಿಲ್ಲವೆಂದೂ ತಿಳಿಸಿದ. ದೋಣಿ ನದಿಯ ಮಧ್ಯಕ್ಕೆ ಬಂದಿತು. ಆಗ ಕಾಳೀಪದ

ಇದ್ದಕ್ಕಿದ್ದಂತೆ ಮಂಡಿಯೂರಿ ಶ್ರೀರಾಮಕೃಷ್ಣರ ಪಾದಗಳನ್ನು ಹಿಡಿದುಕೊಂಡು ಅತ್ಯಂತ ದೈನ್ಯದಿಂದ, "ಸ್ವಾಮಿ, ನೀವೇ ನನಗೆ ದಿಕ್ಕು! ಕೃಪೆ ಮಾಡಿ ನನ್ನನ್ನು ಕಾಪಾಡಿ!" ಎಂದು ಅಂಗಲಾಚತೊಡಗಿದ.

ಶ್ರೀರಾಮಕೃಷ್ಣರು (ಆಶ್ಚರ್ಯದಿಂದ): "ಇದೇನಿದು! ಏಳು ಏಳು, ಏಕೆ ಭಯ ಪಡುತ್ತೀಯೆ? ಸುಮ್ಮನೆ ಭಗವಂತನ ನಾಮಸ್ಮರಣೆ ಮಾಡುತ್ತಿರು ಸಾಕು. ಎಲ್ಲವೂ ಸಿದ್ಧಿಸುತ್ತದೆ."

ಕಾಳೀಪದ ಅದಕ್ಕೆ ಕಿವಿಗೊಡಲಿಲ್ಲ. ಪಾದಗಳನ್ನು ಇನ್ನಷ್ಟು ಭದ್ರವಾಗಿ ಹಿಡಿದು ಕೊಂಡು ನುಡಿದ:

"ನಾನೊಬ್ಬ ಕುಡುಕ, ಅಧಮ. ನನಗೆ ನಾಮಸ್ಮರಣೆ ಮಾಡಲು ಕೂಡ ಸಮಯ ವಿಲ್ಲ. ನೀವು ದಯಾಸಾಗರರು. ಯಾವ ಲಂಗು ಲಗಾಮುಗಳೂ ಇಲ್ಲದಿರುವ ನನ್ನಂಥ ದುಷ್ಟನನ್ನು ನೀವಲ್ಲದೆ ಇನ್ನಾರು ರಕ್ಷಿಸಬೇಕು?"

ಶ್ರೀರಾಮಕೃಷ್ಣರು ಸಂದಿಗ್ಧಕ್ಕೆ ಸಿಕ್ಕಿಕೊಂಡಂತಾದರು. ಇವನಿಂದ ಬಿಡಿಸಿಕೊಳ್ಳುವ ಉಪಾಯಗಾಣದಾದರು. ಈಗವರು ಮೆಲ್ಲನೆ ಉನ್ನತ ಭಾವಸ್ಥಿತಿಗೇರಿ, "ಆಗಲಿ" ಎನ್ನುತ್ತ, ಅವನ ನಾಲಿಗೆಯ ಮೇಲೆ ತಮ್ಮ ಕೈಬೆರಳಿನಿಂದ ಏನೋ ಗೂಢಾಕ್ಷರವನ್ನು ಬರೆದು, ಬಳಿಕ ನುಡಿದರು: "ಚಿಂತೆಯಿಲ್ಲ! ಇನ್ನು ಮೇಲೆ ನಿನ್ನ ನಾಲಿಗೆ ತನ್ನಿಂತಾನೇ ಈ ಮಂತ್ರವನ್ನು ಜಪಿಸುತ್ತದೆ."

ಆದರೆ ಕಾಳೀಪದನಿಗೆ ಇದರಿಂದಲೂ ಸಮಾಧಾನವಾಗಲಿಲ್ಲ! ಆಗ ಶ್ರೀರಾಮ ಕೃಷ್ಣರು ಕೇಳಿದರು: "ಏನು? ಮತ್ತಿನ್ನೇನು ಬೇಕು ನಿನಗೆ?"

ಕಾಳೀಪದ ಎಷ್ಟೇ ದುರಾಚಾರಿಯಾಗಿದ್ದರೂ ತನ್ನ ಲೋಪದೋಷಗಳನ್ನು ಚೆನ್ನಾ ಗಿಯೇ ಅರಿತಿದ್ದ. ಮತ್ತು ಮುಂದೆ ತನ್ನ ಗತಿಯೇನಾಗಬಹುದೆಂಬ ಕುರಿತಾಗಿಯೂ ಆಲೋಚಿಸಿದ್ದ. ಆದ್ದರಿಂದ ಈಗ ಅವನೆಂದ:

"ಸ್ವಾಮಿ, ನನಗೆ ಗೊತ್ತು, ನನ್ನ ಪ್ರಾಣೋತ್ಕ್ರಮಣಕಾಲ ಸನ್ನಿಹಿತವಾದಾಗ ನಾನು ಎಲ್ಲೆಲ್ಲೂ ಕಾರ್ಗತ್ತಲನ್ನೇ ಕಾಣುತ್ತೇನೆ; ಆ ಭೀಕರ ಕತ್ತಲನ್ನು ಕಂಡು ತಲ್ಲಣಿಸಿ ಹೋಗುತ್ತೇನೆ. ಪತ್ನೀಪುತ್ರರು, ಬಂಧುಮಿತ್ರರು ಯಾರೂ ಆಗ ನನ್ನ ನೆರವಿಗೊದಗ ಲಾರರು. ಆ ದಾರುಣಾವಸ್ಥೆಯಲ್ಲಿ ನೀವು ಬಂದು ನನಗೆ ಅಭಯ ನೀಡಬೇಕು; ನನ್ನೊಂದಿಗಿರಬೇಕು. ಮತ್ತು ಬೆಳಕು ತೋರಿ ಮುನ್ನಡೆಸಬೇಕು. ಇದೇ ನನ್ನ ಪ್ರಾರ್ಥನೆ. ಇದನ್ನು ನೀವು ನಡೆಸಿಕೊಡಲೇಬೇಕು."

ಶ್ರೀರಾಮಕೃಷ್ಣರು ಪರಮ ಕರುಣೆದುಂಬಿ ನುಡಿದರು:

"ಆಗಲಿ, ಆಗಲಿ. ನಿನ್ನಿಚ್ಛೆ ಈಡೇರುತ್ತದೆ... ಅಬ್ಬಬ್ಬ! ಎಂಥ ಮನುಷ್ಯನಯ್ಯ ನೀನು! ನದೀಮಧ್ಯಕ್ಕೆ ಕರೆದುಕೊಂಡು ಬಂದು ಗಲಾಟೆ ಮಾಡಿಬಿಟ್ಟೆಯಲ್ಲ!"

ಅಭಯಪ್ರದಾನ ಪಡೆದ ಕಾಳೀಪದ ಅತ್ಯಂತ ಸಂತುಷ್ಟನಾಗಿ ಶ್ರೀರಾಮಕೃಷ್ಣರಿಗೆ ಇನ್ನೊಮ್ಮೆ ನಮಸ್ಕರಿಸಿದ.

ದೋಣಿಯೀಗ ಮುಂದುವರಿಯಿತು. ಅದು ಕಲ್ಕತ್ತಕ್ಕೆ ಬಂದು ತಲುಪಿದಾಗ ಕೇಳಿದ: "ನೀವು ಎಲ್ಲಿಗೆ ಹೋಗಬೇಕೋ ಹೇಳಿ, ಅಲ್ಲಿಗೆ ತಲುಪಿಸುತ್ತೇನೆ."

ಶ್ರೀರಾಮಕೃಷ್ಣರು: "ಬೇರೆಲ್ಲಿಗಲ್ಲ, ನಿನ್ನ ಮನೆಗೇ ಬರೋಣವೆಂದಿದ್ದೇನೆ."

ಕಾಳೀಪದನಿಗೆ ತನ್ನ ಕಿವಿಗಳನ್ನೇ ನಂಬಲಾಗಲಿಲ್ಲ. ಶ್ರೀರಾಮಕೃಷ್ಣರು ತನ್ನ ಮನೆಗೆ

ಬರುತ್ತಿದ್ದಾರೆ—ಬಲಿಯ ಮನೆಗೆ ವಾಮನ ಬಂದಂತೆ! ಅಯಾಚಿತ ಕೃಪೆಗಾಗಿ ಹಿಗ್ಗುತ್ತ ಅವನು ಕೂಡಲೇ ಒಂದು ಸಾರೋಟು ಹಿಡಿದು ಅವರನ್ನು ಮನೆಗೆ ಕರೆತಂದ.

ಕಾಳೀಪದನ ಮನೆಮಂದಿಯೆಲ್ಲರೂ ಶ್ರೀರಾಮಕೃಷ್ಣರನ್ನು ಭಕ್ತ್ಯಾದರಗಳಿಂದ ಬರಮಾಡಿಕೊಂಡರು. ಕೃಷ್ಣಪ್ರಿಯಾಳಂತೂ ಸಂತಸದಿಂದ ಮಾತೇ ಹೊರಡ ದಂತಾಗಿತ್ತು. ಅಂತೂ ಶ್ರೀರಾಮಕೃಷ್ಣರ ಮಾತು ನಿಜವಾಗಿ ಪರಿಣಮಿಸುತ್ತಿದೆ! ಶಾರದಾ ದೇವಿಯವರು ಮಂತ್ರಿಸಿ ಕೊಟ್ಟ ಬಿಲ್ವಪತ್ರೆ ಪವಾಡವೆಸಗುತ್ತಿದೆ! ಗಂಡ ಸರಿದಾರಿಗೆ ಬರುತ್ತಿದ್ದಾನೆ!

ಈಗ ಇನ್ನೊಂದು ಅದ್ಭುತ ನಡೆಯಿತು. ಶ್ರೀರಾಮಕೃಷ್ಣರು ಕುಳಿತಿದ್ದ ಬೈಠಕ್ ಖಾನೆಯ ಗೋಡೆಗಳು ನಾನಾ ದೇವದೇವಿಯರ ಸುಂದರ ತೈಲಚಿತ್ರಗಳಿಂದ ಶೋಭಿಸು ತ್ತಿದ್ದುವು. ಅವುಗಳನ್ನು ಕಂಡೊಡನೆ ಶ್ರೀರಾಮಕೃಷ್ಣರು ಪ್ರಚೋದಿತರಾಗಿ ತಮ್ಮ ದೈವೀ ಸ್ವರದಿಂದ ಸ್ತೋತ್ರಗಳನ್ನು ಪಠಿಸಲಾರಂಭಿಸಿದರು. ಪ್ರಚಂಡ ಆಧ್ಯಾತ್ಮಿಕ ಭಾವಗಳಿಂದ ಆ ಸ್ಥಳ ಅನುರಣಿತವಾಯಿತು. ಸ್ತೋತ್ರಗಳನ್ನು ಕೇಳುತ್ತಿದ್ದವರ ಮೈ ನವಿರೆದ್ದಿತು. ಅವರು ಹಾಡುವುದನ್ನು ನಿಲ್ಲಿಸಿದ ಮೇಲೂ ಯಾರಿಗೂ ಮಾತನಾಡಲು ಇಚ್ಛೆಯಾಗ ಲಿಲ್ಲ. ಕೋಣೆಯಲ್ಲೊಂದು ಅಪೂರ್ವ ನಿಶ್ಶಬ್ದತೆ ನೆಲಸಿತು. ಆಗ ಅಲ್ಲಿದ್ದವರಿಗೆ ಆ ಚಿತ್ರ ಗಳಲ್ಲಿನ ದೇವದೇವಿಯರೆಲ್ಲ ಜೀವಂತರಾಗಿ ಕುಳಿತಿರುವರೆಂಬ ಅನುಭವವಾಯಿತು!

ತರುವಾಯ ಶ್ರೀರಾಮಕೃಷ್ಣರು ಮನೆಯವರ ಆತಿಥ್ಯವನ್ನೊಂದಿಷ್ಟು ಸ್ವೀಕರಿಸಿ ಸ್ವಲ್ಪಹೊತ್ತು ಮಾತನಾಡುತ್ತಿದ್ದು ಅವರಿಂದ ಬೀಳ್ಕೊಂಡರು. ತನ್ನ ಮೇಲಿನ ಅಪಾರ ಕರುಣೆಯಿಂದಲೇ ಶ್ರೀರಾಮಕೃಷ್ಣರು ಈ ಅದ್ಭುತಗಳನ್ನೆಲ್ಲ ಎಸಗಿದರು ಎಂಬುದರಲ್ಲಿ ಕಾಳೀಪದನಿಗೆ ಸಂಶಯವೇ ಇರಲಿಲ್ಲ.

ಅಂದು ಶ್ರೀರಾಮಕೃಷ್ಣರನ್ನು ಕಂಡಾಗ ಕಾಳೀಪದನ ತಂಗಿ ಮಹಾಮಾಯಾಳಿಗೆ ಒಂದು ಸಂಗತಿ ನೆನಪಾಯಿತು. ಕೆಲವು ತಿಂಗಳ ಹಿಂದೆ ಒಂದು ದಿನ ಅವಳು ತನ್ನ ಮನೆಯ ಎರಡನೇ ಅಂತಸ್ತಿನಲ್ಲಿದ್ದವಳು ಅದೇಕೋ ಕಿಟಕಿಯಿಂದ ಇಣುಕಿ ನೋಡಿ ದಳು. ಆಗ ಕೆಳಗಡೆ ಮನೆಯ ಮುಂದಿನ ರಸ್ತೆಯಲ್ಲೊಂದು ಸಾರೋಟು ಮೆಲ್ಲನೆ ಸಾಗುತ್ತಿತ್ತು. ಇದ್ದಕ್ಕಿದ್ದಹಾಗೆ ಅದರೊಳಗಿದ್ದ ಒಬ್ಬ ವ್ಯಕ್ತಿ ಸಾರೋಟಿನ ಕಿಟಕಿಯಿಂದ ತಲೆಯನ್ನು ಹೊರಹಾಕಿ, "ನಿಲ್ಲಿಸು, ನಿಲ್ಲಿಸು, ಇದೇ ಆ ಜಾಗ ಅಂತ ಕಾಣುತ್ತದೆ" ಎಂದು ಗಾಡಿಯವನಿಗೆ ಹೇಳಿದ್ದು ಕೇಳಿಸಿತು. ಆ ವ್ಯಕ್ತಿಯ ಮುಖ ಅತ್ಯಂತ ತೇಜೋ ಮಯವಾಗಿತ್ತು. ಬಣ್ಣಿಸಲಾಗದ ಅಲೌಕಿಕ ಆಕರ್ಷಣೆ ಅವರಲ್ಲಿತ್ತು. ಅದನ್ನು ಕಂಡೊ ಡನೆ ಮಹಾಮಾಯೆ ಅತೀವ ಆಶ್ಚರ್ಯಗೊಂಡಳು. ಅಂಥವರೊಬ್ಬರನ್ನು ಅವಳೆಂದೂ ಕಂಡಿರಲಿಲ್ಲ. ಈ ದಿವ್ಯಪುರುಷನನ್ನು ಮನೆಯವರೆಲ್ಲ ಒಮ್ಮೆ ನೋಡಲೇಬೇಕು ಎನ್ನಿಸಿ, ಎಲ್ಲರನ್ನೂ ಕೂಗಿ ಕರೆದಳು. ಆದರೆ ಆ ವ್ಯಕ್ತಿ ಗಾಡಿಯಿಂದ ಕೆಳಗಿಳಿಯಲಿಲ್ಲ. ಮತ್ತು ಇತರರು ಬಂದು ನೋಡುವಷ್ಟರಲ್ಲಿ ಗಾಡಿ ಮೆಲ್ಲನೆ ಮುಂದಕ್ಕೆ ಹೊರಟೇಬಿಟ್ಟಿತು.

ಇಂದು ಶ್ರೀರಾಮಕೃಷ್ಣರನ್ನು ಕಂಡೊಡನೆ, ಆ ದಿನ ತಾನು ನೋಡಿದ ವ್ಯಕ್ತಿ ಇವರೇ ಎಂದು ಮಹಾಮಾಯೆ ಗುರುತಿಸಿದಳು.

ಶ್ರೀರಾಮಕೃಷ್ಣರು ಅಂದು ಹಾಗೆ ಮುಖ ತೋರಿಸಿ ಹೊರಟುಹೋದ ಕಾರಣ ವೇನಿರಬಹುದು? ಮಹಾಮಾಯಾಳಿಗೆ ಕೃಪೆದೋರಿ ಅವಳನ್ನು ತಮ್ಮ ಸನ್ನಿಧಿಗೆ ಬರ ಮಾಡಿಕೊಳ್ಳಲೆಂದೆ?

ಕಾಳೀಪದ ಕ್ರಮೇಣ ದಕ್ಷಿಣೇಶ್ವರಕ್ಕೆ ಹೆಚ್ಚೆಚ್ಚಾಗಿ ಬರಲಾರಂಭಿಸಿದ. ಮತ್ತು ಶ್ರೀರಾಮಕೃಷ್ಣರ ನಿಕಟ ಭಕ್ತರಲ್ಲೊಬ್ಬನಾದ. ಆದರೆ ಅವನು ತನ್ನ ಜೀವನ ವಿಧಾನವನ್ನು ಒಮ್ಮೆಗೇ ತಿದ್ದಿಕೊಂಡುಬಿಟ್ಟನೆಂದಲ್ಲ. ತನ್ನ ಹಳೆಯ ಚಾಳಿಗಳನ್ನು ದೂರಮಾಡಿಕೊಳ್ಳಲು ಅವನು ಎಡೆಬಿಡದೆ ಹೋರಾಡಬೇಕಾಯಿತು. ಆ ಹೋರಾಟದಲ್ಲಿ ಒಮ್ಮೆ ಗೆದ್ದರೆ ಇನ್ನೊಮ್ಮೆ ಸೋಲುತ್ತಿದ್ದ. ಅದನ್ನು ಕಂಡು ಅವನ ಆತ್ಮೀಯರನೇಕರು, 'ಈತ ಈ ಜನ್ಮದಲ್ಲಿ ಸರಿಹೋಗುವುದಿಲ್ಲ' ಎಂದು ನಿರ್ಧರಿಸಿಬಿಟ್ಟಿದ್ದರು. ಕೆಲವರು ಅವನ ಮೇಲೆ ಶ್ರೀರಾಮಕೃಷ್ಣರ ಬಳಿ ದೂರು ತರುತ್ತಿದ್ದುದೂ ಇತ್ತು. ಆದರೆ ಶ್ರೀರಾಮಕೃಷ್ಣರು ಮಾತ್ರ ಅವನಿಗೇನೂ ಹೇಳಹೋಗುತ್ತಿರಲಿಲ್ಲ. ಗಿರೀಶನ ವಿಷಯದಲ್ಲಿ ಹೇಗೋ ಹಾಗೆಯೇ ಕಾಳೀಪದನ ವಿಷಯದಲ್ಲೂ ಅವರು ಅತಿ ಉದಾರಿಯಾಗಿದ್ದರು. "ನೀನು ಹಾಗೆ ಮಾಡಬಾರದು", "ಹೀಗೆ ಮಾಡಬೇಕು" ಎಂಬ ಧಾಟಿಯಲ್ಲಿ ಅವರೆಂದೂ ಅವನಿಗೆ ತಿಳಿಯಹೇಳಲಿಲ್ಲ. ಕೇವಲ ಮಾತಿನ ಮೂಲಕ ಬುದ್ಧಿವಾದ ಹೇಳುವುದರಿಂದೇನೂ ಪ್ರಯೋಜನವಾಗದು ಎಂಬುದು ಅವರಿಗೆ ಬಹಳ ಚೆನ್ನಾಗಿ ತಿಳಿದಿದ್ದ ಸಂಗತಿ. ಆದ್ದರಿಂದ ಅವರು ಸುಮ್ಮನೆ ತಮ್ಮ ಅಮೃತಮಯ ಪ್ರೇಮವನ್ನು ಅವನ ಮೇಲೆ ನಿರಂತರವಾಗಿ ವರ್ಷಿಸುತ್ತ ಬಂದರು. ಮತ್ತು ಅವನಲ್ಲಿ ಅದಾಗಲೇ ಯಾವ ಯಾವ ಪವಿತ್ರ ಗುಣಗಳೂ ಭಾವನೆಗಳೂ ಸುಪ್ತರೂಪದಲ್ಲಿದ್ದುವೋ ಅವನ್ನೇ ಪ್ರಚೋದಿಸಿ ಶಕ್ತಿಯುತವಾಗಿ ವ್ಯಕ್ತವಾಗುವಂತೆ ಮಾಡಿದರು. ಕ್ರಮೇಣ ಈ ಸತ್ಪ್ರವೃತ್ತಿಗಳೇ ಅವನ ದುಷ್ಪ್ರವೃತ್ತಿಗಳನ್ನೆಲ್ಲ ಮೆಟ್ಟಿ ದಮನ ಮಾಡಿದುವು. ಈ ರೀತಿಯಾಗಿ ಅವನು ಸುಧಾರಿಸುತ್ತ ಬಂದ.

ಶ್ರೀರಾಮಕೃಷ್ಣರ ಅಪೂರ್ವ ಶಿಕ್ಷಣ ವಿಧಾನವನ್ನು ಕಂಡು ಸ್ವತಃ ಕಾಳೀಪದನೂ ವಿಸ್ಮಯಗೊಂಡಿದ್ದ. ಒಂದು ದಿನ ಅವನು ಇತರ ಭಕ್ತರೆದುರು ನಗುತ್ತ ಹೇಳುತ್ತಾನೆ, "ನಮ್ಮ ಗುರುಗಳು ನಿಜಕ್ಕೂ ಬಹಳ ಒಳ್ಳೆಯ ಗುರುಗಳೇ ಸರಿ! 'ಧ್ಯಾನ ಮಾಡಿ', 'ತಪಸ್ಸು ಮಾಡಿ' ಅಂತೇನೂ ನಮಗೆ ಹೇಳುವುದೇ ಇಲ್ಲ!" ಎಂದು. ಆದರೆ ತನ್ನ ಮನಸ್ಸು ತನಗೇ ಅರಿವಿಲ್ಲದಂತೆ ಸದಾ ಶ್ರೀರಾಮಕೃಷ್ಣರಲ್ಲೇ ನೆಲಸಿ ಅವರನ್ನೇ ಧ್ಯಾನಿಸಲಾರಂಭಿಸಿದೆ ಎಂಬ ಅಂಶ ಅವನಿಗೆ ಹೇಗೆ ತಿಳಿಯಬೇಕು!

ಕಾಳೀಪದ ಒಮ್ಮೆ ಕಾಳೀದೇವಾಲಯಕ್ಕೆ ಹೋಗಿ ದೇವಿಯ ಮುಂದೆ ನಿಂತು ನಿಶ್ಶಂಕೆಯಿಂದ ತನ್ನ ಮನಸ್ಸನ್ನು ತೋಡಿಕೊಳ್ಳಲಾರಂಭಿಸಿದ—ಎಂದರೆ, ಬಹುಶಃ ತನ್ನ ಯಾವುದೋ ಪ್ರಾರ್ಥನೆಯನ್ನು ಈಡೇರಿಸದಿದ್ದುದಕ್ಕಾಗಿ, ಆಕೆಯನ್ನು ಗಟ್ಟಿಯಾಗಿ ಬೈಯತೊಡಗಿದ! ಉದ್ವೇಗದಿಂದ ಅವನ ಮುಖ ಎದೆಯೆಲ್ಲ ಕೆಂಪೇರಿತ್ತು. ಕಪೋಲಗಳ ಮೇಲೆ ಕಣ್ಣೀರು ಹರಿಯುತ್ತಿತ್ತು. ಆ ಸಮಯದಲ್ಲಿ ಅಲ್ಲೇ ಇದ್ದ ಶ್ರೀರಾಮಕೃಷ್ಣರು ಅವನ ಬೈಗುಳನ್ನು ಕೇಳಲಾರದೆ ಅಲ್ಲಿಂದ ಹೊರಟುಹೋದರು. ಕಾಳೀಪದನೇನೋ ಒಂದು ಬಗೆಯ ಭಕ್ತಿಭಾವದಿಂದಲೇ ಕಾಳಿಯನ್ನು ತರಾಟೆಗೆ ತೆಗೆದುಕೊಂಡಿರಬಹುದು. ಆದರೂ ಅವನ ಆ ಧೋರಣೆ ಶ್ರೀರಾಮಕೃಷ್ಣರಿಗೆ ಮೆಚ್ಚುಗೆಯಾಗಲಿಲ್ಲ. ಅಲ್ಲಿದ್ದ ಇತರರನ್ನುದ್ದೇಶಿಸಿ ಅವರೆನ್ನುತ್ತಾರೆ: "ಇವನದು ವೀರಭಾವ. ಇದು ತುಂಬ ಕಠಿಣವಾದದ್ದು. ಮಗು ತನ್ನ ತಾಯಿಯ ಮೇಲಿಟ್ಟಂತಹ 'ಶಿಶುಭಾವ'ವೇ ಸುಲಭ ಮತ್ತು ಅನುಕರಣೀಯ."

ಒಂದು ದಿನ ಅವನು ಗಿರೀಶನೊಂದಿಗೆ ಶ್ರೀರಾಮಕೃಷ್ಣರನ್ನು ನೋಡಲು

ಹೋದ. ಅಂದು ಅವನ ವ್ಯವಹಾರಕ್ಕೆ ಸಂಬಂಧಿಸಿದ ಮೂರು ವಿವಿಧ ಮೊಕದ್ದಮೆ ಗಳು ನ್ಯಾಯಾಲಯದಲ್ಲಿ ಇತ್ಯರ್ಥವಾಗಲಿದ್ದುವು. ಆದರೆ ಮೂರರಲ್ಲೂ ಸೋಲು ನಿಶ್ಚಿತವಾಗಿದ್ದುದರಿಂದ ಅವನು ಆಸೆ ಬಿಟ್ಟು ಕುಳಿತಿದ್ದ. ಅಂದು ಶ್ರೀರಾಮಕೃಷ್ಣರು ಇವರಿಬ್ಬರೊಂದಿಗೆ ಮಾತನಾಡುತ್ತ ಹಾಗೆಯೇ ಒಂದು ವಿಷಯ ತಿಳಿಸಿದರು: "ನಮ್ಮ ರಾಖಾಲ ಇದ್ದಾನಲ್ಲ, ಅವನ ತಂದೆ ದೊಡ್ಡ ಜಮೀನ್ದಾರ. ಒಂದಲ್ಲ ಒಂದು ಕೋರ್ಟು-ಕಚೇರಿಯ ತಾಪತ್ರಯ ಇದ್ದೇ ಇರುತ್ತದೆ. ಈಚೆಗೆ ಅವನದು ಮೂರು ಮೊಕದ್ದಮೆಗಳಿದ್ದುವು. ಅವುಗಳಲ್ಲಿ ತೀರ್ಪು ತನಗೆ ಪ್ರತಿಕೂಲವಾಗಿರುತ್ತದೆ ಅಂತ ಅವನು ಯಾವಾಗಲೋ ನಿರ್ಧರಿಸಿಬಿಟ್ಟಿದ್ದ. ಆದರೆ ಮೂರರಲ್ಲೂ ಅವನೇ ಗೆದ್ದು ಬಿಟ್ಟ! ತನ್ನ ಮಗ ರಾಖಾಲ ಇಲ್ಲಿಗೆ (ತಮ್ಮಲ್ಲಿಗೆ) ಬಂದುಹೋಗುತ್ತಿರುವುದೇ ತನ್ನ ಗೆಲುವಿಗೆ ಕಾರಣ ಅಂತ ಅವನಿಗೆ ವಿಶ್ವಾಸ ಬಂದುಬಿಟ್ಟಿದೆ."

ಇದನ್ನು ಕೇಳಿ ಕಾಳೀಪದನಿಗೆ ಅತ್ಯಾಶ್ಚರ್ಯ. ಇದೇನೋ ಬಹಳ ಕಾಕತಾಳೀಯ ವಾಗಿ ಕಾಣುತ್ತಿದೆಯಲ್ಲ! ಶ್ರೀರಾಮಕೃಷ್ಣರು ಈ ಸುದ್ದಿಯನ್ನು ತನಗೆ ಇವತ್ತೇ ಏಕೆ ತಿಳಿಸಬೇಕಿತ್ತು? ಕುತೂಹಲ ಕಾತರಗಳಿಂದ ಮನೆಗೆ ಬಂದು ನೋಡುತ್ತಾನೆ—ಮೂರು ಮೊಕದ್ದಮೆಗಳೂ ಅವನ ಪರವಾಗಿಯೇ ಆಗಿವೆ ಎಂಬ ಸುದ್ದಿ ಸಿಕ್ಕಿತು! ಈ ಘಟನೆ ಅವನ ಮೇಲೆ ಗಾಢ ಪ್ರಭಾವ ಬೀರಿತು. ಶ್ರೀರಾಮಕೃಷ್ಣರ ಕೃಪಾಶಕ್ತಿಯ ಮೇಲಿನ ಅವನ ವಿಶ್ವಾಸವನ್ನು ವರ್ಧಿಸಿತು.

ಕಾಳೀಪದ ತನ್ನ ಔದಾರ್ಯ ಸಜ್ಜನಿಕೆಗಳಿಂದ ಬಹು ಬೇಗ ಎಲ್ಲ ಭಕ್ತರಿಗೂ ಪ್ರಿಯನಾದ. ಭಕ್ತವೃಂದಕ್ಕೆ ಯಾವುದೇ ಕಷ್ಟದ ಕೆಲಸ ಒದಗಿಬಂದರೂ ಅದರ ಹೊಣೆ ಯನ್ನು ತಾನೇ ಹೊತ್ತುಕೊಂಡು ಪೂರೈಸುತ್ತಿದ್ದ. ಅವನ ಧೈರ್ಯ ಮತ್ತು ಧಾರಾಳತನ ಗಳನ್ನು ಕಂಡು ನರೇಂದ್ರ ಅವನನ್ನು 'ದಾನ ಕಾಳಿ' ಎಂದು ಕರೆಯುತ್ತಿದ್ದ. ('ದಾನ' ಎಂಬುದಕ್ಕೆ ಬಂಗಾಳಿಯಲ್ಲಿ 'ದಾನವ' ಎಂಬ ಅರ್ಥವೂ ಬರುತ್ತದೆ.) ಇದು ಅವನಿಗೆ ತುಂಬ ಚೆನ್ನಾಗಿ ಒಪ್ಪುತ್ತಿತ್ತಾದ್ದರಿಂದ ಭಕ್ತರಲ್ಲಿ ಈ ಹೆಸರೇ ಪ್ರಿಯವಾಯಿತು.

ಕಾಳೀಪದ ಬಹಳ ಚೆನ್ನಾಗಿ ಹಾಡಬಲ್ಲವನಾಗಿದ್ದ. ಎಷ್ಟೋ ಸಲ ಶ್ರೀರಾಮ ಕೃಷ್ಣರು ಅವನಿಂದ ಹಾಡಿಸಿ ಆನಂದಪಡುತ್ತಿದ್ದರು. ಕೊಳಲು ಮತ್ತು ಪಿಟೀಲು ವಾದನ ಗಳಲ್ಲೂ ಆತ ಪ್ರವೀಣನಾಗಿದ್ದ. ಒಮ್ಮೆ ಆತನ ಹೃದಯಸ್ಪರ್ಶಿಯಾದ ವೇಣುವಾದನ ವನ್ನು ಕೇಳುತ್ತ ಕೇಳುತ್ತ ಶ್ರೀರಾಮಕೃಷ್ಣರು ಸಮಾಧಿಸ್ಥರಾಗಿಬಿಟ್ಟರು.

ಶ್ರೀರಾಮಕೃಷ್ಣರ ಕಾರ್ಯಕಲಾಪಗಳನ್ನು ಗಮನಿಸಿದರೆ ಅವರ ಜೀವಿತಾವಧಿಯ ಕಡೆಯ ಕೆಲವು ವರ್ಷಗಳೇ ತೀವ್ರತರ ಚಟುವಟಿಕೆಯ ಕಾಲ ಎನ್ನಲಡ್ಡಿಯಿಲ್ಲ. ಮುಂದೆ ಅಗ್ರಗಣ್ಯರೆನಿಸಿದ ಅನೇಕಾನೇಕ ಅನುಯಾಯಿಗಳು ಅವರ ಸಂಪರ್ಕಕ್ಕೆ ಬಂದುದು ಅವರ ಜೀವಿತಾವಧಿಯ ಕೊನೆಯ ಮೂರು ವರ್ಷಗಳಲ್ಲೇ. ಮತ್ತು ಈ ಮೊದಲೇ ತಮ್ಮ ಆಶ್ರಯಕ್ಕೆ ಬಂದಿದ್ದ ನರೇಂದ್ರ ರಾಖಾಲರೇ ಮೊದಲಾದವರು ಸೇರಿದಂತೆ ಎಲ್ಲ ಶಿಷ್ಯರಿಗೂ ಯೋಗ್ಯ ಶಿಕ್ಷಣ ನೀಡಿ ಅವರನ್ನೆಲ್ಲ ಒಂದು ನಿರ್ದಿಷ್ಟ ಮಹೋದ್ದೇಶಕ್ಕಾಗಿ ಸಿದ್ಧಪಡಿಸುವಲ್ಲಿ ಶ್ರೀರಾಮಕೃಷ್ಣರಿಗೆ ಈ ಅಲ್ಪಾವಧಿಯೇ ಅತಿ ಮಹತ್ವದ್ದಾಗಿ ಪರಿಣಮಿಸಿತು.

೧೮೮೩ರಿಂದಾಚೆಗೆ ಅವರ ಬಳಿ ಬಂದ ಕೆಲವು ಶಿಷ್ಯರ ವಿಚಾರವನ್ನೀಗ ನೋಡೋಣ.

ಶಶಿಭೂಷಣ ಚಕ್ರವರ್ತಿ ಮತ್ತು ಶರಚ್ಚಂದ್ರ ಚಕ್ರವರ್ತಿ—ಇವರು ಅಣ್ಣತಮ್ಮಂದಿರ ಮಕ್ಕಳು; ಗೌರವಾನ್ವಿತ ಆಚಾರವಂತ ಸತ್ಕುಲಪ್ರಸೂತರು. ಇಬ್ಬರ ಗುಣನಡತೆಗಳಲ್ಲಿ ಬಹಳಷ್ಟು ಸಾಮ್ಯವಿತ್ತು.

ಇವರಲ್ಲಿ ಶಶಿಭೂಷಣ ಹಿರಿಯ (ಜನನ-೧೮೬೩). ತಂದೆ ಈಶ್ವರಚಂದ್ರ ಚಕ್ರವರ್ತಿ ಅತ್ಯಂತ ನಿಷ್ಠಾವಂತ ಬ್ರಾಹ್ಮಣ; ದೇವಿಯ ಉಪಾಸಕ. ಮಗನು ಸಚ್ಚಾರಿತ್ರ್ಯವಂತನಾಗಿ ಬೆಳೆಯಲು ಬೇಕಾದ ಪ್ರಾಥಮಿಕ ಶಿಕ್ಷಣವನ್ನು ಈತ ತುಂಬ ಸಮರ್ಥವಾಗಿ ನೀಡಿದ. ಶ್ರದ್ಧೆ ವಿಧೇಯತೆ ಸರಳತೆ ಮುಂತಾದ ಸದ್ಗುಣಗಳೆಲ್ಲ ಶಶಿಯ ಬಾಲ್ಯದಲ್ಲೇ ಸ್ಪಷ್ಟವಾಗಿ ವ್ಯಕ್ತವಾಗುತ್ತಿದ್ದುವು. ಅಲ್ಲದೆ ಆತ ತುಂಬ ಮೇಧಾವಿ. ಇಂಗ್ಲಿಷ್ ಹಾಗೂ ಸಂಸ್ಕೃತ ಸಾಹಿತ್ಯ, ಗಣಿತ ಮತ್ತು ತತ್ತ್ವಶಾಸ್ತ್ರ— ಇವು ಕಾಲೇಜಿನಲ್ಲಿ ಅವನು ಆಯ್ದುಕೊಂಡ ವಿಷಯಗಳು. ಈ ಎಲ್ಲ ವಿಷಯಗಳಲ್ಲೂ ಅವನು ಒಳ್ಳೆಯ ಪರಿಣತಿಯನ್ನು ಪಡೆದುಕೊಂಡ. ಕಾಲೇಜಿನಲ್ಲಿರುವಾಗಲೇ ಅವನೂ ಶರಚ್ಚಂದ್ರನೂ ಬ್ರಾಹ್ಮಸಮಾಜದ ಆಕರ್ಷಣೆಗೊಳಗಾಗಿ ಅದರ ಸದಸ್ಯರಾದರು. ಕೇಶವಚಂದ್ರ ಸೇನನಿಗೆ ಶಶಿಭೂಷಣ ತುಂಬ ಆಪ್ತನಾಗಿದ್ದು, ಆತನ ಮಕ್ಕಳಿಗೆ ಮನೆಪಾಠ ಹೇಳಿಕೊಡಲು ನಿಯುಕ್ತನಾದ.

ಶಶಿಯಂತೆಯೇ ಶರಚ್ಚಂದ್ರನೂ ಅಸಾಧಾರಣ ಬುದ್ಧಿವಂತ. ಆದರೆ ಅಷ್ಟೇ ಅಸಾಧಾರಣವಾದ ಅವನ ಶಾಂತ ಪ್ರಕೃತಿ ಆ ಬುದ್ಧಿವಂತಿಕೆಯನ್ನು ಅನಗತ್ಯವಾಗಿ ಪ್ರಕಟಗೊಳ್ಳದಂತೆ ಮರೆಮಾಡಿತ್ತು. ಪರೀಕ್ಷೆಗಳಲ್ಲಿ ಅವನು ತರಗತಿಗೇ ಮೊದಲಿಗ. ಅದರೊಂದಿಗೆ ಅಂಗಸಾಧನೆ ಮಾಡಿ ಗಳಿಸಿದ ಆರೋಗ್ಯಪೂರ್ಣ ದೃಢಕಾಯ. ನಡೆನುಡಿಗಳಲ್ಲಿ ವಿನಯ. ಹೆಸರಿಗೆ ತಕ್ಕಂತೆ ಅವನು ಎಲ್ಲರ ಕಣ್ಮನಗಳಿಗೆ ತಂಪೆರೆಯ ಬಲ್ಲ ಚಂದ್ರನೇ ಸರಿ. ಕಠಿಣೋಕ್ತಿಯಿಂದ ಮತ್ತೊಬ್ಬರ ಮನಸ್ಸಿಗೆ ಕಿಂಚಿತ್ತೂ ಘಾಸಿ ಮಾಡುವವನು ಅವನಲ್ಲ. ಅವನಿಗೆ ಸಿಟ್ಟು ಬರುತ್ತಿದ್ದುದೇ ತೀರಾ ಅಪರೂಪ! ಎಂದಮಾತ್ರಕ್ಕೆ, ಮಾತನಾಡಲು ಬಾರದವನೇನಲ್ಲ ಅವನು. ಶಾಲೆಯ ಚರ್ಚಾಸ್ಪರ್ಧೆಗಳಲ್ಲಿ ಅಗ್ರಸ್ಥಾನ ಅವನಿಗೇ ಕಟ್ಟಿಟ್ಟದ್ದು.

ಶರಚ್ಚಂದ್ರನ ವ್ಯಕ್ತಿತ್ವದ ಮತ್ತೊಂದು ಅಂಶವೆಂದರೆ ಅವನ ಹೃದಯವಂತಿಕೆ. ಶಾಲೆಯಲ್ಲಿ ತಿಂಡಿ ತಿನ್ನಲೆಂದು ತನಗೆ ಕೊಟ್ಟ ಪುಡಿಗಾಸನ್ನು ಅವನು ಕೆಲವೊಮ್ಮೆ ಬಡ ಸಹಪಾಠಿಗಳಿಗೆ ಕೊಟ್ಟುಬಿಡುತ್ತಿದ್ದ. ಅಗತ್ಯವಿರುವವರಿಗೆ ತನ್ನ ಸ್ವಂತ ಬಟ್ಟೆಬರೆಯನ್ನೇ ದಾನ ಮಾಡಿಬಿಡುತ್ತಿದ್ದ. ತನ್ನ ಪರಿಚಯದ ಯಾರಿಗಾದರೂ ಕಾಯಿಲೆಯಾಗಿದೆಯೆಂದು ತಿಳಿದರೆ ಸಾಕು, ದೊಡ್ಡವರು ಚಿಕ್ಕವರು ಹೆಂಗಸರು ಗಂಡಸರೆಂಬ ಭೇದವಿಲ್ಲದೆ ಅವರ ಶುಶ್ರೂಷೆ ಮಾಡಲು ಧಾವಿಸುತ್ತಿದ್ದ.

ಧರ್ಮಶ್ರದ್ಧೆಯೆಂಬುದು ಶರಚ್ಚಂದ್ರನ ಸ್ವಭಾವದಲ್ಲೇ ಸೇರಿಕೊಂಡಿತ್ತು. ಅವನು ಎಳೆಯನಾಗಿರುವಾಗಲೇ ತಾಯಿ ಪೂಜೆ ಮಾಡುವಾಗ ಪಕ್ಕದಲ್ಲಿ ಕುಳಿತು ತೆರೆದ ಕಂಗಳಿಂದ ಪ್ರತಿಯೊಂದು ಅಂಶವನ್ನೂ ಗಮನಿಸುತ್ತಿದ್ದ; ಆಮೇಲೆ ತನ್ನ ಗೆಳೆಯರ ಮುಂದೆ ಅದನ್ನೆಲ್ಲ ತದ್ವತ್ತಾಗಿ ಮಾಡಿತೋರಿಸುತ್ತಿದ್ದ. ದುರ್ಗಾಷ್ಟಮಿ, ಕಾಳೀಪೂಜೆ— ಈ ಹಬ್ಬಗಳು ಬಂದರೆ ಇತರ ಮಕ್ಕಳಂತೆ ಗೊಂಬೆಗಳನ್ನು ಕೊಂಡು ತೃಪ್ತಿಪಟ್ಟುಕೊಳ್ಳುವವನಲ್ಲ ಅವನು. ಅವನಿಗೆ ನಿಜವಾದ ವಿಗ್ರಹಗಳೇ ಬೇಕು! ಅಂತೂ ಉಪನಯನವಾದ ಮೇಲೆ, ತನ್ನ ಮನಸ್ತೃಪ್ತಿಯಾಗುವಂತೆ ದೇವರಮನೆಯಲ್ಲಿ ಕುಳಿತು ಪೂಜೆ ಧ್ಯಾನ ಮಾಡುವ ಅವಕಾಶ ಅವನಿಗೆ ಲಭ್ಯವಾಯಿತು.

ಉತ್ತಮ ದರ್ಜೆಯಲ್ಲಿ ಎಂಟ್ರೆನ್ಸ್ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ ಶರಚ್ಚಂದ್ರ ಕಾಲೇಜು ಸೇರಿದ. ಈ ತರುಣನ ಪ್ರತಿಭೆ ಕಾಲೇಜಿನ ಪ್ರಿನ್ಸಿಪಾಲರಾದ ಫಾದರ್ ಲೆಫ್ರಾಂಟರನ್ನು ಆಕರ್ಷಿಸಿತು. ಆತನ ಆಧ್ಯಾತ್ಮಿಕ ಮನೋವೃತ್ತಿಯನ್ನು ಗುರುತಿಸಿದ ಅವರು ಸ್ವಸಂತೋಷದಿಂದ ಅವನಿಗೆ ಬೈಬಲನ್ನು ಬೋಧಿಸತೊಡಗಿದರು. ಕ್ರಿಸ್ತನ ಜೀವನ-ಬೋಧನೆಗಳು ತರುಣ ಶರಚ್ಚಂದ್ರನ ಮೇಲೆ ಅಚ್ಚಳಿಯದ ಪ್ರಭಾವ ಬೀರಿದುವು. ಇದೇ ಅವಧಿಯಲ್ಲಿ ಅವನು ಆತ್ಮೀಯ ಬಂಧು ಶಶಿಭೂಷಣನೊಂದಿಗೆ ಬ್ರಾಹ್ಮಸಮಾಜದ ತೆಕ್ಕೆಗೆ ಬಂದು ಅದರ ತತ್ತ್ವಗಳಿಗೆ ಅನುಸಾರವಾದ ಧ್ಯಾನ ಸಾಧನೆಗಳಲ್ಲಿ ತೊಡಗಿದ.

ಕಲ್ಕತ್ತಾ ನಗರದ ಜಿಜ್ಞಾಸು ತರುಣರಾದ ಶಶಿ-ಶರಚ್ಚಂದ್ರರ ಕಿವಿಗೆ ದಕ್ಷಿಣೇಶ್ವರದ ದೇವಮಾನವನ ಸುದ್ದಿ ಬೀಳುವುದು ತಡವಾಗಲಿಲ್ಲ. ಶಶಿಯ ಸಹಪಾಠಿಯೊಬ್ಬನ ಜೊತೆಯಲ್ಲಿ ಇಬ್ಬರೂ ಹೋಗಿ ಒಮ್ಮೆ ಅವರನ್ನು ನೋಡಿಕೊಂಡುಬರಲು ನಿಶ್ಚಯಿಸಿದರು.

೧೮೮೩ರ ಅಕ್ಟೋಬರ್ ತಿಂಗಳಲ್ಲೊಂದು ದಿನ ಮೂವರೂ ದಕ್ಷಿಣೇಶ್ವರಕ್ಕೆ ಬಂದರು. ಅದೇ ದಿನ ಕೇಶವಸೇನನ ಬೆಂಬಲಿಗರು ತಮ್ಮ 'ನವವಿಧಾನ' ಸಮಾಜದ ವಾರ್ಷಿಕೋತ್ಸವವನ್ನು ದಕ್ಷಿಣೇಶ್ವರದಲ್ಲಿ ಆಚರಿಸಲಿದ್ದರು. ಇವರಿಬ್ಬರನ್ನು ಕಂಡ ಶ್ರೀರಾಮಕೃಷ್ಣರು ಇವರಿಗಾಗಿಯೇ ಕಾದಿದ್ದರೋ ಎಂಬಂತೆ ಬಹಳ ಆತ್ಮೀಯತೆಯಿಂದ ಬರಮಾಡಿಕೊಂಡರು. ಅವರ ಹೆಸರುಗಳೇನು, ಎಲ್ಲಿಂದ ಬರುತ್ತಿದ್ದಾರೆ, ಏನು ಮಾಡುತ್ತಿದ್ದಾರೆ ಎಂದೆಲ್ಲ ವಿಚಾರಿಸಿದರು. ಅವರು ಬ್ರಾಹ್ಮಸಮಾಜದ ಸದಸ್ಯರಾಗಿರುವ ವಿಷಯ ತಿಳಿದು ಸಂತೋಷಗೊಂಡು ನುಡಿದರು:

"ಭೇಷ್, ಬಹಳ ಒಳ್ಳೆಯದು! ಹೆಂಚು ಹಸಿಯಾಗಿರುವಾಗಲೇ ಕಂಪೆನಿಯ ಮುದ್ರೆಯನ್ನು ಒತ್ತಿ ಆವಿಗೆಯಲ್ಲಿ ಸುಟ್ಟುಬಿಟ್ಟರೆ, ಆಮೇಲೆ ಆ ಗುರುತು ಎಂದಿಗೂ ಹೋಗುವುದಿಲ್ಲ. ಹಾಗೆಯೇ ಸಂಸಾರವನ್ನು ಪ್ರವೇಶಿಸುವ ಮುನ್ನವೇ ಆಧ್ಯಾತ್ಮದ

ಮುದ್ರೆಯನ್ನು ಮನಸ್ಸಿನಲ್ಲಿ ಒತ್ತಿಕೊಂಡುಬಿಡಬೇಕು. ಆಗ ನಾವು ಸಂಸಾರದ ಬಂಧನಕ್ಕೆ ಒಳಗಾಗುವುದಿಲ್ಲ. ಆದರೆ ಈಗೆಲ್ಲ ಜನರು ತಮ್ಮ ಗಂಡುಮಕ್ಕಳಿಗೆ ಚಿಕ್ಕ ವಯಸ್ಸಿನಲ್ಲೇ ಮದುವೆ ಮಾಡಿಬಿಡುತ್ತಿದ್ದಾರೆ. ಕಾಲೇಜಿನ ಓದು ಮುಗಿಯುವಷ್ಟರಲ್ಲಿ ಅವರಿಗೆ ಮಕ್ಕಳಾಗಿರುತ್ತವೆ. ಬಳಿಕ, ಓದು ಪೂರೈಸುತ್ತಿದ್ದಂತೆಯೇ ಸಂಸಾರಭಾರವನ್ನು ಹೊರಬೇಕಲ್ಲ! ಕೆಲಸ ಹುಡುಕಿಕೊಂಡು ಅಲೆಯುತ್ತಾರೆ. ಅಷ್ಟೊಂದು ಬಾಯಿಗಳಿಗೆ ಅನ್ನ ಒದಗಿಸುವಂಥ ಉದ್ಯೋಗ ಸುಲಭವಾಗಿ ಸಿಕ್ಕೀತೆ? ಪರದಾಡುತ್ತಿರುತ್ತಾರೆ. ಈ ಜಂಜಾಟಕ್ಕೆ ಸಿಲುಕಿಕೊಂಡ ಮೇಲೆ ಇನ್ನು ದೇವರ ವಿಷಯಕ್ಕೆ ಗಮನ ಕೊಡಲು ಸಮಯವೆಲ್ಲಿರುತ್ತದೆ ಅವರಿಗೆ?"

ಸಹಜವಾಗಿಯೇ ಅಲ್ಲಿದ್ದ ಹೊಸಬನೊಬ್ಬ ಈ ಪ್ರಶ್ನೆ ಕೇಳಿದ:

"ಮಹಾಶಯರೆ, ಹಾಗಾದರೆ ಮದುವೆಯಾಗುವುದು ತಪ್ಪು ಅನ್ನುತ್ತೀರಾ? ಮದುವೆ ಎನ್ನುವುದು ದೇವರ ಇಚ್ಛೆಗೆ ವಿರುದ್ಧವಾದುದೆ?"

ಇದಕ್ಕೆ ಶ್ರೀರಾಮಕೃಷ್ಣರು ತಾವಾಗಿಯೇ ನೇರವಾಗಿ ಉತ್ತರಿಸುವ ಬದಲು ಹೀಗೆಂದರು:

"ಎಲ್ಲಿ, ಆ ಗೂಡಿನಲ್ಲಿರುವ ಬೈಬಲ್ ತೆಗೆದು, ಅದರಲ್ಲಿ ಈ ವಿಷಯವಾಗಿ ಏನು ಹೇಳಿದೆ ಎನ್ನುವ ಭಾಗವನ್ನು ಗಟ್ಟಿಯಾಗಿ ಓದು."

ಆಶ್ಚರ್ಯ! ಶ್ರೀರಾಮಕೃಷ್ಣರು ಯಾವುದಾದರೂ ಹಿಂದೂ ಶಾಸ್ತ್ರಗ್ರಂಥವನ್ನೋ, ಸಂತರ ಮಾತುಗಳನ್ನೋ ಉದ್ಧರಿಸಿ ಹೇಳಬಹುದಾಗಿತ್ತು. ಅಥವಾ ತಾವೇ ಉತ್ತರಿಸಲೂಬಹುದಾಗಿತ್ತು. ಆದರೆ ಹಾಗೆ ಮಾಡದೆ ಕ್ರಿಸ್ತನ ಮಾತನ್ನು ಉದ್ಧರಿಸುತ್ತಿದ್ದಾರೆ. ಏಕಿರಬಹುದು? ಕಾರಣ ಸುಸ್ಪಷ್ಟ. ಇಂದು ಹೊಸದಾಗಿ ಬಂದಿರುವ ಈ ಇಬ್ಬರು ತರುಣರು ಕ್ರಿಸ್ತನ ಬೋಧನೆಗಳಿಂದ ಗಾಢವಾಗಿ ಪ್ರಭಾವಿತರಾದವರು, ಆತನ ಭಕ್ತರು, ಎಂಬುದು ಅವರಿಗೆ ಸ್ಫುಟವಾಗಿ ಗೋಚರವಾಗಿದೆ. ಆದ್ದರಿಂದಲೇ ಇವರ ಸಂಸ್ಕಾರ-ಹಿನ್ನೆಲೆಗಳಿಗೆ ಅನುಸಾರವಾಗಿ, ಮತ್ತು ಇವರ ಮನಸ್ಸನ್ನು ಗೆದ್ದುಕೊಳ್ಳುವ ರೀತಿಯಲ್ಲಿ ಬೋಧನೆ ನೀಡುತ್ತಿದ್ದಾರೆ.

ಆ ವ್ಯಕ್ತಿ ಬೈಬಲಿನಿಂದ ಮದುವೆಗೆ ಸಂಬಂಧಪಟ್ಟ ಭಾಗವನ್ನು ಓದಿದ. "ಯಾರಿಗೆ ಬ್ರಹ್ಮಚರ್ಯಪಾಲನೆ ಮಾಡಬಲ್ಲ ಶಕ್ತಿಯಿದೆಯೋ ಅಂಥವರು ಮದುವೆಯಾಗದಿರಲಿ; ಅದೇ ಶ್ರೇಯಸ್ಕರವಾದದ್ದು. ಆದರೆ ಆ ಶಕ್ತಿಯಿಲ್ಲದವರು ಮಾತ್ರ ಸುಮ್ಮನೆ ಒಳಗೊಳಗೇ ಕುದಿಯುವುದಕ್ಕಿಂತ ಮದುವೆಯಾಗುವುದು ಒಳ್ಳೆಯದು"—ಇದು ಅದರ ಸಾರಾಂಶ. ಅವನು ಅದನ್ನು ಓದಿದ ಬಳಿಕ ಶ್ರೀರಾಮಕೃಷ್ಣರು ಅದನ್ನು ಅನುಮೋದಿಸುತ್ತ ನುಡಿದರು: "ನಿಜ; ಮದುವೆಯೇ ಎಲ್ಲ ಬಂಧನಗಳ ಮೂಲ."

ಆಗ ಇನ್ನೊಬ್ಬ ಕೇಳಿದ: "ಅಲ್ಲಾ, ಹಾಗಾದರೆ ಜನರು ಮದುವೆಯಾಗದೆ ಸೃಷ್ಟಿಕಾರ್ಯ ಮುಂದುವರಿಯುವುದೆಂತು?"

ಶ್ರೀರಾಮಕೃಷ್ಣರು (ಮುಗುಳ್ನಕ್ಕು): "ಆ ಬಗ್ಗೆ ಚಿಂತಿಸಬೇಡ. ಯಾರಿಗೆ ಇಷ್ಟವಿದೆಯೋ ಅವರಿಗೆ ಮದುವೆಯಾಗಲು ಸಂಪೂರ್ಣ ಸ್ವಾತಂತ್ರ್ಯವಿದೆ. ನಾನೀಗ ಹೇಳಿದ ಮಾತು ನಮ್ಮನಮ್ಮೊಳಗಿನದ್ದು. ನನಗೆ ಹೇಳಬೇಕೆನಿಸಿದ್ದನ್ನು ಹೇಳಿಬಿಡುತ್ತೇನೆ. ಅದರಲ್ಲಿ ಬೇಕಾದ್ದನ್ನು ಸ್ವೀಕರಿಸುವ, ಬೇಡವಾದ್ದನ್ನು ಬಿಡುವ ಸ್ವಾತಂತ್ರ್ಯ ನಿಮಗಿದೆ."

ಅನಂತರ ಮಾತಿನ ನಡುವೆ ಅವರು ಶಶಿಯನ್ನು ಕೇಳಿದರು: "ಒಳ್ಳೇದು, ನಿನಗೆ

ಭಗವಂತನ ಸಾಕಾರತತ್ತ್ವದಲ್ಲಿ ನಂಬಿಕೆಯೋ ಅಥವಾ ನಿರಾಕಾರದಲ್ಲೋ ?"

ತನ್ನ ಋಜುಸ್ವಭಾವಕ್ಕನುಗುಣವಾಗಿ ಶಶಿ ತಕ್ಷಣ ಉತ್ತರಿಸಿದ: "ನನಗಿನ್ನೂ ದೇವರ ಅಸ್ತಿತ್ವದಲ್ಲೇ ಪೂರ್ತಿ ನಂಬಿಕೆ ಹುಟ್ಟಿಲ್ಲ. ಹಾಗಿರುವಾಗ ಈ ಪ್ರಶ್ನೆಗೆ ಹೇಗೆ ಉತ್ತರಿಸಲಿ ?"

ಮುಚ್ಚುಮರೆಯಿಲ್ಲದ ಈ ಉತ್ತರವನ್ನು ಕೇಳಿ ಶ್ರೀರಾಮಕೃಷ್ಣರು ಬಹಳ ಸಂಪ್ರೀತರಾದರು.

ಬಳಿಕ ಅವರು ತ್ಯಾಗಜೀವನದ ವೈಭವವನ್ನು ಸ್ಫೂರ್ತಿಯುಕ್ಕುವ ರೀತಿಯಲ್ಲಿ ಬಣ್ಣಿಸತೊಡಗಿದರು. ಅದನ್ನು ಕೇಳುತ್ತಿದ್ದಂತೆ ಶಶಿ, ಶರಚ್ಚಂದ್ರರಿಬ್ಬರಿಗೂ ಹೊಸ ಜೀವನ ದೃಷ್ಟಿಯೇ ದೊರೆತಂತಾಯಿತು. ಶ್ರೀರಾಮಕೃಷ್ಣರ ಅನಿರ್ವಚನೀಯ ವ್ಯಕ್ತಿತ್ವ ಅವರಿಗೆ ಮೋಡಿ ಹಾಕಿತು.

ಸ್ವಲ್ಪ ಹೊತ್ತಿನ ಮೇಲೆ ಅವರು ಶ್ರೀರಾಮಕೃಷ್ಣರಿಂದ ಬೀಳ್ಕೊಂಡು ಹೊರಟರು. ಹೋಗುತ್ತ ದಾರಿಯಲ್ಲಿ, "ಇನ್ನು ಮೇಲೆ ಆಗಾಗ ಈ ಸಾಧುವಿನ ಬಳಿಗೆ ಹೋಗೋಣ. ಆಧ್ಯಾತ್ಮಿಕ ಜೀವನದ ರಹಸ್ಯವನ್ನು ಕಲಿಯಬೇಕು ಎನ್ನುವವರು ಇವರ ಬಳಿಗೇ ಹೋಗಬೇಕು" ಎಂದು ಮಾತನಾಡಿಕೊಂಡರು. ಆಗಿನಿಂದ ಅವರು ಅವಕಾಶವಾದಾಗ ಲೆಲ್ಲ ದಕ್ಷಿಣೇಶ್ವರಕ್ಕೆ ಹೋಗಿಬರಲಾರಂಭಿಸಿದರು. ಶರಚ್ಚಂದ್ರನ ಕಾಲೇಜಿಗೆ ಗುರುವಾರ ಬಿಡುವಿರುತ್ತಿದ್ದುದರಿಂದ ಅವನು ಅಂದು ತಪ್ಪದೆ ಹೋಗುತ್ತಿದ್ದ.

ಶಶಿಭೂಷಣನಂತೂ ಶ್ರೀರಾಮಕೃಷ್ಣರ ಬಳಿಗೆ ಬಂದ ಕೆಲಕಾಲದಲ್ಲೇ ಅವರ ಪ್ರೇಮಪ್ರವಾಹದ ಸುಳಿಯೊಳಗೆ ಸಿಲುಕಿಕೊಂಡುಬಿಟ್ಟ. ದಿನದಿನಕ್ಕೂ ಅವನಿಗೆ ಲೋಕದ ಇತರೆಲ್ಲ ವಸ್ತುಗಳ ಮೇಲಿನ ಆಕರ್ಷಣೆ ಕಡಮೆಯಾಗುತ್ತ ಬಂತು. ಶ್ರೀರಾಮಕೃಷ್ಣರ ಸೆಳೆತದ ಮುಂದೆ ಕಾಲೇಜಿನ ಪಾಠಪ್ರವಚನಗಳ ಮೇಲಿನ ಶ್ರದ್ಧೆ ಯಾಗಲಿ, ಉತ್ತಮ ದರ್ಜೆ ಗಳಿಸಬೇಕೆಂಬ ಆಕಾಂಕ್ಷೆಯಾಗಲಿ ನಿಲ್ಲದಾಯಿತು.

ಒಮ್ಮೆ ಅವನು ದಕ್ಷಿಣೇಶ್ವರದಲ್ಲಿದ್ದಾಗ, ಸೂಫಿ ಕವಿಗಳು ರಚಿಸಿದ ಪಾರಸೀ ಭಾಷೆಯ ಕವನಗಳನ್ನು ಅತ್ಯಾಸಕ್ತಿಯಿಂದ ಓದುತ್ತ ಕುಳಿತಿದ್ದ.* ಶ್ರೀರಾಮಕೃಷ್ಣರು ಯಾವುದೋ ಕಾರಣಕ್ಕೆ "ಶಶೀ" ಎಂದು ಕೂಗಿದರು. ಕವನಗಳಲ್ಲೇ ಮುಳುಗಿ ಮೈ ಮರೆತಿದ್ದ ಅವನಿಗೆ, ಹೀಗೆ ಎರಡು ಬಾರಿ ಕೂಗಿದರೂ ಕೇಳಿಸಲಿಲ್ಲ. ಕೊನೆಗೆ ಮೂರ ನೆಯ ಬಾರಿ ಕರೆ ಕೇಳಿಸಿ ಓಡಿಬಂದ. ಆಗ ಶ್ರೀರಾಮಕೃಷ್ಣರು ಚುಟುಕಾಗಿ ಅವನಿ ಗೊಂದು ಮಾತು ಹೇಳಿದರು: "ನೋಡು, ನೀನು ಓದಿನಲ್ಲೇ ಮುಳುಗಿ ಕರ್ತವ್ಯವನ್ನು ಮರೆತರೆ ನಿನ್ನ ಭಕ್ತಿಯನ್ನೆಲ್ಲ ಕಳೆದುಕೊಳ್ಳುತ್ತೀ, ಅಷ್ಟೆ."

ಈ ಮಾತು ಅವನ ಹೃದಯವನ್ನು ನಾಟಿತು. ಅವನಿಗೆ ತುಂಬ ನಾಚಿಕೆ ಯಾಯಿತು. ಇನ್ನೊಂದು ಕ್ಷಣವೂ ತಡಮಾಡದೆ, ತನ್ನ ಪಾರಸೀ ಪುಸ್ತಕಗಳನ್ನೆಲ್ಲ ತೆಗೆದುಕೊಂಡು ಹೋಗಿ ಗಂಗೆಯಲ್ಲಿ ಬಿಸಾಡಿ ಬಂದ. ಅಂದಿನಿಂದ ಪುಸ್ತಕವಿದ್ಯೆಯ ವ್ಯಾಮೋಹ ಅವನನ್ನು ಪೂರ್ತಿಯಾಗಿ ಬಿಟ್ಟಿತು. ತ್ರಿಕರಣಪೂರ್ವಕವಾಗಿ ಶ್ರೀರಾಮ ಕೃಷ್ಣರಲ್ಲಿ ಶರಣಾಗಿ, ಅವರ ಆದೇಶಗಳನ್ನು ವೇದವಾಕ್ಯಕ್ಕಿಂತ ಮಿಗಿಲಾಗಿ ಪರಿಭಾವಿಸಿ,

---

*ಆ ದಿನಗಳಲ್ಲಿ, ಪಾರಸೀ ಭಾಷೆಯನ್ನು ಕಲಿತಿರುವುದೆಂದರ ಸುಸಂಸ್ಕೃತಿಯ, ಉತ್ತಮ ಅಭಿರುಚಿಯ ಲಕ್ಷಣವೆನಿಸಿತ್ತು.

ಅನುಷ್ಠಾನಕ್ಕೆ ತರುವ ಪ್ರಯತ್ನದಲ್ಲಿ ತೊಡಗಿದ. ಶ್ರೀಗುರುಸೇವೆಯೇ ಅವನ ಜೀವನದ ಉಸಿರಾಯಿತು.

ಶಶಿಯಂತೆಯೇ ಶರಚ್ಚಂದ್ರನೂ ಶೀಘ್ರದಲ್ಲೇ ಶ್ರೀರಾಮಕೃಷ್ಣರ ಆಪ್ತವರ್ಗಕ್ಕೆ ಸೇರಿಕೊಂಡ. ಪ್ರಥಮ ನೋಟಕ್ಕೇ ಶ್ರೀರಾಮಕೃಷ್ಣರು ಅವನ ವೈರಾಗ್ಯದ ಆಳವನ್ನು ಗುರುತಿಸಿ ಮೆಚ್ಚಿದರು. ಮತ್ತು ಅವನ ಸ್ವಭಾವಕ್ಕೆ ತಕ್ಕ ರೀತಿಯಲ್ಲಿ ಆಧ್ಯಾತ್ಮಿಕ ಶಿಕ್ಷಣ ನೀಡಲಾರಂಭಿಸಿದರು. ಒಂದು ದಿನ ಅವರು ಭಕ್ತರೆದುರಿನಲ್ಲಿ ಭಗವಾನ್ ಗಣೇಶನ ಗುಣಗಳನ್ನು ಬಣ್ಣಿಸುತ್ತಿದ್ದರು. ಹದಿವಯಸ್ಸಿನ ಶರಚ್ಚಂದ್ರನೂ ಅಲ್ಲಿದ್ದ. ಗಣೇಶನ ಶ್ರದ್ಧೆ, ಕಾರ್ಯನಿಷ್ಠೆ, ಮಾತೃಭಕ್ತಿ, ಎಲ್ಲಕ್ಕಿಂತ ಮಿಗಿಲಾಗಿ ಆತನ ಪರಮ ಪರಿಶುದ್ಧ ಚಾರಿತ್ರ್ಯ, ಬ್ರಹ್ಮಚರ್ಯ—ಇವುಗಳನ್ನು ಅವರು ಹೇಗೆ ಮನಮುಟ್ಟುವಂತೆ ಚಿತ್ರಿಸಿದ ರೆಂದರೆ ಅದನ್ನು ಕೇಳುತ್ತ ಶರಚ್ಚಂದ್ರ ರೋಮಾಂಚಗೊಂಡ. ಗಣೇಶನ ವ್ಯಕ್ತಿತ್ವ ಆತನ ಮನಸೂರೆಗೊಂಡಿತು. ಅವನು ಭಾವಭರಿತನಾಗಿ, "ಸ್ವಾಮಿ ! ನಾನು ಗಣೇಶನ ವ್ಯಕ್ತಿತ್ವ ವನ್ನು ಬಹಳವಾಗಿ ಮೆಚ್ಚಿದ್ದೇನೆ. ಅವನೇ ನನ್ನ ಆದರ್ಶ !" ಎಂದುದ್ಗರಿಸಿದ. ಆದರೆ, ಅದಾಗಲೇ ಆತನ ಅಂತರಂಗದಾಳವನ್ನು ಹೊಕ್ಕು ನೋಡಿದ್ದ ಶ್ರೀರಾಮಕೃಷ್ಣರು, "ಅಲ್ಲ ಅಲ್ಲ, ನಿನ್ನ ಇಷ್ಟದೇವತೆ ಶಿವ. ನಿನ್ನಲ್ಲಿ ಶಿವನ ಗುಣಗಳಿವೆ" ಎಂದು ಅವನಿಗೆ ತಿಳಿಸಿ ಕೊಟ್ಟರು. ಬಳಿಕ ನುಡಿದರು: "ಸಮುದ್ರಮಥನದ ಸಮಯದಲ್ಲಿ ಉದ್ಭವಿಸಿದ ವಿಷ ವನ್ನು ಶಿವ ತಾನು ಕುಡಿದು, ಅಮೃತವನ್ನು ಇತರರಿಗೆ ಬಿಟ್ಟುಕೊಡಲಿಲ್ಲವೆ ?. . . ನೀನೂ ನಿನ್ನ ಜೀವನದಲ್ಲಿ ಹಾಗೇ ಮಾಡಬೇಕು. ಯಾವಾಗಲೂ ದ್ವೇಷಕ್ಕೆ ಪ್ರತಿಯಾಗಿ ಪ್ರೀತಿಯನ್ನೇ ಕೊಡು, ಅಸಹನೆಯಿರುವವರಲ್ಲಿ ಸಮಾಧಾನದಿಂದಿರು, ಜೀವಿಗಳಲ್ಲಿ ಸಮದೃಷ್ಟಿಯಿಡು, ನೊಂದವರಿಗೆ ಸಹಾನುಭೂತಿ ತೋರು."

ಅದಾಗಲೇ ಅವನಲ್ಲಿದ್ದ ಈ ಎಲ್ಲ ಗುಣಗಳು, ದಿನಗಳೆದಂತೆ ಮತ್ತಷ್ಟು ನಿಚ್ಚಳ ವಾಗಿ ವ್ಯಕ್ತಗೊಳ್ಳತೊಡಗಿದುವು.

ಮತ್ತೊಂದು ದಿನ ಅವರು ಕೇಳಿದರು: "ಏನಪ್ಪಾ, ಭಗವಂತನನ್ನು ಯಾವ ರೂಪದಲ್ಲಿ ಸಾಕ್ಷಾತ್ಕರಿಸಿಕೊಳ್ಳಲು ನಿನಗಿಷ್ಟ ? ಧ್ಯಾನಕಾಲದಲ್ಲಿ ಎಂತಹ ದರ್ಶನಾನು ಭವಗಳನ್ನು ಪಡೆಯಲು ಬಯಸುತ್ತೀಯೆ ? ಹೇಳು."

ಶರಚ್ಚಂದ್ರ: "ಧ್ಯಾನದ ಅವಧಿಯಲ್ಲಿ ಭಗವಂತನನ್ನು ಯಾವುದೇ ವಿಶಿಷ್ಟ ರೂಪ ದಲ್ಲಿ ಕಾಣಬೇಕೆಂಬ ಆಸೆ ನನಗಿಲ್ಲ. ಅವನು ಜಗತ್ತಿನ ಸಕಲ ಜೀವಿಗಳಲ್ಲೂ ವ್ಯಕ್ತ ಗೊಳ್ಳುತ್ತಿರುವುದನ್ನು ನೋಡಬೇಕು ಎನ್ನುವುದೊಂದೇ ನನ್ನ ಇಷ್ಟ. ದರ್ಶನಗಳಲ್ಲೆಲ್ಲ ನನಗೇನೂ ಮನಸ್ಸಿಲ್ಲ."

ಈ ಎಳೆಯನಿಂದ ಇಂಥ ಪ್ರಬುದ್ಧ ಉತ್ತರವನ್ನು ಕೇಳಿ ಶ್ರೀರಾಮಕೃಷ್ಣರು ವಿಸ್ಮಯಗೊಂಡರು; ಮಂದಹಾಸಯುಕ್ತರಾಗಿ ನುಡಿದರು: "ಓ ! ಅದು ಆಧ್ಯಾತ್ಮಿಕ ಜೀವನದಲ್ಲಿ ಕಟ್ಟಕಡೆಯ ಸಿದ್ಧಿ. ಒಮ್ಮೆಗೇ ಸಿಕ್ಕಿಬಿಡುವುದಿಲ್ಲ ಅದು !"

ಶರತ್: "ಇರಬಹುದು, ಅದಕ್ಕಿಂತ ಕಡಿಮೆಯ ಯಾವುದರಲ್ಲೂ ನನಗೆ ತೃಪ್ತಿ ಯಿಲ್ಲ. ಆ ಸ್ಥಿತಿಯನ್ನು ಮುಟ್ಟುವವರೆಗೂ ನಾನು ಪ್ರಯತ್ನ ಬಿಡದೆ ಮುಂದು ವರಿಯುತ್ತೇನೆ."

ಶ್ರೀರಾಮಕೃಷ್ಣರು ಸುಪ್ರೀತರಾಗಿ ಅವನನ್ನು ಮನಸಾರೆ ಹರಸಿದರು.

ಶ್ರೀರಾಮಕೃಷ್ಣರ ಆಪ್ತ ಶಿಷ್ಯರಲ್ಲಿ ಪ್ರತಿಯೊರ್ವನ ಮನೋಧರ್ಮವೂ ವಿಶಿಷ್ಟ ವಾದುದು. ಒಬ್ಬನಂತೆ ಮತ್ತೊಬ್ಬನಿಲ್ಲ. ಈ ಶಿಷ್ಯರ ಪೈಕಿ, ವೇದಕಾಲದ ಋಷಿಮುನಿ ಗಳು ಸಾಧಿಸಿ ಬೋಧಿಸಿದ ತ್ಯಾಗ-ವೈರಾಗ್ಯಗಳ ಹಾಗೂ ಅದ್ವೈತ ವೇದಾಂತ ತತ್ತ್ವಗಳ ಮಹಾ ಆದರ್ಶಗಳನ್ನು ಅತ್ಯುತ್ತಮ ರೀತಿಯಲ್ಲಿ ಮೈಗೂಡಿಸಿಕೊಂಡಿದ್ದವನೆಂದರೆ ಹರಿನಾಥ ಚಟರ್ಜಿ.

ಉತ್ತರ ಕಲ್ಕತ್ತದ ಬ್ರಾಹ್ಮಣಕುಟುಂಬವೊಂದರಲ್ಲಿ ಇವನ ಜನನ (೧೮೬೩). ಚಿಕ್ಕಂದಿನಲ್ಲೇ ತಾಯ್ತಂದೆಯರಿಬ್ಬರೂ ತೀರಿಹೋದರು. ಅಣ್ಣ-ಅತ್ತಿಗೆಯರೇ ಆಶ್ರಯ ದಾತರಾದರು. ಸಣ್ಣವನಿದ್ದಾಗಿನಿಂದಲೂ ಹರಿ ಸ್ವಾತಂತ್ರ್ಯಪ್ರೇಮಿ, ಸ್ವಾಭಿಮಾನಿ; ಸ್ವಭಾವ ಗಂಭೀರ. ಆ ವಯಸ್ಸಿನಲ್ಲೇ ಅವನಲ್ಲಿ ನಿಶ್ಚಲ ಧರ್ಮನಿಷ್ಠೆ ವ್ಯಕ್ತವಾಗುತ್ತಿದ್ದುದನ್ನು ಕಂಡು ಜನರೆಲ್ಲ ಆಶ್ಚರ್ಯ ಪಡುತ್ತಿದ್ದರು. ಅವನ ಗುಣವಿಶೇಷಗಳನ್ನು ಮನಗಂಡು ಆತನ ತಂದೆ ತನ್ನ ಮರಣಕಾಲದಲ್ಲಿ, "ಹರಿ ಇಡೀ ಜಗತ್ತಿಗೆ ಸೇರಿದವನಾಗುತ್ತಾನೆ, ಇಡೀ ಜಗತ್ತನ್ನೇ ಗೆದ್ದವನಾಗುತ್ತಾನೆ" ಎಂಬ ಉದ್ಗಾರ ಮಾಡಿದ್ದ.

ಹರಿನಾಥ ಶಾಲೆಯಲ್ಲಿ ಸಾಕಷ್ಟು ಮುಂದಿದ್ದ. ಸಹಪಾಠಿಗಳಿಗೆಲ್ಲ ಅವನೇ ನಾಯಕ. ಅಂಗಸಾಧನೆಯಿಂದ ಗಳಿಸಿದ ಶರೀರಸಂಪತ್ತೂ ಅವನದಾಗಿತ್ತು. ಆದರೆ ಅವನ ಮಹದಭಿಲಾಷೆಯೆಂದರೆ ತಾನು ತೇಜೋವಂತನೂ ಪರಮ ಆಚಾರವಂತನೂ ಆದ ಋತ್ವಿಕನಾಗಬೇಕು ಎಂಬುದು. ಅವನ ಪ್ರತಿಯೊಂದು ಚಟುವಟಿಕೆಯೂ ಆ ಉದ್ದೇಶದ ಮೇಲೆಯೇ ಕೇಂದ್ರಿತವಾಗಿತ್ತು. ಉಪನಯನವಾದಾಗಿನಿಂದ ಅವನು ಪ್ರತಿ ದಿನವೂ ಮೂರು ಬಾರಿ ಸ್ನಾನ ಮಾಡಿ ಶ್ರದ್ಧೆಯಿಂದ ಆಹ್ನಿಕಗಳನ್ನೂ ಗಾಯತ್ರೀಮಂತ್ರ ಜಪವನ್ನೂ ಮಾಡಲಾರಂಭಿಸಿದ. ತನ್ನ ಅಡಿಗೆಯನ್ನು ತಾನೇ ಬೇಯಿಸಿಕೊಳ್ಳುತ್ತಿದ್ದ— ಶುದ್ಧ ಸರಳ ಸಾತ್ವಿಕ ಆಹಾರ. ಮಲಗುತ್ತಿದ್ದುದು ಬರಿಯ ನೆಲದ ಮೇಲೆ. ತಾರುಣ್ಯಕ್ಕೆ ಕಾಲಿಟ್ಟಾಗಿನಿಂದಲೂ ಕಟ್ಟುನಿಟ್ಟಿನ ಬ್ರಹ್ಮಚರ್ಯವನ್ನು ಪರಿಪಾಲಿಸಿದ.

ಹೀಗೆ ಯಾರ ಮಾರ್ಗದರ್ಶನವೂ ಇಲ್ಲದೆಯೇ ಹರಿನಾಥ ಕಠಿಣ ಆಧ್ಯಾತ್ಮಿಕ ಜೀವನವನ್ನು ನಡೆಸುತ್ತ ಬಂದ. ಮನಸ್ಸನ್ನು ಕಾಮನೆಗಳಿಂದ ಮುಕ್ತವಾಗಿಸಿಕೊಳ್ಳಲು ತಪ್ಪದೆ ಧ್ಯಾನಾಭ್ಯಾಸ ಮಾಡುತ್ತಿದ್ದ. ದಿನದಲ್ಲಿ ಮೂರ್ನಾಲ್ಕು ಗಂಟೆಗಳಿಂತ ಹೆಚ್ಚಾಗಿ ನಿದ್ರಿಸುತ್ತಿರಲಿಲ್ಲ. ದಿನಕ್ರಮೇಣ ಇನ್ನಷ್ಟು ಅಂತರ್ಮುಖಿಯಾಗಿ, ಜಗತ್ತಿನಲ್ಲಿ ಯಾವುದು ನಿತ್ಯ, ಯಾವುದು ಅನಿತ್ಯ ಎಂಬ ನಿತ್ಯಾನಿತ್ಯವಸ್ತುವಿವೇಚನೆಯಲ್ಲಿ ಮುಳುಗಲಾರಂಭಿ ಸಿದ. ಆದರಿಂದಾಗಿ ನಿದ್ರೆ ಇನ್ನೂ ಕಡಮೆಯಾಯಿತು. ಕಡೆಕಡೆಗೆ ನಿದ್ರೆಯೇ ಬಾರ ದಂತಾಗಿ, ಬಲವಂತದಿಂದ ನಿದ್ರೆಯನ್ನು ತಂದುಕೊಳ್ಳಬೇಕಾದ ಸ್ಥಿತಿ ಬಂದೊದಗಿತು ! ಆಗ ಅವನಿಗೆ 'ನನ್ನ ಬುದ್ಧಿ ಪಲ್ಲಟವಾಗಿಲ್ಲ ತಾನೆ ?' ಎಂಬ ಸಂದೇಹವೂ ಬರುತ್ತಿತ್ತು. ಆದರೆ ಈ ಬಗೆಯ ವಿಚಾರಪರತೆಯಿಂದ ತನಗೆ ಲಭಿಸುತ್ತಿರುವ ಆನಂದವನ್ನು ನೆನಪಿಸಿ ಕೊಂಡು ಸಮಾಧಾನ ತಂದುಕೊಳ್ಳುತ್ತಿದ್ದ.

ತರುಣ ಹರಿನಾಥ ತನ್ನ ಹೆಚ್ಚಿನ ವೇಳೆಯನ್ನು ಮಂತ್ರ-ಸ್ತೋತ್ರಪಠನದಲ್ಲೂ,

ಧರ್ಮಗ್ರಂಥಗಳ ಅಧ್ಯಯನದಲ್ಲೂ ವಿನಿಯೋಗಿಸುತ್ತಿದ್ದ. ಅವನಿಗೆ ಭಗವದ್ಗೀತೆ, ಚಂಡೀ (ದೇವೀ ಭಾಗವತ), ಶಂಕರಾಚಾರ್ಯರ ವಿವೇಕಚೂಡಾಮಣಿ, ತುಲಸೀ ರಾಮಾಯಣ ಮುಂತಾದುವು ಬಾಯಿಪಾಠವಾಗಿದ್ದುವು. ಪ್ರತಿದಿನ ಮುಂಜಾನೆ ಮೂರು ಗಂಟೆಯೊಳಗಾಗಿ ಎದ್ದು ಗಂಗಾನದಿಯಲ್ಲಿ ಸ್ನಾನ ಮುಗಿಸಿ ಬಂದು ಗೀತಾ ಪಠನಕ್ಕೆ ಕುಳಿತುಕೊಳ್ಳುತ್ತಿದ್ದ. ಭಕ್ತಿರಸಪೂರ್ಣವಾದ ಹಾಡುಗಳನ್ನೂ ಹೇಳಿಕೊಳ್ಳುತ್ತಿದ್ದ.

ಆದರೆ ಬುದ್ಧಿ ತಿಳಿದಾಗಿನಿಂದಲೂ ಅವನ ಒಲವು ಅದ್ವೈತವೇದಾಂತದಲ್ಲಿ. ಅದ್ವೈತಪರವಾದ ಉಪನಿಷತ್ತುಗಳೇ ಮೊದಲಾದ ಗ್ರಂಥಗಳನ್ನು ಅವನು ಅತ್ಯಂತ ಆಸ್ಥೆಯಿಂದ ಅಧ್ಯಯನ ಮಾಡುತ್ತಿದ್ದ. ಅವುಗಳ ಬೋಧನೆಯ ಕುರಿತಾಗಿಯೇ ಸದಾ ಚಿಂತನೆ ನಡೆಸುತ್ತ, ಕ್ರಮೇಣ ಆ ಭಾವದಲ್ಲೇ ಮುಳುಗಿರತೊಡಗಿದ. 'ನಾನು ಆತ್ಮ, ನಾನು ಈ ದೇಹವಲ್ಲ, ಬುದ್ಧಿ ಮನಸ್ಸುಗಳಲ್ಲ, ನನಗೆ ಸಾವಿಲ್ಲ. ಸತ್-ಚಿತ್- ಆನಂದ ಸ್ವರೂಪನಾದ, ಏಕಮೇವಾದ್ವಿತೀಯನಾದ ಪರಬ್ರಹ್ಮವೇ ನಾನು' ಎಂಬ ಭಾವವನ್ನು ರಕ್ತಗತಗೊಳಿಸಿಕೊಳ್ಳುವ ಯತ್ನದಲ್ಲಿ ಅಹರ್ನಿಶಿಯೂ ನಿರತನಾದ. ಮತ್ತು ಆ ತತ್ತ್ವಕ್ಕನುಸಾರವಾಗಿ ತನ್ನ ದೈನಂದಿನ ಜೀವನವನ್ನು ನಡೆಸಲೂ ತೊಡಗಿದ. ಅವನ ಆ ಆತ್ಮಭಾವಕ್ಕೆ ಒಂದು ದಿನ ಕಠಿಣ ಪರೀಕ್ಷೆಯೊದಗಿತು:

ಎಂದಿನಂತೆ ಅವನು ನಸುಕಿನಲ್ಲೇ ಎದ್ದು ಸ್ನಾನಕ್ಕಾಗಿ ಗಂಗೆಗೆ ಹೋಗಿ ಮುಳುಗು ಹಾಕುತ್ತಿದ್ದಾನೆ. ಆಗ ನೀರಿನಲ್ಲಿ ಏನೋ ಒಂದು ವಸ್ತು ತೇಲುತ್ತಿರುವುದು ಕಂಡಿತು. ಅರ್ಧಂಬರ್ಧ ಬೆಳಕಿನಲ್ಲಿ ಅವನಿಗೆ ಅದೇನೆಂದು ತಿಳಿಯಲಿಲ್ಲ. ಆದರೆ ದೂರದಲ್ಲಿ ನಿಂತಿದ್ದ ಕೆಲವರು ಅದನ್ನು ಕಂಡು, "ಹೋಯ್! ಮೊಸಳೆ ಮೊಸಳೆ! ಈ ಕಡೆ ಬಾ ಬೇಗ!" ಎಂದು ಕಿರುಚಿಕೊಂಡರು. ಮಾನವಸಹಜ ಭಯದಿಂದ ಹರಿ ಕೂಡಲೇ ದಡಕ್ಕೆ ಧಾವಿಸಿದ. ಆದರೆ ಮರುಕ್ಷಣವೇ ತನಗೆ ತಾನೇ ಹೇಳಿಕೊಂಡ: 'ಛೆ, ಇದೇನಯ್ಯ ನೀನು ಮಾಡಿದ್ದು? ಹಗಲೂ ರಾತ್ರಿ "ಸೋಽಹಂ, ಸೋಽಹಂ" ಅನ್ನುತ್ತಿರುತ್ತೀಯೆ. ನೋಡಿದರೆ ಈಗ ಜೀವದಾಸೆಯಿಂದ ಓಡಿಬಂದೆಯಲ್ಲ! ಎಂಥ ನಾಚಿಕೆಗೇಡು!' ಈಗ ಅವನೊಳಗೆ ಹೊಸ ಧೈರ್ಯ ಉಕ್ಕಿತು. ಮತ್ತೆ ನೀರಿಗಿಳಿದ. ಆದರೆ ಪುನಃ, ತನ್ನನ್ನು ತಾನೇ ಗಮನಿಸಿಕೊಂಡಾಗ ತಾನು ಅವಸರದಿಂದ ಸ್ನಾನ ಮಾಡುತ್ತಿರುವುದು ಗೊತ್ತಾಯಿತು. ಪ್ರಯತ್ನಪೂರ್ವಕವಾಗಿ ತನ್ನನ್ನು ಶಾಂತಗೊಳಿಸಿಕೊಳ್ಳುತ್ತ, ಎಂದಿನಂತೆಯೇ ಸ್ನಾನಮಾಡಿ ಮುಗಿಸಿದ. ಮೊಸಳೆ ಅದೇಕೋ ಅವನ ತಂಟೆಗೆ ಬರಲೇ ಇಲ್ಲ.

ಹರಿನಾಥ ಹೀಗೆ ತನ್ನ ಓರಗೆಯವರೆಲ್ಲರಿಗಿಂತ ವಿಭಿನ್ನವಾದ, ಇಂತಹ ಕಠಿಣ ಸಾಧನಾಮಯ ಜೀವನ ನಡೆಸುತ್ತಿರುವುದನ್ನು ಕಂಡು ಎಲ್ಲರೂ ವಿಸ್ಮಯಗೊಳ್ಳುತ್ತಿದ್ದರು. ಕೆಲವರು ಆಕ್ಷೇಪಿಸುತ್ತಲೂ ಇದ್ದರು. ಆದರೆ ಅವನ ಅಣ್ಣ ಮಾತ್ರ ಅವನನ್ನು ಯಾವ ರೀತಿಯಲ್ಲೂ ಪ್ರತಿಬಂಧಿಸದೆ ಪ್ರೋತ್ಸಾಹವನ್ನೇ ನೀಡುತ್ತ ಬಂದ. ಹೀಗೆ ಅವನ ಆಧ್ಯಾತ್ಮಿಕ ಜೀವನವೇನೋ ಸುಗಮವಾಯಿತಾದರೂ ಶಾಲೆಯ ಕಡೆಗೆ ಗಮನವಿಲ್ಲದಂತಾಗಿ ಎಂಟ್ರೆನ್ಸ್ ಪರೀಕ್ಷೆಗೇ ಓದು ನಿಂತಿತು.

ಅವನು ಹೀಗೆಯೇ ಮುಂದುವರಿದಿದ್ದರೆ, ತನ್ನ ಅಭಿಲಾಷೆಯಂತೆ ಒಬ್ಬ ಬ್ರಾಹ್ಮಣಶ್ರೇಷ್ಠನಾಗಿ ರೂಪುಗೊಳ್ಳುತ್ತಿದ್ದನೇನೋ. ಆದರೆ ಅವನ ಜನ್ಮೋದ್ದೇಶ ಅದಕ್ಕಿಂತಲೂ ಬಹಳ ಉನ್ನತವಾದದ್ದಾಗಿತ್ತು. ಅದನ್ನು ಅವನು ಕಂಡುಕೊಂಡದ್ದು ಶ್ರೀರಾಮಕೃಷ್ಣರನ್ನು ಕಂಡ ಮೇಲೆಯೇ.

ಹರಿನಾಥನ ಮನೆಯಿದ್ದ ಬಾಗ್ ಬಜಾರಿನಲ್ಲೇ ಶ್ರೀರಾಮಕೃಷ್ಣರ ಅನೇಕ ಪ್ರಮುಖ ಭಕ್ತರು ವಾಸವಾಗಿದ್ದುದು. ಆದ್ದರಿಂದ ಅವರು ಅಲ್ಲಿಗೆ ಆಗಾಗ ಬರುತ್ತಲೇ ಇದ್ದರು. ಹೀಗೆ ಅವರು ಒಮ್ಮೆ ದೀನನಾಥ ಬೋಸ್ ಎಂಬಾತನ ಮನೆಗೆ ಬಂದಿದ್ದಾಗ ಹರಿಗೆ ಅವರ ಮೊದಲ ದರ್ಶನಲಾಭ ದೊರಕಿತು. ಅವನಿಗೆ ಆಗಿನ್ನೂ ಸುಮಾರು ಹದಿನೈದು ವರ್ಷ. ಆದೊಂದು ದಿನ, ಅವರು ದೀನನಾಥನ ಮನೆಗೆ ಬರುತ್ತಾರೆಂದು ಕೇಳಿ ಅಲ್ಲಿಗೆ ಹೋಗಿದ್ದ. ಶ್ರೀರಾಮಕೃಷ್ಣರು ಗಾಡಿಯಿಂದ ಇಳಿಯುವಾಗ ಭಗವದ್ಭಾವ ದಿಂದ ಸಂಪೂರ್ಣ ಮತ್ತರಾಗಿದ್ದರು. ಮದ್ಯಪಾನ ಮಾಡಿದವರಂತೆ, ಶರೀರದ ಮೇಲೆ ನಿಯಂತ್ರಣವೇ ಇಲ್ಲದೆ ತೂರಾಡುತ್ತಿದ್ದರು. ಆದರೆ, ಮುಖದಲ್ಲಿ ಮಾತ್ರ ಅವರ್ಣ ನೀಯ ಪ್ರಭೆ! ಅವರನ್ನು ನೋಡಿ ಹರಿ ರೋಮಾಂಚನಗೊಂಡ. 'ಆಹ್! ನಾನು ಶಾಸ್ತ್ರಗಳಲ್ಲಿ ಓದಿ ತಿಳಿದಿರುವ ಮಹರ್ಷಿ ಶುಕದೇವನೇ ಇವರಾಗಿರಬಹುದೆ!' ಎಂಬ ಭಾವನೆ ಅವನೊಳಗೆ ತಾನೇತಾನಾಗಿ ಉಂಟಾಯಿತು.

ಶ್ರೀರಾಮಕೃಷ್ಣರು ಮನೆಯೊಳಗೆ ಪ್ರವೇಶಿಸಿದರು; ಎಲ್ಲರೊಂದಿಗೆ ಹರಿಯೂ ಅವರನ್ನು ಹಿಂಬಾಲಿಸಿದ. ಸ್ವಲ್ಪ ಬಾಹ್ಯಪ್ರಜ್ಞೆ ಮರಳಿದ ಮೇಲೆ ಶ್ರೀರಾಮಕೃಷ್ಣರು 'ಕಾಳೀ-ಕೃಷ್ಣರು ಬೇರೆಬೇರಲ್ಲ, ಒಂದೇ' ಎಂಬ ಅಂಶವನ್ನು ತಿಳಿಸಿಕೊಡುವ ಹಾಡೊಂ ದನ್ನು ಮನಕರಗುವಂತೆ ಹಾಡತೊಡಗಿದರು. ಅಲ್ಲಿದ್ದವರೆಲ್ಲರಲ್ಲೂ ಆ ಹಾಡು ಒಂದು ಪ್ರಚಂಡ ಭಾವವನ್ನು ಉಕ್ಕಿಸಿತು. ಅಂದಿನ ಈ ಅನುಭವಗಳೆಲ್ಲ ಹರಿಯ ಮನಃ ಪಟಲದ ಮೇಲೆ ಅಚ್ಚಳಿಯದೆ ನಿಂತುವು.

ಅಂದು ಶ್ರೀರಾಮಕೃಷ್ಣರಿಂದ ಗಾಢವಾಗಿ ಪ್ರಭಾವಿತನಾದರೂ, ಹರಿ ಮತ್ತೆ ಅವರ ಬಳಿಗೆ ಹೋದದ್ದು ಎರಡು-ಮೂರು ವರ್ಷಗಳ ಮೇಲೆಯೇ. ಶ್ರೀರಾಮಕೃಷ್ಣರು ಅವನನ್ನು ತುಂಬುವಿಶ್ವಾಸದಿಂದ ಸ್ವಾಗತಿಸಿದರು. ಅವನ ಶರೀರಲಕ್ಷಣಗಳನ್ನು ಗಮನಿಸಿ ಅವನನ್ನು ಸ್ವಲ್ಪ ಮಾತನಾಡಿಸುವಷ್ಟರಿಂದಲೇ ಆತನ ಅಂತಸ್ಸತ್ವವನ್ನು ಅಳೆದರು. ಮತ್ತು ಈತ ತಮ್ಮ ಪ್ರಮುಖ ಶಿಷ್ಯರ ಗುಂಪಿಗೆ ಸೇರಿದವನೆಂದು ಕಂಡುಕೊಂಡರು. ಅಷ್ಟು ಚಿಕ್ಕ ವಯಸ್ಸಿನಲ್ಲೇ ಅವನು ಅದ್ವೈತಕ್ಕೆ ಸಂಪೂರ್ಣ ಮನಸೋತಿರುವುದನ್ನು ಕಂಡು ಅವರಿಗೆ ಆಶ್ಚರ್ಯವೂ ಆಯಿತು.

ಅಂದು ರಜಾ ದಿನ; ಬಹಳಷ್ಟು ಭಕ್ತರು ನೆರೆದಿದ್ದರು. ಆದ್ದರಿಂದ ಶ್ರೀರಾಮ ಕೃಷ್ಣರು ಅವನನ್ನು ಒಂದು ಬದಿಗೆ ಕರೆದು, "ಆಗಾಗ ನೀನು ಇಲ್ಲಿಗೆ ಬರುತ್ತಿರು. ರಜಾ ದಿನವಲ್ಲದಿದ್ದಾಗ ಬರುವುದು ಒಳ್ಳೆಯದು. ನಾವು ತುಂಬ ಹೊತ್ತು ವೈಯಕ್ತಿಕವಾಗಿ ಮಾತನಾಡಿಕೊಳ್ಳಬಹುದು" ಎಂದು ಹೇಳಿ ಬೀಳ್ಕೊಂಡರು. ಆಗಿನಿಂದ ಅವನು ಸಮಯ ವಾದಾಗಲೆಲ್ಲ ದಕ್ಷಿಣೇಶ್ವರಕ್ಕೆ ಹೋಗತೊಡಗಿದ. ಶ್ರೀರಾಮಕೃಷ್ಣರ ಸಂಸರ್ಗ ಅವನಿಗೆ ಬಹಳ ಪ್ರಿಯವಾಯಿತು. ಅವರ ನಡೆನುಡಿಗಳನ್ನು ಗಮನಿಸಿದಾಗ, 'ಶಾಸ್ತ್ರಗಳ ಮರ್ಮ ವನ್ನು ಗ್ರಹಿಸಿ ಅನುಷ್ಠಾನಕ್ಕೆ ತಂದವರೆಂದರೆ ಇವರೇ ಸರಿ' ಎಂಬ ನಂಬಿಕೆ ಅವನಲ್ಲಿ ಮೂಡಿತು. ಎಲ್ಲಕ್ಕಿಂತ ಮಿಗಿಲಾಗಿ ಅವನನ್ನು ಅವರ ಬಳಿಗೆ ಸೆಳೆಯುತ್ತಿದ್ದುದೆಂದರೆ ಅವರ ಅವ್ಯಾಜ ಪ್ರೇಮ. ಅವನ ಪಾಲಿಗೆ ದಕ್ಷಿಣೇಶ್ವರವೊಂದು ಆನಂದಧಾಮವಾಗಿ ಪರಿಣಮಿಸಿತು.

ಹರಿನಾಥನ ಪರಿಶುದ್ಧ ಚಾರಿತ್ರ್ಯವನ್ನೂ ಸಾಧನಾನಿಷ್ಠೆಯನ್ನೂ ಶ್ರೀರಾಮಕೃಷ್ಣರು ಮೆಚ್ಚಿಕೊಂಡರು; ಆದರೆ ಅವನ ವ್ಯಕ್ತಿತ್ವದಲ್ಲಿ ಮತ್ತು ಧೋರಣೆಯಲ್ಲಿ ಕೆಲವು

ಕುಂದುಕೊರತೆಗಳಿದ್ದುದನ್ನೂ ಅವರು ಗಮನಿಸದಿರಲಿಲ್ಲ. ಅವನನ್ನು ತಿದ್ದಿ ಸರ್ವಾಂಗ ಸುಂದರನನ್ನಾಗಿ ಮಾಡಬೇಕಾದರೆ ಎಂಥ ಶಿಕ್ಷಣ ಅಗತ್ಯವೆಂಬುದು ಪರಿಣತ ಗುರುವಾದ ಅವರಿಗೆ ಚೆನ್ನಾಗಿ ತಿಳಿದಿತ್ತು. ಆದರೆ ಮೊಟ್ಟಮೊದಲು ತಮ್ಮ ಪ್ರೀತಿಯ ಮಕರಂದದಿಂದ ಅವನನ್ನು ಆಕರ್ಷಿಸಿ ಗೆದ್ದುಕೊಂಡು, ಅನಂತರ ಮೆಲ್ಲಮೆಲ್ಲಗೆ ಅವನಿಗೆ ತರಬೇತಿ ಕೊಡಲಾರಂಭಿಸಿದರು.

ಬ್ರಹ್ಮಚರ್ಯವನ್ನು ವ್ರತವಾಗಿ ಸ್ವೀಕರಿಸಿದ್ದ ಹರಿನಾಥ ಅದರೊಂದಿಗೇ ಒಂದು ದೊಡ್ಡ ದೋಷವನ್ನೂ ಬೆಳೆಸಿಕೊಂಡಿದ್ದ. ಹೆಂಗಸರಿಂದ ದೂರವಿರಬೇಕೆಂಬ ತೀವ್ರತೆಯಲ್ಲಿ ಅವನಿಗೆ ಸ್ತ್ರೀಜಾತಿಯ ಬಗ್ಗೆಯೇ ದ್ವೇಷ ಉಂಟಾಗಿತ್ತು. ಒಂದು ಪುಟ್ಟ ಹೆಣ್ಣು ಕೂಸು ತನ್ನತ್ತ ಅಂಬೆಗಾಲಿಟ್ಟುಕೊಂಡು ಬಂದರೂ ಅವನು ಕಿಡಿಕಿಡಿಯಾಗುತ್ತಿದ್ದ. ಒಮ್ಮೆ ಸ್ತ್ರೀಯರ ಸಂಬಂಧವಾಗಿ ಮಾತು ಬಂದಾಗ ಅವನು ಶ್ರೀರಾಮಕೃಷ್ಣರೆದುರು ಉದ್ಗರಿಸಿದ: "ಓಹ್ ! ನಾನು ಹೆಂಗಸರ ಸಹವಾಸವನ್ನೇ ಸಹಿಸಲಾರೆ !"

ಒಡನೆಯೇ ಶ್ರೀರಾಮಕೃಷ್ಣರು ಅವನನ್ನು ತರಾಟೆಗೆ ತೆಗೆದುಕೊಂಡರು:

"ಮೂರ್ಖನಂತೆ ಮಾತನಾಡುತ್ತೀಯಲ್ಲ! ಅದೇಕೆ ಹೆಂಗಸರನ್ನು ತಿರಸ್ಕಾರದಿಂದ ನೋಡುತ್ತೀಯೆ ? ಅವರು ಜಗನ್ಮಾತೆಯ ಅಂಶಸ್ವರೂಪಿಣಿಯರು. ಎಲ್ಲ ಸ್ತ್ರೀಯರನ್ನೂ ನಿನ್ನ ಸ್ವಂತ ತಾಯಿಯ ಹಾಗೆ ಕಂಡು ಗೌರವದಿಂದ ತಲೆಬಾಗು. ಮೋಹಜಾಲದಿಂದ ಪಾರಾಗಬೇಕೆಂದರ ಸ್ತ್ರೀಯರನ್ನು ದ್ವೇಷಿಸುವುದಲ್ಲ ಮಾರ್ಗ, ಬದಲಾಗಿ ಅವರನ್ನು ಮಾತೃದೃಷ್ಟಿಯಿಂದ ಕಂಡು ಗೌರವಿಸುವುದೇ ಉಪಾಯ. ಸ್ತ್ರೀಯರನ್ನು ದ್ವೇಷಿಸಿದೆಯೋ, ಇನ್ನಷ್ಟು ಭದ್ರವಾಗಿ ಅವರ ಮೋಹಜಾಲದಲ್ಲಿ ಸಿಲುಕಿ ಬೀಳುತ್ತೀಯೆ, ಅಷ್ಟೆ."

ಈ ಎಚ್ಚರಿಕೆಯ ನುಡಿಗಳು ಹರಿಯ ಹೃದಯವನ್ನು ಹೊಕ್ಕು ಅವನ ದೃಷ್ಟಿಕೋನವನ್ನು ತಿದ್ದಿದುವು. ಇನ್ನೊಂದು ದಿನ ಅವನು ಕೇಳಿದ:

"ಸ್ವಾಮಿ, ಕಾಮವನ್ನು ಹೋಗಲಾಡಿಸಿಕೊಳ್ಳಲು ಉಪಾಯವೇನು ?"

ಶ್ರೀರಾಮಕೃಷ್ಣರು: "ಕಾಮವನ್ನೇಕೆ ಹೋಗಲಾಡಿಸಿಕೊಳ್ಳಬೇಕು ? ಅದನ್ನು ದೇವರ ಕಡೆಗೆ ತಿರುಗಿಸು !"

ಇದನ್ನು ಕೇಳಿ ಅವನಿಗೆ ಅತ್ಯಾಶ್ಚರ್ಯವಾಯಿತು. ಕಾಮವನ್ನು ಸಂಪೂರ್ಣವಾಗಿ ಗೆಲ್ಲಲು ಅವನು ಎಷ್ಟೋ ವರ್ಷಗಳಿಂದ ಪ್ರಯತ್ನಿಸುತ್ತಿದ್ದನಾದರೂ ಈ ಧಾಟಿಯಲ್ಲಿ ಅವನೆಂದೂ ಆಲೋಚಿಸಿರಲಿಲ್ಲ. ಈ ಭಾವನೆ ಅವನಿಗೆ ಹೊಚ್ಚ ಹೊಸದು. ಈಗ ಶ್ರೀರಾಮಕೃಷ್ಣರು ಅವನಿಗೆ, ಬೆಂಕಿಯಂತೆ ಕಾಮವೊಂದು ಪ್ರಬಲ ಶಕ್ತಿ; ಅದನ್ನು ದಮನ ಮಾಡಲು ಯತ್ನಿಸುವುದರ ಬದಲು ಅದನ್ನು ದೇವರೆಡೆಗೆ ಹರಿಯಿಸಿ ಉದಾತ್ತಗೊಳಿಸುವುದೇ ಸುಲಭ-ಶ್ರೇಷ್ಠ ಉಪಾಯ ಎಂದು ತಿಳಿಸಿಕೊಟ್ಟರು.

ವೇದಾಂತ ಗ್ರಂಥಗಳ ಮೇಲಿನ ಹರಿನಾಥನ ಮೋಹ ದಿನದಿನಕ್ಕೂ ಹೆಚ್ಚಾಗಿ, ಕಡೆಗೆ ಅದೇ ಒಂದು ಗೀಳಾಗಿ ಪರಿಣಮಿಸತೊಡಗಿತ್ತು. ಎಷ್ಟರಮಟ್ಟಿಗೆಂದರೆ, ಹೋಗಿ ಶ್ರೀರಾಮಕೃಷ್ಣರನ್ನು ಕಾಣಬೇಕೆಂಬ ಇಚ್ಛೆಯನ್ನೂ ಅದು ಆಗಾಗ ಮುಚ್ಚಿಬಿಡುತ್ತಿತ್ತು. ಶ್ರೀರಾಮಕೃಷ್ಣರು ಇದನ್ನು ಗಮನಿಸದಿರಲಿಲ್ಲ. ಒಮ್ಮೆ ಅವನು ಬಹಳ ದಿನಗಳವರೆಗೆ ಬರಲಿಲ್ಲ; ಕಾರಣವೇನೆಂದು ಅವನ ಸ್ನೇಹಿತರನ್ನು ವಿಚಾರಿಸಿದಾಗ, ಅವನು ವೇದಾಂತದ ಅಧ್ಯಯನದಲ್ಲಿ ಮುಳುಗಿಹೋಗಿದ್ದಾನೆ ಎಂದು ತಿಳಿದುಬಂತು. ಮುಂದಿನ ಸಲ

ಅವನು ಬಂದಾಗ ಶ್ರೀರಾಮಕೃಷ್ಣರು ಸಲಿಗೆಯಿಂದ ಮಾತನಾಡಿಸುತ್ತ ಕೇಳಿದರು:

"ಏನಪ್ಪಾ, ಎಷ್ಟು ದಿನವಾಯ್ತು ನೀನು ಬಂದು! ನೀನೀಗ ವೇದಾಂತದ ಪುಸ್ತಕಗಳನ್ನು ಓದುತ್ತ ಸದಾ ವೇದಾಂತಚಿಂತನೆಯಲ್ಲೇ ಮುಳುಗಿರುತ್ತೀಯೆ ಅಂತ ಕೇಳಿದೆ. ಒಳ್ಳೇದು, ಬಹಳ ಒಳ್ಳೇದು. ಆದರೆ ಆ ಇಡೀ ವೇದಾಂತದ ಸಾರ ಏನು ಹೇಳು ನೋಡೋಣ? 'ಬ್ರಹ್ಮ ಸತ್ಯಂ ಜಗನ್ಮಿಥ್ಯಾ' ಅಂತ, ಹೌದು ತಾನೆ? ಅಥವಾ ಅದಲ್ಲದೆ ಇನ್ನೇನಾದರೂ ಇದೆಯೊ?"

ಹರಿನಾಥ ಕ್ಷಣಕಾಲ ಆಲೋಚಿಸಿ ಹೇಳಿದ: "ಹೌದು ಸ್ವಾಮಿ, ವೇದಾಂತ ಹೇಳುವುದೆಲ್ಲ ಅದೊಂದನ್ನೇ. ಅದಲ್ಲದೆ ಬೇರೇನೂ ಇಲ್ಲ."

ಶ್ರೀರಾಮಕೃಷ್ಣರು: "ಹಾಗಾದರೆ ನೀನು ಮಿಥ್ಯವನ್ನು ಬಿಟ್ಟು ಸತ್ಯವನ್ನೇ ಏಕೆ ಹಿಡಿದುಕೊಳ್ಳಲೊಲ್ಲೆ?"

ಹರಿಗೆ ಈ ಮಾತಿನ ಮರ್ಮ ತಿಳಿಯಿತು. ಆದರೆ ಏನೂ ಉತ್ತರಿಸಲು ತೋಚದೆ ತಬ್ಬಿಬ್ಬಾದ. ಶ್ರೀರಾಮಕೃಷ್ಣರು ಮತ್ತೆ ನುಡಿದರು:

"ಶ್ರವಣ ಮನನ ನಿಧಿಧ್ಯಾಸನ—ಇದು ಮಾರ್ಗ. ಮೊದಲು ಶ್ರವಣ: 'ಬ್ರಹ್ಮ ಸತ್ಯಂ ಜಗನ್ಮಿಥ್ಯಾ' ಎಂಬ ಮಾತನ್ನು ಮೊದಲು *ಕೇಳಬೇಕು*. ಆಮೇಲೆ ಮನನ—ವಿಚಾರ ಮಾಡುತ್ತ ಮಾಡುತ್ತ ಆ ಮಾತು ಮನದಲ್ಲಿ ನೆಡುವಂತೆ ಮಾಡಬೇಕು. ಅನಂತರ ನಿಧಿಧ್ಯಾಸನ: ಆ ತತ್ತ್ವವನ್ನು ಹೃದ್ಗತಗೊಳಿಸಿಕೊಂಡು, ಮನಸ್ಸನ್ನು ಈ ಮಿಥ್ಯಾಜಗತ್ತಿನಿಂದ ಸೆಳೆದು ಸತ್ಯವಾದ ಪರಬ್ರಹ್ಮದಲ್ಲಿ ನೆಲೆ ನಿಲ್ಲಿಸಬೇಕು. ಅಷ್ಟೆ, ಸುಮ್ಮನೆ ಪುಸ್ತಕದ ಓದಿನಿಂದ ಬ್ರಹ್ಮಜ್ಞಾನವನ್ನು ಪಡೆಯಲಾದೀತೇ? ಶ್ರದ್ಧೆ ಬೇಕು..."

ನಿಜ. ವೇದ-ಉಪನಿಷತ್ತು-ದರ್ಶನಗಳನ್ನು ಎಷ್ಟೆಷ್ಟು ಓದಿಹಾಕಿದರೂ ಅಷ್ಟರಿಂದಲೇ ಬ್ರಹ್ಮಸಾಕ್ಷಾತ್ಕಾರವಾಗದು. ಉಪನಿಷತ್ತುಗಳಲ್ಲೂ ಅದೇ ಮಾತನ್ನು ಹೇಳಿರುವುದು ಈಗ ಹರಿನಾಥನ ನೆನಪಿಗೆ ಬಂತು. ಮುಖ್ಯವಾಗಿ ಬೇಕಾದದ್ದು ಶ್ರದ್ಧೆ ಎಂಬುದನ್ನು ಶ್ರೀರಾಮಕೃಷ್ಣರು ಅವನಿಗೆ ಈ ಕೆಲವೇ ಮಾತುಗಳಲ್ಲಿ ಅರ್ಥಪಡಿಸಿದ್ದರು. ಪುಸ್ತಕಾಧ್ಯಯನದ ಮಿತಿಯನ್ನು ಅರಿತುಕೊಂಡ ಅವನೀಗ ಸಾಧನೆಯತ್ತ ಹೆಚ್ಚು ಗಮನ ಹರಿಸಿದ.

ಆದರೆ ಅವನ ಕೆಲವು ಸಂಶಯಗಳಿನ್ನೂ ಪರಿಹಾರವಾಗದೆ ಉಳಿದಿದ್ದುವು. ಮುಖ್ಯವಾಗಿ, ಉಪನಿಷತ್ತುಗಳಲ್ಲೇ ಹೇಳಲಾಗಿರುವ ಭಗವತ್ಕೃಪೆಯ ವಿಚಾರ ಅವನಿಗೆ ಒಪ್ಪಿಗೆಯಾಗಿರಲಿಲ್ಲ. ಇಷ್ಟು ದಿನವೂ ಸ್ವಪ್ರಯತ್ನದಲ್ಲೇ ಸಂಪೂರ್ಣ ವಿಶ್ವಾಸವಿರಿಸಿ ಮುಂದುವರಿದಿದ್ದವನು ಅವನು. ಪ್ರಯತ್ನವೊಂದಿದ್ದರೆ ಸಾಲದೆ? ಭಗವತ್ಕೃಪೆಯೆಂಬುದು ಬೇಕೇ ಬೇಕೆ? ಇದು ಅವನನ್ನು ಕೊರೆಯುತ್ತಿದ್ದ ಪ್ರಶ್ನೆ. ಇದಕ್ಕೂ ಅವನಿಗೆ ಶ್ರೀರಾಮಕೃಷ್ಣರಿಂದ ಉತ್ತರ ದೊರಕಿತು.

ಒಂದು ದಿನ ಬಲರಾಮ ಬಾಬುವಿನ ಮನೆಗೆ ಬಂದಿದ್ದ ಶ್ರೀರಾಮಕೃಷ್ಣರು ಹರಿನಾಥನಿಗೆ ಹೇಳಿಕಳಿಸಿದರು. ಅವನು ಬರುವ ವೇಳೆಗೆ ಅವರು ಅರ್ಧಬಾಹ್ಯ ಪ್ರಜ್ಞೆಯ ಸ್ಥಿತಿಯಲ್ಲಿ, ಅಲ್ಲಿದ್ದವರನ್ನುದ್ದೇಶಿಸಿ ಹೇಳುತ್ತಿದ್ದರು:

"ಏನು? 'ಈ ಜಗತ್ತು ಮಿಥ್ಯೆ, ಕಾಮಕಾಂಚನಗಳೆಲ್ಲ ಕೇವಲ ಭ್ರಮೆ' ಎಂಬ ನಂಬಿಕೆ ನಮ್ಮೊಳಗೆ ಅಷ್ಟು ಸುಲಭವಾಗಿ ಬಂದುಬಿಡುತ್ತದೆ ಅಂದುಕೊಂಡಿರಾ? ಭಗವಂತನ ಕೃಪೆಯಿಲ್ಲದೆ ಅದೆಲ್ಲ ಎಲ್ಲಿ ಸಾಧ್ಯ? ಆಹಾ, ಮನುಷ್ಯನ ಶಕ್ತಿ ಅದೆಷ್ಟು

ಅಲ್ಪ ! ಆ ಅಲ್ಪಶಕ್ತಿಯಿಂದ ಅವನು ಮಾಡಬಹುದಾದ ಪ್ರಯತ್ನವೂ ಅದೆಷ್ಟು ಅಲ್ಪ !"

ಹೀಗೆನ್ನುತ್ತಲೇ ಅವರು ಸಮಾಧಿಸ್ಥರಾಗಿಬಿಟ್ಟರು. ಪುನಃ ಅರ್ಧಜಾಗ್ರದವಸ್ಥೆಗೆ ಹಿಂದಿರುಗಿ ನುಡಿದರು: "ಈ ಸೃಷ್ಟಿಯಲ್ಲಿ ಮನುಷ್ಯ ಎಲ್ಲೋ ಒಂದು ಸಣ್ಣ ಜಂತು. ಇಂತಹ ಅನಂತಸೃಷ್ಟಿಯ ಕರ್ತನ ಬಗ್ಗೆ ಇನ್ನೆಷ್ಟು ವಿಚಾರವನ್ನು ಅವನು ತನ್ನಿಂತಾನೇ ಅರಿತುಕೊಂಡಾನು ?"

ಇದನ್ನೆಲ್ಲ ಕೇಳುತ್ತ ಹರಿನಾಥ ಸ್ತಬ್ಧನಾಗಿ ಕುಳಿತ. ಈ ಒಂದೊಂದು ಮಾತೂ ತನ್ನನ್ನೇ ಉದ್ದೇಶಿಸಿದ್ದು ಎಂದು ಅರ್ಥಮಾಡಿಕೊಂಡ. ಶ್ರೀರಾಮಕೃಷ್ಣರೀಗ ತಮ್ಮ ಮಾತನ್ನು ಮುಂದುವರಿಸುವವರಂತೆ ಹಾಡೊಂದನ್ನು ಹಾಡತೊಡಗಿದರು. ಶ್ರೀರಾಮನ ಜೈತ್ರಯಾತ್ರೆಯ ಸಂದರ್ಭದಲ್ಲಿ ಲವಕುಶರ ಬಾಣಕ್ಕೆ ಶರಣಾಗತನಾದ ಹನುಮಂತ ಹೇಳುವ ಹಾಡು ಅದು: "ಓ ಲವಕುಶರೆ, ಯಾಕೆ ಸುಮ್ಮನೆ ಅಷ್ಟೊಂದು ಜಂಬ ಪಡುತ್ತಿದ್ದೀರಿ ? ನನ್ನನ್ನು ಬಂಧಿಸಲು ನಿಮಗೆ ನಾನಾಗಿಯೇ ಬಿಟ್ಟುಕೊಟ್ಟಿರದಿದ್ದರೆ ನಿಮ್ಮ ಕೈಯಲ್ಲಿ ಅದು ಯಾವತ್ತಿಗಾದರೂ ಸಾಧ್ಯವಾಗುತ್ತಿತ್ತೇನು ?" ಈ ಹಾಡಿನ ಗೂಢಾರ್ಥ ಇದು: "ಭಗವಂತ ಕೃಪೆ ಮಾಡಿ ತಾನಾಗಿಯೇ ವ್ಯೆದೋರದಿದ್ದರೆ ಮನುಷ್ಯನಿಗೆ ಅವನ ಸಾಕ್ಷಾತ್ಕಾರ ಲಭಿಸಬಲ್ಲುದೆ ?"

ಹಾಡಹಾಡುತ್ತಿದ್ದಂತೆಯೆ ಶ್ರೀರಾಮಕೃಷ್ಣರು ಭಾವದುಂಬಿ ಕಣ್ಣೀರು ಸುರಿಸ ಲಾರಂಭಿಸಿದರು. ಹರಿನಾಥನಿಗೂ ಉಮ್ಮಳಿಸಿ ಬಂದ ಕಣ್ಣೀರನ್ನು ತಡೆಯಲು ಸಾಧ್ಯ ವಾಗಲಿಲ್ಲ. ಬಹಳ ಹೊತ್ತಿನವರೆಗೂ ಅವನು ಅದೇ ಭಾವದಲ್ಲಿದ್ದ. ಅಂದು ಅವ ನೊಂದು ಮಹತ್ತರ ಪಾಠ ಕಲಿತಿದ್ದ. ಭಗವತ್ಕೃಪೆಯಿಲ್ಲದೆ ಏನೂ ಸಾಧ್ಯವಾಗುವುದಿಲ್ಲ ಎಂಬ ಸತ್ಯದ ಅರಿವು ಅವನ ಮನವನ್ನು ಆಳವಾಗಿ ಹೊಕ್ಕುಬಿಟ್ಟಿತ್ತು. ಮತ್ತೆಂದೂ ಅವನು ಅದನ್ನು ಮರೆಯಲಿಲ್ಲ. ಮತ್ತು ಭಗವಂತನಲ್ಲಿ ಶರಣಾಗತನಾಗಿ ಜೀವನ ನಡೆಸಲು ಅಭ್ಯಾಸ ಮಾಡಿಕೊಂಡ.

ಹರಿನಾಥನಿಗೆ ಅದ್ವೈತಸಿದ್ಧಾಂತದಲ್ಲಿ ಅಷ್ಟೊಂದು ಆಸಕ್ತಿ. ಅದೇ ಅವನ ಸಹಜ ಒಲವೆಂಬಂತೆ ತೋರುತ್ತಿತ್ತು. ಆದರೂ ಕೂಡ, ನರೇಂದ್ರನಿಗೆ ಅದ್ವೈತ ಮಾರ್ಗದಲ್ಲಿ ತರಬೇತಿ ನೀಡಿ ಪ್ರೋತ್ಸಾಹಿಸಿದಂತೆ ಶ್ರೀರಾಮಕೃಷ್ಣರು ಹರಿನಾಥನನ್ನು ಪ್ರೋತ್ಸಾಹಿಸ ಲಿಲ್ಲ. ನಿರಂತರ ಶಿಕ್ಷಣದ ಮೂಲಕ, ಆ ಮಾರ್ಗ ಅವನಿಗೆ ಹೇಳಿಸಿದ್ದಲ್ಲ ಎಂದು ಮನವರಿಕೆ ಮಾಡಿಸಿದರು. ಅದಕ್ಕೆ ಬದಲಾಗಿ ಅವನೊಳಗೆ ಭಕ್ತಿರಸವನ್ನು ಉಕ್ಕಿಸಿ ಅವನನ್ನು ಭಕ್ತನನ್ನಾಗಿ ನಿರ್ಮಾಣ ಮಾಡಿದರು.

ಶ್ರೀರಾಮಕೃಷ್ಣರು ಅವನಿಗೆ ಭಕ್ತಿಯ ಮಹತ್ವವನ್ನು ಹೇಗೆ ಮನಗಾಣಿಸಿದರು ಎಂಬುದಕ್ಕೆ ಉದಾಹರಣೆಯಾಗಿ ಒಂದು ಪ್ರಸಂಗವನ್ನು ನೋಡಬಹುದು.

ಒಮ್ಮೆ ದಕ್ಷಿಣೇಶ್ವರಕ್ಕೆ ಬಂದಿದ್ದ ಹಲವಾರು ದರ್ಶನಾರ್ಥಿಗಳಲ್ಲಿ ಒಬ್ಬ ಮಹಾ ವೇದಾಂತಪಂಡಿತನಿದ್ದ. ಶ್ರೀರಾಮಕೃಷ್ಣರು ಅವನನ್ನು ವೇದಾಂತದ ಕುರಿತಾಗಿ ಏನಾ ದರೂ ಮಾತನಾಡುವಂತೆ ಕೇಳಿಕೊಂಡರು. ಆತ ವಿನಯದಿಂದ ಅದಕ್ಕೊಪ್ಪಿ ಮಾತ ನಾಡಲಾರಂಭಿಸಿದ. ಜಟಿಲವೂ ಸೂಕ್ಷ್ಮವೂ ಆದ ಅನೇಕಾನೇಕ ಅಂಶಗಳನ್ನು ಬಹಳ ಸೊಗಸಾಗಿ ವಿಶ್ಲೇಷಿಸುತ್ತ ಒಂದು ಗಂಟೆಗೂ ಹೆಚ್ಚು ಕಾಲ ಮಾತನಾಡಿ ಅಲ್ಲಿದ್ದ ಭಕ್ತ ರನ್ನೆಲ್ಲ ಮಂತ್ರಮುಗ್ಧರನ್ನಾಗಿಸಿದ. ಶ್ರೀರಾಮಕೃಷ್ಣರಂತೂ ಬಹಳ ಸಂತುಷ್ಟರಾದರು. ಅವರು ಅಷ್ಟೊಂದು ಸಂತೋಷ ಪಡುವುದನ್ನು ಕಂಡು ಎಲ್ಲರಿಗೂ ಆಶ್ಚರ್ಯ—

'ಇದೇನು ಇವರಿಗೆ ತಿಳಿಯದ ವಿಷಯವೆ?' ಎಂದು. ಆದರೆ ಶ್ರೀರಾಮಕೃಷ್ಣರು ಪಂಡಿತನನ್ನು ಅಭಿನಂದಿಸಿ ಬಳಿಕ ಆತನಿಗೆ ಒಂದು ಮಾತು ಹೇಳಿದರು:

"ಒಳ್ಳೆಯದು, ಎಲ್ಲ ಚೆನ್ನಾಗಿದೆ. ಆದರೆ ನನ್ನ ಮಟ್ಟಿಗೆ ಹೇಳುವುದಾದರೆ, ನನಗೆ ಈ ವಿವರಗಳೊಂದೂ ಬೇಕಿಲ್ಲ. ಜಗನ್ಮಾತೆಯೊಬ್ಬಳು ಸಾಕು ನನಗೆ. ನಿಮ್ಮಂಥವರಿಗೆ 'ಜ್ಞಾನ-ಜ್ಞಾತೃ-ಜ್ಞೇಯ' 'ಧ್ಯಾನ-ಧ್ಯಾತೃ-ಧ್ಯೇಯ' ಇಂತಹ ತ್ರಿಪುಟಿಗಳೆಲ್ಲ ಬಹಳ ಒಳ್ಳೆಯದೇ. ಆದರೆ ನನ್ನ ಪಾಲಿಗೆ ಮಾತ್ರ 'ನಾನು–ನನ್ನ ತಾಯಿ' ಅಷ್ಟೆ, ಇನ್ನೇನೂ ಬೇಡ ನನಗೆ."

ಇದನ್ನು ಕೇಳಿದವರೆಲ್ಲ ಸ್ತಬ್ಧರಾಗಿಬಿಟ್ಟರು! 'ನಾನು–ನನ್ನ ತಾಯಿ' ಎಂಬ ಅವರ ಒಂದು ಮಾತಿನಲ್ಲಿ ಎಂಥ ಶಕ್ತಿ! ಎಂಥ ಪ್ರಾಮಾಣಿಕತೆ! ಅದನ್ನು ಕೇಳಿದ ಮೇಲೆ, ಎಲ್ಲರ ಮನಸ್ಸಿನಿಂದಲೂ ಆ ವೇದಾಂತಿಯ ಪ್ರವಚನದ ಪ್ರಭಾವ ಒಮ್ಮೆಗೇ ಅಳಿಸಿಹೋದಂತಾಯಿತು. ವೇದಾಂತದ ಜಟಿಲ ತ್ರಿಪುಟಿಗಳಿಗಿಂತ, ಶ್ರೀರಾಮಕೃಷ್ಣರ 'ನಾನು–ನನ್ನ ತಾಯಿ' ಎಂಬುದೇ ಬಹಳ ಸುಲಭವಾಗಿ, ಸರಳವಾಗಿ ಮತ್ತು ತುಂಬ ಹಿತಕರವಾಗಿ ತೋರಿತು. ಸ್ವತಃ ವೇದಾಂತದ ನಿಷ್ಠಾವಂತ ವಿದ್ಯಾರ್ಥಿಯಾದ ಹರಿನಾಥನಿಗೂ ಹಾಗೆಯೇ ಅನ್ನಿಸಿತು. ತನಗೂ ಸಹ ಈ ಧೋರಣೆಯೇ ಅತ್ಯಂತ ಸೂಕ್ತವಾದುದು ಎಂದು ಅವನು ಕಲಿತುಕೊಂಡ.

ಇದರೊಂದಿಗೆ ಅವನು ಶ್ರೀರಾಮಕೃಷ್ಣರಿಂದ ಕಲಿತ ಇನ್ನೂ ಒಂದು ಮುಖ್ಯವಾದ ಪಾಠವಿದೆ. ಮುಕ್ತಿ ಪಡೆಯುವುದೇ ತನ್ನ ಅಂತಿಮ ಗುರಿ, ಅದೇ ತನ್ನ ಪರಮಾದರ್ಶ ಎಂಬ ಭಾವನೆ ಅವನ ಮನಸ್ಸಿನಲ್ಲಿ ಅನೇಕ ವರ್ಷಗಳಿಂದಲೂ ದೃಢವಾಗಿ ಬೇರೂರಿತ್ತು. ಸಾಮಾನ್ಯ ಜೀವರ ವಿಷಯದಲ್ಲೇನೋ ಈ ಮಾತು ನಿಜವೆ. ಆದರೆ ಶ್ರೀರಾಮಕೃಷ್ಣರು ತಮ್ಮ ಶಿಷ್ಯರಿಗೆ ನೀಡುತ್ತಿದ್ದ ಬೋಧನೆ ಬೇರೆಯೇ ರೀತಿಯದು. ಅದು ಗ್ರಂಥಗಳ ಮತ್ತು ಸಾಮಾನ್ಯ ಗುರುಗಳ ಬೋಧನೆಗಿಂತ ಸಂಪೂರ್ಣ ವಿಭಿನ್ನ. ಅವನ ಮನೋಭಾವವನ್ನು ಕಂಡು ಒಮ್ಮೆ ಅವರೆನ್ನುತ್ತಾರೆ: "ನೀನೇಕೆ ನಿರ್ವಾಣವೇ ಬಾಳಿನ ಆದರ್ಶ ಅಂತ ಭಾವಿಸುತ್ತೀಯೆ? ಅದು ಬಹಳ ಅಲ್ಪವಾದುದು. ಅದಕ್ಕಿಂತಲೂ ಉನ್ನತವಾದ ಸ್ಥಿತಿಯೊಂದಿದೆ."

ಶ್ರೀರಾಮಕೃಷ್ಣರ ದೃಷ್ಟಿಯಲ್ಲಿ ಮುಕ್ತಿ, ನಿರ್ವಿಕಲ್ಪ ಸಮಾಧಿ ಎನ್ನುವುದು ಕೂಡ ಶ್ರೇಷ್ಠತಮ ಸ್ಥಿತಿಯೇನಲ್ಲ. ತೆರೆಗಣ್ಣಿಗೆ ಗೋಚರಿಸುವ ಜೀವ-ಜಗತ್ತನ್ನು ಕೂಡ ಬ್ರಹ್ಮಮಯವಾಗಿ ದರ್ಶಿಸುವ ಅನುಭವವೇ ಅತ್ಯಮೋಘವಾದುದು ಎನ್ನುವವರು ಅವರು.

ಆದರೆ ಹರಿನಾಥ ಇಂಥ ಮಾತುಗಳನ್ನೆಲ್ಲಿಯೂ ಕೇಳಿಯೇ ಇರಲಿಲ್ಲ. ವಿಸ್ಮಯ ಕುತೂಹಲಗಳಿಂದ ಆತ ಪ್ರಶ್ನಿಸಿದ:

"ನಾನೂ ಕೂಡ ಆ ಸ್ಥಿತಿಯನ್ನು ಪಡೆಯಲು ಸಾಧ್ಯವೆ?"

"ಖಂಡಿತ, ಭಗವತಿಯ ಕೃಪೆಯಿಂದ ನೀನದನ್ನು ಪಡೆಯಬಲ್ಲೆ. . . ನೋಡು, ಕೇವಲ ನಿರ್ವಾಣವನ್ನು ಬಯಸುವವರು ಅಲ್ಪಮತಿಗಳು; ಒಂದು ವಿಧದಲ್ಲಿ ಅವರನ್ನು ಭಯಗ್ರಸ್ತರೆನ್ನಬೇಕು. ಅನುಭವವಿಲ್ಲದ ಪಗಡೆ ಆಟಗಾರರು ಹೇಗೆ ಆಡುತ್ತಾರೆ ಗೊತ್ತೆ? ತಮ್ಮ ಕಾಯಿ 'ಹಣ್ಣಿನ ಮನೆ'ಗೆ ಸೇರಿಬಿಟ್ಟರೆ ಸಾಕಪ್ಪ ಅಂತ ಚಡಪಡಿಸುತ್ತಿರುತ್ತಾರೆ. ನಿರ್ವಾಣ ಬೇಕೆನ್ನುವವರು ಈ ಬಗೆಯವರು. ಆದರೆ, ಒಳ್ಳೇ ಅನುಭವಸ್ಥ ಆಟಗಾರನಾದರೆ, ಎದುರಾಳಿಯನ್ನು ಸಿಕ್ಕಿಹಾಕಿಸುವುದಕ್ಕಾಗಿ ತನ್ನ ಕಾಯಿಗಳ ಸ್ಥಾನ

ವನ್ನು ಬೇಕೆಂದೇ ಬಿಟ್ಟುಕೊಡುವುದೂ ಉಂಟು. ಆಗ ಅವನು ಆಟದಲ್ಲಿ ಸ್ವಲ್ಪ ಹಿಂದೆ ಬಿದ್ದ ಹಾಗೆ ಕಾಣಬಹುದು. ಆದರೆ ಆಮೇಲೆ ಅವನು ಬೇಗನೆ ಮುಂದೆ ಬಂದು ತನ್ನ ಕಾಯಿಯನ್ನು ಹಣ್ಣು ಮಾಡಿಕೊಳ್ಳುತ್ತಾನೆ. ಅವನು ತನಗೆ ಬೇಕಾದ ಗರವೇ ಬೀಳುವಂತೆ ದಾಳವನ್ನು ಉರುಳಿಸಬಲ್ಲ ಸಾಮರ್ಥ್ಯವುಳ್ಳವನು. ಆದ್ದರಿಂದ ಹೆದರಬೇಡ! ಧೈರ್ಯ ದಿಂದ ಆಡು."

ಆದರೆ ಹರಿನಾಥನಿಗಿನ್ನೂ ಅನುಮಾನ. ಕೇಳಿದ:

"ಅದು ನಿಜಕ್ಕೂ ಹಾಗಾದೀತೆ?"

"ಹೌದು, ಜಗನ್ಮಾತೆಯ ಕೃಪೆಯೊಂದಿದ್ದರೆ ಎಲ್ಲವೂ ಸಾಧ್ಯವಾಗುತ್ತದೆ. ಆಟ ನಿಲ್ಲದೆ ಮುಂದುವರಿಯಬೇಕು ಎಂದೇ ಆಕೆ ಬಯಸುತ್ತಾಳೆ. ಉದಾಹರಣೆಗೆ, ಕಣ್ಣಾ ಮುಚ್ಚಾಲೆ ಆಟವನ್ನು ತೆಗೆದುಕೊ. (ಅದರಲ್ಲಿ ಕಣ್ಣಿಗೆ ಬಟ್ಟೆಕಟ್ಟಿದ ಒಬ್ಬ 'ಕಳ್ಳ' ಇತರ ಹುಡುಗರನ್ನು ಹಿಡಿಯಲು ಪ್ರಯತ್ನಿಸುತ್ತಿರುತ್ತಾನೆ; ಹುಡುಗರು ತಪ್ಪಿಸಿಕೊಂಡು 'ಅಜ್ಜಿ'ಯ ಸುತ್ತ ಓಡಾಡುತ್ತಿರುತ್ತಾರೆ. 'ಕಳ್ಳ'ನ ಕೈಗೆ ಸಿಕ್ಕಿದವನು 'ಔಟ್'. ಈ ದೃಷ್ಟಾಂತದಲ್ಲಿ ಆಟಗಾರರೆಂದರೆ ಜನಕೋಟಿ. 'ಔಟ್' ಆಗುವುದೆಂದರೆ ಮುಕ್ತರಾಗು ವುದು. ಜಗನ್ಮಾತೆಯೇ ಅಜ್ಜಿ.) ಮಕ್ಕಳು ಚೆನ್ನಾಗಿ ಓಡಾಡಿ ಸುತ್ತಬೇಕು, ಆಟ ಮುಂದು ವರಿಯಬೇಕು ಎನ್ನುವುದೇ ಅಜ್ಜಿಯ ಇಚ್ಛೆ. ಹಾಗೆಯೇ, ನಿರ್ವಾಣವನ್ನು ಬಯಸು ವವರ ಮೇಲೆ ಜಗನ್ಮಾತೆಗೆ ಅಂಥದೇನೂ ಸಂತೋಷವಿಲ್ಲ. ಏಕೆಂದರೆ ಅವರು ಆಟ ದಿಂದ ಹೊರಗಾಗಲು ಇಷ್ಟಪಡುತ್ತಾರಲ್ಲ!"

ಹರಿನಾಥನ ಮನಸ್ಸಿನಲ್ಲಿ ಇನ್ನೂ ಕೆಲವು ಪ್ರಶ್ನೆಗಳು ಕೊರೆಯುತ್ತಲೇ ಇದ್ದುವು. ಪ್ರತಿಯೊಬ್ಬ ಜಿಜ್ಞಾಸುವಿನ ಮನದಲ್ಲೂ ಏಳುವಂಥವೆ ಅವು. ಒಂದು ದಿನ ಸಂದರ್ಭ ಬಂದಾಗ ಅವನು ಆ ಪ್ರಶ್ನೆಗಳನ್ನು ಶ್ರೀರಾಮಕೃಷ್ಣರ ಮುಂದಿಟ್ಟ:

ಶ್ರೀರಾಮಕೃಷ್ಣರು: ". . . ಭಗವಂತನಲ್ಲಿ ಶರಣಾಗಿಬಿಟ್ಟರೆ ಆಮೇಲೆ ಭಯವಿಲ್ಲ. ಅವನೇ ತನ್ನ ಭಕ್ತನನ್ನು ಕಾಪಾಡುತ್ತಾನೆ."

ಹರಿನಾಥ: "ಸರಿ; ಆದರೆ ಬಹಳಷ್ಟು ಜನರಿಗೆ ಭಗವಂತನ ಸಾಕ್ಷಾತ್ಕಾರವಾಗ ಬೇಕಾದರೆ ತುಂಬಾ ದೀರ್ಘಕಾಲ ಬೇಕಾಗುತ್ತದಲ್ಲ, ಅದೇಕೆ?"

ಶ್ರೀರಾಮಕೃಷ್ಣರು: "ಭೋಗಾಭಿಲಾಷೆಯೂ ಕರ್ಮಾಸಕ್ತಿಯೂ ತೀರುವವರೆಗೂ ಮನುಷ್ಯನಿಗೆ ಭಗವಂತ ಬೇಕೆಂಬ ವ್ಯಾಕುಲತೆ ಉಂಟಾಗುವುದಿಲ್ಲ. ರೋಗಿಯನ್ನು ಪರೀಕ್ಷಿಸಿ ಡಾಕ್ಟರು ಹೇಳುವುದುಂಟು: 'ಕೆಲವು ದಿನ ಹೀಗೇ ಸಹಿಸಿಕೊಂಡಿರು. ಆಮೇಲೆ ಅದು ಸಾಧಾರಣ ಔಷಧಿಯಿಂದಲೇ ಗುಣವಾಗಿಬಿಡುತ್ತದೆ' ಅಂತ.

"ನಾರದ ರಾಮನನ್ನು ಕೇಳಿದ: 'ಓ ರಾಮ, ನೀನು ಹೀಗೆ ಅಯೋಧ್ಯೆಯಲ್ಲೇ ಕಾಲವನ್ನು ಕಳೆಯುತ್ತಿದ್ದರೆ ರಾವಣನ ವಧೆ ಹೇಗಾದೀತು? ನೀನು ಆ ಕಾರ್ಯ ಕ್ಕಾಗಿಯೇ ಅವತರಿಸಿದ್ದಲ್ಲವೆ?' ಅಂತ. ಅದಕ್ಕೆ ರಾಮ ಹೇಳುತ್ತಾನೆ, 'ತಾಳು, ಸಕಾಲ ಬರಲಿ; ರಾವಣನ ಕರ್ಮ ಬಲಿಯಲಿ. ಆಗ ಆತನ ವಧೆಗೆ ಎಲ್ಲ ಸಿದ್ಧವಾಗುತ್ತದೆ' ಅಂತ."

ಹರಿನಾಥ: "ಭಗವಂತನಿಗೇನೋ ಆಟ, ಆದರೆ ನಮಗೆ ಪ್ರಾಣಸಂಕಟ."

ಶ್ರೀರಾಮಕೃಷ್ಣರು (ಮುಗುಳ್ನಗುತ್ತ): "ಈ 'ನೀನು' ಅಂದರೆ ಯಾರು ಅಂತ ಹೇಳು ನೋಡೋಣ. ಭಗವಂತನೇ ಸಕಲವೂ ಆಗಿದ್ದಾನೆ—ಮಾಯೆ ಜೀವ ಜಗತ್ತು

ಇಪ್ಪತ್ನಾಲ್ಕು ತತ್ತ್ವಗಳು ಎಲ್ಲ. 'ನಾನು ಹಾವಿನ ರೂಪದಲ್ಲಿ ಕಡಿಯುತ್ತೇನೆ, ಮಂತ್ರ ವಾದಿಯಾಗಿ ಗುಣಪಡಿಸುತ್ತೇನೆ' ಎನ್ನುವ ಮಾತನ್ನು ಕೇಳಿಲ್ಲವೆ ? ಭಗವಂತನೇ ವಿದ್ಯೆ-ಅವಿದ್ಯೆ ಎರಡೂ ಆಗಿದ್ದಾನೆ. ಅವನು ಅವಿದ್ಯಾ ಮಾಯೆಯಿಂದ—ಅಂದರೆ ಅಜ್ಞಾನ ದಿಂದ—ಆವರಿಸಿರುತ್ತಾನೆ; ಅವನೇ ಗುರುವಿನ ರೂಪದಲ್ಲಿ ಬಂದು ವಿದ್ಯಾಮಾಯೆಯ ಮೂಲಕ ಅದನ್ನು ಹೋಗಲಾಡಿಸುತ್ತಾನೆ.

"ಅಜ್ಞಾನ, ಜ್ಞಾನ, ವಿಜ್ಞಾನ—ಇವು ಮೂರು ಸ್ಥಿತಿಗಳು. 'ಇರುವವನು ಭಗವಂತನೊಬ್ಬನೇ, ಅವನೇ ಸೃಷ್ಟಿ-ಸ್ಥಿತಿ-ಲಯಗಳನ್ನು ಮಾಡುವವನು' ಅಂತ ಹೀಗೆ, ಜ್ಞಾನಿಯಾದವನು ತಿಳಿದುಕೊಳ್ಳುತ್ತಾನೆ. ಆದರೆ ವಿಜ್ಞಾನಿಗೆ ತೋರುತ್ತದೆ—ಅವನು ಇಷ್ಟು ಮಾತ್ರವಲ್ಲ, ಸಕಲ ಚರಾಚರ ವಸ್ತುಗಳು ಮತ್ತು ಇನ್ನೂ ಏನೇನಿದೆಯೊ ಎಲ್ಲವೂ ಅವನೇ ಆಗಿದ್ದಾನೆ ಅಂತ.

"ಮಹಾಭಾವ, ಪ್ರೇಮ ಉಂಟಾಯಿತೆಂದರೆ ಭಗವಂತನಲ್ಲದೆ ಬೇರೆ ಇನ್ನೆಂಥದೂ ಇಲ್ಲ ಅಂತ ಗೊತ್ತಾಗುತ್ತದೆ. ಭಾವದ ಮುಂದೆ ಭಕ್ತಿ ಕೇವಲ 'ಮಿಣಕ್ ಮಿಣಕ್' ಅನ್ನುತ್ತದೆ. ಭಾವ ಪಕ್ವವಾಯಿತೆಂದರೆ ಮಹಾಭಾವ, ಪ್ರೇಮ."

ಇನ್ನೊಂದು ದಿನ ಹರಿನಾಥ ದಕ್ಷಿಣೇಶ್ವರಕ್ಕೆ ಬಂದಾಗ ಮಧ್ಯಾಹ್ನ; ಶ್ರೀರಾಮ ಕೃಷ್ಣರು ಊಟಕ್ಕೆ ಕುಳಿತಿದ್ದಾರೆ. ಎದುರಿಗೆ ತಟ್ಟೆಯಲ್ಲಿ ಅನ್ನ ಬಡಿಸಿದೆ. ಜೊತೆಗೆ ನಾಲ್ಕಾರು ಬಟ್ಟಲುಗಳಲ್ಲಿ ಗೊಜ್ಜು, ಸಾರು, ಹುಳಿ—ಹೀಗೆ ಅನೇಕ ಬಗೆಯ ವ್ಯಂಜನ ಗಳು. ಅಚ್ಚುಕಟ್ಟಾದ ಭೋಜನ! ಅದನ್ನು ನೋಡಿ ಯಾರಿಗಾದರೂ, 'ಪರವಾಗಿಲ್ವೆ ಪರಮಹಂಸರು! ಒಳ್ಳೇ ಲಕ್ಷಣವಾಗಿ ಉಣ್ಣುತ್ತಾರೆ!' ಎನ್ನಿಸಿದರೆ ಆಶ್ಚರ್ಯವಿಲ್ಲ. ಆದರೆ ಅವತಾರಪುರುಷರ ಪ್ರತಿಯೊಂದು ಕಾರ್ಯವೂ ಲೋಕಶಿಕ್ಷಣ-ಲೋಕಕಲ್ಯಾಣ ಗಳಿಗಾಗಿಯೇ. ಅವರ ಊಟದ ರೀತಿಯನ್ನು ಕಂಡು ಹರಿನಾಥನ ಮನಸ್ಸಿನಲ್ಲೂ ಅದೇ ಸಂಶಯ ಇಣಕಿತೋ ಏನೋ; ಅಷ್ಟರಲ್ಲೇ ಶ್ರೀರಾಮಕೃಷ್ಣರು ನುಡಿದರು: "ನೋಡು, ನನ್ನ ಮನಸ್ಸು ಸದಾ ಕಾಲವೂ ಸ್ವಾಭಾವಿಕವಾಗಿಯೇ ಸಮಾಧಿಯ ಉನ್ನತ ಸ್ಥಿತಿಗೆ ಏರುತ್ತಿರುತ್ತದೆ. ಆದರೆ ನನಗೆ ನಿಮ್ಮೊಡನೆಲ್ಲ ಮಾತನಾಡಬೇಕೆಂಬ ಆಸೆ. ಈ ಮನ ಸ್ಸನ್ನು ಸಾಮಾನ್ಯ ಹಂತದಲ್ಲಿ ಇರಿಸಿಕೊಳ್ಳಲು ನಾನು ಈ ಬಟ್ಟಲಿನಿಂದ ಒಂದಿಷ್ಟು, ಆ ಬಟ್ಟಲಿನಿಂದ ಒಂದಿಷ್ಟು ಹೀಗೆ ಎಲ್ಲದರಿಂದಲೂ ಸ್ವಲ್ಪಸ್ವಲ್ಪ ತೆಗೆದುಕೊಂಡು ರುಚಿ ನೋಡುತ್ತೇನೆ."

ಅಷ್ಟೊಂದು ಬಗೆಯ ಪದಾರ್ಥಗಳನ್ನು ಬಡಿಸಿದ್ದರೂ ಶ್ರೀರಾಮಕೃಷ್ಣರು ತಿಂದದ್ದು ಮಾತ್ರ ಅತ್ಯಲ್ಪ ಎಂಬುದನ್ನು ಹರಿನಾಥ ಕಣ್ಣಾರೆ ಕಂಡ. ಅಲ್ಲದೆ ಅವರೆಂದುದನ್ನು ಕೇಳಿ ಅವನಿಗನ್ನಿಸಿತು: 'ಇದೆಷ್ಟು ವಿಚಿತ್ರ! ಎಲ್ಲರೂ ಆಹಾರಾದಿಗಳ ವಿಷಯದಲ್ಲಿ ಕಠಿಣ ನಿಯಮಗಳನ್ನು ಪಾಲಿಸುವ ಮೂಲಕ ರಾಜಸಿಕ ಸ್ವಭಾವವನ್ನು ಹೋಗಲಾಡಿಸಿ ಕೊಂಡು ಸಾತ್ವಿಕತೆಯನ್ನು ಗಳಿಸಲು ಪ್ರಯತ್ನಿಸುತ್ತಾರೆ. ಇವರಾದರೋ ತಮ್ಮ ಮನಸ್ಸು ಸಮಾಧಿಸ್ಥಿತಿಗೇರುವುದನ್ನು ಬಲಾತ್ಕಾರದಿಂದ ತಡೆಯಬೇಕಾಗಿದೆ!'

ಅವನು ಶ್ರೀರಾಮಕೃಷ್ಣರ ಪ್ರೇಮವಲಯದೊಳಗೆ ಸೇರಿಕೊಳ್ಳಲು ಇನ್ನು ತಡ ವಾಗಲಿಲ್ಲ. ಅವರಂತೆ ತನ್ನ ಆಧ್ಯಾತ್ಮಿಕ ಹಸಿವನ್ನು ಪರಿಪೂರ್ಣವಾಗಿ ಹಿಂಗಿಸಬಲ್ಲವ ರಾಗಲಿ, ಅವರಂತೆ ತನ್ನನ್ನು ಪ್ರೀತಿಸಬಲ್ಲವರಾಗಲಿ ಜಗತ್ತಿನಲ್ಲಿ ಇನ್ನೊಬ್ಬರು ಸಿಗ ಲಾರರು ಎಂದು ಕಂಡುಕೊಂಡ. ಶ್ರೀರಾಮಕೃಷ್ಣರನ್ನು ಸಂಪೂರ್ಣವಾಗಿ ಸ್ವೀಕರಿಸಿದ

ಮೇಲೆ ಅವನು ಆಗಾಗ ಅನೇಕ ದಿನಗಳವರೆಗೆ ಅವರ ಸನ್ನಿಧಿಯಲ್ಲೇ ಉಳಿದುಕೊಳ್ಳಲಾರಂಭಿಸಿದ. ಅವನಿಗೆ ಇತರ ತರುಣಶಿಷ್ಯರೊಂದಿಗೆ ಗೆಳೆತನ ಬೆಳೆಯಿತು. ಅದರಲ್ಲೂ ನರೇಂದ್ರನಾಥ ಅವನಿಗೆ ಪ್ರಾಣಪ್ರಿಯನಾದ.

ಗುರುವಿನ ನಿಖರ ಮಾರ್ಗದರ್ಶನದಲ್ಲಿ ಅವನ ಸಾಧನೆ ಕ್ರಮೇಣ ತೀವ್ರವಾಯಿತು. ಅವನೀಗ ಹಿಂದಿನ ಶುಷ್ಕ ವೇದಾಂತಿಯಲ್ಲ. ಬದಲಾಗಿ, ಶ್ರೀರಾಮಕೃಷ್ಣರು ತೋರಿಸಿಕೊಟ್ಟ 'ವಿಜ್ಞಾನಸ್ಥಿತಿ'ಯತ್ತ ಧಾವಿಸುತ್ತಿರುವ ಸಾಧಕ; ಭಕ್ತಿಯಿಂದೊಡಗೂಡಿದ ಜ್ಞಾನಿ!

ಈ ಕೆಲವು ವರ್ಷಗಳ ಅಲ್ಪಾವಧಿಯಲ್ಲಿ ಹರಿನಾಥನೂ ಇತರ ಶಿಷ್ಯರೂ ಶ್ರೀರಾಮಕೃಷ್ಣರಿಂದ ಪಡೆದ ಪ್ರೇಮಾಮೃತದ ಸವಿಯೆಷ್ಟು, ಅದರ ಸ್ವರೂಪವೆಂಥದು ಎಂಬುದು ನಮ್ಮ ಅಳತೆಗೆ ಮೀರಿದ್ದು. ಆದರೂ ಅನೇಕ ವರ್ಷಗಳ ತರುವಾಯ, ರೋಗರುಜಿನಗಳಿಂದ ತಾಡಿತನಾಗಿದ್ದಾಗ ಹರಿನಾಥ ಹೇಳುವ ಮಾತೊಂದನ್ನು ನೋಡಬೇಕು:

"ಈ ರೋಗ, ಈ ಬಾಧೆ ಇವೆಲ್ಲ ಏನೇನೂ ಅಲ್ಲ. ಹಿಂದೆ ನಾವು ಶ್ರೀರಾಮಕೃಷ್ಣರ ಸನ್ನಿಧಿಯಲ್ಲಿ ಪಡೆದ ಆನಂದ ಎನ್ನುವುದು ಈ ಎಲ್ಲ ತೊಂದರೆತಾಪತ್ರಯಗಳನ್ನು ಸಂಪೂರ್ಣ ಮರೆಯಿಸಿಬಿಡುವಂಥದು!"

ಶ್ರೀರಾಮಕೃಷ್ಣರು ಹರಿನಾಥನ ಮೇಲಿಟ್ಟಿದ್ದ ಪ್ರೀತಿ ಅಪಾರ. ಒಮ್ಮೆ ಅವನು ಬಹಳ ದಿನಗಳವರೆಗೆ ಕಾಣಿಸಿಕೊಳ್ಳದೆ ಕಡೆಗೊಮ್ಮೆ ಬಂದ. ಅವನನ್ನು ಕಂಡೊಡನೆ ಅವರಲ್ಲಿ ಭಾವವುಕ್ಕಿತು. "ಅಪ್ಪಾ! ಯಾಕೆ ನೀನು ಈ ಕಡೆಗೆ ಬರಲೇ ಇಲ್ಲ? ನಿಮ್ಮನ್ನೆಲ್ಲ ಆಗಾಗ, ಮತ್ತೆಮತ್ತೆ ನೋಡುತ್ತಿರಬೇಕು ಅನ್ನುವ ಆಸೆ ನನಗೆ. ಏಕೆ ಗೊತ್ತೆ? ನೀವೆಲ್ಲ ಭಗವತಿಗೆ ತುಂಬ ಪ್ರಿಯರಾದವರು. ಇಲ್ಲದೆ ಹೋದರೆ ನಾನೇಕೆ ನಿಮ್ಮನ್ನು ಇಷ್ಟೊಂದು ಮಾತನಾಡಿಸಬೇಕು? ಅಥವಾ ನೀವು ನನಗೇನು ಕೊಡಬಲ್ಲಿರಿ? ಮೂರು ಕಾಸಿನ ಬತ್ತಾಸನ್ನು ತಂದುಕೊಡುವ ಶಕ್ತಿಯೂ ನಿಮಗಿಲ್ಲ. ಆದರೂ ನಾನು ನಿಮ್ಮನ್ನು ಅಷ್ಟೊಂದು ಪ್ರೀತಿಸುತ್ತೇನಲ್ಲ!... ಆಗಾಗ ಇಲ್ಲಿಗೆ (ತಮ್ಮಲ್ಲಿಗೆ) ಬರಲು ತಪ್ಪಬೇಡ. ಏಕೆಂದರೆ ನಿನ್ನ ಶ್ರೇಯಸ್ಸಿಗೆ ಏನೇನು ಬೇಕೋ ಅದೆಲ್ಲವೂ ಇಲ್ಲಿ ಸಿಗುತ್ತದೆ, ಗೊತ್ತಾಯಿತೆ? ಅಥವಾ ಒಂದು ವೇಳೆ ಇನ್ನೆಲ್ಲಿಯಾದರೂ ನಿನಗೆ ಭಗವಂತನ ಸಾಕ್ಷಾತ್ಕಾರ ಸಿಗುವುದು ನಿಶ್ಚಯವಾದರೆ ಅಲ್ಲಿಗೇ ಹೋಗು, ನನ್ನ ಅಭ್ಯಂತರವಿಲ್ಲ. ಒಟ್ಟಿನಲ್ಲಿ ಹೇಗಾದರೂ ಸರಿಯೆ, ನೀನು ಭಗವದಾನಂದವನ್ನು ಸವಿಯುವಂತಾಗಬೇಕು—ಇದೊಂದೇ ನನ್ನಾಸೆ. ಆದರೆ ಜಗನ್ಮಾತೆ ನನಗೆ ತೋರಿಸಿಕೊಟ್ಟಿದ್ದಾಳೆ, 'ಇವನು ಸುಮ್ಮನೆ ಇಲ್ಲಿಗೆ ಬಂದುಹೋಗುತ್ತಿದ್ದರೆ ಸಾಕು, ಸ್ವಲ್ಪವೂ ಶ್ರಮವಿಲ್ಲದೆ ಸಾಕ್ಷಾತ್ಕಾರವಾಗುತ್ತದೆ' ಅಂತ. ಮಗು, ಅದಕ್ಕೇ ನಾನು ಹೇಳಿದ್ದು, ಇಲ್ಲಿಗೆ ಬರುತ್ತಿರು ಅಂತ."

ಹೀಗೆನ್ನುತ್ತ ಶ್ರೀರಾಮಕೃಷ್ಣರು ಕಣ್ಣೀರ್ಗರೆಯಲಾರಂಭಿಸಿದರು. ಅದನ್ನು ಕಂಡು ಹರಿನಾಥನ ಹೃದಯ ಕರಗಿಹೋಯಿತು.

## ವಿಶಿಷ್ಟ ಶಿಕ್ಷಣ ೭

ಗಂಗಾಧರ ಘಟಕ್ ಎಂಬವನು ಹರಿನಾಥನ ಸ್ನೇಹಿತ; ಅವನಂತೆಯೇ ತೀವ್ರವಾದ ಆಧ್ಯಾತ್ಮಿಕ ಪ್ರವೃತ್ತಿಗಳನ್ನು ಬೆಳೆಸಿಕೊಂಡಿದ್ದವನು. ಗಂಗಾಧರನದು ಅತ್ಯಂತ ಆಚಾರವಂತ ಬ್ರಾಹ್ಮಣ ಕುಟುಂಬ. ನೇಮನಿಷ್ಠೆಗಳು ಅವನಿಗೆ ಹುಟ್ಟಿನಿಂದಲೇ ಬಂದಿದ್ದುವೆನ್ನಬೇಕು. ಉಪನಯನವಾಗುತ್ತಿದ್ದಂತೆಯೇ ಅವನು ಶಾಸ್ತ್ರನಿಯಮಗಳ ಪ್ರಕಾರ ವೇದಾಧ್ಯಯನ, ಮಂತ್ರಜಪ, ಧ್ಯಾನ, ಬ್ರಹ್ಮಚರ್ಯಪಾಲನೆಗಳಲ್ಲಿ ನಿರತನಾಗಿ ಹೆತ್ತವರಿಗೆ ಹೆಮ್ಮೆಯ ಮಗನೆನಿಸಿದ. ಆ ವಯಸ್ಸಿನಿಂದಲೇ ಅವನು ದಿನಕ್ಕೆ ಮೂರು ಸಲ ಸ್ನಾನ ಮಾಡುತ್ತಿದ್ದ; ಒಪ್ಪೊತ್ತು ಮಾತ್ರ ಊಟ—ಅದೂ ತಾನೇ ಕೈಯಾರೆ ಅಟ್ಟ ಅಡುಗೆ. ಹೀಗೆ, ಮಡಿವಂತಿಕೆಯೆಂಬುದು ಅವನ ಸ್ವಭಾವವೇ ಆಗಿತ್ತು.

ಗಂಗಾಧರ ಸುಮಾರು ಹದಿನೈದು ವರ್ಷದವನಿದ್ದಾಗ ಒಂದು ದಿನ ಹರಿನಾಥನೊಂದಿಗೆ ದಕ್ಷಿಣೇಶ್ವರಕ್ಕೆ ಹೋದ. ಅವನನ್ನು ಕಂಡೊಡನೆ ಶ್ರೀರಾಮಕೃಷ್ಣರು ಅವನು ತಮಗೆ ಬಹಳ ವರ್ಷಗಳ ಪರಿಚಿತನೋ ಎಂಬ ರೀತಿಯಲ್ಲಿ ಅತೀವ ವಿಶ್ವಾಸದಿಂದ ಬರಮಾಡಿಕೊಂಡು, ತಮ್ಮ ಪಕ್ಕದಲ್ಲೇ ಕುಳ್ಳಿರಿಸಿಕೊಂಡು ಮಾತನಾಡಿಸಿದರು. ಅವರ ಪ್ರೀತಿಗೆ ಸೋತು ಗಂಗಾಧರ ಆ ರಾತ್ರಿ ಅಲ್ಲೇ ಉಳಿದುಕೊಂಡ. ಮರುದಿನ ಅವನು ಮನೆಗೆ ಹೊರಟಾಗ ಶ್ರೀರಾಮಕೃಷ್ಣರು ಮಂದಹಾಸಭರಿತರಾಗಿ, "ಮತ್ತೊಮ್ಮೆ ಬಾ" ಎಂದು ಹೇಳಿ ಕಳಿಸಿಕೊಟ್ಟರು.

ಅದಾದ ಕೆಲದಿನಗಳಲ್ಲೇ ಅವನು ಒಂದು ಶನಿವಾರ ದಕ್ಷಿಣೇಶ್ವರಕ್ಕೆ ಹೋದ. ಅಂದು ಕೂಡ ಶ್ರೀರಾಮಕೃಷ್ಣರು ಅವನನ್ನು ರಾತ್ರಿ ಅಲ್ಲೇ ಇರಿಸಿಕೊಂಡರು. ದೇವಾಲಯಗಳಲ್ಲಿ ಸಂಜೆಯ ಆರತಿಯಾಯಿತು. ಬಳಿಕ ಶ್ರೀರಾಮಕೃಷ್ಣರು ಅವನನ್ನು ತಮ್ಮೆದುರು ನಗ್ನನಾಗಿ ಕುಳಿತುಕೊಳ್ಳುವಂತೆ ಹೇಳಿದರು. "ನೀನೀಗ ನನಗೆ, ತಾಯಿಗೆ ಮಗು ಹೇಗೋ ಹಾಗೆ!" ಎಂದು ವಾತ್ಸಲ್ಯದಿಂದ ನುಡಿದು, ಅವನ ನಾಲಿಗೆಯ ಮೇಲೆ ತಮ್ಮ ಬೆರಳಿನಿಂದ ಏನನ್ನೋ ಬರೆಯುವುದರ ಮೂಲಕ ಮಂತ್ರದೀಕ್ಷೆ ನೀಡಿದರು. ಮತ್ತು ಧ್ಯಾನಕ್ಕೆ ಸಂಬಂಧಿಸಿದಂತೆ ಕೆಲವು ಸೂಚನೆಗಳನ್ನು ನೀಡಿದರು.

ಸಮಯ ದೊರೆತಾಗಲೆಲ್ಲ ಗಂಗಾಧರ ದಕ್ಷಿಣೇಶ್ವರಕ್ಕೆ ಹೋಗಲಾರಂಭಿಸಿದ. ಸಾಮಾನ್ಯವಾಗಿ ಅವನು ಮಧ್ಯಾಹ್ನದ ಮೇಲೆ ಹೋಗಿ ರಾತ್ರಿಯಿದ್ದು, ಬೆಳಗ್ಗೆ ಮುಂಚೆ ಬಂದುಬಿಡುತ್ತಿದ್ದ. ಅವನದು ಒಪ್ಪೊತ್ತು ಊಟವಾದ್ದರಿಂದ ರಾತ್ರಿಯ ವೇಳೆ ಹಣ್ಣುಗಳನ್ನು ಮಾತ್ರ ತಿನ್ನುತ್ತಿದ್ದ. ಆದರೆ ಬೆಳಗ್ಗೆ ಊಟದ ಸಮಯದಲ್ಲಿ ತಾನು ಅಲ್ಲೇ ಇದ್ದರೆ ಅಲ್ಲಿನ ಊಟ ಮಾಡಬೇಕಾಗಬಹುದೆಂಬ ಭಯದಿಂದ, ಮನಸ್ಸಿಲ್ಲದಿದ್ದರೂ ಶ್ರೀರಾಮಕೃಷ್ಣರಿಂದ ಬೀಳ್ಕೊಂಡು ಹೊರಟುಬಿಡುತ್ತಿದ್ದ. ಅವನು ಸ್ವಪಾಕವನ್ನಲ್ಲದೆ ಬೇರೆ ಅಡಿಗೆಯನ್ನು ಮುಟ್ಟುತ್ತಿರಲಿಲ್ಲ. ಅದೂ ಶುದ್ಧ ಸಸ್ಯಾಹಾರ ಮಾತ್ರ. ಈ ವಿಚಾರವೆಲ್ಲ ಶ್ರೀರಾಮಕೃಷ್ಣರಿಗೆ ಅದು ಹೇಗೋ ಗೊತ್ತಾಗಿಹೋಗಿತ್ತು.

ಒಂದು ರಾತ್ರಿ ಅವರು ಅವನನ್ನು ಕರೆದು, "ಹೋಗು, ಇವತ್ತು ನೀನು ಕಾಳೀ ಮಂದಿರದ ಪ್ರಸಾದ ತೆಗೆದುಕೊ. ಅದು ಬಹಳ ಪವಿತ್ರವಾದುದು" ಎಂದು ಹೇಳಿ

ಕಳಿಸಿದರು. 'ಇಲ್ಲ' ಎನ್ನಲಾಗದೆ ಗಂಗಾಧರ ಅತ್ತ ಹೊರಟ. 'ವಿಷ್ಣುಮಂದಿರದ ಪ್ರಸಾದವನ್ನಾದರೂ ತೆಗೆದುಕೊಳ್ಳುವಂತೆ ಹೇಳಬಾರದಿತ್ತೆ!' ಎಂದುಕೊಳ್ಳುತ್ತಲೇ, ಒಮ್ಮೆ ಸುಮ್ಮನೆ ತಿರುಗಿ ನೋಡಿದ. ಅವನು ಎಲ್ಲಿಗೆ ಹೋಗುತ್ತಾನೆಂದು ಪರೀಕ್ಷಿಸಲು ಶ್ರೀರಾಮಕೃಷ್ಣರು ಅವನ ಕಡೆಗೇ ನೋಡುತ್ತಿದ್ದಾರೆ!! ವಿಧಿಯಿಲ್ಲದೆ ಅವನು ಕಾಳೀಮಂದಿರದ ಪಾಕಶಾಲೆಗೆ ಹೋದ. ಆದರೆ ಅಲ್ಲಿ ತೊವ್ವೆ-ಅನ್ನವನ್ನಷ್ಟೇ ತಿಂದ. ಅವನು ಅಲ್ಲಿಂದ ವಾಪಸು ಬರುವುದನ್ನೇ ಕಾಯುತ್ತ ಹೊಸ್ತಿಲ ಬಳಿ ನಿಂತಿದ್ದ ಶ್ರೀರಾಮಕೃಷ್ಣರು ಅವನಿಗೆ ಎಲೆ-ಅಡಿಕೆ ಕೊಟ್ಟು, "ಇಗೊ, ಇದನ್ನು ತಿನ್ನು. ಆರೋಗ್ಯಕ್ಕೆ ಒಳ್ಳೆಯದು. ಊಟವಾದ ಮೇಲೆ ಒಂದೆರಡು ಎಲೆ ತಿಂದರೆ ಬಾಯಿವಾಸನೆ ಬರುವುದು ತಪ್ಪುತ್ತದೆ" ಎಂದರು. ಅವನಿಗೆ ಒಳಗೊಳಗೇ ಕಸಿವಿಸಿ. ಎಲೆಯಡಿಕೆ ಹಾಕಿಕೊಳ್ಳುವುದು ಅವನ ಆಚಾರಪರತೆಗೆ ವಿರುದ್ಧ. ಆದರೆ ಬೇರೇನು ಹೇಳಲೂ ತೋಚದೆ ಅದನ್ನು ಬಾಯಿಗೆ ಹಾಕಿಕೊಂಡ. ಆಗ ಶ್ರೀರಾಮಕೃಷ್ಣರೆಂದರು:

"ನೋಡು, ನರೇಂದ್ರನಿದ್ದಾನಲ್ಲ, ಅವನು ದಿನಕ್ಕೊಂದು ನೂರು ಸಲ ಎಲೆಯಡಿಕೆ ತಿನ್ನುತ್ತಾನೆ. ಮೀನು-ಮಾಂಸ ತಿನ್ನುತ್ತಾನೆ. ತಿನ್ನುವಂಥದು ಏನಾದರೂ ಸರಿಯೆ, ಕಬಳಿಸಿಬಿಡುತ್ತಾನೆ! ಆದರೆ ಅವನ ಮನಸ್ಸು ಮಾತ್ರ ಸದಾ ಎತ್ತರದಲ್ಲೇ ಇರುತ್ತದೆ. ರಸ್ತೆಯಲ್ಲಿ ಹೋಗುವಾಗ ಅವನು ಮನೆಗಳು, ಅಂಗಡಿಗಳು, ಕುದುರೆಗಳು—ಇವನ್ನು ಕೂಡ ಪರಬ್ರಹ್ಮಮಯವಾಗಿ ಕಾಣುತ್ತಾನೆ! ಗೊತ್ತಾಯಿತೆ ? ಹೋಗಿ ಅವನನ್ನೊಮ್ಮೆ ನೋಡು. ಅವನ ಮನೆ ಸಿಮ್ಲಾ ಮೊಹಲ್ಲದಲ್ಲಿದೆ."

ಈ ಬಣ್ಣನೆಯನ್ನು ಕೇಳಿ ಗಂಗಾಧರನಿಗೆ ಕುತೂಹಲ ತಡೆಯಲಾಗಲಿಲ್ಲ. ಮರುದಿನವೇ ಹೋಗಿ ನರೇಂದ್ರನನ್ನು ಕಂಡ. ಅವನ ತೇಜಸ್ಸು, ಮಾತುಕತೆ, ನೇರವಾದ ನಡವಳಿಕೆ, ಅಂತರ್ಮುಖತೆ—ಇವನ್ನೆಲ್ಲ ಗಮನಿಸಿ ಮಾರುಹೋದ. ಅಂದಿನಿಂದಲೇ ಅವರಿಬ್ಬರಲ್ಲಿ ಆತ್ಮೀಯತೆಯುಂಟಾಯಿತು.

ಇಷ್ಟಾದರೂ ಗಂಗಾಧರ ತನ್ನ ಸಂಪ್ರದಾಯಪರತೆಯನ್ನೇನೂ ಬಿಡಲಿಲ್ಲ. ಅದನ್ನು ಬಿಡುವ ಅಗತ್ಯವೂ ಅವನಿಗೆ ತೋರಲಿಲ್ಲ. ಅಲ್ಲದೆ ಶಾಸ್ತ್ರನಿರ್ದೇಶಿತವಾದ ಆಚಾರಗಳನ್ನು ಬಿಟ್ಟುಬಿಡುವಂತೆ ಶ್ರೀರಾಮಕೃಷ್ಣರೇಕೆ ಹೇಳಬೇಕು ? ಹಾಗೆ ಬಿಡುವುದು ತಪ್ಪಲ್ಲವೆ ?—ಹೀಗೆ ಯೋಚಿಸುತ್ತಿದ್ದ. ಕೆಲದಿನಗಳ ಮೇಲೆ ಅವನು ದಕ್ಷಿಣೇಶ್ವರಕ್ಕೆ ಬಂದಾಗ ಮಾತುಕತೆ ನಡೆಯುತ್ತಿತ್ತು. ಸಂದರ್ಶಕರಲ್ಲೊಬ್ಬ ಶ್ರೀರಾಮಕೃಷ್ಣರನ್ನು ಕೇಳುತ್ತಿದ್ದ:

"ಸ್ವಾಮಿ, ನಿಮ್ಮ ಹತ್ತಿರಕ್ಕೆ ಎಷ್ಟೋ ಎಳೆಯರು ಬರುತ್ತಾರೆ. ನೀವು ಅವರಿಗೆಲ್ಲ ತ್ಯಾಗ ವೈರಾಗ್ಯವನ್ನೇ ಹೇಳಿಕೊಟ್ಟೂ ಹೇಳಿಕೊಟ್ಟೂ ಬುದ್ಧಿ ತಿರುಗಿಸಿ, ಅವರುಗಳು ಸಂನ್ಯಾಸಿಗಳಾಗುವ ಹಾಗೆ ಮಾಡುತ್ತಿದ್ದೀರಿ. ಇದು ತುಂಬ ಅನ್ಯಾಯವಲ್ಲವೆ ?"

ಶ್ರೀರಾಮಕೃಷ್ಣರು (ಮುಗುಳ್ನಗುತ್ತ): "ಅಯ್ಯಾ, ನೀವು ಅವರುಗಳ ಈ ಜನ್ಮವನ್ನು ಮಾತ್ರ ನೋಡುತ್ತಿದ್ದೀರಿ. ಅವರು ಸಂಸಾರಭೋಗಗಳನ್ನೆಲ್ಲ ಹಿಂದಿನ ಜನ್ಮಗಳಲ್ಲೇ ಮುಗಿಸಿಕೊಂಡಿದ್ದಾರೆ. ಆದ್ದರಿಂದ ಅವರ ಮನಸ್ಸೀಗ ಅತ್ಯಂತ ಪರಿಶುದ್ಧವಾಗಿದೆ. ಅದಕ್ಕೇ ಚಿಕ್ಕಂದಿನಿಂದಲೂ ದೇವರ ಕಡೆಗೆ ವಾಲಿದ್ದಾರೆ. ಕೆಲವರಂತೂ ದಿನಕ್ಕೆ ಮೂರು ಸಲ ಸ್ನಾನ ಮಾಡುತ್ತಾರೆ; ಕೈಯಾರೆ ಬೇಯಿಸಿಕೊಂಡ ಹವಿಷ್ಯಾನ್ನವನ್ನು*

*ತುಪ್ಪದೊಂದಿಗೆ ಬೇಯಿಸಿದ ಅನ್ನ. ಇದಕ್ಕೆ ಉಪ್ಪು ಖಾರ ಏನನ್ನೂ ಸೇರಿಸುವುದಿಲ್ಲ.

ಮಾತ್ರವೇ ತಿನ್ನುತ್ತಾರೆ; ಶಾಸ್ತ್ರಾಧ್ಯಯನ ಮಾಡುತ್ತಾರೆ. ಇಂಥ ಸದಭ್ಯಾಸಗಳೆಲ್ಲ ಸುಮ್ಮನೆ ಬರುತ್ತವೆಯೆ? ಇನ್ನೂ ಚಿಕ್ಕ ಹುಡುಗರು; ಈ ವಯಸ್ಸಿನಲ್ಲಿ ಜೀವನದ ಮೇಲೆ ಎಷ್ಟು ಆಸೆ ಇರಬೇಕು! ಬದಲಾಗಿ ವೈರಾಗ್ಯವಂತರಾಗಿದ್ದಾರೆ! ಇದೆಲ್ಲ ಏನು ಒಂದೇ ಜನ್ಮದಲ್ಲಿ ಸಾಧ್ಯವಾಗುವಂಥದೆ? ಅಥವಾ ಇನ್ನೊಬ್ಬರು ಕಲಿಸಿಕೊಡ ಲಾದೀತೆ? ನಾನು ದೇವರ ವಿಷಯವನ್ನು ಇಂಥವರೊಂದಿಗಲ್ಲದೆ ಇನ್ನಾರ ಜೊತೆ ಯಲ್ಲಿ ಮಾತನಾಡಲಿ?''

ಇದನ್ನು ಕೇಳಿದ ಮೇಲೆ ಗಂಗಾಧರನಿಗೆ ಆಚಾರ-ನೇಮಗಳ ಮೇಲಿನ ವಿಶ್ವಾಸ ಇಮ್ಮಡಿಯಾಯಿತು. ಅವುಗಳನ್ನು ಅಭ್ಯಾಸ ಮಾಡುವುದರಲ್ಲಿ ಯಾವ ತಪ್ಪೂ ಇಲ್ಲ ವೆಂಬುದು ಮನವರಿಕೆಯಾಯಿತು. ಆದರೆ, ಶ್ರೀರಾಮಕೃಷ್ಣರು ಅವನ ಆಚಾರನಿಷ್ಠೆ ಯನ್ನು ಪ್ರೋತ್ಸಾಹಿಸಿದರಾದರೂ ಇನ್ನು ಕೆಲವು ವಿಷಯಗಳನ್ನು ಒಪ್ಪಲಿಲ್ಲ. ಉದಾಹರ ಣೆಗೆ ಅವನು ಅತಿಯಾಗಿ ಅಳಲೇಕಾಯಿ ತಿನ್ನುತ್ತಿದ್ದ; ಸ್ನಾನ ಮಾಡುವಾಗ ಎಣ್ಣೆ ಹಚ್ಚಿ ಕೊಳ್ಳುತ್ತಿರಲಿಲ್ಲ. ಇವೆಲ್ಲ ಸಂಪ್ರದಾಯಶರಣತೆಯಿಂದ ಬಂದ ಅಭ್ಯಾಸಗಳು. ಶ್ರೀರಾಮಕೃಷ್ಣರು ಅವನಿಗೆ ಹೊಸ ದೃಷ್ಟಿಕೋನವನ್ನು ಬೆಳೆಸಿಕೊಳ್ಳುವಂತೆ ಬೋಧಿಸಿ ಇಂಥ ಅಭ್ಯಾಸಗಳನ್ನು ಮಾರ್ಪಡಿಸಿದರು. ಸಂಧ್ಯಾವಂದನೆಯ ಸಮಯದಲ್ಲಿ ಅವನು ಬಹಳವಾಗಿ ಪ್ರಾಣಾಯಾಮ ಮಾಡುತ್ತಾನೆ, ನದಿಯಲ್ಲಿ ಮುಳುಗಿ ಬಹಳ ಹೊತ್ತು ಉಸಿರು ಕಟ್ಟುತ್ತಾನೆ ಎಂಬುದನ್ನು ತಿಳಿದ ಶ್ರೀರಾಮಕೃಷ್ಣರು ಅವೆರಡನ್ನೂ ನಿಷೇಧಿಸಿ, ಅದರ ಬದಲು ಸಾಧ್ಯವಾದಷ್ಟೂ ಹೆಚ್ಚು ಗಾಯತ್ರೀ ಜಪ ಮಾಡುವಂತೆ ಬೋಧಿ ಸಿದರು.

ಶ್ರೀರಾಮಕೃಷ್ಣರ ದಿವ್ಯ ಸಾನ್ನಿಧ್ಯದಲ್ಲಿ ಗಂಗಾಧರ ದಿನದಿನವೂ ಹೊಸ ಪಾಠ ಗಳನ್ನು ಕಲಿಯುತ್ತ ಬಂದ. ಅವನು ಕಾಣುತ್ತಿದ್ದ ಸನ್ನಿವೇಶಗಳು, ಕೇಳುತ್ತಿದ್ದ ಮಾತು ಗಳು ಎಲ್ಲವೂ ಬಹಳ ಅರ್ಥಪೂರ್ಣ, ಅಷ್ಟೇ ಸ್ವಾರಸ್ಯಕರ.

ಶ್ರೀರಾಮಕೃಷ್ಣರಲ್ಲಿ ಅವನು ಗಮನಿಸಿದ ಒಂದು ವಿಶೇಷ ಅಂಶವೆಂದರೆ ತಮ್ಮ ಬಳಿಗೆ ಯಾರೇ ಬರಲಿ, ಭಗವದ್ವಿಚಾರವಲ್ಲದೆ ಮತ್ತಾವುದರ ಕುರಿತಾಗಿಯೂ ಅವರು ಮಾತಾಡುತ್ತಲೇ ಇರಲಿಲ್ಲ ಎಂಬುದು. ಆದರೆ ಆ ಮಾತುಗಳು ಎಂದಿಗೂ ನೀರಸವಾಗಿ ತೋರುತ್ತಿರಲಿಲ್ಲ. ಮನಸ್ಸಿಗೆ ನಾಟುವ ಉಪಮೆಗಳು, ಕಥೆಗಳು, ಚಟಾಕಿಗಳು ಇವು ಗಳಿಂದ ಕೂಡಿ ತುಂಬ ಉಲ್ಲಾಸಕರವಾಗಿರುತ್ತಿದ್ದುವು.

ಆ ದಿನಗಳಲ್ಲಿ ಶ್ರೀರಾಮಕೃಷ್ಣರು ತಮ್ಮಲ್ಲಿಗೆ ಬರುವ ಹುಡುಗರನ್ನೆಲ್ಲ ಧ್ಯಾನ ಜಪ ಮಾಡುವಂತೆ ಹೇಳಿ ಪಂಚವಟಿಗೋ ದೇವಸ್ಥಾನಕ್ಕೋ ಕಳಿಸುತ್ತಿದ್ದರು. ಗಂಗಾಧರ ನನ್ನು ಅವರು ಆಗಾಗ, "ಇಂದು ನಿನಗೆ ಧ್ಯಾನ ಅಥವಾ ಪ್ರಾರ್ಥನೆಯ ಸಮಯದಲ್ಲಿ ಕಣ್ಣೀರು ಬಂತೆ?'' ಎಂದು ಕೇಳುತ್ತಿದ್ದರು. ಮೊದಮೊದಲು ಅವನಿಗೆ ಹಾಗೇನೂ ಆಗಿರಲಿಲ್ಲ. ಆದರೆ ಒಂದು ದಿನ ಅವನು ತನಗೆ ಕಣ್ಣೀರು ಬಂದಿತು ಎಂದು ತಿಳಿಸಿದಾಗ ಅವರಿಗಾದ ಆನಂದ ಅಪಾರ. ಇದು ಅವನ ಆಧ್ಯಾತ್ಮಿಕ ಪ್ರಗತಿಪಥದಲ್ಲಿ ಒಂದು ನಿರ್ದಿಷ್ಟ ಹಂತ ಎಂದು ಅವರು ಕಂಡು ಕೊಂಡಿದ್ದಿರಬೇಕು.

ಇನ್ನೊಂದು ದಿನ ಅವರು, "ದೇವರನ್ನು ಪ್ರಾರ್ಥಿಸಿಕೊಳ್ಳುವುದು ಹೇಗೆ ಗೊತ್ತೆ?'' ಎನ್ನುತ್ತ, ಅದನ್ನು ಅವನಿಗೆ ತೋರಿಸಹೊರಟರು. ಆದರೆ ಅದು ಕೇವಲ ಒಂದು 'ಪ್ರದರ್ಶನ'ವಾಗುವ ಬದಲು 'ನಿದರ್ಶನ'ವಾಗಿ ಪರಿಣಮಿಸಿತು; ಅವರು

ತಾವೇ ಆ ಉತ್ಕಟ ಭಾವದಲ್ಲಿ ಮುಳುಗಿಹೋದರು. ತಾಯಿಗಾಗಿ ಕಾತರಿಸುವ ಮಗುವಿನಂತೆ ಕೈಕಾಲುಗಳನ್ನು ಬಡಿಯುತ್ತ, "ಅಮ್ಮಾ, ನನ್ನಮ್ಮಾ! ನನಗೆ ನಿನ್ನಲ್ಲಿ ಭಕ್ತಿ ಕೊಡು, ಜ್ಞಾನ ಕೊಡು; ನನಗಿನ್ನೇನೂ ಬೇಡ. ನೀನಿಲ್ಲದೆ ನಾನು ಜೀವಿಸಲಾರೆ" ಎಂದು ಆರ್ತರಾಗಿ ಮೊರೆಯಿಡಲಾರಂಭಿಸಿದರು. ಮೈಮೇಲಿನ ಬಟ್ಟೆ ಕಳಚಿ ಬಿದ್ದು ಹೋಯಿತು. ಈಗ ಅವರು ತದ್ವತ್ ಒಬ್ಬ ಹುಡುಗನಂತೆಯೇ ಕಾಣುತ್ತಿದ್ದರು. ಕಣ್ಣೀರು ಧಾರೆಧಾರೆಯಾಗಿ ಹರಿದು ಅವರ ಎದೆಯನ್ನೆಲ್ಲ ತೋಯಿಸಿತು. ಅದನ್ನು ನೋಡುತ್ತ ಗಂಗಾಧರ ಆಶ್ಚರ್ಯಚಕಿತನಾಗಿ, 'ಇವರು ಪ್ರಾರ್ಥಿಸುತ್ತಿರುವುದು ನನ್ನ ಸಲುವಾಗಿಯೇ ಇರಬಹುದೆ!' ಎಂದು ಭಾವಿಸಿದ.

ಮತ್ತೊಂದು ದಿನ ಅವನು ಶ್ರೀರಾಮಕೃಷ್ಣರೊಂದಿಗೆ ಸ್ನಾನಕ್ಕೆಂದು ಗಂಗೆಗೆ ಹೋದಾಗ ದೇವಸ್ಥಾನದ ಮ್ಯಾನೇಜರು ಅಲ್ಲೇ ಕಾಲ್ತೊಳೆಯುತ್ತ ನಿಂತಿದ್ದ. ಆ ಹೊತ್ತಿಗೆ ಅಲ್ಲೊಬ್ಬ ಮಧ್ಯವಯಸ್ಸಿನ ಬ್ರಾಹ್ಮಣ ಬಂದ. ಮ್ಯಾನೇಜರನ್ನು ನೋಡಿ, "ನೀವೇನಾ ಇಲ್ಲಿಯ ಮ್ಯಾನೇಜರು ?" ಎಂದು ಕೇಳಿದ. ಈತ "ಹೌದು" ಎಂದಾಗ ಆತ ಅಲ್ಲೇ ಒಂದೆಡೆ ಕುಳಿತು ಲೋಕಾಭಿರಾಮವಾಗಿ ಮಾತನಾಡತೊಡಗಿದ:

"ಏನ್ ಸ್ವಾಮಿ, ಇಲ್ಲಿನ ಕೊಳದಲ್ಲಿ ತಿಂಗಳಿಗೆ ಎಷ್ಟು ಮಣ ಮೀನು ಸಿಗುತ್ತೆ?... ತೋಟದಲ್ಲಿ ಹಣ್ಣು-ತರಕಾರಿ ಫಸಲು ಹೇಗೆ, ಪರವಾಗಿಲ್ಲ ಅಂತೀರಾ?. . . ಎಷ್ಟಿದೆ ಆದಾಯ ?"

ಈ ಮಾತುಗಳೆಲ್ಲ ಶ್ರೀರಾಮಕೃಷ್ಣರ ಕಿವಿಗೂ ಬಿದ್ದುವು. ಅವರು ಜುಗುಪ್ಸೆಗೊಂಡು, ಓರೆಗಣ್ಣಿನಿಂದ ಅವನ ಕಡೆ ತೀಕ್ಷ್ಣವಾಗಿ ನೋಡಿದರು; ಆದರೇನೂ ಹೇಳಹೋಗಲಿಲ್ಲ. ಬಳಿಕ ಸ್ನಾನ ಮುಗಿಸಿಕೊಂಡು ಕೋಣೆಗೆ ಹಿಂದಿರುಗಿದರು.

ಸ್ವಲ್ಪ ಹೊತ್ತಿನ ಮೇಲೆ ಆ ಬ್ರಾಹ್ಮಣ ಅವರಲ್ಲಿಗೇ ಬಂದು ಕೇಳಿದ: "ಏನ್ರೀ, ಹರೀಶ ಅನ್ನುವ ಹುಡುಗ ಇಲ್ಲಿದ್ದಾನಾ ?"

ಇದಕ್ಕೆ ಉತ್ತರಿಸುವ ಬದಲು ಶ್ರೀರಾಮಕೃಷ್ಣರು ರೇಗಿಬಿಟ್ಟರು:

"ಅಲ್ಲಯ್ಯಾ, ನೀನೋ ಬ್ರಾಹ್ಮಣ; ಆಯುಸ್ಸು ಮುಕ್ಕಾಲುವಾಸಿ ತೀರಿಹೋಗಿ, ಈಗಿನ್ನೇನು ಕಾಲುವಾಸಿ ಉಳಿದಿದೆ. ಅಂಥಾದ್ದರಲ್ಲಿ, ಅದೂ ಈ ಪವಿತ್ರ ಗಂಗಾತೀರಕ್ಕೆ ಬಂದವನು, ಇಲ್ಲಾದರೂ ಭಗವಂತನ ಸ್ಮರಣೆ ಮಾಡದೆ, 'ಎಷ್ಟು ಮೀನು ಸಿಗುತ್ತೆ?' 'ಎಷ್ಟು ಹಣ್ಣು ಬಿಡುತ್ತೆ?' ಅಂತ ಕೇಳುತ್ತಿದ್ದೀಯಲ್ಲ, ಏನಯ್ಯ! ಛೀ ಛೀ! ನಾಚಿಕೆಗೇಡು!"

ಬ್ರಾಹ್ಮಣ ಮರುಮಾತಾಡದೆ ಮುಖ ಊದಿಸಿಕೊಂಡು ಹೊರಟು ಹೋದ. ಶ್ರೀರಾಮಕೃಷ್ಣರು ಗಂಗಾಧರನಿಗೆ "ಅವನು ನಿಂತಿದ್ದ ಜಾಗದಲ್ಲಿ ಗಂಗಾಜಲ ಚಿಮುಕಿಸು" ಎಂದರು.

ಅದೇ ದಿನ ಮತ್ತೊಂದು ಸ್ವಾರಸ್ಯ ನಡೆಯಿತು. ಒಬ್ಬ ಭಿಕ್ಷುಕ ಅಲ್ಲಿಗೆ ಬಂದು, "ಏನಾದರೂ ಧರ್ಮ ಮಾಡಿ ಸ್ವಾಮಿ" ಎಂದು ಬೇಡಿದ. ಶ್ರೀರಾಮಕೃಷ್ಣರು ಗಂಗಾಧರನನ್ನು ಕರೆದು ಮೂಲೆಯಲ್ಲಿದ್ದ ಡಬ್ಬದಿಂದ ನಾಲ್ಕು ಪೈಸೆ ಕೊಡಿಸಿದರು. ಅವನು ಕೊಟ್ಟಾದ ಮೇಲೆ ಹೇಳಿದರು, "ಈಗ ಗಂಗಾಜಲದಿಂದ ಕೈ ತೊಳೆದುಕೊ." ಅವನು ಹಾಗೆಯೇ ಮಾಡಿದ. ಇದೇನೋ ಒಂದು ಚಿಕ್ಕ ಘಟನೆ. ಆದರಿದು ಅವನಲ್ಲಿ ಎಂಥ ಗಾಢ ಪರಿಣಾಮವನ್ನು ಉಂಟುಮಾಡಿತೆಂದರೆ, ಅನೇಕ ವರ್ಷಗಳ ಬಳಿಕ ಅವನೆನ್ನು

ತ್ತಾನೆ, "ಅದು ನನ್ನ ಮನಸ್ಸಿನ ಮೇಲೆ 'ಹಣ ಎನ್ನುವುದು ಅಮೇಧ್ಯದಂತೆ ತಿರಸ್ಕರಣೀಯವಾದದ್ದು' ಎಂಬ ಭಾವನೆಯನ್ನು ಅಚ್ಚಳಿಯದಂತೆ ಮೂಡಿಸಿತು. ಹದಿನಾಲ್ಕು ವರ್ಷಗಳ ಕಾಲ ನಾನು ಪರಿವ್ರಾಜಕ ಸಂನ್ಯಾಸಿಯಾಗಿ ಸುತ್ತಾಡಿದೆ; ಆದರೆ ಒಮ್ಮೆಯೂ ಕಾಸು ಮುಟ್ಟಲಿಲ್ಲ. ಇವತ್ತಿಗೂ ನನಗೆ ಹಣದ ಬಗ್ಗೆ ಇರುವ ಜುಗುಪ್ಸೆಗೆ ಆ ಅದ್ಭುತ ಘಟನೆಯೇ ಕಾರಣ. ನನಗೆ ಸಂಪತ್ತಿನ ಪೊಳ್ಳುತನವನ್ನು ತೋರಿಸಿಕೊಡುವುದಕ್ಕಾಗಿಯೇ ಅಂದು ಠಾಕೂರರು ಹಾಗೆ ಮಾಡಿದರು ಅಂತ ನನಗನ್ನಿಸುತ್ತದೆ."

ಮತ್ತೊಂದು ಸಂದರ್ಭ. ಕಲ್ಕತ್ತದ ಅನೇಕ ದೊಡ್ಡಮನುಷ್ಯರು ಶ್ರೀರಾಮಕೃಷ್ಣರೆದುರು ಕುಳಿತಿದ್ದಾರೆ. ಬಹುಶಃ ಥಿಯಾಸೊಫಿಕಲ್ ಸಂಸ್ಥೆಯ* ಅನುಯಾಯಿಗಳೂ ಕೆಲವರಿದ್ದಾರೆ. ಮಾತಿನ ನಡುವೆ ಒಬ್ಬಾತ, "ಮಹಾಶಯರೆ, ಕರ್ನಲ್ ಓಲ್ಕಾಟ್ ಎಂಬ ಗಣ್ಯ ವ್ಯಕ್ತಿ ತನ್ನ ಧರ್ಮವನ್ನು ಬಿಟ್ಟು ಒಬ್ಬ ಹಿಂದೂವಾಗಿಬಿಟ್ಟಿದ್ದಾನೆ" ಎಂದು ಹೇಳಿದ.

ಶ್ರೀರಾಮಕೃಷ್ಣರಿಗೆ ಥಿಯಾಸೊಫಿಯ ಬಗ್ಗೆಯಾಗಲಿ, ಓಲ್ಕಾಟನ ಬಗ್ಗೆಯಾಗಲಿ ಏನೇನೂ ಗೊತ್ತಿಲ್ಲ. ಆದರೆ ಪರಧರ್ಮೀಯನಾದ ಒಬ್ಬಾತ ಹಿಂದುವಾಗಿಬಿಟ್ಟಿದ್ದಾನೆ ಎಂಬ ಮಾತನ್ನು ಕೇಳಿದೊಡನೆಯೇ ಅವರ ಮುಖದಲ್ಲಿ ಅಚ್ಚರಿ ಮೂಡಿತು. ಗಂಗಾಧರ ಅವರನ್ನೇ ಗಮನಿಸುತ್ತಿದ್ದಾನೆ; ಇದನ್ನು ಕೇಳಿ ಅವರಿಗೆ ಸಂತೋಷವಾಗುತ್ತದೆ ಎಂಬ ನಿರೀಕ್ಷೆ ಅವನದು. ಆದರೆ ಶ್ರೀರಾಮಕೃಷ್ಣರಿಗಾದದ್ದು ಸಂತೋಷವಲ್ಲ, ಅಸಮಾಧಾನ. ಅವರು ಉದ್ಗರಿಸಿದರು:

"ಏಕೆ! ಅವನೇಕೆ ಸ್ವಧರ್ಮವನ್ನು ತ್ಯಜಿಸಬೇಕಾಗಿತ್ತು?"

ಅಲ್ಲಿದ್ದವರೆಲ್ಲ ಅವರ ಈ ಪ್ರತಿಕ್ರಿಯೆಯನ್ನು ಕಂಡು ಅಪ್ರತಿಭರಾದರು. "ಸರ್ವಧರ್ಮಗಳೂ ಒಬ್ಬನೇ ಭಗವಂತನೆಡೆಗೆ ಕರೆದೊಯ್ಯುವ ವಿವಿಧ ಮಾರ್ಗಗಳು" ಎಂಬ ಅವರ ಅನುಭವ ಹಾಗೂ ಬೋಧನೆ ಎಷ್ಟು ಪ್ರಾಮಾಣಿಕವಾದದ್ದು ಎಂಬುದಕ್ಕೊಂದು ಪುರಾವೆಯನ್ನು ಕಂಡಂತಾಯಿತು.

ಒಮ್ಮೆ ಶ್ರೀರಾಮಕೃಷ್ಣರು ಕಾಳೀಮಾತೆಗೆ ಪ್ರಣಾಮ ಸಲ್ಲಿಸಲು ಮಂದಿರಕ್ಕೆ ಹೊರಟಾಗ ಗಂಗಾಧರನೂ ಜೊತೆಯಲ್ಲಿದ್ದ. ಅವನು ಇತರ ಭಕ್ತರ ಜೊತೆಯಲ್ಲಿ ಗರ್ಭಗುಡಿಯ ಹೊಸ್ತಿಲ ಹೊರಗೇ ನಿಂತು ನಮಸ್ಕಾರ ಮಾಡಿ ತೀರ್ಥ ಸ್ವೀಕರಿಸಿದ. ಶ್ರೀರಾಮಕೃಷ್ಣರು ಗರ್ಭಗುಡಿಯ ಒಳಹೊಕ್ಕರು.

ದಶಭುಜಾನ್ವಿತೆಯಾದ ಕಾಳಿಕಾದೇವಿ, ಶವದಂತೆ ನಿಶ್ಚೇಷ್ಟಿತನಾಗಿ ಮಲಗಿರುವ ಶಿವನ ಎದೆಯ ಮೇಲೆ ರುದ್ರನರ್ತನದಲ್ಲಿ ತೊಡಗಿರುವ ಅತ್ಯಂತ ಸುಂದರ ವಿಗ್ರಹ ಅದು. ಹೊರಗಿನಿಂದ ನೋಡುವವರಿಗೆ, ಸುವರ್ಣಖಚಿತವಾದ ಶಿವನ ಜಟೆ ಕಾಣುತ್ತದೆಯೇ ಹೊರತು ಅವನ ಮುಖ ಸ್ಪಷ್ಟವಾಗಿ ಕಾಣುವುದಿಲ್ಲ. ಅಲ್ಲಿಯವರೆಗೆ ಗಂಗಾ

*ಇದು ಆಂಗ್ಲ ಮಹಿಳೆ ಶ್ರೀಮತಿ ಆನ್ನಿ ಬೆಸೆಂಟಳಿಂದ ಸ್ಥಾಪಿತವಾದ ಧಾರ್ಮಿಕ ಸಂಘಟನೆ. ಹಿಂದೂ ಧರ್ಮದ ಕರ್ಮಸಿದ್ಧಾಂತ, ಪುನರ್ಜನ್ಮ ಸಿದ್ಧಾಂತ, ಆತ್ಮತತ್ತ್ವ ಮೊದಲಾದ ಸಿದ್ಧಾಂತಗಳ ಪ್ರಭಾವದಿಂದ ಉಗಮವಾದ ಈ ಸಂಸ್ಥೆ ಆಗ ಪಾಶ್ಚಾತ್ಯ ರಾಷ್ಟ್ರಗಳಲ್ಲೂ ಭಾರತದಲ್ಲೂ ಪ್ರವರ್ಧಮಾನ ಸ್ಥಿತಿಯಲ್ಲಿತ್ತು. ಕರ್ನಲ್ ಓಲ್ಕಾಟ್ ಎಂಬಾತ ಕಲ್ಕತ್ತದಲ್ಲಿ ಇದರ ಶಾಖೆಯನ್ನು ನಡೆಸಲು ಅಮೆರಿಕದಿಂದ ಬಂದಿದ್ದ. ಆತ ಉದ್ದನೆಯ ಗಡ್ಡ ಬಿಟ್ಟಿದ್ದು, ಋಷಿಯಂತೆ ಕಾಣುತ್ತಿದ್ದ. ಕತ್ತಿನಲ್ಲಿ ಅನೇಕ ತಾಯಿತಗಳು ತೂಗಾಡುತ್ತಿದ್ದುವು. ಅವನು ಮಾಂಸಾಹಾರವನ್ನು ವರ್ಜಿಸಿ ಸಾತ್ವಿಕ ಹಿಂದೂಗಳಂತೆ ಜೀವನ ನಡೆಸುತ್ತಿದ್ದ.

ಧರನಿಗೂ ಆ ಮುಖವನ್ನು ಗಮನಿಸುವ ಅವಕಾಶ ದೊರೆತಿರಲಿಲ್ಲ.

ಅಂದು ಗರ್ಭಗುಡಿಯ ಒಳಹೊಕ್ಕ ಶ್ರೀರಾಮಕೃಷ್ಣರು ಗಂಗಾಧರನನ್ನೂ ಒಳಗೆ ಕರೆದು ಶಿವನ ಮುಖವನ್ನು ತೋರಿಸುತ್ತ ಉದ್ಗರಿಸಿದರು:

"ನೋಡು ! ಹೇಗೆ ಶಿವ ಜೀವಂತನಾಗಿದ್ದಾನೆ !"

ಗಂಗಾಧರ ನೋಡಿದ.

ಹೌದು, ಶಿವ ಜೀವಂತನಾಗಿದ್ದಾನೆ ! ಉಸಿರಾಡುತ್ತಿದ್ದಾನೆ !

ಶ್ರೀರಾಮಕೃಷ್ಣರು ಮತ್ತೆ ನುಡಿದರು: "ನೋಡು, ಚೈತನ್ಯಮಯನಾದ ಶಿವ ಹೇಗೆ ಅಚೈತನ್ಯನಂತೆ ಬಿದ್ದುಕೊಂಡಿದ್ದಾನೆ !"

ಅವರ ಮಾತಿನಲ್ಲಿ ಅದೆಂಥ ಶಕ್ತಿ ! ಕೇಳಿದವರ ಮನಸ್ಸಿಗೆ ಒಮ್ಮೆಗೇ ವಿಶ್ವಾಸ ಹುಟ್ಟಿಸುವಂತಹ ಬಲ ! ನಿಜಕ್ಕೂ ಶಿವನು ಚೈತನ್ಯಮಯನಾಗಿದ್ದಾನೆ ಎಂಬುದು ಆತನಿಗೆ ಸ್ಪಷ್ಟಗೋಚರವಾಯಿತು. ಅವನ ಆಶ್ಚರ್ಯಾನಂದಗಳಿಗೆ ಪಾರವೇ ಇಲ್ಲ ! ಬಳಿಕ ಶ್ರೀರಾಮಕೃಷ್ಣರು ಕಾಳಿಯ ಮೇಲಿನ ಬಟ್ಟೆಯನ್ನೂ, ಆಕೆಯ ಕೈಕಾಲುಗಳನ್ನು ಅಲಂಕರಿಸಿರುವ ಆಭರಣಗಳನ್ನೂ ಒಮ್ಮೆ ಸ್ಪರ್ಶಿಸಿದರು. ತಕ್ಷಣವೇ ಭಾವಸಮಾಧಿಗೇರಿದರು. ಅವರ ಮೈಮೇಲಿನ ಬಟ್ಟೆ ಜಾರಿಹೋಯಿತು. ಅವರನ್ನು ಕೋಣೆಗೆ ಕರೆದೊಯ್ಯಬೇಕಾದರೆ ಬಹಳ ಪ್ರಯಾಸವಾಯಿತು. ಬಹಳ ಹೊತ್ತಿನವರೆಗೂ ಅವರು ಗಾಢಸಮಾಧಿಯಲ್ಲೇ ಮುಳುಗಿದ್ದುಬಿಟ್ಟರು. ಮೈಯರಿವು ಮರಳಿದ ಮೇಲೆ ಅವರು ಉನ್ನತ ಭಾವದಲ್ಲಿ ಒಂದಾದಮೇಲೊಂದರಂತೆ ಹಾಡುಗಳನ್ನು ಹಾಡತೊಡಗಿದರು.

ಅವರು ಮಾಡಿಸಿಕೊಟ್ಟ ಅದ್ಭುತ ಅನುಭವವನ್ನು ಮೆಲುಕು ಹಾಕುತ್ತ ಗಂಗಾಧರನಿಗೆ ಆ ದಿನ ಕಳೆದದ್ದೇ ಗೊತ್ತಾಗಲಿಲ್ಲ. ಅಂದಿನ ಆ ಅನುಭವವನ್ನು ನೆನೆಸಿಕೊಂಡು ಮುಂದೊಮ್ಮೆ ಅವನು ಹೇಳುತ್ತಾನೆ:

"ಅಷ್ಟು ದಿನಗಳವರೆಗೂ ನಾನು, ಆ ಶಿವನು ಕೇವಲ ವಿಗ್ರಹವೆಂಬಂತೆ ಭಾವಿಸುತ್ತಿದ್ದೆ. ಆದರೆ ಆ ದಿನ ಅವನು ಜೀವಂತನಾಗಿ ಸ್ಪಂದಿಸುತ್ತಿರುವುದನ್ನು ನೋಡಿಬಿಟ್ಟೆ. ಅವತ್ತು ಶ್ರೀರಾಮಕೃಷ್ಣರು ನನ್ನೊಳಗೆ ಎಂಥ ಆನಂದವನ್ನು ಹರಿಸಿದರೋ ಅದನ್ನು ಇನ್ನೊಬ್ಬರಿಗೆ ಹೇಳಲು ಸಾಧ್ಯವಿಲ್ಲ. ಅದನ್ನು ಅಂತರ್ಯದಲ್ಲಿ ಅನುಭವಿಸಬಹುದು ಅಷ್ಟೆ."

ಒಮ್ಮೆ ಶ್ರೀರಾಮಕೃಷ್ಣರು ಬಲರಾಮನ ಮನೆಗೆ ಬಂದಿದ್ದರು; ಹತ್ತಾರು ಜನ ಭಕ್ತರು ಮತ್ತು ತರುಣಶಿಷ್ಯರು ಅವರ ಬಾಯಿಂದ ಹೊರಬೀಳುವ ಒಂದೊಂದು ಶಬ್ದವನ್ನೂ ಉತ್ಸುಕತೆಯಿಂದ ಆಲಿಸುತ್ತಿದ್ದರು. ಆ ದಿವಸ ಶ್ರೀರಾಮಕೃಷ್ಣರ ಮನಸ್ಸು ಸಂಪೂರ್ಣ ಒಳಮುಖವಾಗಿಬಿಟ್ಟಿತ್ತು. ಅಪರೂಪಕ್ಕೆ ಒಂದೆರಡು ಮಾತನಾಡುವುದು, ಸಮಾಧಿಸ್ಥಿತಿಗೇರುವುದು—ಹೀಗೇ ನಡೆಯುತ್ತಿತ್ತು. ಆ ಸ್ಥಿತಿಯಲ್ಲೇ ಅವರು ಲೀಲಾಮಯ ರಾಮಲಾಲನ ಪರಮಾದ್ಭುತ ಕಥೆಯನ್ನು ಹೃದಯ ಮಿಡಿಯುವಂತೆ ಬಣ್ಣಿಸಿದರು; ತಾವು ಆ ಮೃದುಲ ಮನೋಹರ ಮುಗ್ಧ ಕುವರನಿಗೆ ಅವಲಕ್ಕಿ ತಿನ್ನಿಸಿದಾಗ, ಬತ್ತದ ಹೊಟ್ಟು ಚುಚ್ಚಿ ಆತನ ನಾಲಿಗೆಗೆ ಗಾಯವಾದುದನ್ನು ನೆನಪಿಸಿಕೊಂಡು ಕಣ್ಣೀರ್ಗರೆದರು. ಅನಂತರ ಸ್ವಲ್ಪ ಹೊತ್ತು ದಿವ್ಯಭಾವದಲ್ಲಿ ಮೌನವಾಗಿದ್ದು, ಬಳಿಕ ಜಗನ್ಮಾತೆಯೊಡನೆ ಮಾತನಾಡಿದರು:

"ಪ್ರೇಮಮಯಿ ತಾಯೆ, ನಾನು ನನ್ನ ಪ್ರಾಣ ಮನಗಳನ್ನು ನಿನಗೆ ಸಮರ್ಪಿ

ಸಲು ಹೇಗೆ ತಾನೆ ಸಾಧ್ಯ? ಅವೆಲ್ಲವೂ ನೀನೇ ಆಗಿಬಿಟ್ಟಿರುವೆಯಲ್ಲ!"

ತರುವಾಯ ಈ ಭಾವವೂ ದೂರವಾಗಿ, ಹೊಸ ಭಾವ, ಹೊಸ ಆವೇಶ ಅವರನ್ನು ಆಕ್ರಮಿಸಿತು. ಬಲಗೈ ಮುಷ್ಟಿಯನ್ನು ಬಿಗಿದು ಮುಂದೆ ಚಾಚಿದರು. ಕಣ್ಣುಗಳು ಅರೆಬಿರಿದಿದ್ದುವು. ಉನ್ಮತ್ತರಂತೆ ಗಟ್ಟಿಯಾಗಿ ನುಡಿದರು:

"ಥೂ! ಕಾಮಕಾಂಚನದ ಮೇಲೆ ಉಗುಳುತ್ತೇನೆ! ಕಾಮಕಾಂಚನಕ್ಕೆ ಅಂಟಿಕೊಂಡವರಿಗೆ ಎಂದಿಗೂ ಭಗವದ್ದರ್ಶನವಾಗುವುದಿಲ್ಲ."

ಹೀಗೆ ಮತ್ತೆಮತ್ತೆ ಉದ್ಗರಿಸುತ್ತ ಚೆನ್ನಾಗಿ ಉಗುಳಿದರು. ಎಷ್ಟರ ಮಟ್ಟಿಗೆಂದರೆ, ಅಲ್ಲಿ ನೆಲದ ಮೇಲೆ ಹಾಸಿದ್ದ ಜಮಖಾನೆ ನೆನೆದು ಒದ್ದೆಯಾಯಿತು! ಅವರ ಆ ದೈವೀ ಭಾವಕ್ಕೆ ಸಾಕ್ಷಿಗಳಾಗಿ ಕುಳಿತಿದ್ದವರೆಲ್ಲರ ಮೈನವಿರೆದ್ದಿತು. ಮತ್ತು ಗಂಗಾಧರನೂ ಸೇರಿದಂತೆ, ಅಲ್ಲಿದ್ದ ಎಲ್ಲರಿಗೂ ಇಡಿಯ ಜೀವಮಾನಕ್ಕೆ ಸಾಕಾಗುವಷ್ಟು ಸ್ಫೂರ್ತಿಯನ್ನು ಅದು ತಂದುಕೊಟ್ಟಿತು.

## ಛಲದಂಕ ಬಾಲಕ ೮

ಮಹೇಂದ್ರನಾಥ ಗುಪ್ತ ಬೋಧಿಸುತ್ತಿದ್ದ ಮೆಟ್ರೊಪಾಲಿಟನ್ ಸಂಸ್ಥೆಯ ಹೈಸ್ಕೂಲಿನಲ್ಲಿ ಒಬ್ಬ ವಿದ್ಯಾರ್ಥಿ; ಹೆಸರು ಶಾರದಾಪ್ರಸನ್ನ ಮಿತ್ರ. ಬಹಳ ಬುದ್ಧಿವಂತ. ಎಂಟ್ರೆನ್ಸ್ ಪರೀಕ್ಷೆಗೆ ಕುಳಿತಿದ್ದಾನೆ. ಅವನು ಅತ್ಯುನ್ನತ ಶ್ರೇಣಿಯಲ್ಲಿ ತೇರ್ಗಡೆಯಾಗುವುದರಲ್ಲಿ ಯಾರಿಗೂ ಸಂಶಯವಿಲ್ಲ. ಮಾತ್ರವಲ್ಲ, ಅನೇಕ ಬಹುಮಾನಗಳನ್ನೂ ಪದಕಗಳನ್ನೂ ಗಳಿಸುತ್ತಾನೆ, ಶಾಲೆಗೂ ಹೆಸರು ತರುತ್ತಾನೆ ಎಂಬುದು ಎಲ್ಲರ ನಿರೀಕ್ಷೆ. ಆದರೆ ದುರದೃಷ್ಟ, ಪರೀಕ್ಷೆಯ ಎರಡನೇ ದಿನ ಸ್ವಲ್ಪ ಅಜಾಗ್ರತೆಯಿಂದಾಗಿ ಅವನ ಪ್ರೀತಿಯ ಚಿನ್ನದ ಕೈಗಡಿಯಾರ ಕಳೆದುಹೋಯಿತು. ಇದು ಅವನ ಪಾಲಿಗೆ ಎಂಥ ಆಘಾತವಾಯಿತೆಂದರೆ ಮನಸ್ಸಿನ ಸಮತೋಲನವನ್ನೇ ಕಳೆದುಕೊಂಡ. ಓದಿದ್ದು ಯಾವುದೂ ತಲೆಯಲ್ಲಿ ನಿಲ್ಲಲಿಲ್ಲ. ಪರಿಣಾಮ: ಪರೀಕ್ಷೆಯಲ್ಲಿ ದ್ವಿತೀಯ ದರ್ಜೆ. ಸಹಜವಾಗಿಯೇ ಎಲ್ಲರಿಗೂ ತುಂಬ ನಿರಾಶೆಯಾಯಿತು. ಬಾಲಕನಿಗಾದ ಸಂಕಟಕ್ಕಂತೂ ಪಾರವೇ ಇಲ್ಲ. ವಾರಗಟ್ಟಲೆ ಕಾಲ ತನ್ನ ದುರ್ವಿಧಿಯನ್ನು ಹಳಿದುಕೊಳ್ಳುತ್ತ ಕಣ್ಣೀರು ಸುರಿಸಿದ.

ತನ್ನ ನೆಚ್ಚಿನ ವಿದ್ಯಾರ್ಥಿಯ ಶೋಕವನ್ನು ಕಂಡು ಮಹೇಂದ್ರನಾಥ ಮರುಗಿದ. ತಾನು ತನಗೊದಗಿದ ದುಃಖ ಸಂಕಟಗಳಿಗೆ ಎಲ್ಲಿ ದಿವ್ಯೌಷಧವನ್ನು ಕಂಡುಕೊಂಡನೋ ಅಲ್ಲಿಗೇ ಈ ಬಾಲಕನನ್ನೂ ಕರೆದೊಯ್ಯಲು ನಿಶ್ಚಯಿಸಿ, ಒಂದು ದಿನ ದಕ್ಷಿಣೇಶ್ವರಕ್ಕೆ ಕರೆದೊಯ್ದ. ಅಲ್ಲಿ ಬಾಲಕನ ಮನಸ್ಸಿನ ಗಾಯ ಗುಣವಾಯಿತೆಂದು ಹೇಳಬೇಕಾಗಿಯೇ ಇಲ್ಲವಲ್ಲ? ಹೀಗೆ, ಒಂದು ಕಳೆದುಹೋದ ವಸ್ತುವೇ ಆ ಬಾಲಕನನ್ನು ಶ್ರೀರಾಮಕೃಷ್ಣರ ಬಳಿಗೆ ಕರೆತಂದು ಅವನ ಜೀವನದ ದಿಸೆಯನ್ನೇ ಮಾರ್ಪಡಿಸಲು ಕಾರಣವಾಯಿತು.

ಶ್ರೀಮಂತ ಜಮೀನ್ದಾರರ ಮನೆಯಲ್ಲಿ ಹುಟ್ಟಿದವನು ಶಾರದಾಪ್ರಸನ್ನ (೧೮೬೫). ಶ್ರೀರಾಮಕೃಷ್ಣರ ಇತರ ಅನೇಕ ಪ್ರಮುಖ ಶಿಷ್ಯರಂತೆ ಇವನದೂ ಅಪರೂಪದ ವ್ಯಕ್ತಿತ್ವ — ವಿಶೇಷ ಮೇಧಾಶಕ್ತಿ, ಜೊತೆಗೆ ಜನ್ಮಗತವಾಗಿ ಬಂದ ಆಧ್ಯಾತ್ಮಿಕ ಒಲವು. ಎಲ್ಲರಿಗೂ ಪ್ರಿಯವಾಗುವಂಥ ಆಹ್ಲಾದಕರ ಸ್ವಭಾವ ಅವನದು. ಚಿಕ್ಕ ವಯಸ್ಸಿನಿಂದಲೇ ಅವನು ಧರ್ಮಗ್ರಂಥಗಳನ್ನು ಓದಲಾರಂಭಿಸಿದ್ದ. ನೂರಾರು ಸಂಸ್ಕೃತ ಶ್ಲೋಕಗಳನ್ನು ನೆನಪಿನಿಂದ ಹೇಳಬಲ್ಲವನಾಗಿದ್ದ. ಅವನ ತಂದೆ ತನ್ನ ಹೆಚ್ಚಿನ ಸಮಯವನ್ನೆಲ್ಲ ಪೂಜೆ, ಜಪ, ಧ್ಯಾನಗಳಲ್ಲೇ ಕಳೆಯುತ್ತಿದ್ದವನು. ಈ ಅಂಶವೂ ಬಾಲಕ ಶಾರದಾಪ್ರಸನ್ನನ ಮೇಲೆ ಬಹಳಷ್ಟು ಸತ್ಪ್ರಭಾವವನ್ನು ಬೀರಿತು.

ಇಂತಹ ಸದ್ಗುಣಿಯಾದ ಬಾಲಕನನ್ನು ಕಂಡಾಗ ಶ್ರೀರಾಮಕೃಷ್ಣರು ಬಹಳ ಸಂತೋಷಪಟ್ಟರು. ಮತ್ತು ತಮ್ಮ ಪ್ರೀತಿಯ ಮುಸುಕನ್ನು ಅವನ ಮೇಲೆ ಹಾಕಿ ಬಹುಬೇಗ ತಮ್ಮವನನ್ನಾಗಿ ಮಾಡಿಕೊಂಡುಬಿಟ್ಟರು. ಅವರ ಸಂಸರ್ಗದಲ್ಲಿ ಅವನ ಆಧ್ಯಾತ್ಮಿಕ ಪ್ರಕೃತಿ ಜಾಗೃತಗೊಂಡು ಸುವ್ಯಕ್ತವಾಗತೊಡಗಿತು.

ಶಾರದಾಪ್ರಸನ್ನನ ಮುನ್ನಡೆಗೆ ಬಾಧಕವಾದ ಕೆಲವು ಅವಗುಣಗಳನ್ನೂ ಶ್ರೀರಾಮಕೃಷ್ಣರು ಗಮನಿಸದಿರಲಿಲ್ಲ. ಅವನು ಸಹೃದಯಿಯಾಗಿದ್ದರೂ ಶ್ರೀಮಂತಿ

ಕೆಯ ಪರಿಣಾಮವಾಗಿ ಒಂದು ಬಗೆಯ ಬಿಂಕವೂ ಅವನಲ್ಲಿತ್ತು; ಕೆಲವು ಬಗೆಯ ಕೆಲಸಗಳು ಸೇವಕರಿಗಷ್ಟೇ ಮೀಸಲು, ತನ್ನಂಥವರು ಅವನ್ನು ಮಾಡತಕ್ಕದ್ದಲ್ಲ ಎಂಬ ಭಾವನೆ ಅವನಿಗಿತ್ತು. ಒಂದು ದಿನ ಉರಿಬಿಸಿಲಿನಲ್ಲಿ ದಕ್ಷಿಣೇಶ್ವರಕ್ಕೆ ಹೋಗಿದ್ದಾನೆ; ಜೊತೆಯಲ್ಲಿ ಅವನ ಸ್ನೇಹಿತರೂ ಇದ್ದಾರೆ; ಆಗ ಶ್ರೀರಾಮಕೃಷ್ಣರು ಅನಿರೀಕ್ಷಿತವಾಗಿ ಅವನಿಗೆಂದರು: "ನೋಡು, ಆ ತಂಬಿಗೆಯಲ್ಲಿ ನೀರು ತಂದು ನನ್ನ ಕಾಲು ತೊಳೆ."

ಶಾರದಾಪ್ರಸನ್ನನಿಗೆ ಎದೆ ಧಸಕ್ಕೆಂದಿತು. ರಕ್ತವೆಲ್ಲ ಮುಖಕ್ಕೆ ಹರಿದು ಮುಖ ಕೆಂಪಗಾಯಿತು. 'ನಾನು ಸರಿಯಾಗಿ ಕೇಳಿಸಿಕೊಂಡೆ ತಾನೆ?. . . ಹೌದು, ಅನುಮಾನ ವಿಲ್ಲ! ಆದರೆ... ಇದೇನು ಅಸಹ್ಯ! ಯಾಕೆ, ಜವಾನರಿಲ್ಲವೆ? ನಾನೇ ಆಗಬೇಕೆ ಇಂಥ ಕಳಪೆ ಕೆಲಸಕ್ಕೆ?' ಎಂದು ಆಲೋಚಿಸಿದ. ಅಷ್ಟರಲ್ಲಿ ಶ್ರೀರಾಮಕೃಷ್ಣರು ಮತ್ತೆ ಹೇಳಿ ದರು: "ಪ್ರಸನ್ನಾ! ಕೇಳಿಸಲಿಲ್ಲವೆ? ನೀರು ತಂದು ನನ್ನ ಕಾಲು ತೊಳೆಯಪ್ಪಾ."

ಅವನಿಗೆ ಏನು ಹೇಳಲೂ ತೋಚಲಿಲ್ಲ. ತನ್ನನ್ನು ಅಷ್ಟೊಂದಾಗಿ ಪ್ರೀತಿಸುವ, ಮತ್ತು ತನಗೆ ಅಷ್ಟೊಂದು ಗೌರವಾರ್ಹರಾದ ಠಾಕೂರರ ಮಾತಿಗೆ 'ಇಲ್ಲ' ಎನ್ನ ಲಾದೀತೆ? ಬಲವಂತವಾಗಿ ತನ್ನನ್ನು ನಿಯಂತ್ರಿಸಿಕೊಳ್ಳುತ್ತ ಅವರು ಹೇಳಿದ ಕೆಲಸ ಮಾಡಿ ಮುಗಿಸಿದ. ಆದರೆ ಅಭಿಮಾನಕ್ಕೆ ಧಕ್ಕೆಯಾಗಿ ಅವನ ಕಣ್ಣಲ್ಲಿ ನೀರು ಬರುವು ದೊಂದು ಬಾಕಿ. ಅಲ್ಲಿರುವವರೆಲ್ಲ ತನ್ನನ್ನೇ ನೋಡಿ ನಗುತ್ತಿದ್ದಾರೇನೋ ಎಂಬ ಭಾವನೆ ಅವನಿಗೆ. ಆದರೆ ಯಾರ ಕಡೆಗೂ ತಲೆಯೆತ್ತಿ ನೋಡುವ ಧೈರ್ಯವಿಲ್ಲ!

ಹೀಗೆ ಆ ದಿನ ಅವನ ಅಹಂಕಾರದ ಮುಳ್ಳು ಮುರಿದು ಬಿತ್ತು. ಅದರಿಂದ ಅವನಿಗಾದ ನೋವು ಅಪಾರ. ಆದರೆ, ಆ ಮುಳ್ಳು ಆತ್ಮಘಾತಕವಾದದ್ದು, ಅದು ಮುರಿದು ತಾನು ಉಳಿದುಕೊಂಡೆ ಎಂಬುದನ್ನು ಬಹುಬೇಗನೆ ಅರ್ಥಮಾಡಿಕೊಂಡ— ಅದು ಅವನ ಭಾಗ್ಯ. ಬಳಿಕ ಆ ನೋವು ಉಳಿದುಕೊಳ್ಳಲಿಲ್ಲ. ಕ್ರಮೇಣ ಆ ಅಹಂ ಕಾರದ ಸ್ಥಾನವನ್ನು ಸೇವಾಪರತೆ, ನಿಸ್ವಾರ್ಥತೆಗಳು ತುಂಬಿದುವು.

ಎಂಟ್ರೆನ್ಸ್ ಪರೀಕ್ಷೆಯಾದ ಮೇಲೆ ಶಾರದಾಪ್ರಸನ್ನ ಕಾಲೇಜಿಗೆ ಸೇರಿಕೊಂಡ. ಆತ ಸಹಜವಾಗಿಯೇ ಬುದ್ಧಿವಂತ; ಮೊದಲ ವರ್ಷ ಚೆನ್ನಾಗಿ ಓದಿ ಉನ್ನತ ದರ್ಜೆ ಗಳಿಸಿದ. ಆದರೆ ಅಷ್ಟೊತ್ತಿಗೆ ದಕ್ಷಿಣೇಶ್ವರದ ನಂಟು ಬಲಿಯುತ್ತ ಬಂದಿತು. ಆಧ್ಯಾತ್ಮಿ ಕತೆಯ ಆನಂದದ ಸವಿ ಹತ್ತಿದ ಮೇಲೆ ಲೋಕದ ಭೋಗಭಾಗ್ಯಗಳು ರುಚಿಸಿಯಾವೆ? ಓದಿನಲ್ಲಿ ಮುಂದೆ ಬರಬೇಕು, ಪದಕ ಗಳಿಸಬೇಕು ಎಂಬ ಬಯಕೆಗಳು ಅಳಿಸಿ ಹೋಗುತ್ತ ಬಂದುವು. ಈ ವಿಚಿತ್ರ ಮಾರ್ಪಾಡನ್ನು ಕಂಡು ಅವನ ತಾಯ್ತಂದೆಯರು ಎಚ್ಚತ್ತರು. ಮಗನ ಚಂಚಲಚಿತ್ತವನ್ನು ಸ್ಥಿರಗೊಳಿಸುವ ಉಪಾಯವನ್ನೂ ಕಂಡು ಕೊಂಡರು—ಮದುವೆ ಮಾಡಿಬಿಡುವುದು! ಆದರೆ ಅವನಿಗೆ ಇದರ ಸುಳಿವು ದೊರೆ ತೊಡನೆ ಹುಲಿಯಿಂದ ತಪ್ಪಿಸಿಕೊಳ್ಳುವ ಹುಲ್ಲೆಯಂತೆ ಮನೆಬಿಟ್ಟು ಓಟಕಿತ್ತ.

ಊರಿನಿಂದ ಹೊರಟುಹೋಗುವ ಮುನ್ನ ಅವನು ಶ್ರೀರಾಮಕೃಷ್ಣರ ಬಳಿಗೆ ಬಂದ. "ನಾನು ಪುರೀಕ್ಷೇತ್ರಕ್ಕೆ ಹೋಗಿಬರುತ್ತೇನೆ" ಎಂದಷ್ಟೇ ಹೇಳಿ ಹೊರಟ; 'ಅಪ್ಪ ಅಮ್ಮಂದಿರಿಗೆ ಹೇಳಿಲ್ಲ' ಎಂಬ ಸಂಗತಿಯನ್ನು ಎಚ್ಚರದಿಂದ ಮುಚ್ಚಿಟ್ಟ! ಆದರೆ ಇವನ ಉದ್ದೇಶ ಶ್ರೀರಾಮಕೃಷ್ಣರಿಗೆ ತಿಳಿಯದಿರುವುದುಂಟೆ? ಅವರ ಕೃಪಾಶಕ್ತಿಯೂ ಅವನ ಬೆಂಗಾವಲಾಗಿ ಹೋಯಿತು.

ಶಾರದಾಪ್ರಸನ್ನನಿನ್ನೂ ಹತ್ತೊಂಬತ್ತು ಇಪ್ಪತ್ತು ವರ್ಷದ ತರುಣ. ಸುಖದಲ್ಲೇ

ಬೆಳೆದವನು. ಉಪವಾಸ-ವನವಾಸಗಳ ಅನುಭವ ಅವನಿಗೆಲ್ಲಿ ಬರಬೇಕು ? ಆದರೂ ಸಂಸಾರಪಾಶಕ್ಕೆ ಭಯಪಟ್ಟು ಹೀಗೆ ಹೊರಟುಬಿಟ್ಟಿದ್ದಾನೆ ! ಜೇಬಿನಲ್ಲಿ ಕಾಸಿಲ್ಲ. ನಡೆದುಕೊಂಡೇ ಹೋದ. ನಾನಾ ಬಗೆಯ ಅನುಭವಗಳಾದುವು. ಒಮ್ಮೆ ಎರಡು ದಿನವಿಡೀ ತಿನ್ನಲು ಏನೂ ಸಿಗಲಿಲ್ಲ. ಹೊಟ್ಟೆಯಲ್ಲಿ ಬೆಂಕಿ, ಕೈಕಾಲುಗಳಲ್ಲಿ ನಿತ್ರಾಣ. ದಾರಿಯಲ್ಲಿ ಒಂದು ಹಳ್ಳಿಯೂ ಕಾಣಲಿಲ್ಲ. ಆದರೂ ಕಾಲೆಳೆಯುತ್ತ ಮುಂದೆ ಮುಂದೆ ನಡೆದ—ಸಂಜೆಯ ಹೊತ್ತಿಗೆ ಯಾವುದಾದರೂ ಹಳ್ಳಿ ಕಂಡೀತು ಎಂಬ ನಿರೀಕ್ಷೆಯಿಂದ. ಆದರೆ ಸಿಕ್ಕಿದ್ದು ಹಳ್ಳಿಯಲ್ಲ, ಕಾಡು. ಮುಂದುವರಿದಂತೆಲ್ಲ ಕಾಡು ಇನ್ನಷ್ಟು ದಟ್ಟವಾಯಿತು. ಕತ್ತಲಾವರಿಸಿತು. ಭಗವಂತನ ಮೇಲೆ ಭಾರ ಹಾಕುವುದಲ್ಲದೆ ಬೇರೇನು ಮಾಡಬಲ್ಲ ? ಒಂದು ಮರ ಹತ್ತಿ, ಕೊಂಬೆಯ ಮೇಲೆ ಮಲಗಿ ನಿದ್ರಿಸಿದ. ಆದರೆ ಸ್ವಲ್ಪ ಹೊತ್ತಿಗೆ ಯಾರೋ ಕರೆದಂತಾಗಿ ಆಶ್ಚರ್ಯದಿಂದ ಇಳಿದು ಬಂದ. ನೋಡುತ್ತಾನೆ—ಯಾವನೋ ಅಪರಿಚಿತ ವ್ಯಕ್ತಿ. ಕೈಗೆ ಒಂದು ಬುತ್ತಿ ಕೊಟ್ಟು ಒಂದು ಮಾತನ್ನೂ ಆಡದೆ ಸೀದಾ ಹೊರಟುಹೋದ ! ಆತ ಯಾರು, ಎಲ್ಲಿಂದ ಬಂದ, ಒಂದೂ ತಿಳಿಯಲಿಲ್ಲ. ಮರುದಿನ ಬೆಳಕು ಹರಿದ ಮೇಲೆ ಪ್ರಸನ್ನ ಆ ಕಾಡನ್ನೆಲ್ಲ ಹುಡುಕಿದ. ಎಷ್ಟೆಷ್ಟು ಹುಡುಕಿದರೂ ಒಂದೇ ಒಂದು ಜನವಸತಿ ಕಾಣಬೇಕಲ್ಲ !

ಅಂತೂ ಇಂತೂ, ಅವನು ಪುರೀಕ್ಷೇತ್ರವನ್ನೇನೋ ತಲುಪಿದ. ಆದರೆ ಹಿಂದೆಯೇ ಹುಡುಕುತ್ತ ಬಂದ ಮನೆಯವರು ಅವನನ್ನು ಪತ್ತೆ ಹಚ್ಚಿ ವಾಪಸು ಕರೆತಂದರು. ಸದ್ಯಕ್ಕಂತೂ ಮದುವೆಯ ವಿಚಾರ ತಣ್ಣಗಾಯಿತು. ಅವನೀಗ ಮತ್ತೆ ಓದಿನ ಕಡೆಗೆ ಮನಸ್ಸು ಕೊಟ್ಟ. ವರ್ಷವಿಡೀ ಓದಿರದಿದ್ದ ಪಾಠವನ್ನೆಲ್ಲ ಒಂದೇ ತಿಂಗಳಲ್ಲಿ ಓದಿ, ಒಳ್ಳೆಯ ಅಂಕಗಳನ್ನೇ ಪಡೆದುಕೊಂಡು ಉತ್ತೀರ್ಣನಾದ.

ಈಗವನು ಮತ್ತೆ ಹೋಗಲಾರಂಭಿಸಿದ, ಶ್ರೀರಾಮಕೃಷ್ಣರ ಬಳಿಗೆ. ಆದರೆ ಇದು ಮಾತ್ರ ಅವನ ತಂದೆಗೆ ಸಹ್ಯವಾಗಲಿಲ್ಲ. ಆ 'ಹುಚ್ಚುಪೂಜಾರಿ'ಯ ಸಹವಾಸ ತಪ್ಪಿಸಿದರಾದರೂ ಮಗ ಸರಿಹೋದಾನು ಎಂದು ಭಾವಿಸಿ, ಅವನ ಮೇಲೆ ದಿಗ್ಬಂಧನ ಹಾಕಿದ. ಏನು ಮಾಡಿದರೇನು ? ಶ್ರೀರಾಮಕೃಷ್ಣರ ಸಂಮೋಹಿನಿಯನ್ನು ಮೀರಿಸುವ ಶಕ್ತಿ ಯಾರಿಗಿದೆ ? ಕದ್ದು ತಪ್ಪಿಸಿಯಾದರೂ ಅವನು ದಕ್ಷಿಣೇಶ್ವರಕ್ಕೆ ಹೋಗಿಬಿಡುತ್ತಿದ್ದ.

ಶ್ರೀರಾಮಕೃಷ್ಣರ ಸನ್ನಿಧಿಯಲ್ಲಿ ಅವನು ಕಲಿತ ಪಾಠಗಳು ಅನೇಕ; ಆದ ಅನುಭವಗಳು ಅಮೂಲ್ಯ. ಆದರೆ ಎಲ್ಲಕ್ಕಿಂತ ಮಿಗಿಲಾಗಿ ಒಂದು ಅನುಭವ ಅವನ ಪಾಲಿಗೆ ಅತ್ಯದ್ಭುತವೆನಿಸಿತು. ಕಾಮಪ್ರವೃತ್ತಿಯ ಮೇಲೆ ಜಯ ಸಾಧಿಸುವುದು ಆಧ್ಯಾತ್ಮಿಕ ಜೀವನದಲ್ಲಿ ಒಂದು ಅತಿ ಮುಖ್ಯ ಘಟ್ಟ. ಆದರೆ ಇದೊಂದು ಸುದೀರ್ಘ ಹೋರಾಟ. ಗೆದ್ದೆವೆಂದುಕೊಂಡವರೂ ಸೋತುಹೋಗುವ ಸಂಭವ ಅಧಿಕ. ತರುಣ ಶಾರದಾಪ್ರಸನ್ನನೂ ಜಿತಕಾಮನಾಗುವ ಪ್ರಯತ್ನದಲ್ಲಿ ಎಡೆಬಿಡದೆ ತೊಡಗಿದ್ದ. ಆದರೆ ಅದೇಕೋ ಕೊನೆಯಿಲ್ಲದ ಯುದ್ಧದಂತೆ ತೋರುತ್ತಿತ್ತು. ಅವನು ಗುರುವಿನ ಮುಂದೆ ತನ್ನ ಕಷ್ಟವನ್ನು ತೋಡಿಕೊಂಡು ಹೃತ್ಪೂರ್ವಕವಾಗಿ ಪ್ರಾರ್ಥಿಸಿಕೊಂಡ. ಕೊನೆಗೊಂದು ದಿನ ಅವನು ಧ್ಯಾನಕ್ಕೆ ಕುಳಿತಿದ್ದಾಗ, ಇದ್ದಕ್ಕಿದ್ದಂತೆ ತನ್ನೊಳಗೆ ಶ್ರೀರಾಮಕೃಷ್ಣರ ಕೃಪೆ ಜಾಗೃತಗೊಂಡು ಕಾರ್ಯಪ್ರವೃತ್ತವಾದದ್ದು ಅವನ ಅನುಭವಕ್ಕೆ ಬಂದಿತು. ನೋಡನೋಡುತ್ತಿದ್ದಂತೆಯೇ ಆ ಕೃಪಾಶಕ್ತಿ ಅವನ ಇಂದ್ರಿಯಸುಖಾಭಿಲಾಷೆಯನ್ನು ಕರಗಿಸಿ ಹೇಳ ಹೆಸರಿಲ್ಲದಂತೆ ಮಾಡಿತು !

## "ಕುಸ್ತಿಯಾಡೋಣ ಬಾ !" 

ಒಮ್ಮೆ ಶ್ರೀರಾಮಕೃಷ್ಣರ ಬಳಿಗೆ ಹದಿನೈದು–ಹದಿನಾರು ವರ್ಷದ ಒಬ್ಬ ಹುಡುಗ ಬಂದ. ಮೈತುಂಬಿಕೊಂಡು ಗಟ್ಟಿಮುಟ್ಟಾಗಿದ್ದಾನೆ. ಶ್ರೀರಾಮಕೃಷ್ಣರು ತಮಾಷೆಯಾಗಿ ಕೇಳಿದರು, "ಏನು, ಕುಸ್ತಿಗೆ ಬರುತ್ತೀಯಾ ನನ್ನ ಜೊತೆ ?" ಎಂದು. ಎಲ ಎಲಾ ! ಇವರೆಂತಹ ಸಾಧುಗಳಪ್ಪಾ ! ಕುಸ್ತಿ ಮಾಡುವ ಸಾಧು ! ನೋಡಿದರೆ ಹತ್ತಿಗಿಂತ ಹಗುರ ವಾಗಿ ಕಾಣುತ್ತಾರೆ, ಇವರಿಗೆ ಕುಸ್ತಿಯ ಖಯಾಲಿ ! ಆ ಹುಡುಗ "ಆಗಲಿ" ಎಂದು ಒಪ್ಪಿದ; ಅಂಗಿಯ ತೋಳುಗಳನ್ನು ಹಿಂದಕ್ಕೆ ಮಡಿಸಿಕೊಂಡು ಮುಂದೆ ಬಂದ. ಶ್ರೀರಾಮಕೃಷ್ಣರು ತಮ್ಮ ಕೈಗಳನ್ನು ಮುಂದಕ್ಕೆ ಚಾಚಿ ಅವನ ಭುಜಗಳನ್ನು ಹಿಡಿದರು. ಅವನೂ ಅವರನ್ನು ಹಾಗೆಯೇ ಹಿಡಿದುಕೊಂಡ. ಆದರೆ ಎಷ್ಟು ಹೊತ್ತು ನಡೆದೀತು ಈ ಕುಸ್ತಿ ? ಯುವಕ ಅವರನ್ನು ಒಮ್ಮೆಗೇ ಗೋಡೆಯವರೆಗೆ ಹಿಮ್ಮೆಟ್ಟಿಸಿದ. ಶ್ರೀರಾಮ ಕೃಷ್ಣರು ನಗುತ್ತ ನುಡಿದರು: "ಹ್ಞಾ ! ನೀನೇ ಗೆದ್ದುಬಿಟ್ಟೆ, ಅಲ್ಲವೆ ?. . . ಹಿಂದೆ ನಾನೂ ಸಾಕಷ್ಟು ಗಟ್ಟಿಯಾಗಿಯೇ ಇದ್ದೆ. ಆದರೆ ಭಯಂಕರ ಆಮಶಂಕೆಯಿಂದಾಗಿ ಮೆತ್ತಗಾಗಿ ಬಿಟ್ಟೆ." ಅವರು ಹಾಗೆನ್ನುತ್ತಿದ್ದಂತೆಯೇ, ಅವರ ಕೈಗಳಿಂದ ತನ್ನೊಳಗೆ ವಿದ್ಯುತ್ತಿನಂತಹ ಪ್ರವಾಹ ಹರಿಯಲಾರಂಭಿಸಿದ್ದುದು ಅವನ ಅನುಭವಕ್ಕೆ ಬಂತು. ಜೊತೆಗೇ ಒಂದು ಅಪೂರ್ವ ಆನಂದ ಅವನ ತನುಮನಗಳನ್ನು ತುಂಬಿ ರೋಮಾಂಚನಗೊಳಿಸಿತು. ಶರೀರದ ಕಸುವು ಉಡುಗಿದಂತಾಗಿ ಸುಮ್ಮನೆ ನಿಂತುಬಿಟ್ಟ.

ಆ ಹುಡುಗನ ಹೆಸರು ಹರಿಪ್ರಸನ್ನ ಚಟರ್ಜಿ. ಬೇಲಘರಿಯಾ ಮೊಹಲ್ಲದಲ್ಲಿ ವಾಸ. ಶಾಂತ ಸ್ವಭಾವದ, ದೈವಶ್ರದ್ಧೆಯುಳ್ಳ ಸರಳ ಬಾಲಕ ಅವನು. ಕಷ್ಟದಲ್ಲಿರುವವ ರನ್ನು ಕಂಡು ಮಮ್ಮಲ ಮರುಗುತ್ತಿದ್ದ. ಸತ್ಯನಿಷ್ಠುರತೆ ಎಂಬುದು ಅವನಲ್ಲಿ ಚಿಕ್ಕಂದಿ ನಿಂದಲೂ ಕಂಡುಬರುತ್ತಿದ್ದ ಒಂದು ವಿಶಿಷ್ಟ ಗುಣ. ಒಮ್ಮೆ ಅವನ ತಾಯಿಗೆ ಅವನ ಮೇಲೆ ಯಾವುದೋ ವಿಷಯದಲ್ಲಿ ಅನುಮಾನ ಬಂದು, "ನೀನು ಸುಳ್ಳುಗಾರ" ಎಂದಳಂತೆ. ಅವನು ಎಷ್ಟು ಹೇಳಿದರೂ ಆಕೆಗೆ ನಂಬಿಕೆ ಬರಲಿಲ್ಲ. ಆಗ ಅವನು ಅತೀವ ಜುಗುಪ್ಸೆಯಿಂದ, "ಸುಳ್ಳು ಹೇಳಿದ್ದರೆ ನಾನು ಬ್ರಾಹ್ಮಣನೇ ಅಲ್ಲ !" ಎನ್ನುತ್ತ ತನ್ನ ಜನಿವಾರವನ್ನೇ ಕಡಿದುಕೊಂಡುಬಿಟ್ಟ ! ತಾಯಿಗೆ ಮಗನ ನಿಷ್ಠುರಸ್ವಭಾವದ ಪರಿಚಯವಾದದ್ದು ಆಗ.

ಹತ್ತು–ಹನ್ನೆರಡು ವರ್ಷದವನಾಗಿದ್ದಾಗ ಅವನಿಗೆ ಮೊದಲ ಬಾರಿ ಶ್ರೀರಾಮ ಕೃಷ್ಣರ ದರ್ಶನವಾಯಿತು. ಅವನೊಮ್ಮೆ ತನ್ನ ಸ್ನೇಹಿತರೊಂದಿಗೆ ಆಟವಾಡುತ್ತಿದ್ದ. ಆಗ ಸಮೀಪದಲ್ಲೇ ಇದ್ದ ದಿವಾನ್ ಗೋವಿಂದ ಮುಖರ್ಜಿಗಳ ಮನೆಗೆ ಒಬ್ಬರು ಪರಮ ಹಂಸರು ಬಂದಿದ್ದಾರೆ ಎನ್ನುವ ಸುದ್ದಿ ಕೇಳಿಬಂತು; ಹುಡುಗರೆಲ್ಲ ಅಲ್ಲಿಗೆ ಓಡಿದರು. ಆ ದಿನ ಶ್ರೀರಾಮಕೃಷ್ಣರಾಡಿದ ಯಾವೊಂದು ಮಾತಾದರೂ ಹರಿಪ್ರಸನ್ನನಿಗೆ ಅರ್ಥ ವಾಯಿತೋ ಬಿಟ್ಟಿತೋ; ಆದರೆ ಅಲ್ಲಿ ಆ ಎಳೆಯ ಕಣ್ಣುಗಳಿಗೆ, ಅಕಳಂಕ ಬುದ್ಧಿಗೆ, ಗೋಚರವಾದ ದೃಶ್ಯ ಮಾತ್ರ ಅತ್ಯದ್ಭುತವಾದದ್ದು. ದೊಡ್ಡವನಾದ ಮೇಲೆ ಅವನು ಅದನ್ನು ಬಣ್ಣಿಸುವ ರೀತಿಯೂ ಆಶ್ಚರ್ಯಕರ:

"...ಕೋಣೆಯಲ್ಲಿ ಶ್ರೀರಾಮಕೃಷ್ಣರು ನಿಂತಿರುವುದನ್ನು ಕಂಡೆ. ಆಗ ನನಗೆ ವಿಸ್ಮಯಕಾರಿಯಾಗಿ ತೋರಿದ ಒಂದು ವಿಷಯ ಮಾತ್ರ ನನ್ನ ನೆನಪಿನಲ್ಲಿ ಸ್ಥಿರವಾಗಿ ನಿಂತುಬಿಟ್ಟಿದೆ. ಶ್ರೀರಾಮಕೃಷ್ಣರ ಬೆನ್ನುಮೂಳೆಯು ಬುಡದಿಂದ ಹಿಡಿದು ಕತ್ತಿನವರೆಗೂ ಒಳ್ಳೇ ದಪ್ಪನೆಯ ಹಗ್ಗದ ಹಾಗೆ ಊದಿಕೊಂಡಿತ್ತು. ಅದರ ಮೂಲಕ ಒಂದು ಶಕ್ತಿ ಮೇಲ್ಮುಖವಾಗಿ ಹರಿಯುತ್ತ, ಹಾವಿನ ರೀತಿಯಲ್ಲಿ ಹೆಡೆಬಿಚ್ಚಿಕೊಂಡು ಆನಂದದಿಂದ ನರ್ತನಗೈಯುವ ಹಾಗೆ ತೋರಿತು !"

ಹರಿಪ್ರಸನ್ನ ಮತ್ತೆ ಶ್ರೀರಾಮಕೃಷ್ಣರನ್ನು ಕಂಡದ್ದು ಕಾಲೇಜಿನ ಎರಡನೇ ವರ್ಷದಲ್ಲಿ ಓದುತ್ತಿದ್ದಾಗ. ತನ್ನ ಸಹಪಾಠಿ ಶರಚ್ಚಂದ್ರನ ಜೊತೆಯಲ್ಲಿ ಒಂದು ದಿನ ಅವನು ದೋಣಿಯಲ್ಲಿ ದಕ್ಷಿಣೇಶ್ವರಕ್ಕೆ ಬಂದ. ಅವನ ಹೆಸರೇನು, ಇರುವುದೆಲ್ಲಿ ಎಂಬುದನ್ನೆಲ್ಲ ಕೇಳಿ ತಿಳಿದ ಶ್ರೀರಾಮಕೃಷ್ಣರು ಬಹಳ ಸಂತೋಷಗೊಂಡು, "ಆಹ್, ಹಾಗಾದರೆ ನೀನು ನಮ್ಮವನೇ !" ಎಂದುದ್ಗರಿಸಿದರು. ಆಗ ಅವರು ಮಣಿಮಲ್ಲಿಕನೆಂಬ ಭಕ್ತನ ಮನೆಗೆ ಹೊರಟಿದ್ದರಿಂದ ಹೆಚ್ಚು ಮಾತನಾಡಲು ಅವಕಾಶವಾಗಲಿಲ್ಲ. ಅವರು ಈ ಹುಡುಗರನ್ನೂ ತಮ್ಮೊಡನೆ ಅಲ್ಲಿಗೆ ಕರೆದುಕೊಂಡು ಹೋದರು.

ಮತ್ತೊಮ್ಮೆ ಅವನು ಕಾಲೇಜು ಮುಗಿಸಿಕೊಂಡು ತಾನೊಬ್ಬನೇ ಹೋದ. ಅವನನ್ನು ಕಂಡೊಡನೆ ಶ್ರೀರಾಮಕೃಷ್ಣರು ಅತ್ಯಾನಂದಿತರಾಗಿ ಸ್ವಾಗತಿಸಿದರು. ತಮ್ಮ ಸನಿಹದಲ್ಲೇ ಕುಳ್ಳಿರಿಸಿಕೊಂಡು ಆಧ್ಯಾತ್ಮಿಕ ವಿಚಾರವಾಗಿ ಮಾತನಾಡತೊಡಗಿದರು. ಹಿಂದೆ ಸಾಧನಾಕಾಲದಲ್ಲಿ ತಮಗಾದ ಅನೇಕ ಅನುಭವಗಳನ್ನು ಅವನಿಗೆ ತಿಳಿಸಿದರು. ಅವನು ಕಣ್ರೆಪ್ಪೆ ಬಡಿಯದೆ ಆ ಬಣ್ಣನೆಯನ್ನು ಕೇಳುತ್ತ ಕುಳಿತ. ಮಧ್ಯದಲ್ಲೊಮ್ಮೆ ಅವರೆಂದರು:

"ನನಗೆ ಜಗನ್ಮಾತೆ ಬಗೆಬಗೆಯಾಗಿ ದರ್ಶನ ಕೊಟ್ಟಳು. ಆದರೆ ಆಮೇಲೆ 'ಈ ದರ್ಶನಗಳೆಲ್ಲ ನಿಜವೋ, ಇಲ್ಲವೆ ನನ್ನ ಭ್ರಮೆಯೋ ?' ಎಂಬ ಸಂದೇಹ ನನ್ನನ್ನು ಕಾಡತೊಡಗಿತು. ಆಗ ನಾನೊಂದು ಪರೀಕ್ಷೆಯಿಟ್ಟೆ—'ಇವೆಲ್ಲ ಭ್ರಮೆಯಲ್ಲ, ಸತ್ಯ' ಎನ್ನುವುದಾದರೆ, ಅಗೋ, (ನಹಬತ್ತಿನ ಎದುರಿಗಿದ್ದ ಒಂದು ದೊಡ್ಡ ಕಲ್ಲನ್ನು ತೋರಿಸುತ್ತ) ಆ ಕಲ್ಲು ತನ್ನಿಂತಾನೇ ಮೂರು ಸಲ ಕುಣಿಯಲಿ, ಆಗ ನಾನು ನಂಬುತ್ತೇನೆ ಅಂತ. ಹಾಗೆ ಅಂದುಕೊಂಡೆನೊ ಇಲ್ಲವೋ, ತಕ್ಷಣವೇ ಆ ಕಲ್ಲು ಮೂರು ಸಲ ಜಿಗಿಯಿತು !"

ಶ್ರೀರಾಮಕೃಷ್ಣರ ವ್ಯಕ್ತಿತ್ವದಲ್ಲಿ ಏನೋ ಒಂದು ಬಗೆಯ, ಮಾತಿನಿಂದ ಹೇಳಲಾಗದ ಆಕರ್ಷಣೆಯಿರುವುದನ್ನು ಪ್ರತಿಯೊಬ್ಬರೂ ಅನುಭವಿಸುತ್ತಿದ್ದರು. ತನ್ನ ಅನುಭವ ಎಂತಹದೆಂಬುದನ್ನು ಹರಿಪ್ರಸನ್ನ ಹೀಗೆ ಬಣ್ಣಿಸುತ್ತಾನೆ:

"ಒಂದು ದಿನ ಅವರನ್ನೇ ನೋಡುತ್ತ ಕೋಣೆಯ ಮೂಲೆಯಲ್ಲಿ ಕುಳಿತಿದ್ದೆ. ನಿಜಕ್ಕೂ ಮೊದಲ ನೋಟಕ್ಕೆ ಅವರಲ್ಲಿ ಅಂಥ ವಿಶೇಷವೇನೂ ಇರಲಿಲ್ಲ. ಎಲ್ಲರಂತೆಯೇ ಇದ್ದರು. ಆದರೆ ಅವರು ಒಮ್ಮೆ ಮುಗುಳ್ನಕ್ಕರೆಂದರೆ ಆನಂದದ ಅಲೆಯೊಂದು ನುಗ್ಗಿ ಅವರ ಮುಖವನ್ನು ಮಾತ್ರವಲ್ಲ, ಇಡೀ ಶರೀರವನ್ನೇ ವ್ಯಾಪಿಸಿಬಿಟ್ಟಿತೋ ಎನ್ನುವಂತೆ ಭಾಸವಾಗುತ್ತಿತ್ತು. ದುಃಖ ಸಂಕಟಗಳಿಂದ ನೊಂದವರಿಗೆ ಅದೊಂದು ತಂಪಾದ ಶ್ರೀಗಂಧದ ಲೇಪನದಂತೆ ಭಾಸವಾಗುತ್ತಿತ್ತು. ಅಲ್ಲದೆ ಅವರ ಧ್ವನಿ ಬಹಳ ಮಧುರ. ಅವರ ಮಾತನ್ನು ಕೇಳುತ್ತಿದ್ದರೆ, ಸದಾ ಹಾಗೇ ಕೇಳುತ್ತಲೇ

ಇದ್ದುಬಿಡೋಣ ಎಂಬ ಅಪೇಕ್ಷೆಯುಂಟಾಗುತ್ತಿತ್ತು. ಅದು ಅಕ್ಷರಶಃ ಕರ್ಣಾಮೃತ! ಮತ್ತು ಅವರ ಕಣ್ಣುಗಳಲ್ಲಿ ಅಂಥಾ ಹೊಳಪು! ಅವರು ಯಾರನ್ನಾದರೂ ತಮ್ಮ ಪ್ರೇಮಭರಿತ ನಯನಗಳಿಂದ ಈಕ್ಷಿಸಿದರೆಂದರೆ, ಆ ವ್ಯಕ್ತಿಯ ಅಂತರಾಳವನ್ನೇ ಹೊಕ್ಕು ನೋಡುತ್ತಿರುವಂತೆ ಕಾಣುತ್ತಿತ್ತು.

"ಅಂದು ಶ್ರೀರಾಮಕೃಷ್ಣರ ಕೋಣೆಯಲ್ಲಿ ಶಾಂತಿ ತಾನೇತಾನಾಗಿತ್ತು. ಅವರು ಮಾತನಾಡುತ್ತಿದ್ದಾಗ ಕೇಳುಗರೆಲ್ಲ ಆನಂದರಸವನ್ನು ಕುಡಿದು ಮತ್ತರಾದಂತೆ ಕಂಡಿತು. ಆ ದಿನ ಯಾವ ವಿಷಯವಾಗಿ ಮಾತುಕತೆ ಆಯಿತೋ ನನಗೆ ಮರೆತುಹೋಗಿದೆ. ಆದರೆ ಆ ದೃಶ್ಯ ಮಾತ್ರ ಮನಸ್ಸಿನಲ್ಲಿ ಅಚ್ಚೊತ್ತಿದಂತಿದೆ. ನಾನು ಆ ಮಾತಿನಲ್ಲಿ ಮುಳುಗಿಹೋಗಿ ಬಹಳ ಹೊತ್ತು ಹಾಗೇ ಕುಳಿತುಬಿಟ್ಟಿದ್ದೆ. ನನ್ನ ದೃಷ್ಟಿ ಅವರ ಮೇಲೇ ನೆಟ್ಟಿತ್ತು. ಅಂತರಂಗದಲ್ಲಿ ಅವರ್ಣನೀಯ ಆನಂದವನ್ನು ಅನುಭವಿಸುತ್ತಿದ್ದೆ. ಅವರು ನನ್ನನ್ನೇನೂ ಕೇಳಲಿಲ್ಲ, ನಾನೂ ಏನೂ ಹೇಳಲಿಲ್ಲ. ಬಳಿಕ ಭಕ್ತರೆಲ್ಲ ಒಬ್ಬೊಬ್ಬರಾಗಿ ಎದ್ದು ಹೊರಟರು. ಕಡೆಗೆ ಶ್ರೀರಾಮಕೃಷ್ಣರೊಂದಿಗೆ ನಾನೊಬ್ಬನೇ ಉಳಿದೆ. ಆಗಲೇ ಅವರು ನನ್ನನ್ನು ಕುಸ್ತಿಗೆ ಆಹ್ವಾನಿಸಿದ್ದು."

ಆ ದಿನ ಶ್ರೀರಾಮಕೃಷ್ಣರು ಕುಸ್ತಿಯ ನೆಪದಲ್ಲಿ ಅವನನ್ನು ಸ್ಪರ್ಶಿಸಿ, ಆಧ್ಯಾತ್ಮಿಕ ಶಕ್ತಿಯನ್ನು ಹರಿಸಿದ ಮೇಲೆ ಅವನು ಸ್ತಬ್ಧನಾಗಿ ಕುಳಿತುಬಿಟ್ಟ. ಬಳಿಕ ಅವರು ಅವನಿಗೆ ತಿನ್ನಲು ಸ್ವಲ್ಪ ಪ್ರಸಾದ ಕೊಟ್ಟು ಪ್ರೀತಿಯ ಮಾತನಾಡಿ ಬೀಳ್ಕೊಂಡರು. ತನಗೇನಾಗಿದೆ ಯೆಂದು ಅವನಿಗೇ ಗೊತ್ತಾಗಲಿಲ್ಲ. ಆದರೆ ಅನೇಕ ದಿನಗಳವರೆಗೂ ಅವನೊಳಗೆ ಒಂದು ಬಗೆಯ ಉತ್ಸಾಹ, ಆನಂದ ಉಕ್ಕುತ್ತಿತ್ತು.

ಮತ್ತೊಂದು ದಿನ ಹರಿಪ್ರಸನ್ನ ಮಧ್ಯಾಹ್ನದ ವೇಳೆಗೆ ದಕ್ಷಿಣೇಶ್ವರಕ್ಕೆ ಹೋದ ವನು ಶ್ರೀರಾಮಕೃಷ್ಣರ ಮಾತುಗಳನ್ನು ಕೇಳುತ್ತ ಮೈಮರೆತು, ಆ ರಾತ್ರಿ ಅಲ್ಲೇ ಇದ್ದು ಬಿಟ್ಟ. ರಾತ್ರಿ ನಿದ್ರಿಸುತ್ತಿದ್ದವನು ಏನೋ ಶಬ್ದ ಕೇಳಿ ಎಚ್ಚರಗೊಂಡ. ನೋಡಿದರೆ ಶ್ರೀರಾಮಕೃಷ್ಣರು ತಮ್ಮಷ್ಟಕ್ಕೇ ಅಸ್ಪಷ್ಟವಾಗಿ ಗೊಣಗುತ್ತ, ಮಧ್ಯೆ ಮಧ್ಯೆ ಚಪ್ಪಾಳೆ ತಟ್ಟಿ ಕೊಂಡು ಅವನ ಚಾಪೆಯ ಸುತ್ತಲೂ ಪ್ರದಕ್ಷಿಣೆ ಹಾಕುತ್ತಿದ್ದಾರೆ! ಅವನಿಗೆ ಭಯ ವಾಯಿತು. 'ಇದೇನೊ ಬಹಳ ವಿಚಿತ್ರವಾಗಿದೆಯಲ್ಲ! ಜನ ಇವರನ್ನು ಹುಚ್ಚ ಎಂದು ಕರೆಯುವುದರಲ್ಲಿ ಆಶ್ಚರ್ಯವೇನು?' ಎಂದುಕೊಂಡ. ಮತ್ತೆ ಅವನಿಗೆ ನಿದ್ರೆಯೇ ಬರಲಿಲ್ಲ. ಆದರೆ ಬೆಳಗಾದ ಮೇಲೆ ಅವರು ಪುನಃ ಭಕ್ತರ ಜೊತೆಯಲ್ಲಿ ಎಂದಿನಂತೆ ನಗುತ್ತ, ತಮಾಷೆ ಮಾಡುತ್ತ ಸಹಜವಾಗಿ ಮಾತನಾಡುವುದನ್ನು ಕಂಡಾಗ ಅವನಿಗೆ ಅತ್ಯಾಶ್ಚರ್ಯ—'ಹಿಂದಿನ ರಾತ್ರಿ ಹಾಗೆ ಅತಿ ವಿಚಿತ್ರವಾಗಿ ವರ್ತಿಸಿದವರು ಇವರೇ ಏನು?' ಎಂದು. ಆ ಮೂಲಕ ಅವರು ತನ್ನಲ್ಲಿ ಆಧ್ಯಾತ್ಮಿಕ ಶಕ್ತಿಯನ್ನು ಜಾಗೃತಗೊಳಿಸಿ ದರು ಎಂದು ಅವನು ಮುಂದೆ ಅರ್ಥ ಮಾಡಿಕೊಂಡ.

ಮೊದಲ ಸಲ ಅವನು ದಕ್ಷಿಣೇಶ್ವರದಲ್ಲೇ ರಾತ್ರಿಯನ್ನು ಕಳೆದು ಬೆಳಗ್ಗೆ ಮನೆಗೆ ಬಂದಾಗ ಅವನಿಗಾಗಿ ಆತಂಕಗೊಂಡಿದ್ದ ತಾಯಿ ಸಿಟ್ಟಿನಿಂದ, "ಎಲ್ಲಿಗೆ ಹಾಳಾಗಿ ಹೋಗಿ ದ್ದೆಯೊ?" ಎಂದು ವಿಚಾರಿಸಿದಳು. ಅವನು ದಕ್ಷಿಣೇಶ್ವರಕ್ಕೆ ಹೋಗಿದ್ದನೆಂದು ತಿಳಿ ದಾಗ ಮತ್ತೂ ರೇಗಿತು.

"ಓಹೋ! ನೀನು ಆ ಹುಚ್ಚು ಬ್ರಾಹ್ಮಣನ ಬಳಿಗೆ ಹೋಗಿದ್ದೆ ಅನ್ನು!"

"ಛೇ ಛೆ! ಅವರನ್ಯಾಕೆ ಹುಚ್ಚ ಅನ್ನುತ್ತೀ! ಅವರು ಎಷ್ಟು ಒಳ್ಳೊಳ್ಳೆ

ವಿಚಾರಗಳನ್ನೆಲ್ಲ ಹೇಳುತ್ತಾರೆ ಗೊತ್ತೆ ?"

ಆಗ ಅಲ್ಲೇ ಇದ್ದ ಅವನ ತಂಗಿ ಬಾಯಿ ಹಾಕಿದಳು:

"ಆತ ಈಗಾಗಲೇ ಇನ್ನೂರು ಜನ ಹುಡುಗರ ತಲೆ ಕೆಡಿಸಿದ್ದಾನಂತೆ !"

"ಹಾಗೆಲ್ಲ ಹೇಳಬೇಡ. ಅವರು ಹುಚ್ಚರಲ್ಲ."

"ಓ, ಸರಿ ಸರಿ. ಆತ ನಿನ್ನ ತಲೆಯನ್ನೂ ಕೆಡಿಸಿಬಿಟ್ಟಿದ್ದಾನೆ ? !"

ಶಾಂತ ಸ್ವಭಾವದ ಹರಿಪ್ರಸನ್ನ ಮತ್ತೆ ಮಾತು ಬೆಳೆಸಲಿಲ್ಲ.

ಮತ್ತೊಮ್ಮೆ ಅವನು ಅನೇಕ ದಿನಗಳ ಮೇಲೆ ದಕ್ಷಿಣೇಶ್ವರಕ್ಕೆ ಹೋದಾಗ ಶ್ರೀರಾಮಕೃಷ್ಣರು ಕೇಳಿದರು: "ಏನಪ್ಪಾ, ನಿನ್ನ ಧ್ಯಾನಾಭ್ಯಾಸ ಹೇಗೆ ಸಾಗಿದೆ ?"

"ಧ್ಯಾನವೆ ? ಪ್ರಯತ್ನವನ್ನೇನೋ ಮಾಡುತ್ತಿದ್ದೇನೆ. ಆದರೆ ಅದೇನು ಧ್ಯಾನವೋ ! ಗಾಢವಾದದ್ದೇನಲ್ಲ."

ಇದನ್ನು ಕೇಳಿ ಶ್ರೀರಾಮಕೃಷ್ಣರು ಆಶ್ಚರ್ಯಪಟ್ಟಂತೆ ತೋರಿತು. ಅವರು ಏನೋ ಆಲೋಚಿಸುತ್ತ ಸ್ವಲ್ಪ ಹೊತ್ತು ಗಂಭೀರವಾಗಿದ್ದುಬಿಟ್ಟರು. ಬಳಿಕ ಅವರ ಮುಖಭಾವ ಬದಲಾಯಿತು. ಅವನಿಗೆ ನಾಲಿಗೆ ಚಾಚುವಂತೆ ಹೇಳಿ, ಅದರ ಮೇಲೆ ಬೆರಳಿನಿಂದ ಕೆಲವು ಗೆರೆಗಳನ್ನು ಎಳೆದು, "ಸರಿ, ಈಗ ಪಂಚವಟಿಗೆ ಹೋಗಿ ಧ್ಯಾನ ಮಾಡಲು ಪ್ರಯತ್ನಿಸು" ಎಂದರು. ಅಷ್ಟರಲ್ಲೇ ಅವನಿಗೇನೋ ಮತ್ತು ಬಂದಂತಾಯಿತು. ಬಲ ವಂತದಿಂದ ಕಾಲೆಳೆದುಕೊಂಡು ಹೋಗಿ ಕುಳಿತವನೇ ಗಾಢ ಧ್ಯಾನದಲ್ಲಿ ಮುಳುಗಿಬಿಟ್ಟ. ಬಹಳ ಸಮಯದ ಮೇಲೆ ಅವನು ಕಣ್ತೆರೆದು ನೋಡಿದಾಗ, ಶ್ರೀರಾಮಕೃಷ್ಣರು ಬದಿ ಯಲ್ಲೇ ಕುಳಿತು ಮುಗುಳ್ನಗುತ್ತ ಆವನ ಮೈನೇವರಿಸುತ್ತಿದ್ದರು. ಅಂದಿನಿಂದ ಅವನಿಗೆ ಧ್ಯಾನ ಸುಗಮವಾಯಿತು.

ಕೆಲದಿನಗಳ ಮೇಲೆ ಹರಿಪ್ರಸನ್ನ ಕಾರಣಾಂತರದಿಂದಾಗಿ ಶ್ರೀರಾಮಕೃಷ್ಣರ ಬಳಿಗೆ ಹೋಗುವುದನ್ನು ನಿಲ್ಲಿಸಿಬಿಟ್ಟ. ಸ್ನೇಹಿತ ಶರಚ್ಚಂದ್ರ ಬಂದು ಅನೇಕ ಬಾರಿ ಕರೆದ. ಆದರೂ ಅವನಿಗೆ ಹೋಗಲು ಸಾಧ್ಯವಾಗಲೇ ಇಲ್ಲ. ಒಂದು ದಿನ ಶ್ರೀರಾಮಕೃಷ್ಣರು ಶರಚ್ಚಂದ್ರನಿಗೆ, "ತಾಯಿ (ಜಗನ್ಮಾತೆ) ಹೇಳಿದ್ದಾಳೆ, ಅವನು ಸದ್ಯಕ್ಕೆ ಬರುವುದಿಲ್ಲ ಅಂತ" ಎಂದು ತಿಳಿಸಿದರು. ಆದರೆ ಇದನ್ನು ನಂಬದೆ ಶರಚ್ಚಂದ್ರ ಮತ್ತೆಮತ್ತೆ ಅವನನ್ನು ಕರೆತರುವ ಪ್ರಯತ್ನ ಮಾಡಿದ. ಆದರೆ ಒಂದಲ್ಲ ಒಂದು ತೊಂದರೆ ಯಿಂದಾಗಿ ಹರಿಪ್ರಸನ್ನ ಹೋಗಲೇ ಇಲ್ಲ. ಕೆಲವು ದಿನಗಳ ಮೇಲೆ ಅವನು ವಿದ್ಯಾ ಭ್ಯಾಸಕ್ಕೆಂದು ಬೇರೆ ಊರಿಗೆ ಹೊರಟುಹೋದ.

ಆದರೆ ಅವನು ಶ್ರೀರಾಮಕೃಷ್ಣರ ಹಿಡಿತದಿಂದೇನೂ ತಪ್ಪಿಸಿಕೊಂಡಿರಲಿಲ್ಲ. ಒಮ್ಮೆ ಅವರು ಅವನಿಗೆ ಹೇಳಿದ್ದರು, "ಹೆಂಗಸರ ನೆರಳನ್ನೂ ನೋಡಬೇಡ; ಕಾಮಿನೀ ಕಾಂಚನಾಸಕ್ತಿಯನ್ನು ಹತ್ತಿರಕ್ಕೇ ಸುಳಿಯಗೊಡಬೇಡ. ಪ್ರಾಪಂಚಿಕತೆಯ ಕಿಲುಬನ್ನು ತಾಗಿಸಿಕೊಳ್ಳಬೇಡ. ನಾನು ಹೀಗೆಲ್ಲ ಏಕೆ ಹೇಳುತ್ತಿದ್ದೇನೆ ಗೊತ್ತೆ ? ನೀವು ಜಗನ್ಮಾತೆಯ ಕಾರ್ಯಕ್ಕಾಗಿ ಮೀಸಲಾದವರು. ಅವಳಿಗಾಗಿ ನೀವು ಬಹಳಷ್ಟು ಕೆಲಸ ಮಾಡ ಬೇಕಾಗುತ್ತದೆ."

ಶ್ರೀರಾಮಕೃಷ್ಣರ ಆದೇಶವನ್ನು ಚಾಚೂ ತಪ್ಪದೆ ಪಾಲಿಸಿದ ಹರಿಪ್ರಸನ್ನ, ಅವರ ಭವಿಷ್ಯವಾಣಿಯನ್ನು ಸತ್ಯವಾಗಿಸಿದ.

ಶ್ರೀರಾಮಕೃಷ್ಣರ ಆಪ್ತ ಶಿಷ್ಯವರ್ಗದಲ್ಲಿ ನರೇಂದ್ರನಂತೆ ಪ್ರಚಂಡ ಬುದ್ಧಿಮತ್ತೆಯಿಂದಲೂ ಪ್ರತಿಭೆಗಳಿಂದಲೂ ಕೂಡಿದ ಇನ್ನೊಬ್ಬನೆಂದರೆ ಕಾಳೀಪ್ರಸಾದ ಚಂದ್ರ. ಸುಸಂಸ್ಕೃತ ಗೌರವಾನ್ವಿತ ಕುಟುಂಬದಲ್ಲಿ ಜನಿಸಿದವನು (೧೮೬೬) ಇವನು. ತಾಯಿ ನಯನತಾರಾದೇವಿ, ಕಾಳೀಮಾತೆಯ ಪರಮ ಭಕ್ತೆ. ತಂದೆ ರಸಿಕಲಾಲ, ಆಂಗ್ಲ ವಿದ್ಯಾಸಂಸ್ಥೆಯೊಂದರಲ್ಲಿ ಹಿರಿಯ ಆಂಗ್ಲಭಾಷಾ ಅಧ್ಯಾಪಕ; ಸತಿಯಂತೆಯೇ ದೈವಭಕ್ತ, ಸದಾಚಾರನಿಷ್ಠ. ಕಾಳೀಪ್ರಸಾದ ತನ್ನ ಹೆತ್ತವರ ಗುಣವಿಶೇಷಗಳನ್ನೆಲ್ಲ ಪಡೆದುಕೊಂಡೇ ಹುಟ್ಟಿದ. ರಾಮಾಯಣ-ಮಹಾಭಾರತಗಳನ್ನು ಶ್ರವಣ ಮಾಡಿಸುವುದರ ಮೂಲಕ ನಯನತಾರಾದೇವಿ ಮಗನಿಗೆ ಹಿಂದೂ ಧರ್ಮ-ಸಂಸ್ಕೃತಿಗಳ ಸಾರವನ್ನೇ ಎರೆದಳು.

ಶಾಲೆಯಲ್ಲಿ ಪಾಠದಲ್ಲಾಗಲಿ ಆಟದಲ್ಲಾಗಲಿ ಓರಗೆಯುವರಾರೂ ಅವನಿಗೆ ಸಾಟಿಯಲ್ಲ. ಸಂಸ್ಕೃತದಲ್ಲಿ ಅವನಿಗೆ ಚಿಕ್ಕಂದಿನಿಂದಲೂ ಆಸಕ್ತಿ. ಹಾಗೆಯೇ ಚಿತ್ರಕಲೆಯಲ್ಲೂ ಕೂಡ. ಆದರೆ ಎಂಟ್ರೆನ್ಸ್ ಪರೀಕ್ಷೆಯಾದ ಕೂಡಲೇ ಅವನ ಗಮನವೆಲ್ಲ ತತ್ತ್ವಶಾಸ್ತ್ರದ ಕಡೆಗೆ ತಿರುಗಿತು. ಜೀವನದ ರಹಸ್ಯಗಳನ್ನು ಅರಿತುಕೊಂಡು, ಸಮಸ್ಯೆಗಳಿಗೆ ಪರಿಹಾರವನ್ನು ಹುಡುಕಿಕೊಳ್ಳುವಲ್ಲಿ ಅವನ ಮನಸ್ಸು ಆಸಕ್ತವಾಯಿತು. ಭಾರತದ ಚರಿತ್ರೆಯನ್ನು ಅಧ್ಯಯನ ಮಾಡುವಾಗ, ಅದ್ವೈತ ತತ್ತ್ವಗಳ ಬಗ್ಗೆ ಹಾಗೂ ಅವುಗಳನ್ನು ಮೊಟ್ಟಮೊದಲು ಪ್ರತಿಪಾದಿಸಿದ ಶ್ರೀಶಂಕರಾಚಾರ್ಯರ ಬಗ್ಗೆ ತಿಳಿವು ಮೂಡಿತು. ಇದು ಅವನ ಜೀವನದಲ್ಲಿ ಹೊಸ ಅಧ್ಯಾಯವನ್ನೇ ತೆರೆಯಿತೆನ್ನಬೇಕು. ಅನಂತರ ಅವನು ಭಗವದ್ಗೀತೆಯನ್ನೂ ಆಚಾರ್ಯರ ಬೋಧನೆಗಳನ್ನೂ ವಿಸ್ತೃತವಾಗಿ ಅಧ್ಯಯನ ಮಾಡಿದ. ಆಧ್ಯಾತ್ಮಿಕ ಜ್ಞಾನದ ಹಂಬಲದೊಂದಿಗೆ ಅವನಲ್ಲಿ ತನ್ನ ಬೌದ್ಧಿಕಜ್ಞಾನವನ್ನು ಹಿಗ್ಗಿಸಿಕೊಳ್ಳಬೇಕೆಂಬ ಇಚ್ಛೆಯೂ ಉಂಟಾಯಿತು. ಪಾಶ್ಚಾತ್ಯ ತತ್ತ್ವಶಾಸ್ತ್ರಜ್ಞರ ಸಿದ್ಧಾಂತಗಳನ್ನೂ ವಿಜ್ಞಾನಿ-ಗಣಿತಜ್ಞರ ಕೃತಿಗಳನ್ನೂ ಓದಿಕೊಂಡ. ಭಾರತೀಯ ವರಕವಿಗಳ ಸಾಹಿತ್ಯರಾಶಿಯನ್ನು ಒಳಹೊಕ್ಕು ನೋಡಿದ.

ಹೀಗೆ ಅಧ್ಯಯನ ಮಾಡುವ ಮೂಲಕ ಅವನು ಗಳಿಸಿದ ಒಂದು ಲಾಭವೆಂದರೆ ಹೃದಯವಿಶಾಲತೆ. ಆದ್ದರಿಂದ ಅವನು ಸಮಾನಶ್ರದ್ಧೆಯಿಂದ ಹಿಂದೂ, ಕ್ರೈಸ್ತ ಹಾಗೂ ಬ್ರಾಹ್ಮಸಮಾಜದ ಧುರೀಣರ ಪ್ರವಚನಗಳನ್ನು ಆಲಿಸತೊಡಗಿದ. ೧೮೮೪ರಲ್ಲಿ ಹೆಸರಾಂತ ತತ್ತ್ವಶಾಸ್ತ್ರಜ್ಞನಾದ ಶಶಧರ ತರ್ಕಚೂಡಾಮಣಿ ಎಂಬವನು ಕಲ್ಕತ್ತದಲ್ಲಿ ಷಡ್ದರ್ಶನಗಳ ಮೇಲೆ ಉಪನ್ಯಾಸ ಸರಣಿಯೊಂದನ್ನು ನೀಡಿದ. ಅವೆಲ್ಲಕ್ಕೂ ಕಾಳೀಪ್ರಸಾದ ತಪ್ಪದೆ ಹಾಜರಾದ. ಆಗ ಪತಂಜಲಿಯ ಯೋಗಸೂತ್ರಗಳ ಬಗ್ಗೆ ಮತ್ತು ಆತ್ಮನ ಅನಂತ ಶಕ್ತಿಸಾಧ್ಯತೆಗಳ ಬಗ್ಗೆ ಕೇಳಿದ ಅವನಿಗೆ ಅವುಗಳಲ್ಲಿ ತೀವ್ರ ಕುತೂಹಲವುಂಟಾಯಿತು. ತರುವಾಯ ಅವನು ಯೋಗಶಾಸ್ತ್ರದ ಮೇಲೆ ಲಭ್ಯವಿದ್ದ ಅತ್ಯುತ್ತಮ ಪುಸ್ತಕಗಳ ಅಧ್ಯಯನವನ್ನು ಕೈಗೊಂಡ. ಯೋಗದ ಅನುಷ್ಠಾನದಲ್ಲಿ ಮುಳುಗಬೇಕೆಂಬ ತೀವ್ರೇಚ್ಛೆ ಅವನಲ್ಲಿ ಉದಿಸಿತು. ಆದರೆ ಯೋಗ್ಯ ಗುರುವಿನ ಮಾರ್ಗದರ್ಶನವಿಲ್ಲದೆ ಆ ಕಾರ್ಯಕ್ಕೆ ಕೈಹಾಕಬಾರದೆಂಬ ಸ್ನೇಹಿತರ ಬುದ್ಧಿವಾದಕ್ಕೆ ಕಿವಿಗೊಟ್ಟು ಸುಮ್ಮನಾದ.

ಈಗ ಅವನು ತನ್ನನ್ನು ಯೋಗಿಯನ್ನಾಗಿ ಮಾಡಬಲ್ಲ, ತನಗೆ ನಿರ್ವಿಕಲ್ಪ ಸಮಾಧಿಯ ಉತ್ತುಂಗ ಅನುಭವ ಮಾಡಿಸಿಕೊಡಬಲ್ಲ ಸಮರ್ಥ ಗುರುವಿನ ಅನ್ವೇಷಣೆಯಲ್ಲಿ ತೊಡಗಿದ. ಶ್ರೀರಾಮಕೃಷ್ಣರ ಹೆಸರು ಅವನ ಕಿವಿಗೆ ಬೀಳಲು ತಡವಾಗಲಿಲ್ಲ. ಅವರ ದರ್ಶನಕ್ಕಾಗಿ ಹಾತೊರೆಯತೊಡಗಿದ.

ಬಹಳ ಕಾಲದ ಮೇಲೆ ಅದಕ್ಕೆ ಸದವಕಾಶವಾಯಿತು. ಒಂದು ದಿನ ನಡುಹಗಲಿನ ಸುಡುಬಿಸಿಲಲ್ಲಿ ನಡೆದು ದಕ್ಷಿಣೇಶ್ವರವನ್ನು ಮುಟ್ಟಿದ. ಆದರೆ ಪರಮಹಂಸರು ಕಲ್ಕತ್ತಕ್ಕೆ ಹೋಗಿದ್ದಾರೆ, ರಾತ್ರಿಯವರೆಗೂ ಮರಳುವುದಿಲ್ಲ ಎಂಬ ವಿಷಯ ತಿಳಿದು ಅತೀವ ನಿರಾಸೆಯಾಯಿತು. ಆ ಹೊತ್ತಿಗೆ ಅಲ್ಲಿಗೆ ಬಂದ ತರುಣ ಶಶಿಭೂಷಣ ಅವನ ಪರಿಚಯ ಮಾಡಿಕೊಂಡು ಅತ್ಯಂತ ವಿಶ್ವಾಸದಿಂದ ಮಾತನಾಡಿಸುತ್ತ, ಅವನ ಮನಸ್ಸನ್ನು ಹಗುರಗೊಳಿಸಿದ. ಆದರೂ ಶ್ರೀರಾಮಕೃಷ್ಣರ ಸಂದರ್ಶನಕ್ಕಾಗಿ ಕಾತರಿಸಿ ಬಂದಿದ್ದ ಅವನಿಗೆ ಕ್ಷಣವೊಂದೊಂದೂ ಯುಗವಾಗಿ ತೋರುತ್ತಿತ್ತು.

ರಾತ್ರಿ ಒಂಬತ್ತು ಗಂಟೆಯ ಹೊತ್ತಿಗೆ ಶ್ರೀರಾಮಕೃಷ್ಣರು ಒಂದು ಗಾಡಿಯಲ್ಲಿ ಬಂದಿಳಿದರು. ಕಾಳೀಪ್ರಸಾದ ಅವರನ್ನು ಹಿಂಬಾಲಿಸಿ ಕೋಣೆಯೊಳಗೆ ಬಂದು ಪ್ರಣಾಮ ಸಲ್ಲಿಸಿ ಕುಳಿತ. ಈ ತೇಜಸ್ವೀ ತರುಣನ ಮುಖಾವಲೋಕನದಿಂದಲೇ ಶ್ರೀರಾಮಕೃಷ್ಣರು ಸಂಪ್ರೀತರಾದರು. ಅವನು ತನ್ನ ಪರಿಚಯ ಹೇಳಿಕೊಳ್ಳುವಷ್ಟರಲ್ಲೇ ಇಬ್ಬರಲ್ಲೂ ಆತ್ಮೀಯತೆ ಬೆಳೆಯಿತು. ಈಗ ಅವನು ಯಾವುದೇ ಶಂಕೆಯಿಲ್ಲದೆ ತನ್ನ ಮನದಾಸೆಯನ್ನು ತೋಡಿಕೊಂಡ:

"ಸ್ವಾಮಿ, ನನಗೆ ಯೋಗದಲ್ಲಿ ಬಹಳವಾದ ಆಸಕ್ತಿ. ಯೋಗವನ್ನು ಕಲಿಯಬೇಕು ಎನ್ನುವ ಆಸೆ. ನೀವು ಕೃಪೆಯಿಟ್ಟು ಅದನ್ನು ನನಗೆ ಹೇಳಿಕೊಡುತ್ತೀರಾ ?"

ಶ್ರೀರಾಮಕೃಷ್ಣರು ಮುಹೂರ್ತಕಾಲ ಮೌನವಾಗಿ ಅವನನ್ನೇ ದಿಟ್ಟಿಸಿ, ಬಳಿಕ ನುಡಿದರು: "ಈ ವಯಸ್ಸಿನಲ್ಲೇ ನೀನು ಯೋಗವನ್ನು ಕಲಿಯಲು ಅಪೇಕ್ಷಿಸುತ್ತಿರುವುದು ಬಹಳ ಒಳ್ಳೆಯದು... ನನಗೆ ಕಂಡುಬರುತ್ತಿದೆ, ನೀನು ಪೂರ್ವಜನ್ಮದಲ್ಲಿ ಮಹಾಯೋಗಿಯಾಗಿದ್ದೆ, ಈಗ ಸಾಧನೆಯಲ್ಲಿ ಒಂದಂಶವನ್ನು ಮಾತ್ರ ಮಾಡಿ ಮುಗಿಸಬೇಕಾಗಿದೆ ಅಂತ... ಮಗು, ಇದೇ ನಿನ್ನ ಕಡೇ ಜನ್ಮ. ಆಗಲಿ, ನಾನು ನಿನಗೆ ಯೋಗವಿಜ್ಞಾನವನ್ನು ಹೇಳಿಕೊಡುತ್ತೇನೆ. ಇವೊತ್ತು ಇಲ್ಲೇ ಮಲಗಿಕೊ. ಮುಂಜಾನೆ ನನ್ನನ್ನು ನೋಡು."

ಆ ರಾತ್ರಿಯಿಡೀ ಕಾಳೀಪ್ರಸಾದನ ಬಳಿಗೆ ನಿದ್ರೆ ಸುಳಿಯಲೇ ಇಲ್ಲ. ಅವನು ನಸುಕಿನಲ್ಲೇ ಎದ್ದು ಗಂಗೆಯಲ್ಲಿ ಮಿಂದು ಬಂದು ಶ್ರೀರಾಮಕೃಷ್ಣರಿಗೆ ನಮಸ್ಕರಿಸಿದ. ಅವರು ಅವನಿಗೆ ಮತ್ತೆ ಕೆಲವು ಪ್ರಶ್ನೆಗಳನ್ನು ಹಾಕಿದರು. ಅನಂತರ ಅವನ ನಾಲಿಗೆಯ ಮೇಲೆ ನಡುಬೆರಳಿನಿಂದ ಏನನ್ನೋ ಬರೆದು, ಎದೆಯನ್ನೊಮ್ಮೆ ನೇವರಿಸಿದರು. ಮರುಘಳಿಗೆಯೇ ಅವನಿಗೆ ತನ್ನೊಳಗೊಂದು ಅದ್ಭುತ ಶಕ್ತಿಸಂಚಾರವಾದ ಅನುಭವವಾಯಿತು; ಅವನು ನೀರವ ಧ್ಯಾನದಲ್ಲಿ ಮುಳುಗಿಹೋದ.

ಅವನು ಎಚ್ಚರಗೊಂಡ ಮೇಲೆ ಶ್ರೀರಾಮಕೃಷ್ಣರು ವಾತ್ಸಲ್ಯದಿಂದ ಮಾತನಾಡಿಸಿ, ಆಧ್ಯಾತ್ಮಿಕ ಜೀವನಕ್ಕೆ ಸಂಬಂಧಿಸಿದ ಕೆಲವು ಮೂಲಭೂತ ವಿಚಾರಗಳನ್ನು ಒತ್ತಿ ಹೇಳಿದರು. ಮನೆಗೆ ಹಿಂದಿರುಗುವಾಗ ಅವನಿಗೆ ತಾನೀಗ ಬೇರೆಯೇ ಮನುಷ್ಯನಾಗಿಬಿಟ್ಟಿರುವೆನೆಂಬ ಭಾವನೆಯುಂಟಾಯಿತು.

ಅಂದಿನಿಂದ ಅವನು ತನಗೆ ದೊರೆತ ಒಂದು ಅವಕಾಶವನ್ನೂ ಬಿಡದೆ ಶ್ರೀರಾಮಕೃಷ್ಣರ ಆನಂದಭರಿತ ಸಾನ್ನಿಧ್ಯಕ್ಕೆ ಓಡಿಬರಲಾರಂಭಿಸಿದ. ಇದಕ್ಕೆ ಅವನ ತಾಯ್ತಂದೆಯರು ಆಕ್ಷೇಪಿಸಿದರು; ಅಲ್ಲಿಗೆ ಹೋಗದಂತೆ ಪ್ರತಿಬಂಧಿಸಿದರು. ದೋಣಿ ಬಾಡಿಗೆಗೆ ಬೇಕಾದ ದುಡ್ಡೂ ಅವನ ಬಳಿ ಇರುತ್ತಿರಲಿಲ್ಲ. ಆದರೆ ದಕ್ಷಿಣೇಶ್ವರಕ್ಕೆ ಹೋಗದೆ ಜೀವಿಸಿರುವುದಾದರೂ ಹೇಗೆ? ಅವನ ಕಷ್ಟವನ್ನು ತಿಳಿದ ಶ್ರೀರಾಮಕೃಷ್ಣರು "ದೋಣಿ ಬಾಡಿಗೆಯನ್ನು ಇಲ್ಲಿಂದಲೇ ಪಡೆದುಕೊ" ಎಂದರು. ಅವರ ಅವ್ಯಾಜಪ್ರೇಮವನ್ನು ಕಂಡು ಅವನ ಹೃದಯ ತುಂಬಿಬಂತು.

ಶ್ರೀರಾಮಕೃಷ್ಣರ ಮಾರ್ಗದರ್ಶನದಲ್ಲಿ ಕಾಳೀಪ್ರಸಾದನೀಗ ಏಕನಿಷ್ಠೆಯಿಂದ ಸಾಧನೆಯಲ್ಲಿ ತೊಡಗಿದ; ಕ್ಷಿಪ್ರವಾಗಿ ಮುನ್ನಡೆದ. ಪಾಶ್ಚಾತ್ಯ ವಿದ್ವಾಂಸರ ವಾದಗಳನ್ನು ಚೆನ್ನಾಗಿ ಓದಿಕೊಂಡಿದ್ದನಾದರೂ ಅವನನ್ನು ಸಂಶಯಗಳು ಹೆಚ್ಚಾಗಿ ಕಾಡದಿದ್ದುದು ಅವನ ಭಾಗ್ಯವೇ ಎನ್ನಬೇಕು. ಆಧ್ಯಾತ್ಮಿಕ ಬೋಧನೆಗಾಗಿ ಬಾಯಾರಿ ಕಾತರಿಸುತ್ತಿದ್ದ ಅವನು, ಶ್ರೀರಾಮಕೃಷ್ಣರಿಂದ ನಿರಂತರವೂ ಚಿಮ್ಮುತ್ತಿದ್ದ ಜ್ಞಾನಾಮೃತವನ್ನು ಮನದಣಿಯೆ ಹೀರಿದ.

ತರುಣಶಿಷ್ಯರಲ್ಲಿ ಅಗ್ರಗಣ್ಯನಾದ ನರೇಂದ್ರನಾಥನಿಗೂ ಕಾಳೀಪ್ರಸಾದನಿಗೂ ಬಹುಬೇಗ ಗಾಢ ಸ್ನೇಹ ಬೆಳೆಯಿತು. ಇಬ್ಬರೂ ವೇದಾಂತದ ಮತ್ತು ತತ್ತ್ವಶಾಸ್ತ್ರಗಳ ಸೂಕ್ಷ್ಮ ಅಂಶಗಳ ಬಗ್ಗೆ ಸುದೀರ್ಘ ಚರ್ಚೆಗಳನ್ನು ನಡೆಸುತ್ತಿದ್ದರು. ಒಂದು ಅವಧಿಯಲ್ಲಿ ಅವರಿಬ್ಬರೂ ಭಗವಾನ್ ಬುದ್ಧನ ಕುರಿತಾದ ವಿಚಾರದಲ್ಲಿ ತೊಡಗಿ ಬುದ್ಧಮಯರೇ ಆಗಿಬಿಟ್ಟಿದ್ದರು. ಹಾಗೆಯೇ ಶ್ರೀರಾಮಕೃಷ್ಣರ ವಿಷಯದಲ್ಲಿ ತಮ್ಮ ಅಭಿಪ್ರಾಯ–ಅನುಭವಗಳನ್ನು ವಿನಿಮಯ ಮಾಡಿಕೊಳ್ಳುತ್ತಿದ್ದರು.

ದಿನಗಳೆದಂತೆಲ್ಲ ಕಾಳೀಪ್ರಸಾದ ಶ್ರೀರಾಮಕೃಷ್ಣರ ಮಹಿಮೆಯನ್ನು ನಿಚ್ಚಳವಾಗಿ ಕಾಣತೊಡಗಿದ. ಅವರ ಕೃಪೆಯಿಂದ ಅವನಿಗಾದ ದಿವ್ಯಾನುಭವಗಳು ಅನೇಕ. ಒಂದು ರಾತ್ರಿ ಅವರು ತಮ್ಮ ಮಂಚದ ಮೇಲೆ ಮಲಗಿ ಅವನಿಂದ ಪಾದಸೇವೆ ಸ್ವೀಕರಿಸುತ್ತಿದ್ದಾರೆ; ತನಗೊದಗಿದ ಈ ಅಪೂರ್ವ ಅವಕಾಶದಿಂದ ಅವನು ಆನಂದತುಂದಿಲನಾಗಿದ್ದಾನೆ. ಕೋಣೆಯಲ್ಲಿ ಮತ್ತಾರೂ ಇಲ್ಲ. ಹಠಾತ್ತಾಗಿ ಶ್ರೀರಾಮಕೃಷ್ಣರು ಜ್ಯೋತಿರ್ಮಯಿ ಜಗನ್ಮಾತೆಯಾಗಿ ಪರಿವರ್ತಿತರಾದಂತೆ ತೋರಿತು! ಆ ರೂಪದಲ್ಲಿ ಶ್ರೀರಾಮಕೃಷ್ಣರು ತನಗೆ, ತಾನೊಂದು ಹಸುಗೂಸೆಂಬಂತೆ, ಎದೆಹಾಲು ಕುಡಿಸುತ್ತಿದ್ದಾರೆ! ಆ ಉತ್ಕಟ ಅನುಭವ ತಂದ ಆನಂದವನ್ನು ತಾಳಲಾರದೆ ಅವನು ಬಾಹ್ಯಪ್ರಜ್ಞೆ ಕಳೆದುಕೊಂಡು ಕುಸಿದು ಕುಳಿತ.

ಧ್ಯಾನಕಾಲದಲ್ಲಿ ಅವನಿಗೆ ಆಗಾಗ ಅನೇಕ ಬಗೆಯ ದರ್ಶನಗಳಾಗುತ್ತಿದ್ದುವು. ಅವನು ಆ ಅನುಭವಗಳನ್ನೆಲ್ಲ ಶ್ರೀರಾಮಕೃಷ್ಣರ ಮುಂದೆ ಹೇಳುತ್ತಿದ್ದ. ಅದನ್ನು ಕೇಳಿ ಅವರು, ಮುಂದೆ ಏನು ಮಾಡಬೇಕು, ಏನಾಗುತ್ತದೆ ಎಂದು ಅವನಿಗೆ ಸೂಚಿಸುತ್ತಿದ್ದರು. ಒಂದು ದಿನ ಅವನು ಇಂಥ ದರ್ಶನವೊಂದರಲ್ಲಿ ಚೈತನ್ಯ ಬುದ್ಧ ಕ್ರಿಸ್ತನೇ ಮೊದಲಾದ ಎಲ್ಲ ಅವತಾರಪುರುಷರ ಜೊತೆಯಲ್ಲಿ ಶ್ರೀರಾಮಕೃಷ್ಣರನ್ನು ಕಂಡ. ಆ ಎಲ್ಲ ದಿವ್ಯ ಪುರುಷರೂ ಕ್ರಮೇಣ ಶ್ರೀರಾಮಕೃಷ್ಣರಲ್ಲಿ ಐಕ್ಯವಾದಂತೆಯೂ ಮತ್ತು ಪುನಃ ಹೊರಬಂದಂತೆಯೂ ಕಂಡ. ಈ ದರ್ಶನದ ಪ್ರಭಾವ ಎಷ್ಟು ಗಾಢವಾಗಿತ್ತೆಂದರೆ, ಆ ಎಲ್ಲ ಅವತಾರಗಳೇ ಈಗ ಶ್ರೀರಾಮಕೃಷ್ಣರೂಪದಿಂದ ಮೈದಾಳಿವೆಯೆಂಬ ದೃಢ

ವಿಶ್ವಾಸ ಅವನಲ್ಲುಂಟಾಯಿತು.

ಸಾಮಾನ್ಯವಾಗಿ ಅವನು ಧ್ಯಾನಕಾಲದಲ್ಲಿ ವಿವಿಧ ದೇವದೇವಿಯರನ್ನು ಕಾಣುತ್ತಿದ್ದ. ಇಂತಹ ದರ್ಶನಾನುಭವಗಳಿಂದ ಅವನಿಗೊಂದು ವಿಶೇಷ ತೃಪ್ತಿ ಉಂಟಾಗುತ್ತಿತ್ತು. ಒಂದು ದಿನ ಅವನು ಈ ಎಲ್ಲ ದೇವದೇವಿಯರೂ ಒಂದು ಅತ್ಯಂತ ಪ್ರಕಾಶಮಾನವಾದ ಜ್ಯೋತಿಯೊಳಗೆ ಲಯ ಹೊಂದಿದಂತೆ ಕಂಡ. ತನ್ನ ಈ ವಿಶೇಷ ಅನುಭವವನ್ನು ಅವನು ಶ್ರೀರಾಮಕೃಷ್ಣರಿಗೆ ಅರುಹಿದಾಗ ಅವರು ಸಂತೋಷಪಟ್ಟು ನುಡಿದರು: "ಭೇಷ್ ! ನಿನಗೆ ವೈಕುಂಠಲೋಕದ ದರ್ಶನವಾಯಿತು. ಭಾಗ್ಯಶಾಲಿ ! ಸಾಂತತೆಯ ಗಡಿಯನ್ನು ದಾಟಿ ಅನಂತತೆಯನ್ನು ಪ್ರವೇಶಿಸಿದ್ದೀಯೆ. ಇನ್ನು ಮುಂದೆ ನಿನಗೆ ದೇವದೇವಿಯರ ದರ್ಶನವಾಗುವುದಿಲ್ಲ."

ಕಾಳೀಪ್ರಸಾದನಿಗೆ ಆಶ್ಚರ್ಯವಾಯಿತು. ಜೊತೆಗೆ ಸ್ವಲ್ಪ ನಿರಾಶೆಯೂ ಆಯಿತೆನ್ನಬೇಕು. ಏಕೆಂದರೆ ದೇವಿದೇವಿಯರ ದರ್ಶನ ನಿಂತುಹೋಗುವುದು ಅವನಿಗೆ ಇಷ್ಟವಿರಲಿಲ್ಲ. ಆದ್ದರಿಂದ ಅವನು ಮತ್ತೆ ಧ್ಯಾನಕಾಲದಲ್ಲಿ ಆ ದೃಶ್ಯಗಳನ್ನು ಮನಸ್ಸಿಗೆ ತಂದುಕೊಳ್ಳುವ ಪ್ರಯತ್ನ ಮಾಡಿದ. ಆದರೆ ಎಷ್ಟೆಷ್ಟು ಪ್ರಯತ್ನಿಸಿದರೂ ವಿಶಾಲತೆ, ಅನಂತತೆಗಳ ಕಲ್ಪನೆ ಮೂಡಿ ಮನಸ್ಸು ನಿರಾಕಾರ ತತ್ತ್ವದೆಡೆಗೆ ಸಾಗುತ್ತಿತ್ತೇ ಹೊರತು ಹಿಂದಿನಂತಹ ಅನುಭವಗಳು ಆಗಲೇ ಇಲ್ಲ.

# ಸರಳಭಾವದ ಸುಬೋಧ ೧೧

ಶ್ರೀರಾಮಕೃಷ್ಣರ ಸಂನ್ಯಾಸೀ ಶಿಷ್ಯರ ಪೈಕಿ ಅವರ ಬಳಿಗೆ ಕಟ್ಟಕಡೆಗೆ ಬಂದವನೆಂದರೆ ಸುಬೋಧಚಂದ್ರ ಘೋಷ್. ಕಲ್ಕತ್ತದ ಠನಠನಿಯಾ ಎಂಬಲ್ಲಿ ಒಂದು ಕಾಳೀ ದೇವಾಲಯುವಿದೆ. ಅದರ ಸ್ಥಾಪಕನಾದ ಶಂಕರ ಘೋಷ್ ಎಂಬವನ ಮರಿಮಗ ಇವನು. ಸುಬೋಧನ ತಂದೆತಾಯಿಯರೂ ಧಾರ್ಮಿಕ ಪ್ರವೃತ್ತಿಯುಳ್ಳವರು. ಆ ಪ್ರಭಾವದಿಂದಾಗಿ ಸುಬೋಧನಿಗೆ ಚಿಕ್ಕಂದಿನಿಂದಲೂ ಪಾಠಪ್ರವಚನಕ್ಕಿಂತಲೂ ಧ್ಯಾನ-ಜಪದ ಮೇಲೆಯೇ ಹೆಚ್ಚು ಆಸಕ್ತಿ.

ಅಂದಿನ ರೂಢಿಯಂತೆ ಅವನು ಶಾಲೆಯಲ್ಲಿದ್ದಾಗಲೇ ತಾಯ್ತಂದೆಯರು ಅವನನ್ನು ವಿವಾಹಬಂಧನಕ್ಕೆ ಒಳಪಡಿಸಲು ನೋಡಿದರು. ಆದರೆ "ನನಗೆ ಮದುವೆ ಇಷ್ಟವಿಲ್ಲ" ಎಂದು ಅವನು ಮೊಂಡು ಹಿಡಿದ. ಕೊನೆಗೆ ಅವರು, "ನಿನ್ನ ಶಾಲೆಯ ಓದು ಮುಗಿದ ಕೂಡಲೇ ಮದುವೆ" ಎಂದು ತಮ್ಮ ತೀರ್ಮಾನವನ್ನು ಪ್ರಕಟಿಸಿದರು. ಸುಬೋಧನದು ಮಗುವಿನಂತಹ ಸರಳ ಮನಸ್ಸು. 'ಪರೀಕ್ಷೆಯಲ್ಲಿ ಫೇಲಾಗಲಪ್ಪಾ !' ಎಂದು ದೇವರಲ್ಲಿ ಮೊರೆಯಿಟ್ಟ. ದೇವರು ಈ ವರವನ್ನು ಸಹಜವಾಗಿಯೇ ಕರುಣಿಸಿದ !

ಈ ವೇಳೆಗೆ, ಎಂದರೆ ಅವನಿನ್ನೂ ಶಾಲಾ ವಿದ್ಯಾರ್ಥಿಯಾಗಿರುವಾಗಲೇ, ಅವನ ಜೀವನದ ಅತಿ ಮುಖ್ಯ ತಿರುವು ಒದಗಿಬಂತು.

ಅವನಿಗೆ ಆಗ ಹದಿನೇಳು ವರ್ಷ. ಸುರೇಶಚಂದ್ರ ದತ್ತ ಬರೆದ "ಶ್ರೀರಾಮಕೃಷ್ಣ ಪರಮಹಂಸರ ಉಕ್ತಿ" ಎಂಬ ಪುಸ್ತಕ ಆಕಸ್ಮಿಕವಾಗಿ ಅವನ ಕೈಗೆ ಸಿಕ್ಕಿತು. ಅವನು ತಂದೆಯಿಂದ ಶ್ರೀರಾಮಕೃಷ್ಣರ ಹೆಸರನ್ನೇನೋ ಕೇಳಿದ್ದ. ಆದರೆ ಈಗ ಈ ಪುಸ್ತಕವನ್ನು ಓದುತ್ತಿದ್ದಂತೆ, ಅವರನ್ನು ಕಣ್ಣಾರೆ ಕಾಣಲೇಬೇಕು ಎಂಬ ಅಭಿಲಾಷೆ ಅವನಲ್ಲುಂಟಾಯಿತು. ಅದನ್ನು ತಿಳಿದು ಅವನ ತಂದೆ, "ನಾನೇ ಒಂದು ದಿನ ಅನುಕೂಲವಾದಾಗ ನಿನ್ನನ್ನು ದಕ್ಷಿಣೇಶ್ವರಕ್ಕೆ ಕರೆದುಕೊಂಡು ಹೋಗುತ್ತೇನೆ" ಎಂದ. ಆದರೆ ಅಲ್ಲಿಯವರೆಗೆ ಕಾಯುವ ಸಹನೆ ಅವನಿಗಿರಲಿಲ್ಲ. ತನ್ನ ಸಹಪಾಠಿ, ನೆರೆಮನೆಯ ಕ್ಷೀರೋದಚಂದ್ರನನ್ನು ಜೊತೆಮಾಡಿಕೊಂಡು ೧೮೮೫ರ ಆಗಸ್ಟಿನಲ್ಲೊಂದು ದಿನ ಹೊರಟೇಬಿಟ್ಟ.

ಇಬ್ಬರಿಗೂ ಸರಿಯಾದ ದಾರಿ ಗೊತ್ತಿರಲಿಲ್ಲ. ಸಾಕಷ್ಟು ನಡೆದು ಸುತ್ತಾಡಿ ಕೊನೆಗೆ ಕಾಳೀಮಂದಿರದ ಉದ್ಯಾನಕ್ಕೆ ಬಂದರು. ಸುಬೋಧನಿಗೆ 'ಪರಮಹಂಸರು' ಎಂದರೆ ಒಂದು ಬಗೆಯ ಮಂತ್ರವಾದಿಗಳಿರಬೇಕು ಎಂಬ ಭಾವನೆ ಅದು ಹೇಗೋ ಬಂದುಬಿಟ್ಟಿತ್ತು. ಈಗ ಅವನಿಗೆ ಇನ್ನೊಂದು ಶಂಕೆ ಹುಟ್ಟಿಕೊಂಡಿತು. ಈ ಸಾಧುಗಳು ಎಂಥವರೋ ಏನೋ, ಅವರ ಜೊತೆಯಲ್ಲಿ ಹೇಗೆ ಮಾತನಾಡಿದರೆ ಸರಿಯೋ, ಹೇಗೆ ಮಾತನಾಡಿದರೆ ತಪ್ಪೋ ! ಆದ್ದರಿಂದ ಸ್ನೇಹಿತನಿಗೆ ಹೇಳಿದ:

"ನೋಡು ಕ್ಷೀರೋದ, ಆ ಪರಮಹಂಸರ ಹತ್ತಿರ ನೀನೇ ಮಾತನಾಡಬೇಕು. ಏನಾದರೂ ಕೇಳಿದರೆ ನೀನೇ ಉತ್ತರ ಹೇಳಬೇಕು. ಗೊತ್ತಾಯಿತೆ ? ನಾನು ನಿನ್ನ ಹಿಂದೆ ಇರುತ್ತೇನೆ. ನಾನು ಇದುವರೆಗೂ ಯಾವ ಸಾಧುಗಳನ್ನೂ ಮಾತಾಡಿಸಿಲ್ಲ."

ಕ್ಷೀರೋದ: "ಅಯ್ಯೋ, ಅದಕ್ಕೆ ಯಾಕೆ ಯೋಚನೆ, ಬಾರೋ. ಬೇಕಾದರೆ ನಾನೇ ಮಾತಾಡುತ್ತೇನೆ."

ಕೋಣೆಯೊಳಗೆ ಕ್ಷೀರೋದನೇ ಮೊದಲು ಪ್ರವೇಶಿಸಿ, ಶ್ರೀರಾಮಕೃಷ್ಣರಿಗೆ ನಮಿಸಿದ. ಸುಬೋಧ ಸದ್ದಿಲ್ಲದೆ ಬಂದು, ದೂರದ ಮೂಲೆಯಲ್ಲೇ ನಿಂತ.

ಶ್ರೀರಾಮಕೃಷ್ಣರು (ನಗುಮೊಗದಿಂದ): "ಎಲ್ಲಿಂದ ಬರುತ್ತಿದ್ದೀರಪ್ಪಾ ?"

"ಕಲ್ಕತ್ತದಿಂದ" —ಕ್ಷೀರೋದ ಉತ್ತರಿಸಿದ.

"ಎಲ್ಲಿ, ಆ ಬಾಬು ಯಾಕೆ ಅಷ್ಟು ದೂರ ನಿಂತುಬಿಟ್ಟ ? ಹತ್ತಿರ ಬಾಪ್ಪಾ !"

ಸುಬೋಧ ಒಂದೆರಡು ಹೆಜ್ಜೆ ಮುಂದೆ ಬಂದ. ಅವನ ಮುಖಲಕ್ಷಣವನ್ನು ಗಮನಿಸಿದ ಶ್ರೀರಾಮಕೃಷ್ಣರು ಕೇಳಿದರು: "ನೀನು ಶಂಕರಘೋಷರ ಮನೆಯವನು. ಅಲ್ಲವೇನಯ್ಯಾ ?"

"ಹೌದು ! ಆದರೆ ಅದು ನಿಮಗೆ ಹೇಗೆ ಗೊತ್ತಾಯಿತು ?"

ಇಪ್ಪತ್ತೈದು ವರ್ಷಗಳ ಹಿಂದಿನ ಮಾತನ್ನು ನೆನೆಸಿಕೊಂಡು ಶ್ರೀರಾಮಕೃಷ್ಣರೆಂದರು: "ಹಿಂದೆ ನಾನು ಝಾಮಾಪುಕುರದಲ್ಲಿದ್ದಾಗ ನಿಮ್ಮ ಮನೆಗೂ ಠನಠನಿಯಾದ ಕಾಳೀ ದೇಗುಲಕ್ಕೂ ಆಗಾಗ ಹೋಗುತ್ತಿದ್ದೆ. ಆಗ ನೀನಿನ್ನೂ ಹುಟ್ಟಿರಲಿಲ್ಲ ಅನ್ನು. ಆದರೆ ನೀನಿಲ್ಲಿಗೆ ಬರುತ್ತೀ ಅಂತ ನನಗೆ ಗೊತ್ತಿತ್ತು. ಹ್ಞೂಂ... ಯಾರಿಗೆ ಆಧ್ಯಾತ್ಮಿಕ ಉನ್ನತಿ ಚೆನ್ನಾಗಿ ಆಗುತ್ತದೆಯೋ ಅವರನ್ನೆಲ್ಲ ಭಗವತಿ ಇಲ್ಲಿಗೆ ಕಳಿಸುತ್ತಾಳೆ."

ಮತ್ತೆ ಶ್ರೀರಾಮಕೃಷ್ಣರೆಂದರು: "ಯಾಕೆ ದೂರದಲ್ಲೇ ನಿಂತಿದ್ದೀ ? ಬಾ !"

ಸುಬೋಧ ಇನ್ನೂ ಹತ್ತಿರಕ್ಕೆ ಬಂದ. ಶ್ರೀರಾಮಕೃಷ್ಣರು ಅವನ ಕೈಹಿಡಿದು ತಮ್ಮ ಹಾಸಿಗೆಯ ಮೇಲೇ ಕುಳ್ಳಿರಿಸಿಕೊಂಡರು. ಅವನು ಕಸಿವಿಸಿಗೊಂಡು ಹೇಳಿದ:

"ಬೇಡ ಬೇಡ ! ನಾನು ಈ ಬಟ್ಟೆಯಲ್ಲಿ ಯಾರ್ಯಾರನ್ನೋ ಮುಟ್ಟಿಬಿಟ್ಟಿರುತ್ತೇನೆ. ನಿಮಗೆ ಮೈಲಿಗೆಯಾಗುತ್ತದೆ."

ಶ್ರೀರಾಮಕೃಷ್ಣರು ಪ್ರೀತಿಯಿಂದ ಅವನ ಭುಜದ ಮೇಲೆ ಕೈಯಿರಿಸಿ ಹೀಗೆಂದರು: "ನೋಡು, ನೀನು ಇಲ್ಲಿಗೆ (ತಮಗೆ) ಸೇರಿದವನು... ಈ ಬಟ್ಟೆಬರೆಯಲ್ಲಿ ಏನಿದೆಯೋ ?"

ಈಗ ಅವರು ಮತ್ತೆ ಹುಡುಗರಿಬ್ಬರನ್ನೂ ಸಹಜವಾಗಿ ಮಾತನಾಡಿಸತೊಡಗಿದರು. ಕೇಳಿದರು: "ಇಲ್ಲಿಯ ವಿಷಯ ನಿಮಗೆ ಹೇಗೆ ತಿಳಿಯಿತು ?"

ಸುಬೋಧ: "ಪುಸ್ತಕದಲ್ಲಿ ನಿಮ್ಮ ಮಾತುಗಳನ್ನೆಲ್ಲ ಓದಿದೆ. ನೀವು ಮಹಾಪುರುಷರು, ಹೆಸರಾದವರು ಅಂತ ತಿಳಿದು ನಿಮ್ಮನ್ನು ನೋಡಬೇಕು ಅನ್ನಿಸಿತು."

ಹಠಾತ್ತಾಗಿ ಶ್ರೀರಾಮಕೃಷ್ಣರ ಭಾವವೇ ಬದಲಾಯಿತು. ಅವರ ವ್ಯಕ್ತಿತ್ವವೆಲ್ಲ ದೈನ್ಯವನ್ನು ಪ್ರತಿಬಿಂಬಿಸುವಂತಿತ್ತು.

"ಏನು ! ಹೆಸರು-ಕೀರ್ತಿ ? ನಾನೊಂದು ಕ್ಷುದ್ರ ಜಂತು. ಕ್ರಿಮಿಗಿಂತಲೂ ಕಡೆ. ಹೆಸರು ಕೀರ್ತಿಯ ಗೊಡವೆ ನನಗೇಕೆ ? ನಾನು ದೀನರಲ್ಲೂ ದೀನ."

ಶ್ರೀರಾಮಕೃಷ್ಣರ ಈ ಅದ್ಭುತ ದೈನ್ಯವನ್ನು ಕಂಡು ಸುಬೋಧ ಸ್ತಬ್ಧನಾದ.

ಅನಂತರ ಹುಡುಗರಿಗೆ ಸ್ವಲ್ಪ ಸಿಹಿತಿನಿಸು ಸಿಕ್ಕಿತು. ಅದನ್ನು ಸ್ವೀಕರಿಸಿ ಹೊರಟು ನಿಂತರು. ಮತ್ತೆ ಅವರು ನಡೆದುಕೊಂಡೇ ಹೋಗುತ್ತಾರೆಂದು ಗೊತ್ತಾದಾಗ ಶ್ರೀರಾಮ

ಕೃಷ್ಣರೆಂದರು: "ಅಷ್ಟು ದೂರ! ನೀವಿನ್ನೂ ಚಿಕ್ಕವರು. ದೋಣಿಯಲ್ಲೇ ಹೋಗಿ. ನಾನು ದುಡ್ಡು ಕೊಡುತ್ತೇನೆ."

ಸುಬೋಧ: "ದೋಣಿ ಬೇಡ. ನನಗೆ ಈಜು ಬರುವುದಿಲ್ಲ."

ದೋಣಿ ಮಗುಚಿಕೊಂಡರೇನು ಗತಿ ಎಂಬ ಚಿಂತೆ ಅವನಿಗೆ!

ಶ್ರೀರಾಮಕೃಷ್ಣರು: "ಹಾಗಾದರೆ ಗಾಡಿಯಲ್ಲಿ ಹೋಗಿ."

ಸುಬೋಧ: "ಬೇಡ ಬೇಡ. ಏನೂ ಕಷ್ಟವಿಲ್ಲ. ನಡೆದೇ ಹೋಗುತ್ತೇವೆ."

ಶ್ರೀರಾಮಕೃಷ್ಣರು ಮತ್ತೆ ಪುಸಲಾಯಿಸಿದರು. ಸುಬೋಧನದು ಒಂದು ಬಗೆಯ ನೇರವಾದ ಮಾತು. ಕೇಳಿದ:

"ನಮಗೆ ಕೊಡುವುದಕ್ಕೆ ನಿಮಗೆ ದುಡ್ಡು ಎಲ್ಲಿಂದ ಬರಬೇಕು?"

ಶ್ರೀರಾಮಕೃಷ್ಣರು ನಕ್ಕರು. "ನಿನಗ್ಯಾಕೆ ಆ ಚಿಂತೆ? ಎಷ್ಟೋ ಜನ ನನಗೆ ಕೊಡುವುದಕ್ಕೆ ಬರುತ್ತಾರೆ. ಈಗ ರಾಮಲಾಲನ ಕೈಯಲ್ಲಿ ಕೊಡಿಸುತ್ತೇನೆ."

ಕಡೆಗೂ ಸುಬೋಧ ಒಪ್ಪಲೇ ಇಲ್ಲ. ಅವನ ಸ್ಥಿರಬುದ್ಧಿ ಶ್ರೀರಾಮಕೃಷ್ಣರಿಗೆ ಮೆಚ್ಚುಗೆಯಾಯಿತು. "ಒಳ್ಳೇದಪ್ಪಾ. ಮಂಗಳವಾರ, ಶನಿವಾರಗಳಂದು ಇಲ್ಲಿಗೆ ಬರುತ್ತಿರಿ" ಎಂದು ಹೇಳಿ ಅವರನ್ನು ಕಳಿಸಿಕೊಟ್ಟರು.

ಮುಂದಿನ ಶನಿವಾರ ಶಾಲೆ ಬಿಟ್ಟೊಡನೆ ಸುಬೋಧ ತನ್ನ ಗೆಳೆಯನನ್ನು ಜೊತೆ ಮಾಡಿಕೊಂಡು ದಕ್ಷಿಣೇಶ್ವರಕ್ಕೆ ಓಡಿದ. ಈ ಹುಡುಗರಿಗೆ ಅಲ್ಲಿ ಅದೇನು ಆಕರ್ಷಣೆಯೋ! ಶ್ರೀರಾಮಕೃಷ್ಣರ ಕೋಣೆ ಜನರಿಂದ ತುಂಬಿಹೋಗಿತ್ತು. ಇಬ್ಬರೂ ಬಾಗಿಲಿನಿಂದ ಕುತ್ತಿಗೆ ಚಾಚಿ ಶ್ರೀರಾಮಕೃಷ್ಣರ ದರ್ಶನ ಪಡೆದು ನಮಸ್ಕರಿಸಿದರು. ಇವರನ್ನು ಕಂಡೊಡನೆ ಶ್ರೀರಾಮಕೃಷ್ಣರು ಕೈಯೆತ್ತಿ "ತಾಳಿ" ಎಂಬಂತೆ ಸನ್ನೆ ಮಾಡಿ ಕೋಣೆಯಲ್ಲಿದ್ದವರಿಗೆ ಕಾಯಲು ಹೇಳಿ ಹೊರಬಂದರು.

ಈಗ ಅವರು ಗಂಗಾಜಲದಿಂದ ತಮ್ಮ ಕೈತೊಳೆದುಕೊಂಡು, ಹುಡುಗರನ್ನು ಸ್ವಲ್ಪ ದೂರಕ್ಕೆ ಕರೆದುಕೊಂಡು ಬಂದರು. ಅವರಿಗೆ ಮೆಟ್ಟಿಲ ಮೇಲೆ ಕುಳಿತುಕೊಳ್ಳಲು ಹೇಳಿದರು. ಬಳಿಕ ಕ್ಷೀರೋದನ ನಾಲಿಗೆಯ ಮೇಲೆ ಏನನ್ನೋ ಬರೆದು, "ಏಳಮ್ಮಾ ಏಳು!" ಎನ್ನುತ್ತ ಅವನ ನಾಭಿಯಿಂದ ಕಂಠದವರೆಗೆ ಕೈಯಿಂದ ನೇವರಿಸಿದರು. ಆಮೇಲೆ ಸುಬೋಧನಿಗೂ ಹಾಗೆಯೇ ಮಾಡಿ ಧ್ಯಾನಕ್ಕೆ ಕಳಿಸಿದರು.

ಆ ಮಾಂತ್ರಿಕ ಸ್ಪರ್ಶ ಸುಬೋಧನ ಸುಪ್ತ ಆಧ್ಯಾತ್ಮಿಕತೆಯನ್ನು ಒಮ್ಮೆಗೇ ಭುಗಿಲೆಬ್ಬಿಸಿತು. ಧ್ಯಾನಕ್ಕೆ ಕುಳಿತ ಕ್ಷಣವೇ ಅವನ ಮೈಯೆಲ್ಲ ಕಂಪಿಸಿತು. ಯಾವುದೋ ಒಂದು ಶಕ್ತಿ ತನ್ನ ಬೆನ್ನಲುಬಿನ ಮೂಲಕ ಮೇಲ್ಮುಖವಾಗಿ ನುಗ್ಗುತ್ತಿರುವ ಅನುಭವ ಅವನಿಗಾಯಿತು. ಜೊತೆಗೆ ಒಳಹೊರಗೆಲ್ಲ ಅವರ್ಣನೀಯ ಆನಂದ! ತನ್ನೊಳಗೊಂದು ವಿಚಿತ್ರ ಬೆಳಕನ್ನೂ ಅದರಲ್ಲಿ ಹಲವಾರು ದೇವದೇವಿಯರ ರೂಪಗಳನ್ನೂ ಅವನು ಕಂಡ. ಹಾಗೆಯೇ ಧ್ಯಾನ ಗಾಢವಾಗುತ್ತ ಬಂದು, ಅವನಿಗೆ ತನ್ನ ಇರವಿನ ಅರಿವೇ ಇಲ್ಲದಾಯಿತು.

ಅವನು ಮತ್ತೆ ಇಹಲೋಕಕ್ಕೆ ಇಳಿದು ಬಂದಾಗ ಶ್ರೀರಾಮಕೃಷ್ಣರು ಅವನ ಎದೆಯನ್ನು ಕೆಳಮುಖವಾಗಿ ನೇವರಿಸುತ್ತಿದ್ದರು. ಅವನ ಧ್ಯಾನದ ತೀವ್ರತೆ ಅವರಿಗೇ ಆಶ್ಚರ್ಯ ತಂದಿತ್ತು. ತನಗೆ ಧ್ಯಾನದ ಅಭ್ಯಾಸ ಅಲ್ಪಸ್ವಲ್ಪ ಇದೆಯೆಂದು ಅವನು ಹೇಳಿದಾಗ, ಅದರ ಫಲವೇ ಈ ತೀವ್ರತೆ ಎಂದು ತಿಳಿಸಿದರು.

ಅನಂತರ ಅವರು "ಧ್ಯಾನದ ಸಮಯದಲ್ಲಿ ಏನಾದರೂ ವಿಶೇಷ ಅನುಭವವಾಯಿತೆ ?" ಎಂದು ಕ್ಷೀರೋದನನ್ನು ಕೇಳಿದರು. ಅವನು, "ಹಾಗೇನೂ ಆಗಲಿಲ್ಲ" ಎಂದಾಗ, "ಇರಲಿ ಇರಲಿ, ಮುಂದೆ ಎಲ್ಲವೂ ಆಗುತ್ತದೆ" ಎಂದರು.

ಈ ಅನುಭವವಾದ ಬಳಿಕ ಸುಬೋಧನಿಗೆ ಆಗಾಗ ಅವನ ಹುಬ್ಬುಗಳ ನಡುವೆ ಒಂದು ಜ್ಯೋತಿ ಕಾಣಲಾರಂಭವಾಯಿತು. ಈ ವಿಷಯ ತಿಳಿದಾಗ ಅವನ ತಾಯಿ ಆಶ್ಚರ್ಯಪಟ್ಟು, "ಅದನ್ನು ಯಾರ‍್ಯಾರ ಹತ್ತಿರವೋ ಹೇಳಿಬಿಡಬೇಡ, ಜೋಪಾನ !" ಎಂದು ಎಚ್ಚರಿಸಿದಳು. ಹಾಗಾಗುವುದು ನಿಂತುಹೋದೀತು ಎಂಬ ಶಂಕೆ ಅವಳದು. ಅದಕ್ಕೆ ಸುಬೋಧನೆಂದ, "ಅವ್ವಾ, ಅದರಿಂದೇನಾದೀತು ? ನನಗೆ ಬೇಕಾದ್ದು ಈ ಬೆಳಕಲ್ಲ, ಈ ಬೆಳಕಿನ ಹಿಂದಿನ ಶಕ್ತಿ."

ಹೀಗೆ, ತನ್ನ ಮನಸ್ಸಿಗೆ ಬಂದದ್ದನ್ನು ಯಾವುದೇ ಬದಲಾವಣೆ ಮಾಡದೆ ಹಾಗೆಯೇ ಹೇಳಿಬಿಡುವುದು ಸುಬೋಧನ ಹುಟ್ಟುಗುಣ. ಅವನು ತಮ್ಮಲ್ಲಿಗೆ ಅನೇಕ ಬಾರಿ ಬಂದುಹೋದ ಮೇಲೆ ಒಂದು ದಿನ ಶ್ರೀರಾಮಕೃಷ್ಣರು ಕೇಳಿದರು:

"ಏನಪ್ಪಾ, ನನ್ನ ಬಗ್ಗೆ ನಿನ್ನ ಅಭಿಪ್ರಾಯವೇನು ?"

ಎಷ್ಟೋ ಜನ ಅವರನ್ನು ಶ್ರೀಚೈತನ್ಯಾಂಶಸಂಭೂತರು, ಅವತಾರಪುರುಷರು, ಮಹಾತ್ಮರು ಎಂದು ಅನೇಕ ಬಗೆಯಾಗಿ ಬಣ್ಣಿಸುವುದನ್ನು ಅವನು ಕೇಳಿದ್ದ. ಆದರೂ ಅವನೀಗ ಮುಚ್ಚುಮರೆಯಿಲ್ಲದೆ ತನ್ನ ಸ್ವಂತ ಅಭಿಪ್ರಾಯವನ್ನೇ ಹೇಳಿದ: "ಮಹಾಶಯರೇ, ನಿಮ್ಮ ಬಗ್ಗೆ ಜನ ಎಷ್ಟೆಷ್ಟೋ ರೀತಿಯಲ್ಲಿ ಹೇಳುವುದನ್ನು ಕೇಳಿದ್ದೇನೆ. ಆದರೆ ಸ್ಪಷ್ಟವಾದ ರುಜುವಾತು ಸಿಕ್ಕಿದ ಹೊರತು ನಾನು ಏನನ್ನೂ ನಂಬಲಾರೆ." ಶ್ರೀರಾಮಕೃಷ್ಣರು ನಕ್ಕು ಅವನ ಮಾತನ್ನು ಅನುಮೋದಿಸಿದರು.

ಆದರೆ ದಿನ ಕಳೆದಂತೆ ಅವನಿಗೆ, ಅವರ ಕೃಪಾಬಲದಲ್ಲಿ ಅಪಾರ ವಿಶ್ವಾಸ ಮೂಡಿತು. ಆದ್ದರಿಂದ ಒಂದು ದಿನ ಶ್ರೀರಾಮಕೃಷ್ಣರು, "ನೋಡು, ನೀನು ಚೆನ್ನಾಗಿ ಜಪಧ್ಯಾನ ಮಾಡಬೇಕು" ಎಂದಾಗ ಅವನೆನ್ನುತ್ತಾನೆ: "ನನಗವೆಲ್ಲ ಸಾಧ್ಯವಿಲ್ಲ. ಅವನ್ನೆಲ್ಲ ಮಾಡಬೇಕು ಎನ್ನುವುದಾದರೆ ಇಲ್ಲಿಗೇಕೆ ಬರುತ್ತಿದ್ದೆ ? ಬದಲಾಗಿ ಬೇರೆ ಯಾರಾದರೂ ಗುರುವನ್ನು ಹುಡುಕಿಕೊಳ್ಳುತ್ತಿದ್ದೆ !" ಅವನ ಭಾವನೆಯ ಆಳವನ್ನು ಕಂಡು ಶ್ರೀರಾಮಕೃಷ್ಣರು ನಕ್ಕು, "ಆಗಲಿ, ಒಪ್ಪಿದೆ ನಿನ್ನ ಮಾತನ್ನು !" ಎಂದರು.

ಆದರೆ ತನಗೆ ಧ್ಯಾನ ಮಾಡಲು ಮನಸ್ಸಿಲ್ಲವೆಂಬುದು ಸುಬೋಧನ ಮಾತಿನ ಅರ್ಥವಲ್ಲ; ನಿಜಕ್ಕೂ ಅವನ ಜೀವನವೇ ಸಾಧನೆ-ಶ್ರದ್ಧೆಗಳಿಂದ ತುಂಬಿತ್ತು. ಆ ಮಾತು, ಶ್ರೀರಾಮಕೃಷ್ಣರಲ್ಲಿ ಅವನಿಗಿದ್ದ ಶ್ರದ್ಧೆಯ ಆಳಕ್ಕೆ ಸಾಕ್ಷಿ ಅಷ್ಟೆ.

ಸುಬೋಧನ ಮಾತಿನ ರೀತಿ ಮತ್ತೊಮ್ಮೆ ಒಂದು ಕುತೂಹಲಕರ ಸನ್ನಿವೇಶಕ್ಕೆ ಎಡೆಮಾಡಿಕೊಟ್ಟಿತು. ಅವನ ಮನೆಯಿದ್ದುದು ಮಹೇಂದ್ರನಾಥ ಗುಪ್ತನ ಮನೆಯ ಹತ್ತಿರವೇ. ಮಹೇಂದ್ರ ಆದಾಗಲೇ ತಮ್ಮನ್ನು ಚೆನ್ನಾಗಿ ಅರ್ಥ ಮಾಡಿಕೊಂಡವನಾದ್ದರಿಂದ, ಒಮ್ಮೆ ಶ್ರೀರಾಮಕೃಷ್ಣರು ಸುಬೋಧನನ್ನು ಕರೆದು, "ನೀನು ಆಗಾಗ ಮಾಸ್ಟರನ ಮನೆಗೆ ಹೋಗುತ್ತಿರು" ಎಂದು ಸಲಹೆ ಕೊಟ್ಟರು. ಅದಕ್ಕೆ ಸುಬೋಧನೆಂದ: "ಅಲ್ಲಾ, ಮಹಾಶಯರೆ, ಆ ಮಾಸ್ಟರು ತಾವೇ ಸಂಸಾರಬಂಧನದಿಂದ ಬಿಡಿಸಿಕೊಳ್ಳಲಾಗದೆ ಇದ್ದಾರೆ. ಇನ್ನು ಅವರ ಹತ್ತಿರ ದೇವರ ವಿಷಯವಾಗಿ ನಾನೇನು ತಿಳಿದುಕೊಳ್ಳಲಿ ?"

ಪ್ರಖರ ವೈರಾಗ್ಯಸೂಚಕವಾದ ಈ ಮಾತು ಶ್ರೀರಾಮಕೃಷ್ಣರಿಗೆ ಖುಷಿ ಕೊಟ್ಟಿತು.

ಅವರೆಂದರು, "ಇಲ್ಲಪ್ಪಾ, ಅವನು ಸ್ವಂತ ಉಪದೇಶವನ್ನೇನೂ ಕೊಡುವುದಿಲ್ಲ. ಇಲ್ಲಿಂದ ಏನು ಕಲಿತುಕೊಂಡಿದ್ದಾನೋ ಅದನ್ನು ಮಾತ್ರವೇ ಹೇಳುತ್ತಾನೆ. ಏನೂ ಯೋಚಿಸಬೇಡ, ಹೋಗು."

ಸರಿ, ಒಂದು ದಿನ ಅವನು ಮಹೇಂದ್ರನ ಮನೆಗೆ ಹೋದ. ಮತ್ತು ಶ್ರೀರಾಮ ಕೃಷ್ಣರೊಡನೆ ತಾನೆಂದುದನ್ನೂ ಹಾಗೆಯೇ ಹೇಳಿದ. ಹುಡುಗನ ಋಜುತನವನ್ನು ಕಂಡು ಮಹೇಂದ್ರ ಬಹಳ ಸಂತೋಷಪಟ್ಟು ನುಡಿದ:

"ಮಗು, ನಾನೊಬ್ಬ ಯಃಕಶ್ಚಿತ್ ಮನುಷ್ಯ. ನನ್ನದೆನ್ನುವುದು ನನ್ನ ಬಳಿ ಏನೂ ಇಲ್ಲ. ಆದರೆ ನಾನು ಅಮೃತಸಾಗರದ ತೀರದಲ್ಲಿ ವಾಸಿಸುತ್ತೇನೆ; ಆ ನೀರನ್ನೇ ಒಂದೆರಡು ಕುಡಿಕೆಗಳಲ್ಲಿ ತುಂಬಿಸಿಟ್ಟುಕೊಂಡಿರುತ್ತೇನೆ. ಯಾರಾದರೂ ಅತಿಥಿಗಳು ಬಂದರೆ ಆ ಸಾಗರಜಲದಿಂದಲೇ ಅವರನ್ನು ಸತ್ಕರಿಸುತ್ತೇನೆ, ಅಷ್ಟೆ. ನಾನು ಬೇರೇನನ್ನು ತಾನೆ ಹೇಳಬಲ್ಲೆನಪ್ಪ ?"

ಮಹೇಂದ್ರನ ವಿನಯ ಸುಬೋಧನಿಗೆ ಇಷ್ಟವಾಯಿತು. ಅಂದಿನಿಂದ ಆಗಾಗ ಅವನ ಮನೆಗೆ ಬಂದು, ಅವನಿಂದ ಶ್ರೀರಾಮಕೃಷ್ಣರ ವಿಚಾರವನ್ನು ಕೇಳತೊಡಗಿದ.

## ಭಕ್ತಿಗೆ ಮಣಿದ ತರ್ಕಚೂಡಾಮಣಿ



ಪಂಡಿತ ಶಶಧರ ತರ್ಕಚೂಡಾಮಣಿ* ಎಂಬವನು ಆ ದಿನಗಳಲ್ಲಿ ತನ್ನ ವಿದ್ವತ್ತಿನಿಂದಲೂ ವಾಕ್ಪಟುತ್ವದಿಂದಲೂ ದೊಡ್ಡ ಹೆಸರು ಗಳಿಸಿದ್ದ ಧರ್ಮಬೋಧಕ ಮತ್ತು ಹೆಸರಾಂತ ಸಂಸ್ಕೃತ ಭಾಷಾ ವಿದ್ವಾಂಸ. ಸಾಂಪ್ರದಾಯಿಕ ಹಿಂದೂಧರ್ಮದ ನಿಷ್ಠಾವಂತ ಪ್ರತಿಪಾದಕ. ಆತನ ಮಾತಿನಲ್ಲಿ ಪ್ರಾಮಾಣಿಕತೆ ಎದ್ದು ಕಾಣುತ್ತಿತ್ತು. ೧೮೮೪ರಲ್ಲಿ ಆತ ಕಲ್ಕತ್ತಕ್ಕೆ ಬಂದಿದ್ದ. ಅವನ ಭಾಷಣವೆಂದರೆ ಸರಿ, ಸಭಾಂಗಣಗಳು ತುಂಬಿ ಹೋಗುತ್ತಿದ್ದುವು. 'ಸನಾತನ ಧರ್ಮವೆಂಬುದು, ಮೌಢ್ಯ–ಗೊಡ್ಡು ಸಂಪ್ರದಾಯಗಳ ಕಂತೆ' ಎಂಬ ನಂಬಿಕೆ ಎಲ್ಲೆಲ್ಲೂ ಬೇರೂರಿದ್ದ ಕಾಲ ಅದು. ಆದರೆ ಯಾವುದೇ ವಿಷಯವಾಗಲಿ—ಅದು ವಿಜ್ಞಾನವಾಗಬಹುದು, ಧರ್ಮಾಚರಣೆಯಾಗಬಹುದು ಅಥವಾ ಮತ್ತೊಂದು ಮೂಢನಂಬಿಕೆಯೇ ಆಗಬಹುದು—ಬಿಳಿಚರ್ಮದವರು ಸೈ ಅನ್ನುವುದಾದರೆ ಅದಕ್ಕೆ ತಮ್ಮದೂ ಒಪ್ಪಿಗೆಯೇ ಎನ್ನುತ್ತಿದ್ದವರು ಆ ಕಾಲದ 'ವಿದ್ಯಾವಂತರು'. ಈ ಹಿನ್ನೆಲೆಯಲ್ಲಿ ಪಂಡಿತ ಶಶಧರನ ಪ್ರವಚನಗಳು ಬಹಳಷ್ಟು ಜನಪ್ರಿಯತೆ ಗಳಿಸಿದ್ದುವು. ಆತ ಹಿಂದೂಧರ್ಮವನ್ನು 'ವೈಜ್ಞಾನಿಕ'ವಾಗಿ ಅರ್ಥೈಸಿ ಸಮರ್ಥಿಸುತ್ತಿದ್ದ. ಹಿಂದೂ ಸಂಪ್ರದಾಯಗಳನ್ನೂ ಪೂಜೆ-ಸಂಧ್ಯಾವಿಧಿಗಳನ್ನೂ ಪಾಶ್ಚಾತ್ಯ ದೃಷ್ಟಿಕೋನದಿಂದ ವಿಶ್ಲೇಷಿಸಿ, ಅವು ಹೇಗೆ ಸುಸಂಬದ್ಧವಾದವು, ಅವು ಹೇಗೆ ರೂಢಿಗೆ ಬಂದುವು ಎಂಬುದನ್ನೆಲ್ಲ ವಿವರಿಸುತ್ತಿದ್ದ; ಅವುಗಳಿಗೆ ತಾತ್ವಿಕ ನೆಲೆಗಟ್ಟನ್ನು ಒದಗಿಸುತ್ತಿದ್ದ. ಅವನು ವ್ಯಕ್ತಪಡಿಸುತ್ತಿದ್ದುದೆಲ್ಲ ತನ್ನ ವೈಯಕ್ತಿಕ ಅಭಿಪ್ರಾಯಗಳನ್ನಷ್ಟೆ; ಅವೇ ಅಂತಿಮವೆಂದೇನೂ ಅಲ್ಲ. ಆದರೂ ಜನಸಂದಣಿಗೇನೂ ಕೊರತೆಯಿರಲಿಲ್ಲ. ಕಲ್ಕತ್ತದ 'ಆಲ್ಬರ್ಟ್ ಹಾಲ್' ಎಂಬ ಸಭಾಂಗಣದಲ್ಲಿ ಆತ ಉಜ್ವಲವಾಗಿ ಭಾಷಣ ಮಾಡುತ್ತಿದ್ದರೆ, ಸಂಜೆ ಮನೆಗೆ ಹಿಂದಿರುಗುತ್ತಿದ್ದ ಗುಮಾಸ್ತೆಗಳು, ಸ್ಕೂಲು–ಕಾಲೇಜಿನ ವಿದ್ಯಾರ್ಥಿಗಳು ಎಲ್ಲರೂ ಅಲ್ಲಿ ಮುತ್ತಿಕೊಂಡು ನಿಶ್ಶಬ್ದವಾಗಿ ಆಲಿಸುತ್ತಿದ್ದರು. ಅವನದು ಎಂಥ ಭವ್ಯ ವ್ಯಕ್ತಿತ್ವ! ಆ ಪಾಂಡಿತ್ಯಕ್ಕೆ ಭೂಷಣಪ್ರಾಯವಾದ, ಆಗತಾನೆ ನರೆಯುತ್ತಿದ್ದ, ಉದ್ದನೆಯ ಕಪ್ಪು ಗಡ್ಡ; ಕೊರಳಲ್ಲಿ ದಪ್ಪ ಮಣಿಗಳುಳ್ಳ ರುದ್ರಾಕ್ಷಿ ಮಾಲೆ. ಆ ಮಹಾ ವಿದ್ವಾಂಸನ ಅದ್ಭುತ ವಾಕ್ಝರಣಿಯಲ್ಲಿ ಒಂದೆರಡು ತುಣುಕನ್ನಾದರೂ ಕೇಳಿಸಿಕೊಳ್ಳಬೇಕೆಂಬ ತವಕ ಎಲ್ಲರಿಗೂ. ಅದಾಗಲೇ ಶ್ರೀರಾಮಕೃಷ್ಣರ ಬಳಿಗೆ ಬರಲಾರಂಭಿಸಿದ್ದ ಶರಚ್ಚಂದ್ರನೇ ಮೊದಲಾದ ತರುಣರು ಕೂಡ ಒಂದು ದಿನ ಆ ಸಭೆಗೆ ನುಗ್ಗಿ, ಮಹಾ ಕಷ್ಟದಿಂದ ಒಮ್ಮೆ ಆತನ ಮುಖಾವಲೋಕನ ಮಾಡಿ ನಾಲ್ಕು ಮಾತುಗಳನ್ನು ಕೇಳಿದ್ದರಂತೆ.

ಪಂಡಿತ ಶಶಧರನ ಹೆಸರು ಶ್ರೀರಾಮಕೃಷ್ಣರ ಕಿವಿಗೆ ಬೀಳಲು ತಡವಾಗಲಿಲ್ಲ. ಹಾಗೆಯೇ ದಕ್ಷಿಣೇಶ್ವರದ ಪರಮಹಂಸರ ವಿಚಾರವೂ ಶಶಧರನನ್ನು ಮುಟ್ಟಿತು.

* 'ಶಶ' ಎಂದರೆ ಮೊಲ. ಶಶಧರನೆಂದರೆ ಚಂದ್ರ ಎಂದರ್ಥ (ಶಶಿ ಅಥವಾ ಶಶಾಂಕ ಎನ್ನುವಂತೆ). ಈ 'ಶಶಿ'ಯನ್ನು ಶಿರದಲ್ಲಿ ಧರಿಸಿರುವವನು 'ಶಶಿಧರ' ಅರ್ಥಾತ್ ಶಿವ.

ಕೆಲವು ಭಕ್ತರು ಬಂದು ಶ್ರೀರಾಮಕೃಷ್ಣರ ಬಳಿ ಹೇಳಿದರು: "ಮಹಾಶಯರೇ! ಅವರು ಮಹಾಪಂಡಿತರು. ಬಹಳ ಚೆನ್ನಾಗಿ ವ್ಯಾಖ್ಯಾನ ಮಾಡುತ್ತಾರೆ. ಆ ದಿನ ಅವರು ಮುವ್ವತ್ತೆರಡು ಅಕ್ಷರಗಳಿಂದ ಕೂಡಿದ ಒಂದು ಹರಿಸ್ತುತಿಯನ್ನು ದೇವಿಗೆ ಅನ್ವಯಿಸುವಂತೆ ವಿವರಿಸಿದರು. ಅದನ್ನು ಕೇಳಿ ಜನರೆಲ್ಲ 'ಭಲೆ ಭಲೆ, ಶಹಬಾಸ್' ಎಂದರು." ಈ ಬಣ್ಣನೆಗಳಿಂದ ಶ್ರೀರಾಮಕೃಷ್ಣರು ಬಹಳ ಕುತೂಹಲಗೊಂಡು, "ಓಹೋ! ಹಾಗೇನು! ನಾನೂ ಒಂದು ಸಲ ಆತನ ವ್ಯಾಖ್ಯಾನವನ್ನು ಕೇಳಬೇಕು ಅಂತ ತುಂಬ ಆಸೆಯಾಗುತ್ತಿದೆ" ಎಂದರು.

ಶ್ರೀರಾಮಕೃಷ್ಣರ ಇಚ್ಛೆ ಕೈಗೂಡಲು ಹೆಚ್ಚು ದಿನ ಬೇಕಾಗಲಿಲ್ಲ. ಪಂಡಿತನ ಪರಿಚಯಸ್ಥರೊಬ್ಬರ ಮನೆಯಲ್ಲಿ ಜೂನ್ ೨೫ ರಂದು ಪರಸ್ಪರ ಸಂದರ್ಶನಕ್ಕೆ ವ್ಯವಸ್ಥೆಯಾಯಿತು. ಆದರೆ ಶ್ರೀರಾಮಕೃಷ್ಣರು ಬಾಲಕನಂತೆ ಆತಂಕಗೊಂಡು ಚಡಪಡಿಸುತ್ತಿದ್ದರು. 'ಶಶಧರ ದೊಡ್ಡ ಪಂಡಿತ, ನಾನಾದರೋ ಓದು ಬರಹವಿಲ್ಲದ ದಡ್ಡ'— ಇದು ಅವರ ಭಾವನೆ! ಆದ್ದರಿಂದ ಬುದ್ಧಿವಂತರಾದ ತಮ್ಮ ಆತ್ಮೀಯರು ಜೊತೆಯಲ್ಲಿದ್ದರೆ ಲೇಸು ಎಂದು ಆಲೋಚಿಸಿ, "ನೀನೂ ಬಾ" ಎಂದು ಅನೇಕ ಶಿಷ್ಯರನ್ನು ಕರೆದಿದ್ದರು! ನರೇಂದ್ರ, ರಾಖಾಲ, ಮಹೇಂದ್ರ, ಹಾಜರಾ, ರಾಮಚಂದ್ರದತ್ತ ಮೊದಲಾದ ಅನೇಕರು ಜೊತೆಯಲ್ಲಿ ಹೊರಟರು. ಗಾಡಿ ಹತ್ತಿದೊಡನೆ ಇದ್ದಕ್ಕಿದ್ದಂತೆ ಸಮಾಧಿಸ್ಥರಾದ ಶ್ರೀರಾಮಕೃಷ್ಣರು, ತುಸು ಹೊತ್ತಿನಲ್ಲೇ ಪ್ರಕೃತಿಸ್ಥರಾದರು.

ಎಲ್ಲರನ್ನೂ ಆದರದಿಂದ ಮನೆಯೊಳಕ್ಕೆ ಕರೆತರಲಾಯಿತು. ಪಂಡಿತನು ಶ್ರೀರಾಮಕೃಷ್ಣರಿಗೆ ಭಕ್ತಿ-ವಿನಯಗಳಿಂದ ಪ್ರಣಮಿಸಿದ.

ಶ್ರೀರಾಮಕೃಷ್ಣರು ಶಶಧರನನ್ನು ನೋಡುತ್ತಲೇ ಮತ್ತೆ ಸಮಾಧಿಸ್ಥರಾದರು. ಸ್ವಲ್ಪ ಹೊತ್ತಿಗೆ ಭಾಗಶಃ ಪ್ರಜ್ಞೆ ಮರಳಿತು. ಮುಗುಳ್ನಗುತ್ತ ಅವನನ್ನು ನೋಡಿ, "ಭೇಷ್ ಭೇಷ್" ಎಂದು ತಮ್ಮಷ್ಟಕ್ಕೇ ಹೇಳಿಕೊಂಡರು. ಆತನ ಅಂತಸ್ಸತ್ವವನ್ನು ಕಂಡುಕೊಂಡು ಅವರು ಬಹಳ ಸಂತುಷ್ಟರಾಗಿಬಿಟ್ಟಿದ್ದರು.

ಶ್ರೀರಾಮಕೃಷ್ಣರು: "ನೀನು ಬಹಳ ಸೊಗಸಾಗಿ ಉಪನ್ಯಾಸ ಮಾಡುತ್ತೀ ಅಂತ ಕೇಳಿದ್ದೇನೆ. ತುಂಬ ಸಂತೋಷ. ಒಳ್ಳೇದು, ನೀನು ಯಾವ ವಿಷಯವಾಗಿ ಉಪನ್ಯಾಸ ಕೊಡುವುದು?"

ಪಂಡಿತ: "ಮಹಾಶಯರೇ, ನಾನು ಜನರಿಗೆ ಶಾಸ್ತ್ರಗಳ ಬೋಧನೆಗಳನ್ನು ತಿಳಿಸಿಕೊಡುವ ಪ್ರಯತ್ನ ಮಾಡುತ್ತೇನೆ."

ಶ್ರೀರಾಮಕೃಷ್ಣರು ಆ ಶಾಸ್ತ್ರಗಳ ಸಾರಸರ್ವಸ್ವವನ್ನೇ ಕುಡಿದು ರಕ್ತಗತ ಮಾಡಿಕೊಂಡವರು. ಆದರೆ ಅವುಗಳನ್ನೆಲ್ಲ ವಿವರವಾಗಿ ತಿಳಿದುಕೊಳ್ಳುವುದಕ್ಕಾಗಲಿ, ಅನುಷ್ಠಿಸುವುದಕ್ಕಾಗಲಿ ಜನಕೋಟಿಗೆ ಸಮಯವಿಲ್ಲ ಎಂಬುದನ್ನು ಚೆನ್ನಾಗಿ ಬಲ್ಲವರು ಅವರು. ಅದನ್ನೇ ಈಗ ಅವರು ಪಂಡಿತನಿಗೆ ಮನಮುಟ್ಟುವ ಸಾಮತಿಯೊಂದಿಗೆ ತಿಳಿಸುತ್ತಾರೆ:

"ನೋಡು, ಕಲಿಯುಗಕ್ಕೆ ಏನಿದ್ದರೂ ನಾರದೀಯ ಭಕ್ತಿಮಾರ್ಗ. ಶಾಸ್ತ್ರಗಳಲ್ಲಿ ಕರ್ಮಗಳ ವಿಷಯವಾಗಿ ಹೇಳಿದೆಯಲ್ಲ, ಅದನ್ನೆಲ್ಲ ಮಾಡಲು ಈಗ ಜನರಿಗೆ ಸಮಯವೆಲ್ಲಿದೆ? ಈಗಿನ ಕಾಲದಲ್ಲಿ ಜ್ವರಕ್ಕೆ ದಶಮೂಲಿಕೆಗಳ ಕಷಾಯ ಸರಿಹೋಗದು. ಆ ಕಷಾಯದಿಂದ ರೋಗಿಯನ್ನು ಗುಣಪಡಿಸಲು ಪ್ರಯತ್ನಪಟ್ಟರೆ ಆತ

ಬದುಕುವುದೇ ಕಷ್ಟವಾಗಿಬಿಡುತ್ತವೆ. ಈಗಿನ ಕಾಲಕ್ಕೆ 'ಫೀವರ್ ಮಿಕ್ಚರ್' *. ಜನರಿಗೆ ಕರ್ಮ ಮಾಡುವಂತೆ ಹೇಳಬೇಕಾಗಿದ್ದರೆ, ಶಾಸ್ತ್ರಗಳ ಅಮುಖ್ಯ ಭಾಗವನ್ನು ಬೇರ್ಪಡಿಸಿ, ಮುಖ್ಯವಾದುದರ ಸಂಬಂಧವಾಗಿ ಮಾತ್ರ ತಿಳಿಸಬೇಕು. ನಾನು ಜನರಿಗೆ ಹೇಳುತ್ತೇನೆ: 'ನೀವು ಸಂಧ್ಯಾವಂದನೆಯನ್ನು "ಅಪವಿತ್ರಃ ಪವಿತ್ರೋ ವಾ" ದಿಂದ ಹಿಡಿದು "ಅಹಂ ಭೋ ಅಭಿವಾದಯೇ" ಎನ್ನುವವರೆಗೂ ಮಾಡಬೇಕಾದ ಆವಶ್ಯಕತೆ ಯೇನಿಲ್ಲ. ಸುಮ್ಮನೆ ಗಾಯತ್ರಿಯನ್ನು ಜಪಿಸಿದರೇ ಬೇಕಾದಷ್ಟಾಯಿತು' ಅಂತ."

"ನೀನು ಸಾವಿರ ಉಪನ್ಯಾಸಗಳನ್ನು ಬೇಕಾದರೂ ಕೊಡು, ಪ್ರಾಪಂಚಿಕರನ್ನು ಕಿಂಚಿತ್ತೂ ಬದಲಾಯಿಸಲಾರೆ. ಕಲ್ಲಿನ ಗೋಡೆಗೆ ಮೊಳೆ ಹೊಡೆಯಲಾಗುವುದೆ! ಮೊಳೆ ಮೊಂಡಾಗಿಹೋಗುವುದೇ ವಿನಾ ಗೋಡೆಗೆ ಏನೂ ಆಗದು. ಮೊಸಳೆಗೆ ಕತ್ತಿಯ ಏಟು ಕೊಟ್ಟರೆ ಏನಾದರೂ ಆಗುತ್ತದೆಯೆ ? ಸಾಧುವಿನ ಕಮಂಡಲು—ಸೋರೆಕಾಯಿ ಯದು—ಚತುರ್ಧಾಮಗಳಿಗೂ ಹೋಗಿಬರುತ್ತದೆ. ಕೊನೆಗೂ ಅದು, ಹಿಂದೆ ಹೇಗೆ ಕಹಿಯಾಗಿತ್ತೋ ಹಾಗೆಯೇ ಇರುತ್ತದೆ. ನಿನ್ನ ಉಪನ್ಯಾಸ ಪ್ರಾಪಂಚಿಕರಿಗೆ ಹೆಚ್ಚಾಗೇನೂ ಉಪಕಾರ ಮಾಡುವುದಿಲ್ಲ. ಕ್ರಮೇಣ ಇದು ನಿನಗೇ ಗೊತ್ತಾಗುತ್ತದೆ.

"ಎಳೆಯ ಕರು ಒಮ್ಮೆಗೇ ಎದ್ದುನಿಲ್ಲಲಾರದು. ಆಗಾಗ ಕೆಳಕ್ಕೆ ಬೀಳುತ್ತದೆ, ಮತ್ತೆ ಏಳುತ್ತದೆ. ಅದು ಹಾಗೆ ಮಾಡಿಮಾಡಿಯೇ ಎದ್ದು ನಿಲ್ಲಲೂ ನಡೆಯಲೂ ಕಲಿತುಕೊಳ್ಳುತ್ತದೆ."

ಶ್ರೀರಾಮಕೃಷ್ಣರ ಶ್ರೀಮುಖದಿಂದ ಅಮೂಲ್ಯವಾದ ಮಾತುಗಳು ನಿರರ್ಗಳ ವಾಗಿ, ಅಪ್ರಯತ್ನವಾಗಿ ಹೊರಹೊಮ್ಮಲಾರಂಭಿಸಿವೆ ! ಪಂಡಿತ ಶಶಧರ ಮಂತ್ರಮುಗ್ಧ ನಾದವನಂತೆ, ಮರುಮಾತಿಲ್ಲದೆ ಅವುಗಳನ್ನು ಕೇಳುತ್ತ ಕುಳಿತುಬಿಟ್ಟಿದ್ದಾನೆ.

ಶ್ರೀರಾಮಕೃಷ್ಣರು ತಮ್ಮ ಮಾತನ್ನು ಮುಂದುವರಿಸಿದರು:

"ಭಗವಂತನ ಸಾಕ್ಷಾತ್ಕಾರವಾಗುವವರೆಗೆ ಯಾರೂ ಕರ್ಮಗಳನ್ನು ತ್ಯಜಿಸಲು ಸಾಧ್ಯವಾಗುವುದಿಲ್ಲ. ಸಂಧ್ಯಾದಿ ಕರ್ಮಗಳನ್ನು ಎಲ್ಲಿಯವರೆಗೆ ಮಾಡಬೇಕಾಗುತ್ತದೆ ? ಎಲ್ಲಿಯವರೆಗೆ ಭಗವಂತನ ಹೆಸರನ್ನು ಕೇಳಿದೊಡನೆಯೇ ಪ್ರೇಮಾಶ್ರು ಸುರಿಯುವು ದಿಲ್ಲವೋ, ರೋಮಾಂಚವಾಗುವುದಿಲ್ಲವೋ ಅಲ್ಲಿಯವರೆಗೆ ಮಾತ್ರ.

"ಕ್ರಮೇಣ ಸಂಧ್ಯೆ ಗಾಯತ್ರಿಯಲ್ಲಿಯೂ, ಗಾಯತ್ರಿ ಪ್ರಣವ(ಓಂಕಾರ) ದಲ್ಲಿಯೂ, ಪ್ರಣವ ಸಮಾಧಿಯಲ್ಲಿಯೂ ಲಯ ಹೊಂದುತ್ತದೆ. ಇದು ಗಂಟೆಯ ಶಬ್ದದ ಹಾಗೆ—ಟ. . .ಆ. . .ಮ್ ಮ್ ಮ್. ಯೋಗಿಯು ನಾದಬ್ರಹ್ಮನನ್ನು (ಓಂಕಾರ ವನ್ನು) ಅನುಸರಿಸಿ ಪರಬ್ರಹ್ಮನಲ್ಲಿ ಲಯವಾಗುತ್ತಾನೆ. ಜ್ಞಾನಿಯ ಸಂಧ್ಯಾದಿ ಕರ್ಮ ಗಳು ಸಮಾಧಿಯಲ್ಲಿ ಲಯವಾಗಿಬಿಡುತ್ತವೆ. ಈ ರೀತಿಯಾಗಿ ಜ್ಞಾನಿಗಳ ಕರ್ಮಗಳು ಕೊನೆಗಾಣುತ್ತವೆ."

ಶ್ರೀರಾಮಕೃಷ್ಣರು ಸಮಾಧಿಯ ಸಂಬಂಧವಾಗಿ ಮಾತನಾಡುತ್ತ ಮಾತನಾಡುತ್ತ ತಾವೇ ಆ ಸ್ಥಿತಿಗೆ ಹೋಗಿಬಿಟ್ಟರು. ಅವರ ಮುಖ ಅಲೌಕಿಕ ಜ್ಯೋತಿಯನ್ನು ಚೆಲ್ಲ ಲಾರಂಭಿಸಿತು. ಬಾಹ್ಯಜ್ಞಾನಶೂನ್ಯರಾಗಿಬಿಟ್ಟರು. ಬಹಳ ಹೊತ್ತು ಆ ಅವಸ್ಥೆಯಲ್ಲಿಯೇ

*ಇದು ಶ್ರೀರಾಮಕೃಷ್ಣರ ಇಂಗ್ಲಿಷ್ ಶಬ್ದಭಂಡಾರದ ಕೆಲವೇ ಪದಗಳಲ್ಲೊಂದು – 'fever-mixture'.

ಇದ್ದು, ಕ್ರಮೇಣ ಪ್ರಕೃತಿಸ್ಥರಾಗುತ್ತ, ಬಾಲಕನಂತೆ "ನೀರು ಕುಡಿಯಬೇಕು, ನೀರು ಕುಡಿಯಬೇಕು..." ಎಂದರು.

ಮತ್ತೆ ಪಂಡಿತ ಶಶಧರನ ಕಡೆಗೆ ನೋಡಿ ತುಂಬ ಆತ್ಮೀಯತೆಯಿಂದ ಹೇಳುತ್ತಿದ್ದಾರೆ: "ಏನಯ್ಯ! ನೀನು ಇನ್ನೂ ಸ್ವಲ್ಪ ಬಲಾಢ್ಯನಾಗು; ಇನ್ನೂ ಸ್ವಲ್ಪ ಕಾಲ ಸಾಧನೆ-ಭಜನೆ ಮಾಡು. ಮರದ ಬುಡಕ್ಕೆ ಕಾಲು ಹಾಕುವುದೇ ತಡ, ಆಗಲೇ ಹಣ್ಣಿನ ಗೊಂಚಲ ಕಡೆ ಕೈ ಚಾಚುತ್ತೀಯಲ್ಲ! ಆದರೆ ನೀನು ಜನರ ಶ್ರೇಯಸ್ಸಿಗಾಗಿ ಇವನ್ನೆಲ್ಲ ಮಾಡುತ್ತಿದ್ದೀಯೆ, ಅದು ಒಳ್ಳೆಯದು." ಹೀಗೆಂದ ಶ್ರೀರಾಮಕೃಷ್ಣರು ತಮ್ಮ ತಲೆಬಾಗಿ ಅವನಿಗೆ ನಮಸ್ಕಾರ ಮಾಡಿದರು. ಬಳಿಕ ನುಡಿದರು:

"ಮೊದಲು ನಿನ್ನ ವಿಷಯ ತಿಳಿದಾಗ ವಿಚಾರಿಸಿದೆ—ನೀನೊಬ್ಬ ಬರೀ ಪಂಡಿತನೋ ಅಥವಾ ವಿವೇಕ ವೈರಾಗ್ಯಗಳೂ ಇವೆಯೋ ಅಂತ. ಸದಸತ್ ವಿವೇಕವಿಲ್ಲದವನು ಪಂಡಿತನೇ ಅಲ್ಲ.

"ಭಗವಂತನಿಂದ ಆದೇಶ ದೊರೆತಿದ್ದರೆ, ಆಗ ಲೋಕಶಿಕ್ಷಣ ಮಾಡುವುದರಲ್ಲಿ ತಪ್ಪೇನಿಲ್ಲ. ಆದೇಶ ಪಡೆದು ಲೋಕಶಿಕ್ಷಣ ಮಾಡಿದರೆ, ಆತನನ್ನು ಯಾರೂ ಸೋಲಿಸಲಾರರು. ವಾಗ್ದೇವಿಯ ಒಂದು ಕಿರಣ ಮಾತ್ರ ಬಿದ್ದರೂ ಸಾಕು, ವ್ಯಕ್ತಿಗೆ ಎಂಥ ಶಕ್ತಿ ಬಂದುಬಿಡುತ್ತದೆ ಎಂದರೆ, ಆತನೆದುರು ದೊಡ್ಡದೊಡ್ಡ ಪಂಡಿತರೆಲ್ಲ ಎರೆಹುಳುವಿನಂತಾಗಿಬಿಡುತ್ತಾರೆ.

"ಭಗವತಿಯ ಕಟಾಕ್ಷ ಒಮ್ಮೆ ದೊರೆತುದೇ ಆದರೆ, ಮತ್ತೆ ಜ್ಞಾನಾಭಾವವಿರುವುದೆ? ಇದಕ್ಕಾಗಿಯೇ ನಿನ್ನನ್ನು ಕೇಳುತ್ತಿದ್ದೇನೆ, ನಿನಗೇನಾದರೂ ಆದೇಶ ದೊರೆತಿದೆಯೋ ಅಂತ.".

ಹಾಜರಾ: "ಹೌದು, ಖಂಡಿತವಾಗಿಯೂ ದೊರೆತಿರಬೇಕು. (ಶಶಧರನಿಗೆ) ಏನು ಮಹಾಶಯರೇ, ನಾನು ಹೇಳುವುದು ಸರಿತಾನೆ?"

ಶಶಧರ: "ಆದೇಶವೆ?... ಇಲ್ಲ, ಅಂಥದೇನೂ ದೊರೆತಿಲ್ಲ."

ಮನೆಯ ಯಜಮಾನ: "ಆದೇಶ ದೊರೆತಿಲ್ಲವೇನೋ ನಿಜ. ಆದರೆ ಕರ್ತವ್ಯ ದೃಷ್ಟಿಯಿಂದ ಉಪನ್ಯಾಸ ಕೊಡುತ್ತಿದ್ದಾರೆ."

ಶ್ರೀರಾಮಕೃಷ್ಣರು: "ಯಾರಿಗೆ ಆದೇಶ ದೊರೆತಿಲ್ಲವೋ ಆತನ ಉಪದೇಶದಿಂದ ಏನು ಉಪಯೋಗವಾದೀತು? ಒಮ್ಮೆ ಒಬ್ಬ ಬ್ರಾಹ್ಮ ಭಕ್ತ ಉಪನ್ಯಾಸ ಕೊಡುತ್ತ ಕೊಡುತ್ತ, 'ಸೋದರ ಸೋದರಿಯರೇ, ನಾನು ಹಿಂದೆ ಎಷ್ಟು ಮದ್ಯ ಕುಡಿಯುತ್ತಿದ್ದೆ ಗೊತ್ತೇನು?' ಅಂತೆಲ್ಲ ಏನೇನೋ ಹೇಳತೊಡಗಿದ. ಇದನ್ನು ಕೇಳಿ ಸಭಿಕರು ತಮ್ಮ ತಮ್ಮಲ್ಲಿ ಮಾತನಾಡಿಕೊಳ್ಳಲಾರಂಭಿಸಿದರು: 'ಅಯೋಗ್ಯ! ಏನು ಹೇಳುತ್ತಿದ್ದಾನೆ ನೋಡಿ, ಮದ್ಯ ಕುಡಿಯುತ್ತಿದ್ದನಂತೆ!' ಆತನ ಮಾತುಗಳು ಆತನಿಗೆ ಖಂಡನೆಯನ್ನು ತಂದುಕೊಟ್ಟುವು. ಮನುಷ್ಯ ಸತ್ಪುರುಷನಾಗಿಲ್ಲದಿದ್ದರೆ, ಆತನ ಉಪನ್ಯಾಸ ಯಾವ ಉಪಯೋಗಕ್ಕೂ ಬಾರದು ಎನ್ನುವುದನ್ನು ಇದು ಎತ್ತಿ ತೋರಿಸುತ್ತದೆ.

"ಭಗವಂತನಿಂದ ಬಂದ ಲಾಂಛನ ಯಾರ ಹತ್ತಿರ ಇದೆಯೋ ಅಂಥವನ ಮಾತನ್ನು ಮಾತ್ರ ಜನ ಕೇಳುತ್ತಾರೆ. ಭಗವಂತನಿಂದ ಆದೇಶವನ್ನು ಪಡೆದುಕೊಳ್ಳದಿದ್ದರೆ ಲೋಕಶಿಕ್ಷಣ ಸಾಧ್ಯವಾಗದು. ಲೋಕಶಿಕ್ಷಣ ಮಾಡತಕ್ಕವನಿಗೆ ದೊಡ್ಡ ಶಕ್ತಿ ಬೇಕು.

"ಚೈತನ್ಯದೇವ ಒಬ್ಬ ದೊಡ್ಡ ಅವತಾರ ಪುರುಷ. ಆದರೆ ಅಂಥವನು ಕೂಡ ಏನು ಮಾಡಿಹೋದನೋ ಅದರಲ್ಲಿ ಈಗ ಏನು ತಾನೆ ಉಳಿದುಕೊಂಡಿದೆ ಹೇಳು ನೋಡೋಣ. ಅಂಥಾದ್ದರಲ್ಲಿ ಯಾರಿಗೆ ಆದೇಶವೇ ದೊರೆತಿಲ್ಲವೋ ಆತನ ಉಪನ್ಯಾಸ ಗಳಿಂದ ಯಾವ ಪ್ರಯೋಜನ ತಾನೆ ಆದೀತು?

"ಇದಕ್ಕಾಗಿಯೇ ನಾನು ಹೇಳುವುದು, ಸಚ್ಚಿದಾನಂದ ಸಾಗರದಲ್ಲಿ ಮುಳುಗು ಅಂತ. ಭಗವಂತನ ಸಾಕ್ಷಾತ್ಕಾರ ದೊರೆತುಬಿಟ್ಟದ್ದೇ ಆದರೆ, ಇನ್ನು ಯೋಚನೆಯೇಕೆ? ಆಗ ಆದೇಶವೂ ದೊರೆಯುತ್ತದೆ, ಲೋಕಶಿಕ್ಷಣವೂ ಆಗುತ್ತದೆ.

"ಅಮೃತಸಾಗರಕ್ಕೆ ಅನೇಕ ಮಾರ್ಗಗಳು. ಯಾವ ರೀತಿಯಿಂದಲಾದರೂ ಸರಿಯೆ, ಆ ಸಾಗರಕ್ಕೆ ಹೋಗಿ ಬೀಳುವುದೊಂದೇ ಆಗಬೇಕಾಗಿರುವುದು."

ಹೀಗೇ ಬಹಳ ಹೊತ್ತಿನವರೆಗೂ ಸಂಭಾಷಣೆ ಮುಂಬರಿಯಿತು. ಶ್ರೀರಾಮಕೃಷ್ಣರ ಅಮೃತವಾಣಿಯನ್ನು ಆಲಿಸುತ್ತ ಪಂಡಿತ ಶಶಧರ ವಿಸ್ಮಯಮೂಕನಾಗಿಬಿಟ್ಟಿದ್ದ. ಅವರು ಅತ್ಯಪೂರ್ವ ವಿಚಾರಗಳನ್ನು ಅವನೆದುರಿಗಿಟ್ಟು, ಅವನನ್ನು ಗಾಢಚಿಂತನೆಯಲ್ಲಿ ತೊಡಗಿಸಿದ್ದರು. ಸ್ವಾತ್ಮಾನಂದದ ಸವಿ ಎಂದರೇನೆಂಬುದನ್ನು ಅಂದು ಕಣ್ಣಾರೆ ಕಂಡ ಮೇಲೆ ಅವನೊಳಗೆ ಸುಪ್ತವಾಗಿದ್ದ ಸಾಧನಾಸಕ್ತಿ ಹಠಾತ್ತನೆ ಜಾಗ್ರತಗೊಂಡಿತ್ತು. ಇಷ್ಟು ದಿನವೂ ತಾನು ಎಂಥ ಅನರ್ಘ್ಯ ಸಂಪತ್ತಿನಿಂದ ವಂಚಿತನಾಗಿದ್ದೆ ಎಂಬುದರ ಕಲ್ಪನೆ ಅವನಲ್ಲಿ ಮೂಡಿತು. ಹಾಜರನನ್ನುದ್ದೇಶಿಸಿ ಪಂಡಿತ ನುಡಿದ:

"ಸದಾ ನೀವೆಲ್ಲ ಪರಮಹಂಸರ ಜೊತೆಯಲ್ಲೇ ಇರುತ್ತೀರಿ, ಧನ್ಯರು."

ಈಗ ಶ್ರೀರಾಮಕೃಷ್ಣರು ಮುಗುಳ್ನಗುತ್ತ ನುಡಿದರು: "ಅಂತೂ ನನಗಿಂದು ಶುಕ್ರ ದೆಶೆ ಒದಗಿಬಿಟ್ಟಿದೆ! ಶುಕ್ಲದ್ವಿತೀಯ ಚಂದ್ರನನ್ನು ನೋಡಿದಂತೆಯೇ ಆಗಿಬಿಟ್ಟಿದೆ (ಎಲ್ಲರೂ ನಗುತ್ತಿದ್ದಾರೆ). ಚಂದ್ರನ ಮಾತು ಏಕೆ ಎತ್ತಿದೆ ಗೊತ್ತೆ? ಸೀತೆ ಒಮ್ಮೆ ರಾವಣನಿಗೆ ಹೇಳಿದಳು: 'ನೀನು ಪೂರ್ಣಚಂದ್ರ; ನನ್ನ ರಾಮ ಶುಕ್ಲದ್ವಿತೀಯ ಚಂದ್ರ, ಅಂತ. ರಾವಣನಿಗೆ ಇದರ ಗೂಢಾರ್ಥ ಗೊತ್ತಾಗಲಿಲ್ಲ. ಸೀತೆ ತನ್ನನ್ನು ಹೊಗಳು ತ್ತಿದ್ದಾಳೆ ಅಂತ ಭಾವಿಸಿದ. ಆದ್ದರಿಂದ ಆತನಿಗೆ ಬಹಳ ಸಂತೋಷವಾಗಿಬಿಟ್ಟಿತು. ಆದರೆ ಸೀತೆ ಹಾಗೆ ಹೇಳಿದ್ದರ ಅರ್ಥವೇನೆಂದರೆ, ರಾವಣ ತನ್ನ ವೈಭವದ ತುತ್ತತುದಿಯನ್ನು ಮುಟ್ಟಿಬಿಟ್ಟಿದ್ದಾನೆ, ಇನ್ನು ಮುಂದೆ ದಿನದಿನಕ್ಕೂ ಪೂರ್ಣಚಂದ್ರನ ಹಾಗೆ ಕುಂದುತ್ತ ಬರುತ್ತಾನೆ; ಆದರೆ ರಾಮನಾದರೋ ಶುಕ್ಲದ್ವಿತೀಯ ಚಂದ್ರನ ಹಾಗೆ ದಿನದಿನಕ್ಕೂ ವೃದ್ಧಿಯಾಗುತ್ತ ಬರುತ್ತಾನೆ ಅಂತ."

ಈಗ ಶ್ರೀರಾಮಕೃಷ್ಣರು ದಕ್ಷಿಣೇಶ್ವರಕ್ಕೆ ಹೊರಡಲು ಅನುವಾದರು. ಶಶಧರ ಪಂಡಿತನೂ ಆತನ ಮನೆಮಂದಿಯೂ ಭಕ್ತಿಯಿಂದ ಪ್ರಣಾಮ ಸಲ್ಲಿಸಿ ಅವರನ್ನು ಬೀಳ್ಕೊಟ್ಟರು.

ಇದಾದ ತರುವಾಯ ಆತ ಶ್ರೀರಾಮಕೃಷ್ಣರನ್ನು ಹಲವಾರು ಬಾರಿ ಭೇಟಿಯಾದ. ಅವರ ಬೋಧನೆಗಳು ಅವನ ಮೇಲೆ ಆಳವಾದ ಪ್ರಭಾವ ಬೀರಿದುವು. ಕ್ರಮೇಣ ಹೆಸರು ಕೀರ್ತಿಗಳ ಮೋಹ ಅವನನ್ನು ಸಂಪೂರ್ಣ ಬಿಟ್ಟುಹೋಯಿತು. ಕೆಲವರ್ಷ ಗಳಲ್ಲೇ ಪಂಡಿತನು ಸಂಸಾರವನ್ನು ತ್ಯಜಿಸಿ, ತಪಸ್ಸು-ಸಾಧನೆಗಳ ಮೂಲಕ ಜೀವನ ಸಾರ್ಥಕ್ಯ ಹೊಂದಲು ಅಸ್ಸಾಮಿನ ಕಾಮಾಖ್ಯಾಪೀಠಕ್ಕೆ ತೆರಳಿದ.

ಶ್ರೀರಾಮಕೃಷ್ಣರ ಭಕ್ತವೃಂದವೆನ್ನುವುದು ಅಸಂಖ್ಯಾತ ಪುಷ್ಪಜಾತಿಗಳನ್ನೊಳಗೊಂಡ ಹೂದೋಟವಿದ್ದಂತೆ. ಅಲ್ಲಿ ವಿಧವಿಧದ ಪುಷ್ಪಗಳು. ಒಂದೊಂದರ ಲಕ್ಷಣವೂ ಒಂದೊಂದು ವಿಧ. ಪ್ರತಿಯೊಂದರ ರೂಪ ಗಂಧ ಆಕಾರ ಗಾತ್ರಗಳೂ ವಿಶಿಷ್ಟ. ಕೆಲವು ಮಾಲೆ ಕಟ್ಟಲಿಕ್ಕಾದಾವು. ಇನ್ನು ಕೆಲವು ಅರ್ಚನೆಗೆ. ಮತ್ತೆ ಕೆಲವು ವಿಶೇಷ ಅಲಂಕಾರಕ್ಕೆ ಮೀಸಲು. ಆದರೆ ಎಲ್ಲವೂ ಭಗವಂತನಿಗರ್ಪಿತ—ಶ್ರೀರಾಮಕೃಷ್ಣರ ತೋಟಕ್ಕೆ ಸೇರಿದವಾದ್ದರಿಂದ. ಆ ಹೂಗಿಡಗಳಿಗೆ ಆರೈಕೆ ಮಾಡಿ ಅವುಗಳನ್ನು ಬೆಳೆಸುವ ಕಾರ್ಯದಲ್ಲಂತೂ ಶ್ರೀರಾಮಕೃಷ್ಣರು ನಿಸ್ಸೀಮರು. ಯಾವುದಕ್ಕೆ ಎಂತಹ ಗೊಬ್ಬರ, ಬೇಲಿ, ಕತ್ತರಿಪ್ರಯೋಗ ಬೇಕೋ ಅದದನ್ನು ಕಾಲಕ್ಕೆ ತಕ್ಕಂತೆ ಮಾಡುವವರು ಅವರು.

ಈ ಭಕ್ತರಲ್ಲಿ ಶ್ರೀರಾಮಕೃಷ್ಣರ ನಿಕಟ ಸಂಪರ್ಕಕ್ಕೆ ಬಂದು ಗಾಢ ಪ್ರಭಾವಕ್ಕೊಳಗಾದವರ ಮತ್ತು ತನ್ಮೂಲಕ ತಮ್ಮ ಜೀವನಗಳನ್ನು ಸಾರ್ಥಕಪಡಿಸಿಕೊಂಡವರ ಸಂಖ್ಯೆ ಅಗಣಿತ. ಅವರ ಜೀವನಕಥೆಗಳು—ಅದರಲ್ಲೂ ಶ್ರೀರಾಮಕೃಷ್ಣರು ಅವರ ಮೇಲೆ ಯಾವ ರೀತಿಯಲ್ಲಿ ಪ್ರಭಾವ ಬೀರಿದರೆಂಬ ವಿವರಗಳು—ಅತ್ಯಂತ ರೋಚಕ, ರೋಮಾಂಚಕ. ಅವರುಗಳೊಂದಿಗೆ ಶ್ರೀರಾಮಕೃಷ್ಣರು ನಡೆಸಿದ ಸಂಭಾಷಣೆಗಳ ವಿವರಗಳೂ ಅಷ್ಟೇ ಸ್ವಾರಸ್ಯಕರ. ಅವುಗಳನ್ನು ಅವಲೋಕಿಸುತ್ತ ಹೋದಂತೆ, ಶ್ರೀರಾಮಕೃಷ್ಣರ ಮಹಿಮೆ-ಮಹತ್ವಗಳಿಗೆ ಆದ್ಯಂತಗಳಿಲ್ಲ ಎಂಬ ಸತ್ಯ ನಮಗೆ ಮನವರಿಕೆಯಾಗದಿರದು. ಆದರೂ ಗ್ರಂಥಗಾತ್ರವನ್ನು ದೃಷ್ಟಿಯಲ್ಲಿರಿಸಿಕೊಂಡು, ಆ ಭಕ್ತವರ್ಗದಲ್ಲಿ ಪ್ರಮುಖರೆಂದು ಹೇಳಬಹುದಾದ ಕೆಲವರ ವಿಷಯವಾಗಿ ಮಾತ್ರ ಇಲ್ಲಿ ಹೇಳಲಾಗಿದೆ.

ಕಾಳೀದೇಗುಲದ ತೋಟದ ದಕ್ಷಿಣಕ್ಕೆ ಮತ್ತೊಂದು ತೋಟ ಹಾಗೂ ಬಂಗಲೆ; ಇದು ಶ್ರೀರಾಮಕೃಷ್ಣರ ಗೃಹೀಭಕ್ತನಾದ ಯದುಮಲ್ಲಿಕನಿಗೆ ಸೇರಿದ್ದು ಎಂಬ ಸಂಗತಿ ನಮಗೀಗಾಗಲೇ ಪರಿಚಿತ. ಶ್ರೀರಾಮಕೃಷ್ಣರು ಯಾವಾಗಲಾದರೊಮ್ಮೆ ಈ ಬಂಗಲೆಗೆ ಹೋಗುತ್ತಿದ್ದುದನ್ನೂ ಒಮ್ಮೆ ಅಲ್ಲಿ ಏಸುಕ್ರಿಸ್ತನ ದರ್ಶನ ಪಡೆದದ್ದನ್ನೂ ಹಿಂದೆ ನೋಡಿದ್ದೇವೆ.

ಈ ಯದುಮಲ್ಲಿಕ ಭಕ್ತನೇನೋ ಸರಿಯೆ, ಆದರೆ ಒಂದು ಬಗೆಯ ರಾಜಸಿಕ ಭಕ್ತ. ನಡೆನುಡಿಯಲ್ಲೆಲ್ಲ ಸಿರಿತನದ ಅಹಂಕಾರ ಎದ್ದುಕಾಣುತ್ತಿತ್ತು. ಯಾರನ್ನೂ ಲೆಕ್ಕಿಸದ ಉಡಾಫೆ ಮನುಷ್ಯ. ತುಂಬ ಲೆಕ್ಕಾಚಾರದವನು; ಕಾಸು ಬಿಚ್ಚುವವನಲ್ಲ. ಆದರೆ ಶ್ರೀರಾಮಕೃಷ್ಣರ ಮೇಲೆ ಅವನಿಗೆ ಬಹಳ ವಿಶ್ವಾಸ ಮತ್ತು ಅನೇಕ ವರ್ಷಗಳ ಪರಿಚಯವಾದ್ದರಿಂದ ಒಂದು ಬಗೆಯ ಸಲಿಗೆ—ಇತರರಿಗೆ ಕಿರಿಕಿರಿಯೆನಿಸುವಷ್ಟು. ಇಷ್ಟಾದರೂ ಶ್ರೀರಾಮಕೃಷ್ಣರು ಅವನನ್ನು ದೂರ ಮಾಡದೆ ಪ್ರೀತಿಯಿಂದಲೇ ಕಾಣುತ್ತಿದ್ದರು. ಇದಕ್ಕೆ ಅಹೈತುಕ ಕರುಣೆಯೆನ್ನದೆ ಮತ್ತೇನೆನ್ನಬಹುದು?

ಒಮ್ಮೆ ಯದುಮಲ್ಲಿಕ ತನ್ನ ಮನೆಯಲ್ಲಿ ಸಿಂಹವಾಹಿನೀ ದೇವಿಯ ನೂತನ ವಿಗ್ರಹವನ್ನು ಪ್ರತಿಷ್ಠಾಪಿಸಿದ. ಶ್ರೀರಾಮಕೃಷ್ಣರಿಗೆ ಈ ಸಂಗತಿ ಹೇಗೆ ಗೊತ್ತಾಯಿತೋ ತಿಳಿಯದು; ಕಲ್ಕತ್ತಕ್ಕೆ ಬಂದಿದ್ದವರು ಅವನ ಮನೆಗೂ ಹೋದರು. ಜೊತೆಯಲ್ಲಿ

ಲಾಟು, ರಾಮಲಾಲ ಹಾಗೂ ಇನ್ನೊಂದಿಬ್ಬರು. ಯದುವಿನ ಮನೆಯಲ್ಲಿ ಯಾರೋ ಅವರನ್ನು ಬರಮಾಡಿಕೊಂಡು, ನೇರವಾಗಿ ಆ ವಿಗ್ರಹವನ್ನು ಪ್ರತಿಷ್ಠಾಪಿಸಲಾಗಿದ್ದ ಕೊಠಡಿಗೆ ಕರೆದೊಯ್ದರು. ಅತ್ಯಂತ ಮನಮೋಹಕ ಮೂರ್ತಿ; ಹೂ ಗಂಧ ಚಂದನಗಳಿಂದ ಅಲಂಕರಿಸಿ, ನಂದಾದೀಪ ಬೆಳಗಲಾಗಿದೆ. ಶ್ರೀರಾಮಕೃಷ್ಣರು ದೇವಿಗೆ ಸಾಷ್ಟಾಂಗ ಪ್ರಣಾಮ ಮಾಡಿ, ಜೊತೆಯಲ್ಲಿದ್ದ ಒಬ್ಬರಿಗೆ ಹೇಳಿ ಒಂದು ರೂಪಾಯಿ ಕಾಣಿಕೆ ಹಾಕಿಸಿದರು. ಬಳಿಕ ದೇವಿಯನ್ನೇ ದಿಟ್ಟಿಸುತ್ತ ಕೈಮುಗಿದುಕೊಂಡು ಬಹಳ ಹೊತ್ತು ನಿಂತಿದ್ದರು. ಹಾಗೇ ಸಮಾಧಿಸ್ಥರಾದರು.

ಒಂದು ದೀರ್ಘ ನಿಶ್ವಾಸದೊಂದಿಗೆ ಅವರು ಸಾಮಾನ್ಯ ಸ್ಥಿತಿಗೆ ಮರಳಿದರು. ಭಾವವಿನ್ನೂ ಪೂರ್ತಿಯಾಗಿ ಬಿಟ್ಟಿರಲಿಲ್ಲ. "ಅಮ್ಮಾ, ಹೋಗಿಬರುತ್ತೇನೆ" ಎಂದರು. ಆದರೆ ಕಾಲು ಕದಲಲಿಲ್ಲ. ರಾಮಲಾಲನಿಗೆ, "ಎಲ್ಲಿ, ಆ ಹಾಡು ಹೇಳು; ಆಗ ನನಗೆ ಸರಿಹೋಗುತ್ತದೆ" ಎಂದರು. ಅವನು "ಜಗವ ಮರುಳು ಮಾಡಿಹೆ ನೀ ಪರಶಿವ ಮನಮೋಹಿನೀ" ಎಂಬ ಭಾವಭರಿತವಾದ ಹಾಡನ್ನು ಹಾಡಿದ.

ಈಗ ಶ್ರೀರಾಮಕೃಷ್ಣರು ಸಂಪೂರ್ಣ ಪ್ರಕೃತಿಸ್ಥರಾಗಿ, ಯದುಮಲ್ಲಿಕನನ್ನು ನೋಡಲು ಬೈಠಕ್ ಖಾನೆಗೆ ಹೋದರು. ಅಲ್ಲಿ ಆತ ಅಮೃತಶಿಲೆಯ ಬೆಂಚಿನ ಮೇಲೆ ಒರಗಿಕೊಂಡು ಸ್ನೇಹಿತರೊಂದಿಗೆ ಹರಟುತ್ತಿದ್ದ. ಶ್ರೀರಾಮಕೃಷ್ಣರನ್ನು ಕಂಡರೂ ಎದ್ದೇಳದೆ, ಹಾಗೆಯೇ ಸ್ವಾಗತಿಸಿದ: "ಬರಬೇಕು, ಬರಬೇಕು! ಈಚೆಗೆ ಇತ್ತಕಡೆ ಬರುವುದನ್ನೇ ಬಿಟ್ಟುಬಿಟ್ಟಿರಿ? ಈಗ ದೇವಿ ಬಂದಿದ್ದಾಳೆ ಅಂತ ನಮ್ಮನ್ನು ಜ್ಞಾಪಿಸಿಕೊಂಡಿರಿ, ಅಲ್ಲವೆ?"

ಶ್ರೀರಾಮಕೃಷ್ಣರು: "ಅಲ್ಲಾ, ಎಂಥ ಮನುಷ್ಯನಯ್ಯ ನೀನು? ಇಲ್ಲಿಗೆ ಜಗನ್ಮಾತೆ ಬಂದಿದ್ದಾಳೆ. ಆದರೆ ನನಗೊಂದು ಮಾತು ತಿಳಿಸಲೇ ಇಲ್ಲವಲ್ಲ?"

ಯದುಮಲ್ಲಿಕ: "ಮಹಾಶಯರೇ! ಆಕೆಯ ಬಗ್ಗೆ ನಿಮಗಿಂತ ಹೆಚ್ಚಾಗಿ ತಿಳಿದುಕೊಂಡವರೊಬ್ಬರನ್ನೂ ನಾನು ಕಂಡಿಲ್ಲ ಬಿಡಿ. ಅವಳು ಇಲ್ಲಿಗೆ ನಿನ್ನೆ ತಾನೆ ಬಂದಳು, ನೀವಾಗಲೇ ಬಂದುಬಿಟ್ಟಿದ್ದೀರಿ! ನಿಮಗೆ ಹೇಳಿಕಳಿಸಲು ಸಮಯವೆಲ್ಲಿತ್ತು?"

ಶ್ರೀರಾಮಕೃಷ್ಣರು ಮುಗುಳ್ನಕ್ಕರು. "ಆಯಿತು ಬಿಡು. ಈಗ ನಮಗೆ ಭಗವತಿಯ ಪ್ರಸಾದ ತರಿಸಿಕೊಡು. ನಾವು ಏನೂ ತೆಗೆದುಕೊಳ್ಳದೆ ಹಿಂದಿರುಗಿದರೆ ಗೃಹಸ್ಥರಿಗೆ ಒಳ್ಳೆಯದಲ್ಲ."

ಬೆಂಚಿನ ಮೇಲೆ ಒರಗಿಕೊಂಡೇ ಆತ ಯಾರನ್ನೋ ಕರೆದು ಎಲ್ಲರಿಗೂ ಸಾಕಷ್ಟು ಪ್ರಸಾದ ತರಿಸಿಕೊಟ್ಟ. ಅದನ್ನು ಸ್ವೀಕರಿಸಿ ಶ್ರೀರಾಮಕೃಷ್ಣರು ಹೊರಟರು. ಆಗ ಅವನು ಕೇಳಿದ, "ನನ್ನ ತಾಯಿಯನ್ನೊಮ್ಮೆ ಮಾತನಾಡಿಸುವುದಿಲ್ಲವೆ?"

ಅವನ ತಾಯಿ ಶ್ರೀರಾಮಕೃಷ್ಣರಲ್ಲಿ ಬಹಳ ಭಕ್ತಿಯಿಟ್ಟಿದ್ದವಳು; ಸಾತ್ವಿಕ ಜೀವಿ.

ಶ್ರೀರಾಮಕೃಷ್ಣರು ಅಲ್ಲಿಂದಲೇ ಗಟ್ಟಿಯಾಗಿ ಕೂಗಿದರು:

"ಯದುವಿನ ತಾಯೀ! ನನಗೊಂದು ಲೋಟ ನೀರು ಕೊಡುತ್ತೀರಾ?"

ಶ್ರೀರಾಮಕೃಷ್ಣರ ಧ್ವನಿ ಕೇಳಿ ಅವಳು ಮಹಡಿಯ ಮೇಲಿಂದ ಬಂದು ನೀರು ತಂದು ಕೊಟ್ಟಳು. ಅವರು ಅದರಿಂದ ಒಂದೇ ಒಂದು ಗುಟುಕು ಕುಡಿದಿಟ್ಟು ನಿರ್ಗಮಿಸಿದರು.

ಯದುಮಲ್ಲಿಕನ ಮನೆಯಲ್ಲಿರುವವರೆಗೂ ಶ್ರೀರಾಮಕೃಷ್ಣರ ಜೊತೆಯಲ್ಲಿ

ಬಂದಿದ್ದವರೆಲ್ಲ ಸುಮ್ಮನಿದ್ದರು. ಆದರೆ ಗಾಡಿ ಹತ್ತಿ ಹೊರಡುತ್ತಿದ್ದಂತೆಯೇ ಎಲ್ಲರೂ ಹೇಳಿದರು:

"ಮಹಾಶಯರೇ, ದಯವಿಟ್ಟು ಇನ್ನೆಂದಿಗೂ ಇಂತಹ ಸಾಹುಕಾರನ ಮನೆಗೆ ಹೋಗಬೇಡಿ. ನೀವು ಯಾಕಾದರೂ ಹೋಗಬೇಕು ಹೇಳಿ ? ಅವನು ನಿಮಗೆ 'ಕುಳಿತು ಕೊಳ್ಳಿ' ಅಂತ ಕೂಡ ಹೇಳಲಿಲ್ಲವಲ್ಲ! ಇಂಥ ಅವಮಾನವನ್ನು ಯಾಕೆ ಸಹಿಸಿಕೊಳ್ಳ ಬೇಕು ?"

ಶ್ರೀರಾಮಕೃಷ್ಣರು ಮಾರ್ನುಡಿದರು:

"ನೋಡಿ, ಇವರು ಪ್ರಾಪಂಚಿಕ ವ್ಯಕ್ತಿಗಳು. ಸದಾಕಾಲವೂ ಪ್ರಾಪಂಚಿಕ ಭೋಗ ವನ್ನೇ ಅರಸಿಕೊಂಡಿರುವವರು. ಆ ಪ್ರಾಪಂಚಿಕ ಚಿಂತೆಗಳ ನಡುವೆಯೇ ಜಗನ್ಮಾತೆಯ ಪೂಜೆ ಮಾಡುತ್ತಾರೆ. ಆದರೆ ನೀವು? ಅಷ್ಟನ್ನೂ ಮಾಡಲಾರಿರಿ! ಅವನು ನನಗೆ ಕುಳಿತುಕೊಳ್ಳುವುದಕ್ಕೆ ಹೇಳಿದನೋ ಇಲ್ಲವೋ ಅನ್ನುವ ವಿಷಯದಲ್ಲಿ ನೀವುಗಳೇಕೆ ತಲೆಕೆಡಿಸಿಕೊಳ್ಳಬೇಕು ? ನೀವು ಜಗನ್ಮಾತೆಯ ದರ್ಶನಕ್ಕಾಗಿ ಬಂದಿರಿ; ಜೊತೆಗೆ ಪ್ರಸಾದ ಬೇರೆ ಸಿಕ್ಕಿತು! ಅಷ್ಟು ಸಾಲದೆ ನಿಮಗೆ? ಈ ಸರಿಹೊತ್ತಿನಲ್ಲಿ ನಿಮಗೆ ಇನ್ಯಾರು ಕೊಡುತ್ತಿದ್ದರು ಪ್ರಸಾದವನ್ನು? ಸುಮ್ಮನೆ ಯದುಮಲ್ಲಿಕನನ್ನು ನೋಡಿಬಿಟ್ಟು, 'ಅವನು ಕುಳಿತುಕೊಳ್ಳುವಂತೆ ಹೇಳಲಿಲ್ಲ' ಅಂತ ಮುನಿಸಿಕೊಳ್ಳುವುದಕ್ಕಾಗಿ ಇಲ್ಲಿಗೆ ಬಂದಿರಾ ?"

ಈ ಮಾತು ಕೇಳಿ ಭಕ್ತರೆಲ್ಲ ತಣ್ಣಗಾಗಿ ಕುಳಿತರು!

ಇದು ಶ್ರೀರಾಮಕೃಷ್ಣರು ತಮ್ಮ ಶಿಷ್ಯರಿಗೆ ಬುದ್ಧಿ ಕಲಿಸುತ್ತಿದ್ದ ಒಂದು ವಿಧಾನ. ಅವರು ಆಗಾಗ ಹೇಳುತ್ತಿದ್ದ ಮಾತು ಇದು: "ನೀವು ಸಾಧುಗಳಾಗಲು ಬಯಸುವಿ ರಾದರೆ ನೀವೇನೋ ಮಹಾ ದೊಡ್ಡಮನುಷ್ಯರು ಎಂಬ ಧೋರಣೆಯನ್ನು ಬಿಟ್ಟುಬಿಡಿ. ಇತರರು ನಿಮಗೆ ಮರ್ಯಾದೆ ಕೊಟ್ಟರೊ ಬಿಟ್ಟರೊ ಎನ್ನುವತ್ತ ಗಮನ ಕೊಡಲೇ ಬೇಡಿ."

ಅಂದು ಶ್ರೀರಾಮಕೃಷ್ಣರು ತಮ್ಮ ಭಕ್ತರಿಗೆ ಹೀಗೆ ಖಾರವಾಗಿ ಬುದ್ಧಿಹೇಳಿದರೂ ಅವರು ಯದುಮಲ್ಲಿಕನ ನಡವಳಿಕೆಯನ್ನು ಸಮರ್ಥಿಸಿದರೆಂದು ಅರ್ಥವಲ್ಲ. ಎಷ್ಟೋ ಬಾರಿ ಅವರು ಅವನ ಕೃಪಣತೆಯನ್ನು, ಪ್ರಾಪಂಚಿಕತೆಯನ್ನು ಖಂಡಿಸಿದ್ದುಂಟು. ಅವನು ಸದಾ ಹೊಗಳುಭಟರಿಂದ ಆವೃತನಾಗಿರುವುದನ್ನು ಕಂಡು ಒಮ್ಮೆ ಅರ್ಧ ಹಾಸ್ಯವಾಗಿ ಅವನಿಗೆ ಹೇಳುತ್ತಾರೆ:

"ಏನಯ್ಯಾ, ಈ ನಕಲಿಗಳನ್ನೆಲ್ಲ ಯಾಕಿಟ್ಟುಕೊಂಡಿದ್ದೀಯ ?"

ಯದು: "ಅವರು ಅಂಥವರು ಅಂತಲೇ ಇಟ್ಟುಕೊಳ್ಳೋಣ, ಆದರೆ ನೀವು ಅವರನ್ನು ಉದ್ಧಾರ ಮಾಡಲಾರಿರಾ ?"

ಶ್ರೀರಾಮಕೃಷ್ಣರು (ಮುಗುಳ್ನಗುತ್ತ): "ಹೆಂಡದ ಸೀಸೆಯನ್ನು ಗಂಗಾಜಲವೂ ಶುದ್ಧಿಗೊಳಿಸಲಾರದು."

ಎಷ್ಟೋ ದಿನಗಳ ಹಿಂದೆ ಯದುಮಲ್ಲಿಕ ತನ್ನ ಮನೆಯಲ್ಲಿ ಚಂಡೀಕೀರ್ತನೆ ಮಾಡಿಸುವುದಾಗಿ ಮಾತು ಕೊಟ್ಟಿದ್ದ. ಅದನ್ನು ನೆನೆಸಿಕೊಂಡು ಶ್ರೀರಾಮಕೃಷ್ಣರು ಕೇಳಿ ದರು: "ಸರೀ, ಆ ಚಂಡೀಕೀರ್ತನೆಯ ಸಮಾಚಾರ ಏನಾಯಿತು ?"

"ಓ, ಅದೇ... ಏನೋ ನೂರೆಂಟು ಕೆಲಸಗಳು ಬಂದುಬಿಟ್ಟುವು. ಆದ್ದರಿಂದಲೇ

ಇನ್ನೂ ವ್ಯವಸ್ಥೆ ಮಾಡಲಾಗಲಿಲ್ಲ."

"ಅದೆಂಥದಯ್ಯಾ ? ಮನುಷ್ಯನಿಗೆ ಒಂದೇ ನಾಲಿಗೆ ! 'ಮಾತು ಅಂದರೆ ಆನೆಯ ದಂತದ ಹಾಗೆ; ಅದು ಒಮ್ಮೆ ಹೊರಗೆ ಬಂದರೆ ಒಳಗೆ ಹೋಗುವುದಿಲ್ಲ' ಅಂತ ಕೇಳಿಲ್ಲವೆ ?"

ಯದು ನಕ್ಕು ನುಡಿದ: "ಅದು ಸರಿಯೇ..."

ಶ್ರೀರಾಮಕೃಷ್ಣರು (ಮುಗುಳ್ನಗುತ್ತ ): "ನೀನು ಅತೀ ಬುದ್ಧಿವಂತ. ಏನುಮಾಡಿದರೂ ಲೆಕ್ಕಾಚಾರ ಹಾಕಿಯೇ ಮಾಡುವವನು. ಬ್ರಾಹ್ಮಣ, ಕಡಿಮೆ ಹುಲ್ಲು ತಿಂದು ಹೆಚ್ಚು ಸಗಣಿ ಹಾಕಿ ಧಾರಾಕಾರವಾಗಿ ಹಾಲು ಸುರಿಸುವಂಥ ಹಸುವನ್ನು ಹುಡುಕುತ್ತಾನೆ ನೋಡು, ಹಾಗೆ ನೀನು !" (ಎಲ್ಲರೂ ನಗುತ್ತಾರೆ)

ಸ್ವಲ್ಪ ಹೊತ್ತಿನ ಮೇಲೆ ಶ್ರೀರಾಮಕೃಷ್ಣರು ಮತ್ತೆ ನುಡಿದರು: "ಈಗ ನಿನ್ನ ಸ್ವಭಾವ ಅರ್ಥವಾಗುತ್ತಿದೆ. ಅದು ಅರ್ಧ ಬೆಚ್ಚಗೆ, ಅರ್ಧ ತಣ್ಣಗೆ. ನೀನು ದೇವರು ಜಗತ್ತು ಎರಡರಲ್ಲೂ ಮನಸ್ಸಿಟ್ಟಿದ್ದೀಯೆ."

ಮತ್ತೊಂದು ದಿನ ಕೇಳುತ್ತಾರೆ: "ಏನಯ್ಯಾ, ಹಿಂದೆ ನೀನು ಒಂದಿಷ್ಟು ಜಪ ಮಾಡುತ್ತಿದ್ದೆ. ಆದರೆ ಈಗೆಲ್ಲ ಏನೂ ಮಾಡುವುದೇ ಇಲ್ಲವಲ್ಲ, ಏಕೆ ?"

ಯದುಮಲ್ಲಿಕ: "ನಿಮ್ಮ ಪರಿಚಯವಾಗಿರುವುದರಿಂದ ನನಗೆ ನಾಮಸ್ಮರಣೆ ಮಾಡುವ ಅಗತ್ಯ ತೋರಿಬರುವುದಿಲ್ಲ. ಅಲ್ಲದೆ, ಜಪ ಮಾಡುತ್ತಿದ್ದರೆ ಮನಸ್ಸು ವ್ಯವಹಾರದ ಮೇಲೆ ನಿಲ್ಲುವುದಿಲ್ಲ ಅಂತ ಅನುಭವಕ್ಕೆ ಬಂದಿದೆ. ಆದ್ದರಿಂದ ನನ್ನ ಈ ಐಶ್ವರ್ಯವನ್ನು ರಕ್ಷಣೆ ಮಾಡುವುದಕ್ಕಾಗಿ ಭಗವಂತನನ್ನು ಕಡೆಗಣಿಸಿದ್ದೇನೆ."

"ಓಹೋಹೋ ! ಅಷ್ಟು ದೂರ ಹೋಗಬೇಡಪ್ಪ, ಯದು. ಯಾಕೆ ಸುಮ್ಮನೆ ಗಾಣದೆತ್ತಿನ ಹಾಗೆ ಜೀವಿಸಬೇಕು ಹೇಳು ?"

"ನಾನೇನು ಮಾಡಲಿ, ಅದು ನನ್ನ ಕರ್ಮ."

ಇನ್ನೊಂದು ಸಂದರ್ಭದಲ್ಲಿ ಇದೇ ರೀತಿಯ ಮಾತುಕತೆ ನಡೆಯಿತು.

ಶ್ರೀರಾಮಕೃಷ್ಣರು: "ಯದು, ನೀನು ಇಷ್ಟೊಂದು ಹಣವನ್ನು ಕೂಡಿಟ್ಟಿದ್ದೀಯ. ಆದರೂ ಇನ್ನಷ್ಟು ಬೇಕು ಅಂತ ಆಸೆ ಪಡುವುದನ್ನು ಬಿಡಲಿಲ್ಲವಲ್ಲ !"

ಯದು: "ಈ ಆಸೆ ಯಾವತ್ತಿಗೂ ಹೋಗುವುದೇ ಇಲ್ಲ. ನೀವು ಭಗವಂತನ ಬಯಕೆಯನ್ನು ಬಿಡಲಾರಿರಿ, ನಮ್ಮಂಥ ಪ್ರಾಪಂಚಿಕರು ಹಣದಾಸೆಯನ್ನು ಬಿಡಲಾರೆವು. ನೀವು ಜಗತ್ತಿನ ಎಲ್ಲ ವಸ್ತುಗಳನ್ನು ತ್ಯಜಿಸಿ ದೇವರಿಗಾಗಿ ಹಂಬಲಿಸುತ್ತೀರಿ. ನಾನಾದರೋ, ಇನ್ನಷ್ಟು ಮತ್ತಷ್ಟು ಸಂಪತ್ತು ಬೇಡುತ್ತಿರುವ ಅಲ್ಪ ಭಿಕ್ಷುಕ. ಅಲ್ಲದೆ ಈ ಐಶ್ವರ್ಯವಾದರೂ ಅವನಿಗೇ ಸೇರಿದ್ದಲ್ಲವೆ !"

ಈ ವಾದವನ್ನು ಕೇಳಿ ಶ್ರೀರಾಮಕೃಷ್ಣರು ಸಂಪ್ರೀತರಾಗಿ ನುಡಿದರು: "ನೀನು, ಇದೇ ಧೋರಣೆಯನ್ನೇ ಉಳಿಸಿಕೊಂಡು ಬರುವುದಾದರೆ, ನಿನಗಿನ್ನೇನೂ ಭಯವಿಲ್ಲ. ಆದರೆ ಹೇಳು, ನೀನಿದನ್ನು ಹೃತ್ಪೂರ್ವಕವಾಗಿ ಹೇಳುತ್ತಿದ್ದೀಯಾ ?"

"ಮಹಾಶಯರೇ, ನಾನು ನಿಮ್ಮಿಂದ ಏನೂ ಮುಚ್ಚಿಡಲಾರೆ ಅಂತ ನಿಮಗೇ ಗೊತ್ತಿದೆ."

ಶ್ರೀರಾಮಕೃಷ್ಣರ ಅಸಾಮಾನ್ಯ ಸತ್ಯನಿಷ್ಠೆಗೆ ಉದಾಹರಣೆಗಳಾದ ಅನೇಕ ಘಟನೆಗಳನ್ನು ನಾವು ಹಿಂದೆ ನೋಡಿದ್ದೇವೆ. ಅವರ ಈ ಗುಣವನ್ನು ಯದುಮಲ್ಲಿಕನಿಗೆ

ಸಂಬಂಧಿಸಿದ ಮತ್ತೊಂದು ಘಟನೆಯಲ್ಲಿ ನೋಡಬಹುದು.

ಒಂದು ದಿನ ಅವರು ಯದುಮಲ್ಲಿಕನನ್ನು ಆತನ ತೋಟದ ಮನೆಯಲ್ಲಿ ಭೇಟಿಯಾಗಲು ಬರುವುದಾಗಿ ಹೇಳಿದ್ದರು. ಆದರೆ ಆ ದಿನವೆಲ್ಲ ಬಹಳಷ್ಟು ಸಂದರ್ಶಕರು. ಮಾತುಕತೆಯ ನಡುವೆ ಅವರಿಗೆ, ತಾವು ಕೊಟ್ಟ ಮಾತು ಮರೆತೇ ಹೋಗಿತ್ತು. ಈಗ ಸಂದರ್ಶಕರೆಲ್ಲ ಹೊರಟು ಹೋದರು. ರಾತ್ರಿ ಹನ್ನೊಂದು ಗಂಟೆಯಾಯಿತು. ಇನ್ನೇನು ಮಲಗಿಕೊಳ್ಳಬೇಕು, ಆಗ ಶ್ರೀರಾಮಕೃಷ್ಣರಿಗೆ ಇದ್ದಕ್ಕಿದ್ದಂತೆ ಆ ವಿಷಯ ನೆನಪಿಗೆ ಬಂತು. 'ಇಷ್ಟು ಹೊತ್ತಾಯಿತಲ್ಲ ಇನ್ನೇನು, ನಾಳೆ ನೋಡಿಕೊಂಡರಾಯಿತು' ಎಂದುಕೊಳ್ಳದೆ ತಕ್ಷಣ ಎದ್ದು ಒಂದು ಕಂದೀಲು ಹೊತ್ತಿಸಿಕೊಂಡು ರಾಖಾಲನೊಂದಿಗೆ ಹೊರಟೇಬಿಟ್ಟರು! ಆದರೆ ಹೋಗಿ ನೋಡಿದಾಗ ತೋಟದ ಗೇಟು ಮುಚ್ಚಿತ್ತು. ಅವರು ಗೇಟಿನ ಸಂದಿಯಿಂದ ತಮ್ಮ ಒಂದು ಕಾಲನ್ನು ಒಳಗಿಟ್ಟು, "ಇದೋ, ಯದು ಮಲ್ಲಿಕಾ, ಬಂದಿದ್ದೇನೆ!" ಎಂದು ಒಮ್ಮೆ ಗಟ್ಟಿಯಾಗಿ ಕೂಗಿ ಹೇಳಿ ಹಿಂದಿರುಗಿದರು. ಈಗ ಅವರ ಅಂತಸ್ಸಾಕ್ಷಿಗೆ ಸಮಾಧಾನ.

ಮಣಿಮೋಹನ ಮಲ್ಲಿಕ ಎಂಬವನು ಸಿಂದೂರಿಯಾಪಟಿಯ ಒಬ್ಬ ಶ್ರೀಮಂತ ವ್ಯಾಪಾರಿ; ಗಾಣಿಗ ವೃತ್ತಿಯವನು. ವಯಸ್ಸು ಸುಮಾರು ಅರವತ್ತೈದು. ಬಹು ವರ್ಷ ಗಳಿಂದಲೂ ಬ್ರಾಹ್ಮಸಮಾಜದ ಸದಸ್ಯ. ಅದರ ನಿರಾಕಾರತತ್ತ್ವವೇ ಮುಂತಾದ ಸಿದ್ಧಾಂತ ಗಳಲ್ಲಿ ಅವನಿಗೆ ಅವಿಚಲ ವಿಶ್ವಾಸ. ಶ್ರೀರಾಮಕೃಷ್ಣರು ಕೂಡ ಅವನ ಸಹಜ ಒಲವನ್ನು ಗಮನಿಸಿದ್ದರಾದರೂ ಭಕ್ತಿಮಾರ್ಗವೇ ಅವನಿಗೆ ವಿಹಿತವಾದದ್ದು ಎಂಬುದನ್ನರಿತು, ಅವನಿಗೂ ಅದನ್ನು ಮನಗಾಣಿಸುವ ಯತ್ನ ಮಾಡುತ್ತಿದ್ದರು.

ಮಣಿಮಲ್ಲಿಕ ಶ್ರೀರಾಮಕೃಷ್ಣರಲ್ಲಿ ಗಾಢ ಭಕ್ತಿಯಿರಿಸಿದ್ದ. ಅವಕಾಶವಾದಾಗಲೆಲ್ಲ ಅವರ ದರ್ಶನಕ್ಕಾಗಿ ಬರುತ್ತಿದ್ದ. ಅವರೂ ಆಗಾಗ ಅವನ ಮನೆಗೆ ಹೋಗುತ್ತಿದ್ದರು. ಕೆಲವೊಮ್ಮೆ ಅವನ ಮನೆಯಲ್ಲಿ ಸಂಕೀರ್ತನೆ, ಉತ್ಸವಗಳಲ್ಲಿ ಪಾಲ್ಗೊಳ್ಳುತ್ತಿದ್ದರು.

೧೮೮೩ ರ ನವೆಂಬರ್ ೨೬ ರಂದು ಮಣಿಮಲ್ಲಿಕನ ಮನೆಯಲ್ಲಿ ಬ್ರಾಹ್ಮಸಮಾ ಜದ ವಾರ್ಷಿಕೋತ್ಸವ ನಡೆಯಲಿತ್ತು. ಕೇಶವಸೇನನಿಗೆ ಆಗ ಅನಾರೋಗ್ಯವಾಗಿದ್ದರಿಂದ ಅಂದು ಬರಲಾರದಾಗಿದ್ದ. ಉತ್ಸವಕ್ಕೆ ಶ್ರೀರಾಮಕೃಷ್ಣರು ಆಗಮಿಸಲಿದ್ದಾರೆ ಎಂದು ಗೊತ್ತಾದಾಗ ಸಮಾಜದ ಸದಸ್ಯರ ಸಂತಸ ಮುಗಿಲು ಮುಟ್ಟಿತು. ದೂರದೂರ ದಿಂದಲೂ ಜನ ಬಂದು ನೆರೆದರು. ತಳಿರು ತೋರಣ ಹಾರ ತುರಾಯಿಗಳಿಂದ ಮನೆ ಯೆಲ್ಲ ಸಿಂಗಾರಗೊಂಡಿತ್ತು. ಅಂದಿನ ಆ ಉತ್ಸವದ ದಿವ್ಯಾದ್ಭುತ ದೃಶ್ಯಕ್ಕೆ ಸಾಕ್ಷಿಗಳಾ ಗಿದ್ದವರಲ್ಲಿ 'ಶ್ರೀರಾಮಕೃಷ್ಣ ಲೀಲಾಪ್ರಸಂಗ'ದ ಕರ್ತೃಗಳಾದ ಸ್ವಾಮಿ ಶಾರದಾನಂದರೂ (ಆಗ ತರುಣಶಿಷ್ಯ ಶರಚ್ಚಂದ್ರ ಚಕ್ರವರ್ತಿ) ಒಬ್ಬರು. ತಾವು ಕಂಡ ಆನಂದವನ್ನು ಅವರು 'ಲೀಲಾಪ್ರಸಂಗ'ದಲ್ಲಿ ಇಂತು ಬಣ್ಣಿಸುತ್ತಾರೆ:

"ಸಾಯಂಕಾಲದ ವೇಳೆಗೆ ನಾವು ಉತ್ಸವ ಸ್ಥಾನಕ್ಕೆ ಬಂದೆವು. ಅಷ್ಟರಲ್ಲೇ ಮೃದಂಗದ ನಾದದಿಂದೊಡಗೂಡಿದ ಮಧುರ ಕೀರ್ತನೆಯ ಶಬ್ದ ಕಿವಿಗೆ ತಟ್ಟಿತು. 'ಒಹೊ, ಶುರುವಾಗಿಬಿಟ್ಟಿದೆ!' ಎಂದುಕೊಳ್ಳುತ್ತ ಬೇಗಬೇಗನೆ ನಡೆದು ದಿವಾನಖಾನೆಗೆ ಬಂದೆವು. ಅಲ್ಲಿ ನಾವು ಕಂಡದ್ದನ್ನು ಬಾಯಿಮಾತಿನಿಂದ ಹೇಳಲು ಸಾಧ್ಯವಿಲ್ಲ! ಕೋಣೆಯ ಒಳಗೂ ಹೊರಗೂ ಜನ ಕಿಕ್ಕಿರಿದಿದ್ದಾರೆ. ಪ್ರತಿಯೊಂದು ಬಾಗಿಲಲ್ಲೂ ಜನ. ಅವರನ್ನು ತಳ್ಳಿಕೊಂಡು ಒಳಕ್ಕೆ ನುಗ್ಗುವುದಂತೂ ಸಾಧ್ಯವೇ ಇರಲಿಲ್ಲ. ಎಲ್ಲರೂ ಅತ್ಯಾಸಕ್ತಿಯಿಂದ, ಭಕ್ತಿಭರಿತವಾದ ಸ್ಥಿರನೋಟದಿಂದ ಕೋಣೆಯೊಳಕ್ಕೆ ನೋಡು ತ್ತಿದ್ದಾರೆ. ಪಕ್ಕದಲ್ಲಿ ಯಾರಿದ್ದಾರೆ ಯಾರಿಲ್ಲವೆಂಬ ಬೋಧೆಯೇ ಅವರಿಗಿಲ್ಲ! ಮುಂದಿನ ಬಾಗಿಲಿನಿಂದ ಒಳಹೋಗುವುದು ಅಸಂಭವವೆಂದು ತಿಳಿದು ಕಡೆಗೆ ಇನ್ನೊಂದು ದಾರಿ ಯಾಗಿ ಸುತ್ತಿಕೊಂಡು ಉತ್ತರದಿಕ್ಕಿನ ಬಾಗಿಲಿಗೆ ಬಂದೆವು. ಅಲ್ಲಿ ಜನಸಂದಣಿ ಸ್ವಲ್ಪ ಕಡಿಮೆಯಿದ್ದುದರಿಂದ ಹೇಗೋ ಮಾಡಿ, ತಲೆಯನ್ನು ಕೋಣೆಯೊಳಕ್ಕೆ ನುಗ್ಗಿಸಿ ನೋಡುತ್ತೇವೆ—ಅಪೂರ್ವ ನೋಟ! ದಿವ್ಯಾನಂದದ ದೊಡ್ಡ ಪ್ರವಾಹವೇ ಭೋರ್ಗರೆದು ಹರಿಯುತ್ತಿದೆ! ಕೀರ್ತನೆ ಮಾಡುತ್ತ ಮಾಡುತ್ತ ಎಲ್ಲರೂ ಮೈಮರೆತು ನಗುತ್ತಿದ್ದಾರೆ, ಅಳುತ್ತಿದ್ದಾರೆ, ಸ್ವೇಚ್ಛೆಯಿಂದ ಕುಣಿದಾಡುತ್ತಿದ್ದಾರೆ, ನೆಲಕ್ಕುರುಳಿ ಬೀಳುತ್ತಿದ್ದಾರೆ,

ಉನ್ಮತ್ತರಂತೆ ವರ್ತಿಸುತ್ತಿದ್ದಾರೆ! ಆ ಉನ್ಮತ್ತ ಮಂಡಲಿಯ ನಡುವೆ ಶ್ರೀರಾಮಕೃಷ್ಣರು ನರ್ತನ ಮಾಡುತ್ತ ಒಮ್ಮೆ ವೇಗವಾಗಿ ತಾಳಕ್ಕನುಸಾರವಾಗಿ ಮುಂದೆ ಬರುತ್ತಾರೆ; ಮತ್ತು ಅದೇ ರೀತಿಯಾಗಿ ಹಿಂದೆ ಹೋಗುತ್ತಾರೆ! ಅವರು ಹಾಗೆ ಮುಂದುವರಿಯುತ್ತಿರುವ ದಿಕ್ಕಿನ ಜನರು ಮಂತ್ರಮುಗ್ಧರಂತೆ, ಅವರು ಸುಲಭವಾಗಿ ಬಂದುಹೋಗಲು ಅನುಕೂಲವಾಗಲೆಂದು ಸ್ಥಳ ಬಿಟ್ಟುಕೊಡುತ್ತಾರೆ. ಠಾಕೂರರ ಮಂದಹಾಸಪೂರಿತ ಮೊಗದಲ್ಲಿ ಒಂದು ಅಭೂತಪೂರ್ವವಾದ ಜ್ಯೋತಿ ಸಂಚರಿಸುತ್ತಿದೆ! ಅವರ ಅಂಗಾಂಗಗಳಲ್ಲಿ ಒಂದು ಅಪೂರ್ವ ಕೋಮಲತೆ; ಅದರೊಂದಿಗೇ ಮಾಧುರ್ಯದಿಂದ ಕೂಡಿದ ಸಿಂಹವಿಕ್ರಮ-ಗಾಂಭೀರ್ಯ! ಅದೊಂದು ಅತ್ಯದ್ಭುತ ನೃತ್ಯ. ಅದರಲ್ಲಿ ಆಡಂಬರವಿಲ್ಲ. ಹಾರಾಟ-ತೂರಾಟ-ಕಸರತ್ತುಗಳಿಲ್ಲ; ಕಷ್ಟವಾದ ಮತ್ತು ಅಸ್ವಾಭಾವಿಕವಾದ ಅಂಗ ವಿಕಾರವಾಗಲಿ ಸಂಯಮರಾಹಿತ್ಯವಾಗಲಿ ಇಲ್ಲ. ಬದಲಾಗಿ ಆನಂದ-ಗಾಂಭೀರ್ಯ-ಮಾಧುರ್ಯಗಳು ಒಳಗಿಂದ ಉಕ್ಕಿ ಹರಿಯುತ್ತ ಅತ್ಯಂತ ಸಹಜವಾದ ಅಂಗಾಂಗ ಚಲನೆಯ ಮೂಲಕ ವ್ಯಕ್ತವಾಗುತ್ತಿವೆ! ಬಹುಕಾಲದಿಂದ ಸಣ್ಣ ಹೊಂಡದಲ್ಲಿ ಸಿಲುಕಿಕೊಂಡಿದ್ದ ಒಂದು ದೊಡ್ಡ ಮೀನನ್ನು ಹೊರತೆಗೆದು ನಿರ್ಮಲಜಲದಿಂದ ಕೂಡಿದ ಸರೋವರಕ್ಕೆ ಬಿಟ್ಟರೆ, ಹೇಗೆ ಅದು ಒಮ್ಮೆ ವೇಗವಾಗಿ, ಒಮ್ಮೆ ಮೆಲ್ಲಗೆ, ಅತ್ತಿಂದಿತ್ತ ಈಜಾಡಿ ತನ್ನ ಆನಂದವನ್ನು ತೋರ್ಪಡಿಸುತ್ತದೆಯೋ ಹಾಗಿತ್ತು ಶ್ರೀರಾಮಕೃಷ್ಣರ ನೃತ್ಯ*. ಅವರು ಸಚ್ಚಿದಾನಂದಸಾಗರದಲ್ಲಿ ಮುಳುಗಿ, ತಮ್ಮ ಆಂತರ್ಯದ ಭಾವವನ್ನು ಅಂಗಚಲನೆಯ ಮೂಲಕ ತೋರಿಸುತ್ತಿದ್ದಾರೆಯೋ ಎಂಬಂತೆ ಕಂಡುಬರುತ್ತಿತ್ತು. ನರ್ತನ ಮಾಡುತ್ತ ಮಾಡುತ್ತ ಅವರು ಒಮ್ಮೊಮ್ಮೆ ಪ್ರಜ್ಞಾಶೂನ್ಯರಾಗಿ ಬೀಳುತ್ತಿದ್ದರು. ಇನ್ನೊಮ್ಮೆ ಅವರು ಉಟ್ಟ ಬಟ್ಟೆ ಜಾರಿ ಬಿದ್ದುಹೋಗುತ್ತಿತ್ತು. ಅದನ್ನು ಇತರರು ಅವರ ಸೊಂಟಕ್ಕೆ ಗಂಟು ಹಾಕುತ್ತಿದ್ದರು. ಇತರರು ಭಾವಾವೇಶದಿಂದ ನಿಶ್ಚೇಷ್ಟಿತರಾದುದನ್ನು ಕಂಡರೆ ಶ್ರೀರಾಮಕೃಷ್ಣರು ಅವರ ಎದೆಯನ್ನು ಸ್ಪರ್ಶಿಸಿ ಪುನಶ್ಚೇತನಗೊಳಿಸುತ್ತಿದ್ದರು. ಅವರ ಮೂಲಕವಾಗಿ ಒಂದು ದಿವ್ಯೋಜ್ಜ್ವಲವಾದ ಆನಂದಪ್ರವಾಹವು ನಾಲ್ದೆಸೆಗೂ ಹಬ್ಬಿ, ನಿಜಭಕ್ತರು ಭಗವಂತನನ್ನು ಮುಖಾಮುಖಿಯಾಗಿ ನೋಡುವಂತೆ ಮಾಡುತ್ತಿತ್ತು. ವಿರಾಗಿಗಳು ತೀವ್ರ ವೈರಾಗ್ಯವನ್ನು ಪಡೆಯುವಂತೆ ಮಾಡುತ್ತಿತ್ತು. ಆಲಸ್ಯ ತುಂಬಿದ ಮನಸ್ಸಿನವರು ಹೊಸ ಶ್ರದ್ಧೆ-ಶಕ್ತಿ-ಸ್ಫೂರ್ತಿಗಳನ್ನು ಹೊಂದುವಂತೆ ಮಾಡುತ್ತಿತ್ತು. ಮತ್ತು ಘೋರ ವಿಷಯಾಸಕ್ತ ಮನಸ್ಸುಗಳಿಂದ ಕೂಡ ತಾತ್ಕಾಲಿಕವಾಗಿ ಆ ವಿಷಯಾಸಕ್ತಿ ಮಾಯವಾಗುವಂತೆ ಮಾಡುತ್ತಿತ್ತು. ಅವರ ಭಾವಾವೇಶದ ಸೋಂಕು ಇತರರಿಗೂ ತಗಲಿ, ಅವರನ್ನೂ ಭಾವಪರವಶರನ್ನಾಗಿಸುತ್ತಿತ್ತು. ಅವರ ಪಾವಿತ್ರ್ಯದ ಜ್ಯೋತಿಯಿಂದ ದೇದೀಪ್ಯವಾಗಿ, ಎಲ್ಲರ ಮನಸ್ಸೂ ಯಾವುದೋ ಉನ್ನತ ಆಧ್ಯಾತ್ಮಿಕ ಸ್ತರಕ್ಕೆ ಏರಿದಂತಿತ್ತು. ಇನ್ನು ವಿಜಯಕೃಷ್ಣ ಗೋಸ್ವಾಮಿಯ ವಿಷಯವನ್ನಂತೂ ಹೇಳಬೇಕಾಗಿಯೇ ಇಲ್ಲ. ಮಧುರ ಕಂಠದ ಚಿರಂಜೀವಶರ್ಮ (ತ್ರೈಲೋಕ್ಯನಾಥ ಸನ್ಯಾಲ) ನಂತೂ ತನ್ನ ಏಕತಾರವನ್ನು ಹಿಡಿದು ಮೀಟುತ್ತ 'ಆನಂದಮಯಿಯಾದ ಜಗದಂಬೆಯ

---

*ಶ್ರೀರಾಮಕೃಷ್ಣರ ನರ್ತನದ ಸೊಬಗನ್ನು ಕಂಡು ಆಶ್ಚರ್ಯಚಕಿತನಾದ ಗಿರೀಶಚಂದ್ರ ಘೋಷ್ ಒಮ್ಮೆ, "ಅಷ್ಟು ವಯಸ್ಸಾದ ಮುದುಕನೊಬ್ಬ ಹಾಡಿ ಕುಣಿದರೆ ಅದರಲ್ಲಿ ಅಷ್ಟೊಂದು ಆಕರ್ಷಣೆಯಿದ್ದೀತು ಅಂತ ಮೊದಲು ನಾನು ಕನಸಿನಲ್ಲೂ ಕಂಡಿರಲಿಲ್ಲ" ಎಂದು ಉದ್ಗಾರವೆತ್ತುತ್ತಾನೆ.

ಮಕ್ಕಳಿರಾ ! ಸುತ್ತಿ ಸುತ್ತಿ ಕುಣಿಯಿರಿ' ಎಂಬರ್ಥದ ಗೀತೆಯನ್ನು ಹಾಡುತ್ತ ಹಾಡುತ್ತ ತನ್ಮಯನಾಗಿ ತನ್ನಲ್ಲಿ ತಾನೇ ಮುಳುಗಿ ಹೋದನೋ ಎಂಬಂತೆ ಕಾಣುತ್ತಿತ್ತು. ಆ ರೀತಿಯಾಗಿ ಸುಮಾರು ಎರಡು ಗಂಟೆಗಳಿಗಿಂತಲೂ ಹೆಚ್ಚು ಕಾಲ ಕಳೆದುಹೋಯಿತು ! ಕಡೆಯಲ್ಲಿ ಎಲ್ಲ ಧರ್ಮ ಸಂಪ್ರದಾಯಗಳಿಗೂ ಆಚಾರ್ಯರಿಗೂ ಭಕ್ತರಿಗೂ ಪ್ರಣಾಮ ಸಲ್ಲಿಸಿದ ಬಳಿಕ ಆ ಅಪೂರ್ವ ಕೀರ್ತನೆಯ ವೇಗ ಶಾಂತವಾಯಿತು."

* * * *

ಮಣಿಮಲ್ಲಿಕ ಮಾತಿನಲ್ಲಿ ಜಾಣ; ಹಾಸ್ಯಪ್ರಿಯ. ಅವನೊಂದಿಗೆ ಶ್ರೀರಾಮಕೃಷ್ಣರ ಸಂಭಾಷಣೆ ಕೆಲವೊಮ್ಮೆ ಬಹಳ ಸ್ವಾರಸ್ಯಕರವಾಗಿರುತ್ತಿತ್ತು. ಅವನ ಇನ್ನೊಂದು ವೈಶಿಷ್ಟ್ಯ ವೆಂದರೆ ಜಿಪುಣತನ. ಅವನ ಮನೆಯಿಂದ ದಕ್ಷಿಣೇಶ್ವರಕ್ಕೆ ಬಹಳ ದೂರ. ಗಾಡಿಯಲ್ಲಿ ಬಂದರೆ ಖರ್ಚು ಜಾಸ್ತಿ. ಅವನ ಯೋಗ್ಯತೆಗೆ ಅದೇನೂ ಹೆಚ್ಚಲ್ಲ. ಆದರೂ ಮುದುಕ ಎಷ್ಟೋ ದೂರ ನಡೆದುಕೊಂಡು ಬಂದು, ಬೇರೆ ಯಾರಾದರೂ ಪ್ರಯಾಣಿಕರೊಂದಿಗೆ ಖರ್ಚು ಹಂಚಿಕೊಳ್ಳುವ ಒಪ್ಪಂದದ ಮೇಲೆ ಗಾಡಿ ಹಿಡಿದು ಬಾರಾನಾಗೋರಿನವರೆಗೆ ಬರುತ್ತಿದ್ದ. ಅಲ್ಲಿಂದ ದಕ್ಷಿಣೇಶ್ವರಕ್ಕೆ ಮತ್ತೆ ಕಾಲ್ನಡಿಗೆ ! ಕೆಲವು ದಿನವಂತೂ ಬಿಸಿಲಿನಿಂದ ಮುಖ ಬಾಡಿಹೋಗಿರುತ್ತಿತ್ತು. ಶ್ರೀರಾಮಕೃಷ್ಣರು ಕೇಳುತ್ತಿದ್ದುದುಂಟು:

"ಯಾಕೆ ಅಷ್ಟೊಂದು ಒದ್ದಾಡಿಕೊಂಡು ಬರುತ್ತೀಯ ? ಸುಮ್ಮನೆ ಮನೆ ಯಿಂದಲೇ ಗಾಡಿ ಮಾಡಿಕೊಂಡು ನೇರವಾಗಿ ಬರಬಾರದೆ ?"

ಇದಕ್ಕೆ ಅವನು ಕೊಡುವ ಉತ್ತರ ಅವನೊಬ್ಬನೇ ಕೊಡಬಲ್ಲಂಥದ್ದು:

"ಸ್ವಾಮಿ, ನಾನು ಒಂಟಿಕುದುರೆಯ ಸಾರೋಟಿನಲ್ಲಿ ಬಂದೆ ಅನ್ನಿ. ಆಗ ನನ್ನ ಮಕ್ಕಳು ಜೋಡಿಕುದುರೆ ಸಾರೋಟಿನಲ್ಲಿ ಸವಾರಿ ಮಾಡಬೇಕು ಅಂತ ಇಷ್ಟಪಡು ತ್ತಾರೆ ! ಅದೂ ಅಲ್ಲದೆ ನೀವೇ ಹೇಳಿಲ್ಲವೆ—ಯೋಗ್ಯ ಗೃಹಸ್ಥನು ತನ್ನ ಮಕ್ಕಳಿ ಗಾಗಿಯೂ ದಾನಧರ್ಮಕ್ಕಾಗಿಯೂ ಸ್ವಲ್ಪ ಹಣ ಕೂಡಿಡಬೇಕು ಅಂತ ?"

ಇವನ ಬಾಲಾಕಿತನವನ್ನು ಕಂಡ ಶ್ರೀರಾಮಕೃಷ್ಣರು ನಗುತ್ತಿದ್ದರಷ್ಟೆ.

ಮಣಿಮಲ್ಲಿಕ ಒಮ್ಮೊಮ್ಮೆ ಶ್ರೀರಾಮಕೃಷ್ಣರ ಮೇಲೆಯೇ ಹಾಸ್ಯ ಮಾಡುತ್ತಿದ್ದು ದುಂಟು. ಅವರು ತಮ್ಮ ಮಾತುಗಳಲ್ಲಿ ತಮ್ಮದೇ ಆದ ಅಸಂಖ್ಯಾತ ದೃಷ್ಟಾಂತಗಳನ್ನು, ಸಾಮತಿಗಳನ್ನು ಕೊಡುವುದನ್ನು ಆತ ಗಮನಿಸಿದ್ದ. ಒಮ್ಮೆ ಕಲ್ಕತ್ತದಲ್ಲಿ ದೊಡ್ಡ ದೊಂದು ವಸ್ತುಪ್ರದರ್ಶನ ಏರ್ಪಟ್ಟಿತ್ತು. ಅದನ್ನು ನೋಡಿ ಆತ ಬಹಳ ಪ್ರಭಾವಿತ ನಾಗಿದ್ದ. ಒಂದು ದಿನ ಆ ವಿಷಯದ ಪ್ರಸ್ತಾಪ ಬಂದಾಗ ಅವನು ಮುಗುಳ್ನಗುತ್ತ ಶ್ರೀರಾಮಕೃಷ್ಣರಿಗೆ ಹೇಳುತ್ತಾನೆ:

"ನೀವು ಆ ಪ್ರದರ್ಶನವನ್ನು ಒಂದು ಸಲ ನೋಡಿದ್ದರೂ ಸಾಕಾಗಿತ್ತು, ನಮಗೆ ಹತ್ತು ಹದಿನೈದು ವರ್ಷ ಬೋಧನೆ ನಡೆಯುತ್ತಿತ್ತು."

ಇವನ ಮಾತಿನಲ್ಲಿ ಅಡಗಿದ್ದ ಹಾಸ್ಯವನ್ನು ಶ್ರೀರಾಮಕೃಷ್ಣರು ಗುರುತಿಸಲು ತಡ ವಾಗಲಿಲ್ಲ. ಅವರೂ ನಕ್ಕು ನುಡಿದರು:

"ಯಾಕೆ ? ದೃಷ್ಟಾಂತಗಳಿಗಾಗೇನು ?"

ಮತ್ತೊಂದು ಸಂದರ್ಭ: ರಾಖಾಲನ ಊರಿನಲ್ಲಿ ನೀರಿನ ಅಭಾವವಿದೆ, ಬೇಸಿಗೆ ಯಲ್ಲಂತೂ ಜನ ಬಹಳ ಕಷ್ಟ ಪಡುತ್ತಾರೆ, ಎಂಬ ಮಾತು ಬಂದಿತು. ಶ್ರೀರಾಮ

ಕೃಷ್ಣರು ಮಣಿಮಲ್ಲಿಕನಿಗೆ ಹೇಳಿದರು: "ನೋಡಿದೆಯಾ ? ನೀನೇಕೆ ಅಲ್ಲೊಂದು ಕೊಳ ತೋಡಿಸಬಾರದು ? ಜನಗಳಿಗೆ ಬಹಳ ಉಪಕಾರ ಮಾಡಿದಂತಾಗುತ್ತದೆ. (ಮುಗುಳ್ನಗುತ್ತ) ನಿನ್ನ ಹತ್ತಿರ ಬೇಕಾದಷ್ಟು ಹಣ ಇದೆ. ಸುಮ್ಮನೆ ಇಟ್ಟುಕೊಂಡು ಏನು ಮಾಡುತ್ತೀಯಯ್ಯಾ ? ಆದರೆ ಗಾಣಿಗರು ತುಂಬಾ ಲೆಕ್ಕಾಚಾರದ ಬುದ್ಧಿಯವರು ಅಂತ ಕೇಳಿದ್ದೇನೆ. . ."

ಶ್ರೀರಾಮಕೃಷ್ಣರ ಈ ನೇರ ಮಾತನ್ನು ಕೇಳಿ ಎಲ್ಲರೂ ನಕ್ಕುಬಿಟ್ಟರು.

ಮಲ್ಲಿಕ ಆಗೇನೋ ಸುಮ್ಮನಿದ್ದ. ಆದರೆ ಆಮೇಲೆ ಆ ಮಾತು, ಈ ಮಾತು ಆಡುತ್ತ ಮಧ್ಯೆ ಸೇರಿಸಿದ:

"ಮಹಾಶಯರೇ, ಕೊಳ ತೋಡಿಸುವ ವಿಷಯ ಹೇಳಿದಿರಿ. ಅಷ್ಟಕ್ಕೇ ನಿಲ್ಲಿಸಿ ಬಿಟ್ಟಿದ್ದರೆ ಚೆನ್ನಾಗಿತ್ತು. ಗಾಣಿಗ ಗೀಣಿಗ ಈ ಮಾತೆಲ್ಲ ಏಕೆ ?"

ಶ್ರೀರಾಮಕೃಷ್ಣರು ನಕ್ಕರು; ಭಕ್ತರು ಕೆಲವರು ನಿಶ್ಶಬ್ದವಾಗಿ ನಕ್ಕರು.

ಅಂದು ಅವನು ಹಾಗೆ ಆಕ್ಷೇಪಿಸಿದರೂ, ಶ್ರೀರಾಮಕೃಷ್ಣರ ಬೋಧನೆಗಳ ಪ್ರಭಾವ ಅವನ ಮೇಲೆ ಆಗದೆಯಿರಲಿಲ್ಲ. ಮುಂದೆ ಆತ ಬಡ ವಿದ್ಯಾರ್ಥಿಗಳಿಗೋಸ್ಕರ ಇಪತ್ತೈದು ಸಾವಿರ ರೂಪಾಯಿಯ ದತ್ತಿ ಸ್ಥಾಪಿಸಿದ.

ಇವನಿಗೆ ಸಂಬಂಧಿಸಿದಂತೆ ಅತ್ಯಂತ ಸ್ಮರಣೀಯ ಘಟನೆಯೊಂದಿದೆ. ಶ್ರೀರಾಮಕೃಷ್ಣರ ಭಾವವೈಭವಕ್ಕೂ ದಯಾರ್ದ್ರತೆಗೂ ಅದೊಂದು ಜ್ವಲಂತ ಉದಾಹರಣೆ.

ಒಮ್ಮೆ ಅವನ ಒಬ್ಬ ಮಗ, ಯೋಗ್ಯನೂ ಲಕ್ಷಣವಂತನೂ ಆದವನು, ಹಠಾತ್ತಾಗಿ ಮರಣಕ್ಕೀಡಾದ. ಸಹಜವಾಗಿಯೇ ಪುತ್ರವಿಯೋಗ ಆತನಿಗೆ ಮರ್ಮಾಘಾತವನ್ನುಂಟುಮಾಡಿತು. ಮಗನ ಶವಸಂಸ್ಕಾರವನ್ನು ಮುಗಿಸಿಕೊಂಡು ಅವನು ನೇರವಾಗಿ ದಕ್ಷಿಣೇಶ್ವರಕ್ಕೆ ಬಂದ. ಶ್ರೀರಾಮಕೃಷ್ಣರು ತಮ್ಮ ಕೋಣೆಯೊಳಗೆ ಭಕ್ತರೊಂದಿಗೆ ಭಗವತ್ ಸಲ್ಲಾಪದಲ್ಲಿ ತೊಡಗಿದ್ದರು. ಆತ ಶ್ರೀರಾಮಕೃಷ್ಣರಿಗೆ ನಮಿಸಿ ಒಂದು ಮೂಲೆಯಲ್ಲಿ ಮೌನವಾಗಿ ಕುಳಿತ.

ಶ್ರೀರಾಮಕೃಷ್ಣರ ದೃಷ್ಟಿ ಅವನೆಡೆಗೆ ಹರಿಯಿತು. ಅವನ ವ್ಯಸನಗ್ರಸ್ತ ಮುಖವನ್ನು ಕಂಡು ಕರುಣೆಯಿಂದ ಕೇಳಿದರು, "ಏನಪ್ಪಾ, ಬಹಳ ವಿಷಣ್ಣನಾಗಿದ್ದೀಯಲ್ಲ, ಏಕೆ ?" ಅವನು ಅಲ್ಲಿಯವರೆಗೆ ಒತ್ತಿ ತಡೆಹಿಡಿದಿದ್ದ ಶೋಕ ಒಮ್ಮೆಗೇ ಹೊರನುಗ್ಗಿತು. ಗದ್ಗದ ಕಂಠದಿಂದ ಕಣ್ಣೀರು ಹಾಕುತ್ತ ತನ್ನ ಮಗನ ಮರಣವಾರ್ತೆಯನ್ನು ಬಯಲು ಮಾಡಿದ. ಅಲ್ಲಿದ್ದವರೆಲ್ಲ ಒಂದು ನಿಮಿಷಕಾಲ ಆಘಾತದಿಂದ ಸ್ತಂಭಿತರಾಗಿ ಕುಳಿತುಬಿಟ್ಟರು. ಪುತ್ರಶೋಕದಿಂದ ಕಂಗೆಟ್ಟ ಮುದುಕನಿಗೆ ಸಾಂತ್ವನ ಹೇಳಲು ಯಾರಿಂದ ಸಾಧ್ಯ ? ಯಾರೇನು ಹೇಳಿದರೆ ತಾನೆ ಅವನಿಗೆ ಸಮಾಧಾನವಾದೀತು ? ಆದರೂ ಕೂಡ ಒಬ್ಬೊಬ್ಬರು ಒಂದೊಂದು ರೀತಿಯಲ್ಲಿ ಸಮಾಧಾನ ಹೇಳಿ ಅವನನ್ನು ಸಂತೈಸುವ ಯತ್ನ ಮಾಡಿದರು: "ಈ ಜಗತ್ತಿನ ರೀತಿಯೇ ಇಂಥದು. ಹುಟ್ಟಿದ ಮೇಲೆ ಪ್ರತಿಯೊಬ್ಬನೂ ಸಾಯಲೇಬೇಕು, ಅಲ್ಲವೆ ? ಎಷ್ಟು ಅತ್ತು ದುಃಖಪಟ್ಟರೂ ಸತ್ತವನು ಹಿಂದಕ್ಕೆ ಬರಲಾರ, ಆದ್ದರಿಂದ ಸ್ವಲ್ಪ ಸಮಾಧಾನ ತಂದುಕೊ, ಸಹಿಸಿಕೊ" ಎಂದು. ಆದರೆ, ಅಯ್ಯೋ ! ಈ ಜಗತ್ತು ಹುಟ್ಟಿದಾಗಿನಿಂದಲೂ ಜನರು ಒಬ್ಬರನ್ನೊಬ್ಬರು ಸಾಂತ್ವನಗೊಳಿಸುವುದಕ್ಕಾಗಿ ಇವೇ ಮಾತುಗಳನ್ನೇ ಬಳಸುತ್ತ ಬಂದಿದ್ದಾರೆ. ಆದರೆ ಅದರಿಂದ ಎಷ್ಟರ ಮಟ್ಟಿಗೆ ಪ್ರಯೋಜನವಾಗಿದೆ ? ಏಕೆಂದರೆ, ಈ ಮಾತುಗಳನ್ನು

ಆಡುವವರಲ್ಲಿ ಪ್ರಾಮಾಣಿಕತೆಯಿರಬೇಕಲ್ಲ! ತಾವೇ ಆ ಮಾತನ್ನು ದೃಢವಾಗಿ ನಂಬಿ, ಆ ಪ್ರಕಾರವಾಗಿ ನಿರ್ಲಿಪ್ತತೆಯ ಜೀವನವನ್ನು ನಡೆಸದಿದ್ದ ಮೇಲೆ ಅಂಥವರು ಇತರರ ಮನಸ್ಸಿಗೆ ಸಮಾಧಾನ ನೀಡಲು ಹೇಗೆ ಸಮರ್ಥರಾದಾರು?

ಮಣಿಮಲ್ಲಿಕ ಬಿಕ್ಕುತ್ತ ಬಿಕ್ಕುತ್ತ ಮಧ್ಯಮಧ್ಯೆ ತನ್ನ ಮಗನ ಕುರಿತಾಗಿ ಒಂದೊಂದು ಉದ್ಗಾರವೆತ್ತುತ್ತಿದ್ದಾನೆ; ಉಳಿದವರೆಲ್ಲ ಅವನನ್ನು ಶಾಂತಗೊಳಿಸುವ ಪ್ರಯತ್ನ ಮುಂದುವರಿಸಿದ್ದಾರೆ. ಈ ನಡುವೆ ಶ್ರೀರಾಮಕೃಷ್ಣರು ಮಾತ್ರ ಚಕಾರವನ್ನೂ ಎತ್ತದೆ, ಅವನ ಮಾತನ್ನು ಆಲಿಸುತ್ತ ಮೌನವಾಗಿಯೇ ಕುಳಿತಿದ್ದಾರೆ! ಅದನ್ನು ಕಂಡು ಕೆಲವರು, 'ಛೆ! ಎಂಥ ಔದಾಸೀನ್ಯ ಇವರದು. ಒಂದು ಮಾತನ್ನೂ ಆಡದೆ ನಿರ್ದಯರಾಗಿದ್ದಾರಲ್ಲ!' ಎಂದು ಮನಸ್ಸಿನಲ್ಲೇ ಅಂದುಕೊಂಡರು.

ಆದರೆ ಅವರ ಎಣಿಕೆ ಹುಸಿಯಾಯಿತು.

ಮಣಿಮಲ್ಲಿಕನ ಮಾತನ್ನು ಕೇಳುತ್ತ ಕೇಳುತ್ತ ಶ್ರೀರಾಮಕೃಷ್ಣರು ಇದ್ದಕ್ಕಿದ್ದಂತೆ ಭಾವಸ್ಥರಾಗಿ ಎದ್ದು ನಿಂತರು. ಜಟ್ಟಿಯ ಹಾಗೆ ಅಂಗೈಯಿಂದ ಭುಜವನ್ನು ತಟ್ಟಿಕೊಳ್ಳುತ್ತ ವೀರಾವೇಶದಿಂದ ಒಂದು ಹಾಡನ್ನು ಹಾಡತೊಡಗಿದರು. ಆ ಹಾಡಿನ ಅರ್ಥ ಹೀಗಿದೆ:

"ಓ ಮಾನವ! ಯುದ್ಧಕ್ಕೆ ಸಿದ್ಧನಾಗು. ನೋಡು, ಕಾಲಯಮನು ಯೋಧನ ವೇಷದಲ್ಲಿ ನಿನ್ನ ಮನೆಗೆ ಲಗ್ಗೆ ಹಾಕುತ್ತಿದ್ದಾನೆ. ಮಹಾ ಪುಣ್ಯವೆಂಬ ರಥವನ್ನೇರಿ, ಸಾಧನೆ-ಭಜನೆ ಎಂಬ ಎರಡು ಕುದುರೆಗಳನ್ನು ಜೋಡಿಸು! ಜ್ಞಾನವೆಂಬ ಬಿಲ್ಲಿಗೆ ಭಕ್ತಿಯೆಂಬ ಬಾಣವನ್ನು ಹೂಡು! ಇಲ್ಲವೆ, ಇನ್ನೂ ಒಂದು ಒಳ್ಳೆಯ ಉಪಾಯವಿದೆ, ಕೇಳು: ನೀನು ಗಂಗಾತೀರದಲ್ಲಿ ನಿಂತೆಯಾದರೆ ಸಾಕು, ಶತ್ರುವನ್ನು ಗೆಲ್ಲಲು ರಥ-ರಥಿಕರು ಕೂಡ ಬೇಕಿಲ್ಲ!"

ವೀರರಸವನ್ನುಕ್ಕಿಸುವ ಈ ಹಾಡಿನ ರಾಗ-ಭಾವಗಳು, ಅದಕ್ಕನುಗುಣವಾದ ಶ್ರೀರಾಮಕೃಷ್ಣರ ಅಂಗಭಂಗಿಗಳು, ಜೊತೆಗೆ ಅವರ ಕಣ್ಣುಗಳಿಂದ ಹೊರಚಿಮ್ಮುತ್ತಿದ್ದ ವೈರಾಗ್ಯ, ತೇಜಸ್ಸು ಇವೆಲ್ಲವೂ ಸೇರಿಕೊಂಡು ಅಲ್ಲಿದ್ದವರ ಹೃದಯಗಳಲ್ಲಿ ಒಂದು ಅದ್ಭುತವಾದ ಶಕ್ತಿಯನ್ನೂ ಭರವಸೆಯನ್ನೂ ಮೂಡಿಸಿದುವು. ಎಲ್ಲರ ಮನಸ್ಸೂ ಈ ಶೋಕ ಮೋಹಗಳ ಲೋಕವನ್ನು ಬಿಟ್ಟು ಇಂದ್ರಿಯಾತೀತವಾದ ಭಗವದಾನಂದದಲ್ಲಿ ಮುಳುಗಿಹೋಯಿತು. 'ಭಗವಂತನೊಬ್ಬನೇ ಸತ್ಯ; ಅವನಲ್ಲೇ ನಮ್ಮ ದೇಹ ಮನ ಪ್ರಾಣಗಳು ಸಮರ್ಪಿತವಾಗಲಿ' ಎಂಬ ಭಾವ ಆವರಿಸಿ ಎಲ್ಲರೂ ಮೌನವಾಗಿ ಕುಳಿತರು. ಮುದುಕ ಮಣಿಮಲ್ಲಿಕನೂ ತನ್ನ ಶೋಕವನ್ನು ಮರೆತು ಸ್ಥೈರ್ಯ ತಾಳಿದ.

ಸ್ವಲ್ಪ ಹೊತ್ತಿನ ಮೇಲೆ ಶ್ರೀರಾಮಕೃಷ್ಣರ ಸಮಾಧಿ ಭಂಗವಾಯಿತು. ಆಗ ಅವರು ಮಲ್ಲಿಕನ ಸನಿಹದಲ್ಲೇ ಕುಳಿತು ಮಾತಾಡತೊಡಗಿದರು: "ಆಹಾ! ಪುತ್ರ ವಿರಹದಂತಹ ಶೋಕ ಇನ್ನಾವುದಿದೆ? ಮಗನೆಂದರೆ ಈ ತನುವಿನಿಂದ ಬಂದವನಲ್ಲವೆ? ತನುವಿರುವವರೆಗೂ ತನುಜನೊಂದಿಗೆ ಸಂಬಂಧವಿದ್ದೇ ಇರುತ್ತದೆ." ಹೀಗೆಂದ ಅವರು, ತಮ್ಮ ಅಣ್ಣನ ಮಗ ಅಕ್ಷಯನ ಸಾವಿನ ವಿಷಯವನ್ನು ಸಾದ್ಯಂತವಾಗಿ ಹೇಳಲಾರಂಭಿಸಿದರು. ಅದನ್ನು ಬಣ್ಣಿಸುವಾಗ, ಅವರು ಆ ಸಾವನ್ನು ಪುನಃ ಕಣ್ಣಾರೆ ನೋಡುತ್ತಿದ್ದಾರೋ, ಆ ಶೋಕವನ್ನು ಮತ್ತೆ ಅನುಭವಿಸುತ್ತಿದ್ದಾರೋ ಎಂಬಂತೆ ತೋರಿತು.

ಆಮೇಲೆ ಶ್ರೀರಾಮಕೃಷ್ಣರು ಪುನಃ ಹೀಗೆಂದರು: "ಆದರೆ ಒಂದು ವಿಷಯ: ಯಾರು ಭಗವಂತನ ಕೈ ಹಿಡಿದಿರುತ್ತಾರೋ ಅಂಥವರು ಈ ಬಗೆಯ ಅಸಹನೀಯ ಶೋಕಕ್ಕೆ ಗುರಿಯಾದರೂ ಮುಳುಗಿಹೋಗುವುದಿಲ್ಲ. ಸ್ವಲ್ಪ ಅತ್ತಿತ್ತ ಹೊಯ್ದಾಡಿ ಶಾಂತರಾಗುತ್ತಾರೆ. ನೋಡಿಲ್ಲವೆ—ಗಂಗಾನದಿಯಲ್ಲಿ ದೊಡ್ಡ ಹಡಗೊಂದು ಹಾದು ಹೋದರೆ, ಅಲೆಗಳ ಹೊಡೆತಕ್ಕೆ ಬೆಸ್ತರ ಸಣ್ಣಪುಟ್ಟ ದೋಣಿಗಳೆಲ್ಲ ಹೊಯ್ದಾಡುತ್ತವೆ. ಕೆಲವಂತೂ ಮಗುಚಿಕೊಂಡೇಬಿಡುತ್ತವೆ. ಆದರೆ, ದೊಡ್ಡ ದೋಣಿಗಳು ಒಂದು ನಾಲ್ಕಾರು ಬಾರಿ ಹೊಯ್ದಾಡಿ ಬಳಿಕ ಸ್ಥಿರವಾಗಿಬಿಡುತ್ತವೆ. ಆದರೆ ಅವು ಕೂಡ ನಾಲ್ಕಾರು ಬಾರಿಯಾದರೂ ಹೊಯ್ದಾಡದೆ ವಿಧಿಯಿಲ್ಲ."

ಅನಂತರ ಶ್ರೀರಾಮಕೃಷ್ಣರು, ಸಂಸಾರದ ಸ್ವಾರಸ್ಯ ಕೇವಲ ನಾಲ್ಕು ದಿನದ್ದು ಎಂಬುದನ್ನು ಒಂದು ಉಪಮೆಯೊಂದಿಗೆ ವಿವರಿಸಿದರು:

"ಒಂದು ಬಗೆಯ ಹಸಿ ಸೌದೆ (ಇದು ಬಂಗಾಳದ ಸುಂದರವನದಲ್ಲಿ ಬೆಳೆಯುತ್ತದೆ) ಮೊದಮೊದಲು ಹೇಗೆ ಧಗಧಗ ಅಂತ ಉರಿಯುತ್ತದೆ ನೋಡಿಲ್ಲವೆ ? ಆದರೆ ಸ್ವಲ್ಪ ಉರಿಯುವಷ್ಟರಲ್ಲೇ ಸೌದೆಯ ನೀರೆಲ್ಲ ಮತ್ತೊಂದು ತುದಿಯಿಂದ ನೊರೆಯಂತೆ ಉಕ್ಕಿ ಬಂದು ಚೊಂಯ್ಙ್ ಅಂತ ಶಬ್ದ ಮಾಡುತ್ತ ಬೆಂಕಿಯನ್ನೇ ಆರಿಸಿಬಿಡುತ್ತದೆ." ಹೀಗೆ ವಿವರಿಸುತ್ತ, ದೇವರಲ್ಲಿ ಶರಣಾಗುವುದೇ ಏಕಮಾತ್ರ ಸುಖ ಎಂದು ತಿಳಿಸಿ ಕೊಟ್ಟು ಮಣಿಮಲ್ಲಿಕನನ್ನು ಸಂತೈಸಿದರು. ಅವನು ಬಹಳಷ್ಟು ಶಾಂತನಾಗಿ, "ಇದಕ್ಕಾಗಿಯೇ ಅಲ್ಲವೆ ನಾನಿಲ್ಲಿಗೆ ಬಂದದ್ದು? ನನಗೆ ಗೊತ್ತಿತ್ತು, ನಿಮ್ಮಿಂದಲ್ಲದೆ ಬೇರೆ ಯಾರಿಂದಲೂ ಈ ದುಃಖ ಶಮನವಾಗದು ಅಂತ" ಎನ್ನುತ್ತ ಅವರಿಗೆ ಪ್ರಣಾಮ ಸಲ್ಲಿಸಿ ನಿರ್ಗಮಿಸಿದ.

ಈ ಇಡೀ ಪ್ರಸಂಗಕ್ಕೆ ಸಾಕ್ಷಿಗಳಾಗಿದ್ದವರೆಲ್ಲ ಸ್ತಬ್ಧರಾಗಿ ಕುಳಿತಿದ್ದರು.

* * * *

ಪೂರ್ವಬಂಗಾಳದ ಢಾಕಾದಲ್ಲಿ ಕಾಲೇಜು ಅಧ್ಯಾಪಕನಾಗಿದ್ದವನು ನಿತ್ಯಗೋಪಾಲ ಗೋಸ್ವಾಮಿ. ಇವನ ಪೂರ್ವಜರು ಶ್ರೀಕೃಷ್ಣಚೈತನ್ಯನ ಸಖನಾದ ನಿತ್ಯಾನಂದನ ಅನುಯಾಯಿಗಳು. ನಿತ್ಯಗೋಪಾಲ ತನ್ನ ಆಧ್ಯಾತ್ಮಿಕ ತೃಷೆಯನ್ನು ಹಿಂಗಿಸಿಕೊಳ್ಳಲು ಬ್ರಾಹ್ಮಸಮಾಜ, ಥಿಯಾಸೊಫಿಕಲ್ ಸಂಸ್ಥೆಗಳನ್ನೆಲ್ಲ ಸುತ್ತಿ, ಎಲ್ಲೂ ಸಮಾಧಾನ ಸಿಗದೆ ಚಡಪಡಿಸುತ್ತಿದ್ದ. ಆ ಸಮಯದಲ್ಲಿ ಇವನಿಗೆ ವಿಜಯಕೃಷ್ಣ ಗೋಸ್ವಾಮಿಯ ಮೂಲಕ ಶ್ರೀರಾಮಕೃಷ್ಣರ ವಿಚಾರ ತಿಳಿಯಿತು. ಕುತೂಹಲ ತಾಳಲಾರದೆ, ಅವಕಾಶ ದೊರೆತೊಡನೆಯೇ ಕಲ್ಕತ್ತಕ್ಕೆ ಬಂದು ಅವರ ದರ್ಶನ ಪಡೆದ.

ನೋಟಮಾತ್ರದಿಂದಲೇ ಅವನೊಬ್ಬ ಪ್ರಾಮಾಣಿಕ ಸಾಧಕನೆಂದು ಗುರುತಿಸಿದ ಶ್ರೀರಾಮಕೃಷ್ಣರು ಅವನನ್ನು ಪ್ರೀತಿಯಿಂದ ಮಾತನಾಡಿಸಿದರಲ್ಲದೆ, ತಮ್ಮ ಪಾದಗಳನ್ನೊತ್ತುವ ಅಪೂರ್ವ ಅವಕಾಶವನ್ನು ಕಲ್ಪಿಸಿಕೊಟ್ಟರು. ಭಾವುಕನಾದ ನಿತ್ಯಗೋಪಾಲ ತನ್ನ ಭಾಗ್ಯಕ್ಕಾಗಿ ಹಿಗ್ಗಿ ಕಣ್ಣೀರು ಸುರಿಸಿದ. ಶ್ರೀರಾಮಕೃಷ್ಣರು ಭಗವದ್ವಿಚಾರವಾಗಿ ಹೇಳುತ್ತ ಅವನಿಗೆಂದರು, "ಗುರುವಿನ ನೆರವಿಲ್ಲದೆ ಏನೂ ಆಗುವುದಿಲ್ಲ. ವಿಜಯಕೃಷ್ಣ ತನ್ನ ಗುರುವನ್ನು ಕಂಡುಕೊಂಡ; ಈಗ ಅವನಿಗೆ ಮನಶ್ಶಾಂತಿ ಸಿಕ್ಕಿದೆ. ನೀನು ಸುಮ್ಮನೆ ಯೋಗಸಾಧನೆ ಮಾಡಿದರೇನಾದೀತು ? ಗುರುಕೃಪೆಯಾದರೆ, ಏನಾಗಬೇಕೋ ಅದು

ಚಿಟಿಕೆ ಹೊಡೆಯುವಷ್ಟರಲ್ಲಿ ಸಾಧ್ಯವಾಗುತ್ತದೆ.''

ಶ್ರೀರಾಮಕೃಷ್ಣರ ವ್ಯಕ್ತಿತ್ವ, ವರ್ತನೆ, ಮಾತು ಇವೆಲ್ಲವೂ ತನ್ನನ್ನು ಮರುಳು ಮಾಡಿಬಿಟ್ಟಂತೆ ಅವನಿಗೆ ಭಾಸವಾಯಿತು. ಅಂದು ಅವನು ಒಲ್ಲದ ಮನಸ್ಸಿನಿಂದಲೇ ಅವರಿಗೆ ವಿದಾಯ ಹೇಳಿ ಹೊರಟ. ಆಗ ಶ್ರೀರಾಮಕೃಷ್ಣರು, ''ಮತ್ತೆ ಮತ್ತೆ ಬರುತ್ತಿರು. ಮಂಗಳವಾರ ಶನಿವಾರಗಳಂದು ಬಂದರೆ ಒಳ್ಳೆಯದು'' ಎಂದು ಹೇಳಿ ಕಳಿಸಿಕೊಟ್ಟರು. ಅಂದಿನಿಂದ ಅವನು ಆಗಾಗ ಬರಲಾರಂಭಿಸಿದ. ಆದರೆ ನಿಶ್ಚಲ ಶ್ರದ್ಧೆಯಿಂದ ಸಾಧನೆ ಮಾಡುವ ಶಕ್ತಿ ತನ್ನಲ್ಲಿಲ್ಲ ಎಂಬುದು ಅವನ ಕೊರಗು. ಒಂದು ದಿನ ಅದನ್ನು ಶ್ರೀರಾಮಕೃಷ್ಣರೆದುರು ಹೇಳಿಕೊಂಡ. ಆಗ ಅವರು ಅವನ ಎದೆಯನ್ನು ನೇವರಿಸುತ್ತ ''ನೀನೇನೂ ಮಾಡಬೇಕಿಲ್ಲ; ನಾನು ನಿನ್ನೊಳಗಿದ್ದೇನೆ, ನೀನು ನನ್ನೊಳಗಿರುವೆ. ಧೈರ್ಯ ವಾಗಿರು'' ಎಂದು ಭರವಸೆಯಿತ್ತರು.

ಕೆಲಕಾಲದ ಮೇಲೆ ನಿತ್ಯಗೋಪಾಲ ಢಾಕಾಗೆ ಹಿಂದಿರುಗಿದ. ಆದರೆ ಅವನ ಮನಶ್ಶಾಂತಿ ಮತ್ತೆ ದೂರವಾಯಿತು, ಕ್ಷೋಭೆ ಆವರಿಸಿತು. ಆ ಸಮಯದಲ್ಲಿ ಅವನಿಗೊಂದು ಅಲೌಕಿಕ ದರ್ಶನವಾಯಿತು. ತನ್ನಲ್ಲಿ ಹೊಸ ಶ್ರದ್ಧೆ-ಭರವಸೆಗಳನ್ನು ಮೂಡಿಸಿದ ಆ ಅದ್ಭುತ ಘಟನೆಯನ್ನು ಅವನು ಹೀಗೆ ಬಣ್ಣಿಸುತ್ತಾನೆ:

''ಢಾಕ್ಕಾದ ಆಚೆಗಿನ ಸ್ಮಶಾನವೊಂದರಲ್ಲಿ ಒಂದು ದಿನ ಅಡ್ಡಾಡುತ್ತಿದ್ದೆ; ಆಗ ಕೆಲವೇ ಹೆಜ್ಜೆಗಳಷ್ಟು ಮುಂದೆ ಒಬ್ಬ ವ್ಯಕ್ತಿ ಕುಳಿತಿರುವುದನ್ನು ಕಂಡೆ. ಒಂದು ಬಗೆಯ ಹಕ್ಕಿಗಳನ್ನು ಹಿಡಿಯಲು ಬಂದವನಿರಬೇಕು ಎಂದುಕೊಂಡೆ. ನನಗೆ ಏನೋ ಹೇಳಲು ಆತುರಗೊಂಡವನಂತೆ, ಅವನು ನನ್ನನ್ನು ಬಳಿಗೆ ಬರುವಂತೆ ಸನ್ನೆ ಮಾಡಿದ. ನಾನು ಹತ್ತಿರ ಹೋದಾಗ ತಾನೂ ಎದ್ದುನಿಂತು ಹೊರಟ. ಹೋಗುವ ಮುನ್ನ ನನ್ನೆಡೆಗೆ ತಿರುಗಿ ಕರುಣಾಪೂರ್ಣ ದನಿಯಲ್ಲಿ 'ಮಗು, ನಿತ್ಯಗೋಪಾಲ! ನಿನಗೆ ಏನು ದೊರೆತಿದೆಯೋ ಅದನ್ನು ಬಿಟ್ಟುಬಿಡಬೇಡ' ಎಂದು ಹೇಳಿ ಅದೃಶ್ಯನಾದ. ಆಮೇಲೆ ಅವನು ಎಲ್ಲೂ ಕಾಣಸಿಗಲಿಲ್ಲ. ನಾನು ವಿಜಯಬಾಬುಗಳ ಬಳಿಗೆ ಹೋಗಿ ಎಲ್ಲವನ್ನೂ ಹೇಳಿಕೊಂಡೆ. ಆಗ ಅವರು, ತಮಗೂ ಶ್ರೀರಾಮಕೃಷ್ಣರು ಅದೇ ರೀತಿಯಲ್ಲಿ ಅನೇಕ ಬಾರಿ ದರ್ಶನ ಕೊಟ್ಟಿದ್ದಾರೆಂದು ತಿಳಿಸಿದರು. . . . ''

*  *  *  *

ಈಶಾನಚಂದ್ರ ಮುಖರ್ಜಿ ಎಂಬವನು ಠನಠನಿಯಾದ ಒಬ್ಬ ಸದ್ಗೃಹಸ್ಥ. ಒಳ್ಳೆಯ ಸರ್ಕಾರೀ ಕೆಲಸದಲ್ಲಿದ್ದು ನಿವೃತ್ತನಾದವನು. ವಿಶ್ರಾಂತಿ ದೊರೆತ ಮೇಲೆ ತನ್ನ ಹೆಚ್ಚಿನ ಸಮಯವನ್ನು ಸಾಧನೆ ಭಜನೆಗಳಲ್ಲಿ ಕಳೆಯಲಾರಂಭಿಸಿದ್ದ. ಶ್ರೀರಾಮಕೃಷ್ಣರಲ್ಲಿ ಅವನಿಗೆ ಬಹಳವಾದ ಶ್ರದ್ಧಾಭಕ್ತಿ. ಅವಕಾಶ ದೊರತಾಗಲೆಲ್ಲ ದಕ್ಷಿಣೇಶ್ವರಕ್ಕೆ ಬರುತ್ತಿದ್ದನಲ್ಲದೆ ಶ್ರೀರಾಮಕೃಷ್ಣರನ್ನು ಆಗಾಗ ಮನೆಗೆ ಕರೆಸಿಕೊಳ್ಳುತ್ತಿದ್ದ. ನಿಜಕ್ಕೂ ಅವನಂತಹ ದಾನಶೀಲನೂ ದಯಾಳುವೂ ಭಕ್ತಿವಂತನೂ ಆದವನೊಬ್ಬನು ಕಾಣಸಿಗುವುದು ಬಹಳ ಅಪರೂಪ. ಅವನ ಮಕ್ಕಳೆಲ್ಲ ವಿದ್ಯಾಬುದ್ಧಿಸಂಪನ್ನರು. ಆತನ ಮೂರನೆಯ ಮಗ ನರೇಂದ್ರನ ಸಹಪಾಠಿಯಾಗಿದ್ದ. ಇವನು ಬಹಳ ಚೆನ್ನಾಗಿ ಮೃದಂಗ ಬಾರಿಸಬಲ್ಲವನಾದ್ದರಿಂದ ಆಗಾಗ ಇವರ ಮನೆಯಲ್ಲಿ ನರೇಂದ್ರನ ಮಧುರ ಗಾಯನ ಕೇಳಿಬರುತ್ತಿತ್ತು. ಈಶಾನನ ದಯಾಬುದ್ಧಿಯನ್ನು ಚೆನ್ನಾಗಿ ಕಂಡಿದ್ದ ನರೇಂದ್ರ, ''ಪಂಡಿತ

ವಿದ್ಯಾಸಾಗರನ ದಯೆಗಿಂತ ಅವನ ದಯೆಯೆಂಬುದು ಯಾವ ರೀತಿಯಲ್ಲೂ ಕಡಿಮೆ ಯಿರಲಿಲ್ಲ'' ಎನ್ನುತ್ತಿದ್ದ. ಎಷ್ಟೋ ದಿನ ಆತ ತನ್ನ ಪಾಲಿನ ಊಟವನ್ನು ಹಸಿದ ಭಿಕ್ಷುಕನಿಗೆ ನೀಡಿ, ಮನೆಯಲ್ಲಿ ತಿನ್ನಲು ಬೇರೇನೂ ಇಲ್ಲದಿದ್ದರೆ ಉಪವಾಸವಿರುತ್ತಿದ್ದ ನಂತೆ! ಇತರರ ಕಷ್ಟಗಳ ಬಗ್ಗೆ ಕೇಳಿ, ತನಗೆ ಅವುಗಳನ್ನು ಹೋಗಲಾಡಿಸುವ ಶಕ್ತಿಯಿಲ್ಲ ವಲ್ಲ ಎಂದು ಅವನು ಕಣ್ಣೀರು ಸುರಿಸುವುದನ್ನು ನರೇಂದ್ರ ಅನೇಕ ಬಾರಿ ಕಂಡಿದ್ದ.

ಈಶಾನ ಎಷ್ಟು ದಯಾಪರನಾಗಿದ್ದನೋ ಅಷ್ಟೇ ಜಪಪರಾಯಣನೂ ಆಗಿದ್ದ. ಅವನ ಸಾಧನಾನಿಷ್ಠೆಯನ್ನು ಕಂಡು ಶ್ರೀರಾಮಕೃಷ್ಣರು ಅತ್ಯಂತ ಸಂತುಷ್ಟರಾಗಿದ್ದರು. ದಕ್ಷಿಣೇಶ್ವರಕ್ಕೆ ಬಂದಾಗಲೂ ಆತ ಗಂಟೆಗಟ್ಟಲೆ ಕಾಲ ಜಪನಿರತನಾಗಿದ್ದುಬಿಡುತ್ತಿದ್ದ. ಒಂದು ಸಂಜೆ ಅವನು ಜಪ ಮುಗಿಸಿಕೊಂಡು ಬಂದು ತಮಗೆ ಪ್ರಣಾಮ ಮಾಡಿದಾಗ ಶ್ರೀರಾಮಕೃಷ್ಣರು ಭಾವಾವಿಷ್ಟರಾಗಿ ತಮ್ಮ ಪವಿತ್ರ ಪಾದವನ್ನು ಅವನ ತಲೆಯ ಮೇಲಿರಿಸಿ ಕೃಪೆಮಾಡಿದರು. ಬಾಹ್ಯಪ್ರಜ್ಞೆ ಮರಳಿದ ಮೇಲೆ ಗಟ್ಟಿಯಾಗಿ ಹೀಗೆಂದರು: "ಬ್ರಾಹ್ಮಣಾ! ಮುಳುಗಿಬಿಡು, ಮುಳುಗಿಬಿಡು!'' (ಎಂದರೆ, 'ಮೇಲುಮೇಲಿನ ಜಪ ವನ್ನಷ್ಟೇ ಮಾಡಿಕೊಂಡಿರದೆ ಭಗವಂತನ ಸ್ಮರಣೆಯಲ್ಲೇ ಮಗ್ನನಾಗು'.) ಈಶಾನಚಂದ್ರ ಆ ಮಾತನ್ನು ಅನುಷ್ಠಾನಕ್ಕೆ ತರುವ ಪ್ರಯತ್ನದಲ್ಲಿ ತೊಡಗಿದ.

ತನ್ನ ಸಂಸಾರದ ಭಾರವನ್ನು ಅವನು ತನ್ನ ಗಂಡುಮಕ್ಕಳಿಗೆ ಒಪ್ಪಿಸಿಬಿಟ್ಟಿದ್ದ. ಅವನ ಮನೆಮಂದಿಯೆಲ್ಲರೂ ಅವನಿಗೆ ತಕ್ಕಂತೆ ಸಾತ್ವಿಕರೂ ಭಕ್ತರೂ ಆಗಿದ್ದರು. ಇದು ಶ್ರೀರಾಮಕೃಷ್ಣರಿಗೆ ಬಹಳ ಸಂತೋಷವುಂಟುಮಾಡಿದ್ದ ಸಂಗತಿ.

ಈಶಾನ ತನ್ನ ಹಿತಕರ ಸ್ವಭಾವದಿಂದಾಗಿ ಎಲ್ಲರಿಗೂ ಬೇಕಾದವನಾಗಿದ್ದ. ಕೆಲ ವೊಮ್ಮೆ ಅವನ ಪರಿಚಯಸ್ಥರು ತಮ್ಮ ವ್ಯಾಜ್ಯಗಳನ್ನು ತೀರ್ಮಾನಿಸಲು ಅವನನ್ನು ಮಧ್ಯಸ್ಥನನ್ನಾಗಿ ಆಹ್ವಾನಿಸುತ್ತಿದ್ದರು. ಲೋಕದ ದೃಷ್ಟಿಯಲ್ಲಿ ಇದೊಂದು ಸತ್ಕಾರ್ಯ ಎನ್ನುವುದು ನಿಜವೇ. ಆದರೆ ಈ ಬಗೆಯ 'ಒಳ್ಳೆಯ ಕೆಲಸ'ಗಳನ್ನೆಲ್ಲ ಸಾಕುಮಾಡಿ ಮಾನವನ ಪರಮ ಕರ್ತವ್ಯವಾದ ಭಗವತ್ಸಾಕ್ಷಾತ್ಕಾರದತ್ತ ಗಮನ ಹರಿಯಿಸುವುದೇ ಲೇಸು ಎಂದು ಶ್ರೀರಾಮಕೃಷ್ಣರು ಒಮ್ಮೆ ಅವನಿಗೆ ಸ್ವಲ್ಪ ಕಠಿಣವಾಗಿಯೇ ಬುದ್ಧಿ ಹೇಳುತ್ತಾರೆ.

* * * *

ನವಗೋಪಾಲ ಘೋಷ್ ಒಬ್ಬ ಅನುಕೂಲಸ್ಥ, ಧಾರ್ಮಿಕ ವ್ಯಕ್ತಿ. ಬಹಳ ದಿನ ಗಳಿಂದಲೂ ತನಗೆ ಸಾಕ್ಷಾತ್ಕಾರದ ಮಾರ್ಗವನ್ನು ತೋರಿಸಿಕೊಡಬಲ್ಲ ಸಾಧುವೊಬ್ಬನ ಶೋಧನೆಯಲ್ಲಿದ್ದ. ಕಡೆಗೆ ಸ್ನೇಹಿತನೊಬ್ಬನ ಸಲಹೆಯಂತೆ ಸಪತ್ನೀಕನಾಗಿ ದಕ್ಷಿಣೇ ಶ್ವರಕ್ಕೆ ಹೋಗಿ ಶ್ರೀರಾಮಕೃಷ್ಣರ ದರ್ಶನ ಪಡೆದ. ಶ್ರೀರಾಮಕೃಷ್ಣರು ವಿಶ್ವಾಸದಿಂದ ಬರಮಾಡಿಕೊಂಡರು. ನವಗೋಪಾಲ ಮೊದಲ ಭೇಟಿಯಲ್ಲೇ ಅವರ ದಿವ್ಯತೆಯನ್ನು ಗುರುತಿಸಿದ.

ಆದರೆ ಅವನು ಮತ್ತೆ ಅವರ ಬಳಿಗೆ ಹೋಗಲೇ ಇಲ್ಲ. ಏಕೆಂದರೆ ಅವನು ಯಾವುದೋ ಒಂದು ನಿರ್ದಿಷ್ಟ ಸಾಧನೆಯಲ್ಲಿ ತೊಡಗಿದ್ದ. ಅದು ಮುಗಿಯುವವರೆಗೆ ಯಾವ ಸಾಧುವಿನ ಬಳಿಗೂ ಹೋಗಬಾರದು ಎಂದು ಸಂಕಲ್ಪಿಸಿದ್ದ. ಹೀಗೆ ಸುಮಾರು ಮೂರು ವರ್ಷಗಳು ಕಳೆದುಹೋದುವು.

ಇಷ್ಟು ದೀರ್ಘಕಾಲ ಅವನ ಸಮಾಚಾರವೇ ಇಲ್ಲದಿದ್ದರೂ ಶ್ರೀರಾಮಕೃಷ್ಣರು ಮಾತ್ರ ಅವನನ್ನು ಮರೆತಿರಲಿಲ್ಲ. ಇದ್ದಕ್ಕಿದ್ದಂತೆ ಒಂದು ದಿನ ಅವರು ಒಬ್ಬ ಭಕ್ತನ ಹತ್ತಿರ—ಬಹುಶಃ ಅವನ ಪರಿಚಯುದವನಿರಬೇಕು—ನವಗೋಪಾಲನ ಪ್ರಸ್ತಾಪ ವೆತ್ತಿ ಅವನನ್ನು ಕರೆದುಕೊಂಡು ಬರುವಂತೆ ಹೇಳಿದರು. ಆಗತಾನೆ ನವಗೋಪಾಲನ ಸಾಧನೆ ಮುಗಿದಿತ್ತು. ಶ್ರೀರಾಮಕೃಷ್ಣರಿನ್ನೂ ತನ್ನನ್ನು ನೆನಪಿಟ್ಟುಕೊಂಡಿದ್ದಾರೆ, ಮತ್ತು ಅವರಾಗಿಯೇ ತನಗೆ ಕರೆಕಳಿಸಿದ್ದಾರೆ ಎಂದು ತಿಳಿದಾಗ ಅವನಿಗಾದ ವಿಸ್ಮಯ, ಸಂತಸ ಅಷ್ಟಿಷ್ಟಲ್ಲ. ಓಡಿದ ದಕ್ಷಿಣೇಶ್ವರಕ್ಕೆ. ಶ್ರೀರಾಮಕೃಷ್ಣರು ಮತ್ತೆ ಅವನಿಗೆ ತಮ್ಮ ಪ್ರೀತಿಯ ಮಡಿಲಲ್ಲಿ ಆಶ್ರಯವಿತ್ತರು. ನವಗೋಪಾಲನೂ ಅವನ ಮನೆಮಂದಿಯೂ ಅವರ ಪರಮಭಕ್ತರಾದರು.

ಗುರುಭಕ್ತಿಯೇ ನವಗೋಪಾಲನಿಗೆ ಜೀವನದ ಪ್ರೇರಕಶಕ್ತಿಯಾಯಿತು. ಶ್ರೀರಾಮ ಕೃಷ್ಣರ ನಾಮಶ್ರವಣದಲ್ಲಿ ಅವನಿಗೆ ಪರಮಾನಂದ. ಅವನ ಮನೆಯ ಸಮೀಪದಲ್ಲಿದ್ದ ತಿರುಕಮಕ್ಕಳಿಗೂ ಈ ವಿಷಯ ತಿಳಿಯಲು ತಡವಾಗಲಿಲ್ಲ. ಅವನು ಪ್ರತಿದಿನ ಬೆಳಗ್ಗೆ ಗಂಗಾಸ್ನಾನಕ್ಕೆ ಹೊರಟನೆಂದರೆ ಈ ಮಕ್ಕಳೆಲ್ಲ ಅವನ ಸುತ್ತಲೂ ಮುತ್ತಿಕೊಂಡು ತಮ್ಮ ಕೀರಲು ದನಿಯಲ್ಲಿ "ಜೈ ರಾಮಕೃಷ್ಣ!" "ಜೈ ರಾಮಕೃಷ್ಣ!" ಎಂದು ಕೂಗುತ್ತ ಕುಣಿಯುತ್ತ ಮೆರವಣಿಗೆ ಬರುತ್ತಿದ್ದುವಂತೆ! ಅದಕ್ಕೆ ಪ್ರತಿಯಾಗಿ ಅವನು ಒಂದೊಂದು ಮುಷ್ಟಿ ತುಂಬ ಕಾಸು ತೆಗೆದು ಅವರ ಮಧ್ಯೆ ಎರಚುತ್ತಿದ್ದನಂತೆ!

ನವಗೋಪಾಲನ ಹೆಂಡತಿಯೂ ಶ್ರೀರಾಮಕೃಷ್ಣರಲ್ಲಿ ಅತಿಶಯ ಭಕ್ತಿಯನ್ನಿಟ್ಟಿದ್ದವಳು. ಅವಳ ಇಷ್ಟದೇವತೆ ಕೃಷ್ಣ. ಬಹಳ ದಿನಗಳಿಂದಲೂ ಅವಳು ತನ್ನಷ್ಟಕ್ಕೆ ಹರಿನಾಮ ಜಪ ಮಾಡಿಕೊಂಡು ಬಂದಿದ್ದಳು. ಆದರೆ ಕ್ರಮೇಣ ಅವಳ ಮನಸ್ಸಿನಲ್ಲೊಂದು ಸಂಶಯದ ಹುಳ ಕೊರೆಯಲಾರಂಭಿಸಿತು. ಅವಳು ಯೋಚಿಸಿದಳು: "ಅಲ್ಲಾ, ನಾನು ಹೀಗೆ ಹರಿನಾಮ ಜಪ ಮಾಡುತ್ತಿದ್ದೇನೆ. ಕೆಲವರು ಹೇಳುತ್ತಾರೆ, 'ಮುಕ್ತಿಯನ್ನು ಕರುಣಿಸುವವನು ಗುರು, ಅವನಲ್ಲೇ ಶರಣಾಗಬೇಕು' ಎಂದು. ನಾನು ಹರಿನಾಮ ಜಪ ಮಾಡಬೇಕೋ ಬೇಡವೋ?" ಶ್ರೀರಾಮಕೃಷ್ಣರನ್ನೇ ಕೇಳಿಬಿಡೋಣ ಎಂದು ಕೊಂಡು ಅವರ ಬಳಿ ಹೋದಳು. ಅವಳು ತನ್ನ ಸಮಸ್ಯೆಯನ್ನು ಹೇಳಿಕೊಳ್ಳುವ ಮೊದಲೇ ಸಾಂದರ್ಭಿಕವಾಗಿ ಶ್ರೀರಾಮಕೃಷ್ಣರೆಂದರು:

"ಗುರು ಹರಿ ಇಬ್ಬರೂ ಒಂದೇ."

ಅವಳ ಸಮಸ್ಯೆ ಬಗೆಹರಿಯಿತು. ಜಪ ಮಾಡುವುದನ್ನು ಮುಂದುವರಿಸಿದಳು.

* * * *

ಹಳೆಯ ಭಕ್ತರು ತಾವು ಕಂಡುಕೊಂಡ ಅನರ್ಘ್ಯ ಆಧ್ಯಾತ್ಮಿಕ ನಿಧಿಯನ್ನು ಇತರರಿಗೂ ತೋರಿಸುವ ಉತ್ಸುಕತೆಯಿಂದ ಹೊಸಹೊಸಬರನ್ನು ಕರೆತರುತ್ತಿದ್ದರು. ಹೀಗೆ ಸುರೇಂದ್ರನ ತಮ್ಮ ಗಿರೀಂದ್ರ, ಮನಮೋಹನನ ಸೋದರಮಾವ ನಬಾಯಿ ಚೈತನ್ಯ, ಮಹೇಂದ್ರಗುಪ್ತನ ತಮ್ಮ ಕಿಶೋರಿ ಇವರೆಲ್ಲ ಶ್ರೀರಾಮಕೃಷ್ಣರ ಸಂಪರ್ಕಕ್ಕೆ ಬಂದು ಧನ್ಯರಾದರು.

ಗಿರೀಶಚಂದ್ರನಿಗೆ ಅತುಲಕೃಷ್ಣನೆಂಬ ತಮ್ಮನಿದ್ದ. ಗಿರೀಶ ಶ್ರೀರಾಮಕೃಷ್ಣರ ಪ್ರಭಾವವಲಯಕ್ಕೆ ಸಿಲುಕಿದ ಎಷ್ಟೋ ಕಾಲವಾದಮೇಲೂ ಇವನು ಮಾತ್ರ ಅವರನ್ನು

ಸಂಧಿಸಿರಲಿಲ್ಲ. ಭಕ್ತರು ಅವರ ಮೇಲೆ ತೋರುತ್ತಿದ್ದ ಭಕ್ತ್ಯಾದರಗಳನ್ನು ಕಂಡು ಅವನಿಗೆ, ಅವರೊಬ್ಬ ಆಡಂಬರದ ಪ್ರತಿಷ್ಠೆಯ ವ್ಯಕ್ತಿಯಿರಬೇಕು ಎಂಬ ದುರಭಿಪ್ರಾಯ ಬಂದುಬಿಟ್ಟಿತ್ತು. ಆದ್ದರಿಂದ ಅವರಿಂದ ದೂರವೇ ಇದ್ದುಬಿಟ್ಟಿದ್ದ. ಅಷ್ಟೇ ಅಲ್ಲ, ಅವರನ್ನು 'ಪರಮಹಂಸರು' ಎನ್ನುವ ಬದಲು ವ್ಯಂಗ್ಯವಾಗಿ 'ರಾಜಹಂಸ' ಎಂಬ ಹೆಸರಿಟ್ಟು ಕರೆಯುತ್ತಿದ್ದ.

ಒಂದು ದಿನ ಗಿರೀಶ ಇವನ ಮನೆಗೆ ಬಂದಿದ್ದ. ಮಾತಿನ ಮಧ್ಯೆ ಶ್ರೀರಾಮಕೃಷ್ಣರ ಪ್ರಸ್ತಾಪ ಬಂತು. ಗಿರೀಶ ಎಷ್ಟೇ ಹೇಳಿದರೂ ಅತುಲ ತನ್ನ ಅಭಿಪ್ರಾಯವನ್ನು ಬದಲಿಸಿ ಕೊಳ್ಳಲು ಒಪ್ಪಲೇ ಇಲ್ಲ. ಹೀಗೆ ಮಾತುಕತೆ ನಡೆಯುತ್ತಿರುವಾಗ, ಗಿರೀಶನನ್ನು ನೋಡುವ ನೆಪದಲ್ಲಿ ಶ್ರೀರಾಮಕೃಷ್ಣರು ಅಲ್ಲಿಗೇ ಬಂದುಬಿಟ್ಟರು ! ಅಲ್ಲಿ ಅತುಲನನ್ನು ಕಂಡು, ಗಿರೀಶನಿಗೆ ಅರ್ಧ ಹಾಸ್ಯವಾಗಿ ಹೇಳಿದರು:

"ಓ, ನಿನ್ನ ತಮ್ಮನಲ್ಲವೆ ? ಇವನೆಂದರೆ ನನಗೆ ಒಂದು ರೀತಿಯ ಭಯವಾಗು ತ್ತಿತ್ತು. ಆದರೆ ಇವನನ್ನು ನೋಡಿದ ಮೇಲೆ ಹಾಗೇನೂ ಅನ್ನಿಸುತ್ತಿಲ್ಲ."

ಆಗ ಗಿರೀಶ, ಅವನಿಗೆ ಅವರ ಮೇಲೆ ಭಕ್ತಿಯಿಲ್ಲದಿರುವುದನ್ನೂ ಅವರನ್ನು 'ರಾಜಹಂಸ' ಎಂದು ಲೇವಡಿ ಮಾಡುವುದನ್ನೂ ತಿಳಿಸಿದ. ಶ್ರೀರಾಮಕೃಷ್ಣರು ಮುಗುಳ್ನಕ್ಕು ನುಡಿದರು:

"ಹಾಗೇನು ! ಅದು ಒಳ್ಳೆಯ ಮಾತೇ ಆಯಿತಲ್ಲ ! ನೋಡು, ಸಾಮಾನ್ಯವಾದ ಬಾತುಕೋಳಿಯಾದರೆ, ಹಾಲು-ನೀರನ್ನು ಬೆರೆಸಿ ಎದುರಿಗಿಟ್ಟಾಗ ಎರಡನ್ನೂ ಕುಡಿದು ಬಿಡುತ್ತದಂತೆ. ಆದರೆ ರಾಜಹಂಸ ಹಾಗಲ್ಲ; ಅದು ಆ ಮಿಶ್ರಣದಿಂದ ಹಾಲನ್ನಷ್ಟೇ ಕುಡಿಯಬಲ್ಲುದು ಎನ್ನುತ್ತಾರೆ. ಅಂಥ ವಿಶೇಷ ಶಕ್ತಿ ಅದಕ್ಕೆ. ಆದ್ದರಿಂದ ನಿನ್ನ ತಮ್ಮ ನನಗೆ ಒಳ್ಳೆಯ ಹೆಸರನ್ನೇ ಇಟ್ಟಿದ್ದಾನೆ ಎನ್ನಬೇಕು."

ಶ್ರೀರಾಮಕೃಷ್ಣರ ಸರಳ-ಸಹಜ ನಡವಳಿಕೆ ಅತುಲನಿಗೆ ಮೆಚ್ಚುಗೆಯಾಯಿತು. ಆದರೂ ಅವರನ್ನು 'ಠಾಕೂರರು' 'ಪರಮಹಂಸರು' ಎಂಬಿತ್ಯಾದಿಯಾಗಿ ಕರೆಯಲು ಮನಸ್ಸೊಪ್ಪಲಿಲ್ಲ. ಅವರನ್ನೇ ಕೇಳಿದ:

"ಸರಿ, . . .ನಾನು ನಿಮ್ಮನ್ನು ಹೇಗೆ ಸಂಬೋಧಿಸಬೇಕು. . ."

ಅವನ ಮನವನ್ನರಿತ ಶ್ರೀರಾಮಕೃಷ್ಣರು ಒಡನೆಯೇ ನುಡಿದರು:

"ಏಕೆ ! ಜನ ಯಾರಾದರೂ ಅಪರಿಚಿತರನ್ನು ಕರೆಯುವುದಿಲ್ಲವೆ ('ಅಯ್ಯಾ', 'ಸ್ವಾಮಿ' ಎಂದು), ಹಾಗೆಯೇ ನನ್ನನ್ನೂ ಕರೆದರೆ ಸಾಕು."

ಅವರ ಈ ನಿಷ್ಕಪಟತೆ ಅತುಲನ ಮೇಲೆ ಮೋಡಿಹಾಕಿತು. ಅವನ ಪೂರ್ವಗ್ರಹ ವೆಲ್ಲ ಅಳಿಸಿಹೋಯಿತು. ತನ್ನ ದುಡುಕಿಗಾಗಿ ನಾಚಿದ. ಶ್ರೀರಾಮಕೃಷ್ಣರ ಆಹ್ವಾನವನ್ನು ಮನ್ನಿಸಿ, ಒಂದು ದಿನ ದಕ್ಷಿಣೇಶ್ವರಕ್ಕೆ ಹೋದ. ಅಲ್ಲಿನ ದೇವಸ್ಥಾನಗಳನ್ನೂ ಶ್ರೀರಾಮ ಕೃಷ್ಣರ ಸಾಧನಾ ಸ್ಥಳಗಳನ್ನೂ ದರ್ಶಿಸಿದ. ಬಳಿಕ ಗಂಗಾತೀರಕ್ಕೆ ಬಂದು ನಿಂತಿದ್ದಾಗ ಅವನಿಗೊಂದು ಅದ್ಭುತ ದರ್ಶನವಾಯಿತು. ಶ್ರೀರಾಮಕೃಷ್ಣರ ಕೃಪಾವಿಶೇಷದಿಂದಲೇ ಅದು ತನಗೆ ಲಭಿಸಿದ ಭಾಗ್ಯ ಎಂದು ಅರಿತು ಅವರಲ್ಲಿ ಸಂಪೂರ್ಣ ಶರಣಾದ. ಅವ ರನ್ನು ಗುರುವೆಂದು ಸ್ವೀಕರಿಸಿದ.

ಭಕ್ತವೃಂದದಲ್ಲಿ ಹೆಸರಿಸಬಹುದಾದ ಇನ್ನು ಕೆಲವು ಗಣ್ಯರೆಂದರೆ ಹರಮೋಹನ ಮಜುಮ್ದಾರ, ಕವಿರಾಜ ಮಹೇಂದ್ರನಾಥ ಪಾಲ್, ಬಾಗ್‌ಬಜಾರಿನ ಚುನಿಲಾಲ್

ಬೋಸ್ ಹಾಗೂ ಬಾನ್ ಹೂಗ್ಲೀ ಎಂಬಲ್ಲಿನ ಕಿಶೋರೀಮೋಹನರೇ.

ಹಾಗೆಯೇ ಮಹಿಳಾಭಕ್ತರಲ್ಲಿ ಕೆಲವು ಪ್ರಮುಖರನ್ನು ಗುರುತಿಸಬಹುದು. ಇವರ ಪೈಕಿ ಮನಮೋಹನ ಮಿತ್ರನ ವಿಧವೆ ತಾಯಿಗೆ (ಇವಳು ರಾಖಾಲನ ಅತ್ತೆ ಕೂಡ) ಶ್ರೀರಾಮಕೃಷ್ಣರು ಒಂದು ವಿಶೇಷ ಸ್ಥಾನವನ್ನಿತ್ತಿದ್ದರು. ಅಸಾಮಾನ್ಯ ಆಧ್ಯಾತ್ಮಿಕ ಪ್ರವೃತ್ತಿಯುಳ್ಳ ಸ್ತ್ರೀ ಆಕೆ. ಪತಿಯ ಜೀವಿತಾವಧಿಯಲ್ಲಿ ಆದರ್ಶಸತಿಯಾಗಿ ಜೀವಿಸಿದ ಅವಳು, ವಿವಾಹವು ಒಂದು ಬಿಡಿಸಲಾಗದ ಬಂಧನವೆಂದು ನಂಬಿದ್ದಳು. ಪತಿ ಕಾಲವಶನಾದ ಮೇಲೆ ತನ್ನ ಪಾಲಿನ ಲೌಕಿಕ ಬಾಳುವೆಯೂ ಅಂತ್ಯಗೊಂಡಂತೆಯೇ ಪರಿಭಾವಿಸಿ, ಕಠಿಣ ವೈರಾಗ್ಯಜೀವನವನ್ನು ನಡೆಸಲಾರಂಭಿಸಿದಳು.

ಒಮ್ಮೆ ಇವಳು ಇತರ ಭಕ್ತೆಯರೊಂದಿಗೆ ಶ್ರೀರಾಮಕೃಷ್ಣರ ಸಮ್ಮುಖದಲ್ಲಿ ಕುಳಿತಿದ್ದಾಗ, ಸ್ತ್ರೀಯರ ಕರ್ತವ್ಯದ ಪ್ರಸ್ತಾಪ ಬಂದಿತು. 'ನಿಷ್ಠೆಯಿಂದ ಪತಿಸೇವೆ ಮಾಡುವುದೇ ಹೆಂಡತಿಯಾದವಳ ಪರಮ ಕರ್ತವ್ಯ; ಆತನನ್ನು ಸತಿ ಭಗವತ್ ಸ್ವರೂಪಿ ಎಂಬಂತೆ ಕಂಡು ಆರಾಧಿಸಬೇಕು' ಎಂದು ಶ್ರೀರಾಮಕೃಷ್ಣರು ನುಡಿದರು. ಪತಿ ಪತ್ನಿಯರ ಸಂಬಂಧವು ಕೇವಲ ಪ್ರಾಪಂಚಿಕ ವ್ಯವಹಾರಕ್ಕೆ ಸೀಮಿತವಾಗಿರಬೇಕಾದ್ದಲ್ಲ ಎನ್ನುತ್ತ ಒಂದು ಕತೆಯನ್ನು ಉದಾಹರಿಸಿದರು:

"ಒಬ್ಬಳು ರಾಣಿ ತನ್ನ ಗಂಡ ಬದುಕಿದ್ದಾಗ ಯಾವ ಒಡವೆಯನ್ನೂ ಧರಿಸದೆ, ಕೈಗಳಿಗೆ ಕಬ್ಬಿಣದ ಕಡಗಗಳನ್ನು ಮಾತ್ರ ಹಾಕಿಕೊಂಡಿದ್ದಳು. ಅವಳ ಬಂಧು ಬಾಂಧವರು ಎಷ್ಟೇ ಹೇಳಿದರೂ ಅವಳು ಬೇರೆ ಯಾವ ಒಡವೆಯನ್ನೂ ಧರಿಸುತ್ತಿರಲಿಲ್ಲ. ಆದರೆ ರಾಜ ತೀರಿಹೋದ ಮೇಲೆ ಅವಳು ಕಬ್ಬಿಣದ ಕಡಗಗಳನ್ನು ಒಡೆದು ಹಾಕಿ, ಮೈತುಂಬ ಬಂಗಾರದ ಆಭರಣಗಳನ್ನು ತೊಟ್ಟುಕೊಂಡಳು. ಅದನ್ನು ಕಂಡವರೆಲ್ಲ ಬೆರಗಾಗಿಹೋದರು. ಅವಳ ಒಬ್ಬಳು ಸಖಿ ಮಾತ್ರ, 'ಇದೇನು! ಹೀಗೆ ಮಾಡಿಬಿಟ್ಟೆಯಲ್ಲ' ಅಂತ ಕೇಳಿದಾಗ ಅವಳು ಹೇಳುತ್ತಾಳೆ, 'ನೋಡು, ನನ್ನ ಪತಿ ನಶ್ವರವಾದ ಮಾನವ ದೇಹದಲ್ಲಿರುವವರೆಗೂ ನಾನು ಸಾಮಾನ್ಯವಾದ ಕಬ್ಬಿಣದ ಬಳೆಗಳನ್ನು ಹಾಕಿಕೊಂಡಿದ್ದೆ. ಈಗ ಅವನು ಮರ್ತ್ಯದೇಹವನ್ನು ಬಿಟ್ಟು, ಪರಮಾತ್ಮನಲ್ಲಿ ಲೀನವಾಗಿ ಶಾಶ್ವತಸ್ಥಾನವನ್ನು ಪಡೆದಿರುವುದರಿಂದ ಅನರ್ಘ್ಯವಾದ ಈ ಸ್ವರ್ಣಾಭರಣಗಳನ್ನು ತೊಟ್ಟಿದ್ದೇನೆ' ಅಂತ." ಹೀಗೆಂದ ಶ್ರೀರಾಮಕೃಷ್ಣರು ಮನಮೋಹನನ ತಾಯಿಯನ್ನು ತೋರಿಸಿ ಹೇಳುತ್ತಾರೆ, "ಆ ಕಾರಣದಿಂದಲೇ ಇವಳೂ ಚಿನ್ನದ ಬಳೆಗಳನ್ನು ಹಾಕಿಕೊಳ್ಳುವುದು. ತನ್ನ ಪತಿಯ ಬಗ್ಗೆ ಇವಳ ಭಾವವೂ ಅಂಥದೇ."

ತನ್ನ ಅಳಿಯನಾದ ರಾಖಾಲ ಕ್ರಮೇಣ ಶ್ರೀರಾಮಕೃಷ್ಣರಿಗೆ ಅತ್ಯಂತ ಆಪ್ತನಾಗಿ, ಅವನು ಸಂಸಾರವನ್ನು ತೊರೆದು ಸಂನ್ಯಾಸಿಯಾಗುವ ಸಾಧ್ಯತೆಯ ಬಗ್ಗೆ ಎಲ್ಲರೂ ಮಾತಾಡತೊಡಗಿದಾಗ ಇವಳು ಧೈರ್ಯವಾಗಿ ನುಡಿಯುತ್ತಾಳೆ, "ನನ್ನ ಅಳಿಯ ಭಗವಂತನಿಗೋಸ್ಕರ ಸಂಸಾರವನ್ನು ತ್ಯಜಿಸಿದರೆ ಅದು ನನ್ನ ಪರಮಪುಣ್ಯ!" ಶ್ರೀರಾಮಕೃಷ್ಣರ ಮೇಲೆ ಅವಳಿಟ್ಟಿದ್ದ ಭಕ್ತಿ-ಗೌರವ ಎಷ್ಟು ಗಾಢವಾದದ್ದೆಂದರೆ, ಅವರು ಮೆಚ್ಚಿಕೊಳ್ಳುವುದಾದರೆ, ಸಂಪ್ರದಾಯ ಸಮ್ಮತವಾದ ಧಾರ್ಮಿಕ ರೀತಿ-ರಿವಾಜುಗಳನ್ನು ಬಿಟ್ಟುಬಿಡಲೂ ಅವಳು ಹಿಂದೆಮುಂದೆ ನೋಡುತ್ತಿರಲಿಲ್ಲ.

ದೇವೇಂದ್ರ ಮಜುಮ್ದಾರನ ವೃದ್ಧ ಮಾತೆ ಶ್ರೀರಾಮಕೃಷ್ಣರನ್ನು ವಾತ್ಸಲ್ಯ ಭಾವದಿಂದ—ತಾನವರ ತಾಯಿಯೆಂಬಂತೆ—ನೋಡುತ್ತಿದ್ದಳು. ಒಮ್ಮೆ ಅವಳು ತನ್ನ

ಮಗ ಹಾಗೂ ಇನ್ನಿತರ ಕೆಲವರೊಂದಿಗೆ ದಕ್ಷಿಣೇಶ್ವರಕ್ಕೆ ಹೋದಳು. ಹೋಗುವಾಗ ಒಂದಿಷ್ಟು ಬತ್ತಾಸು ಕಟ್ಟಿಕೊಂಡಿದ್ದಳು. 'ಅಂಥ ಸಾಮಾನ್ಯ ತಿನಿಸನ್ನು ಕೊಡುವುದೆ ?' ಎಂದು ಮಗ ಆಕ್ಷೇಪಿಸಬಹುದು ಎಂದೋ ಏನೋ, ಬತ್ತಾಸಿನ ವಿಷಯವನ್ನು ಯಾರಿಗೂ ಹೇಳಿರಲಿಲ್ಲ. ಮಧ್ಯಾಹ್ನದ ಹೊತ್ತಿಗೆ ಎಲ್ಲರೂ ದಕ್ಷಿಣೇಶ್ವರವನ್ನು ತಲುಪಿದರು. ಉಳಿದವರೆಲ್ಲ ಶ್ರೀರಾಮಕೃಷ್ಣರಿಗೆ ಸಾಷ್ಟಾಂಗ ಪ್ರಣಾಮ ಮಾಡಿದರಾದರೂ ದೇವೇಂದ್ರನ ತಾಯಿ ಮಾತ್ರ ಮಾಡಲಿಲ್ಲ. ಶ್ರೀರಾಮಕೃಷ್ಣರು ಅವಳನ್ನು "ಅಮ್ಮಾ!" ಎಂದು ಸಂಬೋಧಿಸಿ, ತಮ್ಮ ಪಕ್ಕದಲ್ಲೇ ಮಂಚದ ಮೇಲೆ ಕುಳ್ಳಿರಿಸಿಕೊಂಡರು. ಅವರಿಬ್ಬರೂ ತಾಯಿ ಮಕ್ಕಳಂತೆಯೇ ಸಲುಗೆಯಿಂದ ವರ್ತಿಸುವುದನ್ನು, ಮಾತನಾಡುವುದನ್ನು ಕಂಡು ಉಳಿದವರಿಗೆಲ್ಲ ಸೋಜಿಗ. ದೇವೇಂದ್ರನ ತಾಯಿಗೆ ಆನಂದಾತಿಶಯದಲ್ಲಿ ತಾನು ತಂದಿದ್ದ ಬತ್ತಾಸಿನ ವಿಷಯವೂ ಮರೆತುಹೋಯಿತು. ಆದರೆ, ಅದೇಕೋ ಏನೋ, ಇದ್ದಕ್ಕಿದ್ದಂತೆ ಶ್ರೀರಾಮಕೃಷ್ಣರು, "ನನಗೆ ಬತ್ತಾಸು ತಿನ್ನಬೇಕು ಅಂತ ಆಸೆಯಾಗುತ್ತಿದೆ" ಎಂದರು. ಆಗಲೂ ಆಕೆಗೆ ತಾನು ತಂದಿರುವ ಬತ್ತಾಸಿನ ನೆನಪಾಗಲಿಲ್ಲ. ದೇವೇಂದ್ರನಾಥ ತನ್ನ ಸಂಗಡಿಗನೊಬ್ಬನನ್ನು ಬತ್ತಾಸು ತರಲು ಅಂಗಡಿಗೆ ಕಳಿಸಿದ. ಆದರೆ ಶ್ರೀರಾಮಕೃಷ್ಣರು ಸುಮ್ಮನಾಗಲಿಲ್ಲ. ಮಗುವಿನಂತೆ, "ನನಗೆ ಈಗಲೇ ಬೇಕೂ" ಎಂದು ಹಟ ಮಾಡುತ್ತ, ಬದಿಯಲ್ಲಿದ್ದ ತಮ್ಮ 'ತಾಯಿ'ಯ ಬಟ್ಟೆಯನ್ನು ಜಗ್ಗತೊಡಗಿದರು. ಆಗ ಆಕೆಯ ಮಡಿಲಲ್ಲಿದ್ದ ಸಿಹಿತಿನಿಸಿನ ಪೊಟ್ಟಣ ಅವರ ಕಣ್ಣಿಗೆ ಬಿದ್ದುಬಿಟ್ಟಿತು. ಅದನ್ನು ತೆಗೆದು ನೋಡುತ್ತಾರೆ—ಬತ್ತಾಸು ! ಪುಟ್ಟ ಹುಡುಗನಂತೆ ಹಿಗ್ಗುತ್ತ ಅದನ್ನು ಬಾಯ್ತುಂಬರಿಸಿಕೊಂಡು ತಿಂದರು. ಅದನ್ನು ಕಂಡು ದೇವೇಂದ್ರನ ತಾಯಿಯ ಕಣ್ಣುಗಳಿಂದ ನೀರು ದಳದಳನೆ ಉದುರಿತು. ಉಳಿದವರ ಆಶ್ಚರ್ಯಕ್ಕಂತೂ ಮಿತಿಯೇ ಇಲ್ಲ !

ಯದುಮಲ್ಲಿಕನ ಸಂಬಂಧಿಯಾದ ವಯಸ್ಕ ಸ್ತ್ರೀಯೊಬ್ಬಳು ಶ್ರೀರಾಮಕೃಷ್ಣರಲ್ಲಿ ಅತೀವಭಕ್ತಿಯಿರಿಸಿದ್ದಳು. ಅವರನ್ನು ಆಗಾಗ ಯದುವಿನ ತೋಟದ ಮನೆಗೆ ಕರೆಸಿಕೊಂಡು ಆತಿಥ್ಯ ನೀಡಿ, ಅವರ ಅಮೃತವಾಣಿಯನ್ನು ಆಲಿಸುತ್ತಿದ್ದಳು. (ಹಿಂದೆಯೇ ಹೇಳಿರುವಂತೆ, ಕಾಳೀ ದೇವಾಲಯದ ತೋಟಕ್ಕೆ ಹೊಂದಿಕೊಂಡಂತೆಯೇ ಯದುವಿನ ತೋಟ.) ಒಂದು ದಿನ ಇವಳು ಆ ಮನೆಯಲ್ಲಿ ಒಂದೆಡೆ ತನ್ನ ಇಷ್ಟದೇವತೆಯ ಪಟದ ಮುಂದೆ ಅನೇಕ ಭಕ್ಷ್ಯಭೋಜ್ಯಗಳ ನೈವೇದ್ಯವನ್ನಿರಿಸಿ, ಧ್ಯಾನಕ್ಕೆ ಕುಳಿತಿದ್ದಾಳೆ; ಅದೇ ಸಮಯದಲ್ಲಿ ಇತ್ತ ತಮ್ಮ ಕೋಣೆಯಲ್ಲಿ ಭಕ್ತರೊಂದಿಗೆ ಸಂಭಾಷಿಸುತ್ತಿದ್ದ ಶ್ರೀರಾಮಕೃಷ್ಣರು ಇದ್ದಕ್ಕಿದ್ದಂತೆ ಭಾವಾವಿಷ್ಟರಾದರು. ಆ ಸ್ಥಿತಿಯಲ್ಲೇ ನೇರವಾಗಿ ನಡೆದು ಯದುಮಲ್ಲಿಕನ ತೋಟದ ಮನೆಯನ್ನು ಪ್ರವೇಶಿಸಿದರು. ಆ ಭಕ್ತೆ ಕಣ್ದೆರೆದು ನೋಡುತ್ತಾಳೆ—ಎದುರಿಗೆ ಶ್ರೀರಾಮಕೃಷ್ಣರು ! ತನ್ನ ಇಷ್ಟದೇವತೆಗೆ ನೀಡಿದ ನೈವೇದ್ಯವನ್ನು ಭಾವಾವಸ್ಥೆಯಲ್ಲಿ ಭುಜಿಸುತ್ತಿದ್ದಾರೆ ! ಅವಳು ಆಶ್ಚರ್ಯಾನಂದಗಳಿಂದ ಸ್ತಂಭಿತಳಾದಳು. ಧನ್ಯತೆಯ ಕಣ್ಣೀರು ಸುರಿಸುತ್ತ ಗದ್ಗದ ಸ್ವರದಲ್ಲಿ, "ಆಹ್, ಇವತ್ತು ನನ್ನೆದೆಯ ಹಂಬಲ ಈಡೇರಿತು. ನಿಮ್ಮ ನಿಜಸ್ವರೂಪವನ್ನು ಕಂಡುಕೊಂಡುಬಿಟ್ಟೆ !.. ನಾನು ಈ ಜನ್ಮದಲ್ಲೇ ಭಗವಂತನನ್ನು ಸಾಕ್ಷಾತ್ಕರಿಸಿಕೊಳ್ಳುವಂತೆ ಕೃಪೆಮಾಡಿ" ಎನ್ನುತ್ತ ಅಡಿಗೆರಗಿದಳು. ಶ್ರೀರಾಮಕೃಷ್ಣರು ಅವಳ ತಲೆಯ ಮೇಲೆ ತಮ್ಮ ಪಾದವನ್ನಿರಿಸಿದರು. ಆಗ, ಅವಳು ಕಂಡರಿಯದ ಅಪೂರ್ವ ಆನಂದ ಅವಳನ್ನಾವರಿಸಿತು.

*　　　*　　　*　　　*

ರಸಿಕ್ ಹಾಡಿ ಎನ್ನುವವನು ಕಾಳೀ ಮಂದಿರೋದ್ಯಾನದ ಒಬ್ಬ ಜಾಡಮಾಲಿ. ಅಲ್ಲಿನ ಕಾಲ್ದಾರಿಗಳನ್ನೂ ಶೌಚಸ್ಥಳಗಳನ್ನೂ ಗುಡಿಸಿ ಚೊಕ್ಕಟವಾಗಿರಿಸುವ ಕೆಲಸ ಇವನದು. ರಸಿಕನಿಗೆ ಶ್ರೀರಾಮಕೃಷ್ಣರೊಂದಿಗೆ ಹತ್ತಾರು ವರ್ಷಗಳ ಪರಿಚಯ. ಅವರ ವಿವಿಧ ತಪಸ್ಸು-ಸಾಧನೆಗಳನ್ನೂ ಅವನು ಕಂಡಿದ್ದ. ಅವರು ಆತನನ್ನು ಸಲಿಗೆಯಿಂದ 'ರಶಿಕೇ' ಎಂದು ಕರೆಯುತ್ತಿದ್ದರು. ಶ್ರೀರಾಮಕೃಷ್ಣರ ಮಹಿಮೆ ಏನೆಂಬುದು ಅವನಿಗೂ ಸ್ವಲ್ಪ ಗೊತ್ತಾಗಿತ್ತು. ಜನರು ಅವರ ಬಳಿಗೆ ಗುಂಪುಗುಂಪಾಗಿ ಬಂದು ಆಶೀರ್ವಾದ ಪಡೆದುಕೊಂಡು ಹೋಗುವುದನ್ನು ಅವನು ನೋಡುತ್ತಲೇ ಇದ್ದ. ತಾನೂ ಅವರ ಕೃಪೆಗೆ ಪಾತ್ರನಾಗಬೇಕು ಎಂಬ ಹಂಬಲ ಅವನ ಎದೆಯೊಳಗೆ ಅನೇಕ ವರ್ಷಗಳಿಂದಲೂ ಇದ್ದೇ ಇತ್ತು. ಆದರೆ ಅವರನ್ನು ಸಮೀಪಿಸಿ ನೇರವಾಗಿ ಮಾತನಾಡಿಸಲು ಧೈರ್ಯಸಾಲುತ್ತಿರಲಿಲ್ಲ. ಆದ್ದರಿಂದ ದೂರದಿಂದಲೇ ಅವರನ್ನು ನೋಡಿ ತೃಪ್ತಿ ಪಟ್ಟುಕೊಳ್ಳುತ್ತಿದ್ದ. ಒಂದು ದಿನ ಮಾತ್ರ ಅವನಿಗೆ ತನ್ನ ಬಯಕೆಯನ್ನು ಹತ್ತಿಕ್ಕಲು ಸಾಧ್ಯವಾಗಲಿಲ್ಲ. ಶ್ರೀರಾಮಕೃಷ್ಣರು ಸಾರುವೆ ತೋಪಿನ ಕಡೆಯಿಂದ ಬರುತ್ತಿದ್ದಾಗ, ಒಂದು ಮರದ ಹಿಂದೆ ಅವಿತಿಟ್ಟುಕೊಂಡಿದ್ದ ರಸಿಕ ಇದ್ದಕ್ಕಿದ್ದಂತೆ ಮುನ್ನುಗ್ಗಿದ. ಹುಚ್ಚನಂತೆ ಅವರ ಪಾದಕ್ಕೆ ಸಾಷ್ಟಾಂಗವೆರಗಿ ಕಣ್ಣೀರ ಕೋಡಿ ಹರಿಸುತ್ತ ಕೇಳಿದ:

"ಬಾಬಾ ! ಬಾಬಾ ! ಇಷ್ಟು ದಿನವಾಯಿತು. ನೀವು ನನ್ನ ಮೇಲೆ ಮಾತ್ರ ಕರುಣೆ ತೋರಲಿಲ್ಲ. ಬಾಬಾ, ನನ್ನ ಗತಿ ಏನಾಗುತ್ತದೆ ? ದಯವಿಟ್ಟು ಹೇಳಿ."

ಇವನ ಹಠಾತ್ 'ಆಕ್ರಮಣ'ದಿಂದ ಶ್ರೀರಾಮಕೃಷ್ಣರು ಕ್ಷಣಕಾಲ ಅಪ್ರತಿಭರಾದರು. ಆದರೆ ಮರುಘಳಿಗೆಯೇ ಅವರ ಮನಸ್ಸು ಸಮಾಧಿಸ್ಥಿತಿಗೇರಿತು. ಸ್ವಲ್ಪ ಹೊತ್ತಿನಲ್ಲೇ ಮತ್ತೆ ಪ್ರಕೃತಿಸ್ಥರಾಗಿ, ಕರುಣಾಪೂರಿತ ದನಿಯಲ್ಲಿ ಆಶ್ವಾಸನೆ ನೀಡಿದರು:

"ಹೆದರಬೇಡ. ರಶಿಕೇ, ನಿನಗೆ ಸದ್ಗತಿಯೇ ಪ್ರಾಪ್ತವಾಗುತ್ತದೆ. ನೀನು ನಿನ್ನ ಅಂತ್ಯಕಾಲದಲ್ಲಿ ನನ್ನನ್ನು ನೋಡುವೆ."

ಕಾಲಾಂತರದಲ್ಲಿ, ಶ್ರೀರಾಮಕೃಷ್ಣರು ತಮ್ಮೀ ಆಶ್ವಾಸನೆಯನ್ನು ಈಡೇರಿಸಿಕೊಟ್ಟರು.

## ಮೂಕಂ ಕರೋತಿ ವಾಚಾಲಂ... 

ಅವನೊಬ್ಬ ಭಕ್ತ. ಆತನದು ಬಹಳ ವಿಶಿಷ್ಟವಾದ ರೂಪವೆನ್ನದೆ ವಿಧಿಯಿಲ್ಲ. ಕುಳ್ಳಗೆ ದಪ್ಪಗೆ ಕಪ್ಪಗಿದ್ದಾನೆ; ದಪ್ಪ ತುಟಿಗಳು, ಚಿಕ್ಕ ಕಣ್ಣುಗಳು, ಚಪ್ಪಟೆ ಮೂಗು. ನೋಡಿದರೆ ಹಾಸ್ಯ–ಕರುಣಾರಸಗಳನ್ನು ಉಕ್ಕಿಸುವಂತಿದ್ದಾನೆ. ವಯಸ್ಸು ಸುಮಾರು ಮೂವತ್ತು. ಶ್ರೀರಾಮಕೃಷ್ಣರ ಮೇಲೆ ಬಹಳ ಭಯಭಕ್ತಿಯಿಟ್ಟು ಬಂದಿದ್ದಾನೆ; ಇದು ಅವನ ಎರಡನೆಯ ಭೇಟಿ. ಇನ್ನೇನು, ಅವನು ಬಾಗಿ ಅವರ ಪಾದ ಮುಟ್ಟಿ ನಮಸ್ಕರಿಸ ಬೇಕು, ಅಷ್ಟರಲ್ಲಿ ಅವರು ತಮ್ಮ ಪಾದವನ್ನು ಸರಕ್ಕನೆ ಹಿಂದಕ್ಕೆ ಸೆಳೆದುಕೊಂಡು ಬಿಟ್ಟರು! ಅಲ್ಲದೆ, "ಈಗ ಬೇಡ. ನಿನ್ನ ಮನಸ್ಸಿನ ಕಲ್ಮಶ ದೂರವಾಗಲಿ, ಆಮೇಲೆ ಮುಟ್ಟಬಹುದು" ಎಂದು ಎಲ್ಲರೆದುರಿಗೆ ಹೇಳಿಬಿಟ್ಟರು! ಅವನಿಗೆ ಹೇಗಾಗಿರಬೇಡ! ಶ್ರೀರಾಮಕೃಷ್ಣರ ಕಠಿಣ ವರ್ತನೆಯನ್ನು ಕಂಡು ಎಲ್ಲರಿಗೂ ಆಶ್ಚರ್ಯ. ಅಂದು ಮಾತ್ರ ವಲ್ಲ, ಇನ್ನೂ ಅನೇಕಬಾರಿ ಶ್ರೀರಾಮಕೃಷ್ಣರು ಅವನಿಗೆ ತಮ್ಮ ಪಾದಸ್ಪರ್ಶ ಮಾಡುವ ಅವಕಾಶವನ್ನು ನಿರಾಕರಿಸಿದರು. ಆದರೆ ತನ್ನ ಮನಸ್ಸಿಗೆ ಎಷ್ಟೇ ನೋವಾದರೂ, ನಿರಾಶೆ ಯಾದರೂ ಅವನು ಮಾತ್ರ ಮತ್ತೆ ಮತ್ತೆ ಬರುವುದನ್ನು ಬಿಡಲಿಲ್ಲ.

ಇವನೇ ಮುಂದೆ ಬಂಗಾಳಿಯಲ್ಲಿ ಶ್ರೀರಾಮಕೃಷ್ಣರ ಜೀವನಕಥೆಯನ್ನು ಪದ್ಯ ರೂಪದಲ್ಲಿ ಬರೆದು ಅಸಂಖ್ಯಾತ ಹೃದಯಗಳನ್ನು ಸ್ಪರ್ಶಮಾಡಿ ಅಮರ ಕೀರ್ತಿಗೆ ಪಾತ್ರನಾದ ಅಕ್ಷಯಕುಮಾರ ಸೇನ.

ಅಕ್ಷಯಕುಮಾರ ಎಲ್ಲ ದೃಷ್ಟಿಯಿಂದಲೂ ಅತಿ ಸಾಮಾನ್ಯ ವ್ಯಕ್ತಿ. ಹಳ್ಳಿಯ ಬಡ ಕುಟುಂಬದಲ್ಲಿ ಹುಟ್ಟಿ ಬೆಳೆದವನು ಅವನು. ಶಾಲೆಯಲ್ಲಿ ಕಾಗುಣಿತಕ್ಕಿಂತ ಹೆಚ್ಚೇನೂ ಕಲಿತವನಲ್ಲ. ಅಂಥ ಬುದ್ಧಿವಂತನೂ ಅಲ್ಲ. ತುಂಬ ಸರಳ ಸ್ವಭಾವ, ಸಂಕೋಚ ಪ್ರವೃತ್ತಿ. ಮದುವೆಯಾಗಿ ಮೂರು ಮಕ್ಕಳಿದ್ದರು. ಜೊರಾಸಂಕೋದಲ್ಲಿನ ಟಾಗೋರ್ ಮನೆತನದ ಮಕ್ಕಳಿಗೆ ಮನೆಪಾಠ ಹೇಳುವ ಉದ್ಯೋಗ. ಎಂದ ಮೇಲೆ ಆರ್ಥಿಕ ಸ್ಥಿತಿ ಅಷ್ಟಕ್ಕಷ್ಟೆ. ಆತನಿಗಿದ್ದ ಒಂದೇ ಒಂದು ಆಸ್ತಿಯೆಂದರೆ ಭಗವದ್ಭಕ್ತಿ. ಚಿಕ್ಕಂದಿನಿಂದಲೂ ಆಧ್ಯಾತ್ಮಿಕ ಪ್ರವೃತ್ತಿ ಬೆಳೆದುಬಂದಿತ್ತು. ತನ್ನ ಪ್ರೀತಿಯ ದೇವನಾದ ಶ್ರೀಕೃಷ್ಣನ ದರ್ಶನ ಪಡೆಯಬೇಕು ಎಂಬುದೊಂದು ಹಂಬಲ ಒಳಗೊಳಗೇ ಉಕ್ಕುತ್ತಿತ್ತು.

ಶ್ರೀರಾಮಕೃಷ್ಣರ ಬಳಿಗೆ ಬರುವುದಕ್ಕೆ ಒಂದು ವರ್ಷ ಮೊದಲು ಅಕ್ಷಯ ಒಬ್ಬ ಅರ್ಚಕನಿಂದ ಮಂತ್ರದೀಕ್ಷೆ ಪಡೆದುಕೊಂಡಿದ್ದ. ಆದರೆ ಎಷ್ಟು ಜಪ ಮಾಡಿದರೂ ಕೃಷ್ಣನ ದರ್ಶನವಾಗದ್ದರಿಂದ ಅವನಿಗೆ ಬಹಳ ನಿರಾಸೆಯಾಗಿತ್ತು. ಆದರೂ ಧೃತಿಗೆಡದೆ ಕ್ರಮೇಣ ಇನ್ನಷ್ಟು ಶ್ರದ್ಧೆಯಿಂದ ಸಾಧನೆ ಮಾಡತೊಡಗಿದ.

ಶ್ರೀರಾಮಕೃಷ್ಣರ ಭಕ್ತರಲ್ಲೊಬ್ಬನಾದ ದೇವೇಂದ್ರನಾಥ ಮಜುಮ್ದಾರನೂ ಟಾಗೋರರ ಎಸ್ಟೇಟಿನಲ್ಲೇ ಕೆಲಸಕ್ಕಿದ್ದು, ಅವನೂ ಅಕ್ಷಯನೂ ಒಂದೇ ಕಟ್ಟಡದಲ್ಲಿರು ತ್ತಿದ್ದರು. ಆದರೆ ದೇವೇಂದ್ರನೊಂದಿಗೆ ಸ್ನೇಹದಿಂದ ವರ್ತಿಸುವಷ್ಟು ಧೈರ್ಯ ಅಕ್ಷಯನಿ ಗಿರಲಿಲ್ಲ. ಒಂದು ದಿನ ಈ ದೇವೇಂದ್ರ ಕೆಲವರೊಂದಿಗೆ ಧರ್ಮಸಂಬಂಧವಾಗಿ ಮಾತ ನಾಡುತ್ತ 'ಪರಮಹಂಸರು' ಎಂದದ್ದು ಅಕ್ಷಯನಿಗೆ ಕೇಳಿಸಿತು. ತಕ್ಷಣ ಕಿವಿ ನೆಟ್ಟ

ಗಾಯಿತು. 'ಪರಮಹಂಸರು !' ಹಾಗೆಂದರೆ ಅತ್ಯುನ್ನತ ಆಧ್ಯಾತ್ಮಿಕ ಸ್ಥಿತಿಯನ್ನು ತಲುಪಿದವರು ಎಂದರ್ಥ. ಅಂತಹ ವ್ಯಕ್ತಿ ಎಲ್ಲಿರಬಹುದು ? ತಾನೂ ಅವರನ್ನು ಕಾಣಲು ಸಾಧ್ಯವಾಗಬಹುದೆ ? ಅಕ್ಷಯ ಕುತೂಹಲದಿಂದ ದೇವೇಂದ್ರನ ಬಳಿಗೆ ಹೋಗಿ ಕೇಳಿದ, "ಮಹಾಶಯರೆ, 'ಪರಮಹಂಸರು' ಎಂದಿರಲ್ಲ, ಅವರು ಎಲ್ಲಿರುತ್ತಾರೆ ? ಅವರ ವಿಚಾರ ನನಗೂ ಸ್ವಲ್ಪ ಹೇಳುತ್ತೀರಾ ?" ಅದಕ್ಕೆ ದೇವೇಂದ್ರ ಅಸಡ್ಡೆಯಿಂದ, "ಅಯ್ಯೋ, ನಿನಗ್ಯಾಕೋ ಆ ಸಮಾಚಾರ ಎಲ್ಲ ? ನಿನಗದರಿಂದೇನೂ ಲಾಭವಿಲ್ಲ ಬಿಡು" ಎಂದುತ್ತರಿಸಿದ. ಅವನನ್ನು ನೋಡಿದರೆ ಯಾರಿಗಾದರೂ ಹಾಗೇ ಹೇಳಬೇಕೆನ್ನಿಸುತ್ತಿತ್ತೇನೋ ! ಅಕ್ಷಯ ಖಿನ್ನನಾದ. ಆದರೆ ಈ ಬಗೆಯ ಪ್ರತಿಕ್ರಿಯೆ ಅವನಿಗೆ ಅನಿರೀಕ್ಷಿತವೇನೂ ಅಲ್ಲ. ಹೇಗಾದರೂ ಮಾಡಿ ಪರಮಹಂಸರ ಬಗ್ಗೆ ತಿಳಿದುಕೊಳ್ಳಬೇಕು ಎಂಬ ನಿರ್ಧಾರ ಮಾಡಿ, ದೇವೇಂದ್ರನಾಥನನ್ನು ಒಲಿಸಿಕೊಳ್ಳುವ ಪ್ರಯತ್ನದಲ್ಲಿ ತೊಡಗಿದ. ಶ್ರೀರಾಮ ಕೃಷ್ಣರ ಕುರಿತಾದ ಮಾತುಗಳ ತುಣುಕು ಆಗೊಂದು ಈಗೊಂದು ಕಿವಿಗೆ ಬಿದ್ದು ಕುತೂಹಲ ಕೆರಳಿತು. ದೇವೇಂದ್ರ ಮಾತ್ರ ಇನ್ನೂ, ದೇವರು ಕೊಡುವ ವರಕ್ಕೆ ಅಡ್ಡಿಯೊಡ್ಡುವ ಪೂಜಾರಿಯಂತೆ ಸತಾಯಿಸುತ್ತಲೇ ಬಂದ. ಹೀಗೇ ಸುಮಾರು ಐದಾರು ತಿಂಗಳುಗಳು ಕಳೆದುಹೋದುವು.

ಕಡೆಗೊಂದು ದಿನ, ಟಾಗೋರ್ ಕುಟುಂಬದ ಕೆಲವರನ್ನು ಶ್ರೀರಾಮಕೃಷ್ಣರಲ್ಲಿಗೆ ಕರೆದೊಯ್ಯಲು ದೇವೇಂದ್ರನಾಥ ಏರ್ಪಾಡು ಮಾಡುತ್ತಿರುವುದನ್ನು ಅಕ್ಷಯ ಕಂಡ. 'ಇವತ್ತು ಏನು ಬೇಕಾದರೂ ಆಗಲಿ, ಇನ್ನೊಮ್ಮೆ ಪ್ರಯತ್ನ ಮಾಡಿಯೇ ಬಿಡುತ್ತೇನೆ' ಎಂದು ಮನಸ್ಸು ಮಾಡಿದ. ಎಲ್ಲರೂ ಸಿದ್ಧರಾಗುವವರೆಗೆ ತಾಳ್ಮೆವಹಿಸಿ ಕಾದ. ಇನ್ನೇನು ಎಲ್ಲರೂ ಸಾರೋಟು ಹತ್ತಬೇಕು, ಆಗ ಜಿಂಕೆಯಂತೆ ನುಗ್ಗಿ ಬಂದು ದೇವೇಂದ್ರನ ಕಾಲುಗಳನ್ನು ಹಿಡಿದುಕೊಂಡುಬಿಟ್ಟ. "ಸ್ವಾಮಿ, ದಯವಿಟ್ಟು ನನ್ನನ್ನೂ ಕರೆದುಕೊಂಡು ಹೋಗಬೇಕು" ಎಂದು ಅಂಗಲಾಚಿದ. ಅಂತೂ ದೇವೇಂದ್ರನ ಮನಸ್ಸು ಕರಗಿತೇನೋ, "ಆಗಲಿ ನಡೆ" ಎಂದು ಕರೆದುಕೊಂಡು ಹೊರಟ.

ಅವರು ಹೊರಟಿದ್ದುದು ಕಾಶೀಪುರ ರಸ್ತೆಯಲ್ಲಿದ್ದ ಮಹಿಮಾಚರಣನ ಮನೆಗೆ. ಅವನ ಮನೆಯಲ್ಲಿ ಸತ್ಸಂಗವಿದ್ದು ಶ್ರೀರಾಮಕೃಷ್ಣರು ಆಗಮಿಸಲಿದ್ದರು. ಇವರು ಸಂಜೆಯ ವೇಳೆಗೆ ಅಲ್ಲಿ ತಲುಪಿದರು. ರಾಮಚಂದ್ರ, ಮನಮೋಹನ, ಸುರೇಶ, ಮಹೇಂದ್ರನಾಥ, ವಿಜಯಕೃಷ್ಣ ಗೋಸ್ವಾಮಿ ಮೊದಲಾದ ಭಕ್ತ ಪ್ರಮುಖರೂ ಇನ್ನಿತರರೂ ನೆರೆದಿದ್ದರು. ಉತ್ಸವದ ವಾತಾವರಣ ನಿರ್ಮಾಣಗೊಂಡಿತ್ತು. ಶ್ರೀರಾಮಕೃಷ್ಣರು ಅವರನ್ನುದ್ದೇಶಿಸಿ ಮಾತನಾಡುತ್ತ ಕುಳಿತಿದ್ದರು. ದೇವೇಂದ್ರನಾಥ ಶ್ರೀರಾಮಕೃಷ್ಣರಿಗೆ ಭಕ್ತಿಯಿಂದ ನಮಸ್ಕರಿಸಿದ. ಅವನನ್ನು ಹಿಂಬಾಲಿಸಿ ಅಕ್ಷಯಕುಮಾರನೂ ಶ್ರೀರಾಮ ಕೃಷ್ಣರಿಗೆ ನಮಿಸಿದ. ತಾನು ಬಾಗುವಾಗ ಅವರು ತನ್ನೆಡೆಗೆ ಕೃಪಾಕಟಾಕ್ಷವನ್ನು ಹರಿಸಿ ಮಂದಹಾಸ ಬೀರಿದ್ದು ಅವನ ಕಣ್ಣಿಗೆ ಬಿತ್ತು. ಯಾವುದೋ ಅನಿರ್ವಚನೀಯ ಆನಂದದ ಅಲೆ ಬಂದು ಅಪ್ಪಳಿಸಿ ಅವನನ್ನು ಕೊಚ್ಚಿಕೊಂಡು ಹೋಯಿತು. ಭಕ್ತರ ನಡುವೆ ಕುಳಿತು ಶ್ರೀರಾಮಕೃಷ್ಣರ ಮಾತುಗಳನ್ನು ಆಲಿಸುವ ಯತ್ನ ಮಾಡಿದ. ಅವರ ಮಾತುಗಳಲ್ಲಿ, ಅವರ ವ್ಯಕ್ತಿತ್ವದಲ್ಲಿ, ತನಗೆ ಅರ್ಥವಾಗದ ಎಂಥದೋ ಅಲೌಕಿಕತೆಯಿರುವುದು ಅವನಿಗೆ ಗೋಚರವಾಯಿತು. ಅವರ ಎಷ್ಟೋ ಮಾತುಗಳು ಅವನ ಬುದ್ಧಿಗೆ ನಿಲುಕುವಂತಿರಲಿಲ್ಲ. ಆದರೂ ಆ ಒಟ್ಟು ಪರಿಣಾಮ ಎಷ್ಟು ಗಾಢವಾಗಿತ್ತೆಂದರೆ ಅವನು

ಮಂತ್ರಮುಗ್ಧನಾದವನಂತೆ ಕುಳಿತುಬಿಟ್ಟ.

ಶ್ರೀರಾಮಕೃಷ್ಣರೀಗ ಭಾವಾವೇಶಭರಿತರಾಗಿ ಚೈತನ್ಯ-ನಿತ್ಯಾನಂದರ ಭಗವತ್ಪ್ರೇಮವನ್ನು ಬಣ್ಣಿಸುವ ಹಾಡೊಂದನ್ನು ಹಾಡತೊಡಗಿದರು. ಭಕ್ತರಲ್ಲಿ ಉತ್ಸಾಹ ಪುಟಿಯಿತು; ತಾವೂ ಅವರೊಂದಿಗೆ ಸೇರಿ ಹಾಡುತ್ತ, ತಾಳ ಮೃದಂಗಗಳನ್ನು ಬಾಜಿಸುತ್ತ, ಆನಂದನರ್ತನದಲ್ಲಿ ತೊಡಗಿದರು. ಮಹಿಮಾಚರಣನ ಮನೆಯೆಲ್ಲ ದಿವ್ಯ ಪ್ರೇಮದ ತರಂಗಗಳಿಂದ ಸ್ಪಂದಿಸುತ್ತ ಸ್ವರ್ಗಸದೃಶವಾಯಿತು. ಅಕ್ಷಯನಂತೂ ಇಂಥದೊಂದು ಸಂಗತಿಯನ್ನು ಕಂಡಿರಲೂ ಇಲ್ಲ, ಕೇಳಿರಲೂ ಇಲ್ಲ. ಹಾಡಿನ ಕಡೆಯಲ್ಲಿ ವಿಜಯಕೃಷ್ಣ ಗೋಸ್ವಾಮಿ ಶ್ರೀರಾಮಕೃಷ್ಣರತ್ತ ಬೆರಳು ಮಾಡಿ, "ಇಗೋ ಇಲ್ಲಿದ್ದಾನೆ ನಮ್ಮ ಕೃಷ್ಣ!" ಎಂದು ಉದ್ಘೋಷಿಸಿದಾಗ ಅಕ್ಷಯನಿಗೆ ಮಿಂಚು ತಾಗಿದಂತಾಯಿತು. ತಾನು ಯಾರಿಗಾಗಿ ಬಹುಕಾಲದಿಂದ ಕಾತರಿಸುತ್ತಿದ್ದನೋ ಆ ಕೃಷ್ಣನೇ ಇವರಾಗಿರಬಹುದೇ ಎಂದು ಆಲೋಚಿಸಿದ. ಶ್ರೀರಾಮಕೃಷ್ಣರನ್ನು ನೋಡುತ್ತ, ಭಗವತ್ಪ್ರೇಮವೇ ಮಾನುಷರೂಪ ತಾಳಿ ನಿಂದಿರುವಂತೆ ಅವನಿಗೆ ಭಾಸವಾಯಿತು.

ರಾತ್ರಿ ಒಂಬತ್ತು ಗಂಟೆಯ ಹೊತ್ತಿಗೆ ಭಜನೆ ಮುಕ್ತಾಯವಾಯಿತು. ಉತ್ಸಾಹದ ಅಮಲು ಇಳಿಯಿತು. ಬಳಿಕ ಹಬ್ಬದೂಟ. ಅನಂತರ ಶ್ರೀರಾಮಕೃಷ್ಣರು ಕೆಲವು ಭಕ್ತರೊಂದಿಗೆ ಮಾತನಾಡುತ್ತ ಕುಳಿತರು. ನಡುವೆ ಇದಕ್ಕಿದ್ದಂತೆ ತಮ್ಮ ಮಧುರ ಸ್ವರದಲ್ಲಿ ಹಾಡತೊಡಗಿದರು. ಸ್ವಯಂ ಶ್ರೀಕೃಷ್ಣನ ಮಾತುಗಳನ್ನು ಸೂಚಿಸುವ ಆ ಹಾಡಿನ ಅರ್ಥ ಹೀಗಿದೆ: "ನಾನು ಮುಕ್ತಿಯನ್ನು ಕೊಡಲೂ ಅನುಮಾನಿಸಲಾರೆ, ಆದರೆ ಶುದ್ಧ ಪ್ರೇಮವನ್ನು ಕರುಣಿಸಲು ಮಾತ್ರ ಹಿಂಜರಿಯುತ್ತೇನೆ. ಯಾವನು ಶುದ್ಧ ಪ್ರೇಮವನ್ನು ಗಳಿಸುತ್ತಾನೋ ಅವನು ಮೂರು ಲೋಕಗಳನ್ನೂ ಗೆಲ್ಲಬಲ್ಲ."

ಇದನ್ನು ಕೇಳಿ ಅಕ್ಷಯಕುಮಾರನಿಗೆ ಅದೆಷ್ಟು ಸಂತಸವಾಗಿರಬೇಕು! ಆ ಹಾಡೋ, ಅವನ ಇಷ್ಟದೇವತೆಯಾದ ಶ್ರೀಕೃಷ್ಣನ ಮಾತುಗಳು; ಅವನ ಆದರ್ಶವಾದ ಶುದ್ಧ ಭಕ್ತಿ ಪ್ರೇಮಗಳ ಕುರಿತಾದದ್ದು. ಹಾಡಿದವರೋ ಸ್ವಯಂ ಶ್ರೀರಾಮಕೃಷ್ಣರು! ಹೀಗೆ ಶ್ರೀರಾಮಕೃಷ್ಣರ ಸಾನ್ನಿಧ್ಯದಲ್ಲಿ ನಿಮಿಷಗಳು ಕಳೆದು ಗಂಟೆಗಳೇ ಉರುಳಿದರೂ ಯಾರಿಗೂ ಅಲ್ಲಿಂದ ಕದಲುವ ಮನಸ್ಸೇ ಇದ್ದಂತಿರಲಿಲ್ಲ.

ಕಡೆಗೆ ಎಲ್ಲರೂ ಶ್ರೀರಾಮಕೃಷ್ಣರಿಗೆ ವಿದಾಯ ಹೇಳಿ ಹೊರಟರು. ಅಂದು ಶ್ರೀರಾಮಕೃಷ್ಣರು ಮೊಟ್ಟಮೊದಲು ಅಕ್ಷಯನನ್ನು ಕಂಡಾಗ ಒಮ್ಮೆ ಕೃಪಾದೃಷ್ಟಿ ಹರಿಸಿದ್ದನ್ನು ಬಿಟ್ಟರೆ ಮತ್ತೆ ಅವನೆಡೆ ಗಮನವನ್ನೇ ಕೊಟ್ಟಂತೆ ಕಂಡಿರಲಿಲ್ಲ. ಆದರೆ ಅಕ್ಷಯ ಆ ಬಗ್ಗೆ ಚಿಂತಿಸುವ ಸ್ಥಿತಿಯಲ್ಲಿದ್ದನಲ್ಲವೆ? ಅವನೀಗ ತಮ್ಮೊಡನೆಯೇ ಗಾಡಿಯಲ್ಲಿ ಬರುತ್ತಿದ್ದ ರಾಮಚಂದ್ರದತ್ತನ ಬಾಯಿಂದ ಶ್ರೀರಾಮಕೃಷ್ಣರ ಕಥನವನ್ನು ಕೇಳುವುದರಲ್ಲಿ ಮೈಮರೆತಿದ್ದ. ಎಷ್ಟರಮಟ್ಟಿಗೆಂದರೆ ಮಾರ್ಗಮಧ್ಯದಲ್ಲಿ ರಾಮಚಂದ್ರ ಗಾಡಿಯಿಂದಿಳಿದು ತನ್ನ ಮನೆ ಕಡೆ ನಡೆದಾಗ, ಅಕ್ಷಯನೂ ಅಲ್ಲೇ ಇಳಿದು ಅವನನ್ನು ಹಿಂಬಾಲಿಸಿದ. ಮತ್ತೆ ಬಹಳ ಹೊತ್ತಿನವರೆಗೆ ಅವನ ಮಾತುಗಳನ್ನು ಆಲಿಸುತ್ತ ಕುಳಿತ. ಕೊನೆಗೆ ರಾಮನಿಂದಲೂ ಬೀಳ್ಕೊಂಡು ಹೊರಟಾಗ ಅವನು ಕಂಡರಿಯದ ಆನಂದ ಅವನ ಹೃದಯವನ್ನು ತುಂಬಿತ್ತು.

ಎರಡು ಮೂರು ದಿನಗಳಲ್ಲೇ ಅಕ್ಷಯಸೇನ ತನ್ನ ಗೆಳೆಯನೊಬ್ಬನನ್ನು ಜೊತೆ ಮಾಡಿಕೊಂಡು ದಕ್ಷಿಣೇಶ್ವರಕ್ಕೆ ಬಂದ. ಈ ಬಾರಿ ಶ್ರೀರಾಮಕೃಷ್ಣರು ಅವನನ್ನು ಮಾತ

ನಾಡಿಸಿ, ಅವನ ಬಗ್ಗೆ ತಿಳಿದುಕೊಂಡರು. ಆದರೆ ತಮ್ಮ ಪಾದಸ್ಪರ್ಶ ಮಾಡಲು ಮಾತ್ರ ಅವನಿಗೆ ಅವಕಾಶವೀಯಲಿಲ್ಲ. "ಈಗ ಬೇಡ; ನಿನ್ನ ಮನಸ್ಸು ಪರಿಶುದ್ಧವಾಗಲಿ" ಎಂದು ಹೇಳಿಬಿಟ್ಟರು. ಅಂದು ಮಾತ್ರವಲ್ಲದೆ ಇನ್ನೂ ಕೆಲವು ದಿನ ಅವನಿಗೆ ಆ ಭಾಗ್ಯ ಲಭಿಸಲಿಲ್ಲ.

ಅವತಾರ ಪುರುಷನ ವರ್ತನೆಯನ್ನು ಅರ್ಥ ಮಾಡಿಕೊಳ್ಳುವುದು ಸಾಮಾನ್ಯ ಬುದ್ಧಿಗಳಿಗೆ ಕಷ್ಟಸಾಧ್ಯ. ಶ್ರೀರಾಮಕೃಷ್ಣರು ತನ್ನ ವಿಚಾರದಲ್ಲಿ ಮಾತ್ರ ಏಕೆ ಸ್ವಲ್ಪ ಕಠಿಣರಾಗಿದ್ದಾರೆ ಎಂಬುದು ಅಕ್ಷಯನಿಗೆ ಅರ್ಥವಾಗಲಿಲ್ಲ. ಆದರೂ ಅವನು ಹತಾಶನಾಗದೆ ಇನ್ನೂ ಹೆಚ್ಚುಹೆಚ್ಚಾಗಿ ಬರತೊಡಗಿದ. ಶ್ರೀರಾಮಕೃಷ್ಣರ ಆಧ್ಯಾತ್ಮಿಕ ಶಕ್ತಿಯ ಅಭಿವ್ಯಕ್ತಿಯನ್ನು ಕಂಡು ಅವನು ಗಾಢವಾಗಿ ಪ್ರಭಾವಿತನಾಗಿದ್ದ. ಅವರ ಬಗ್ಗೆ ಅವನಲ್ಲಿದ್ದುದು ಒಂದು ಬಗೆಯ ಭಯಮಿಶ್ರಿತ ಭಕ್ತಿ. ಅವರೆದುರಿಗೆ ಬಾಯ್ತೆರೆಯು ವಷ್ಟು ಸಾಹಸ ಅವನಿಗಿರಲಿಲ್ಲ. ಆದರೆ ಅವನ ಮನಸ್ಸಿನಲ್ಲೊಂದು ಹೆಬ್ಬಯಕೆಯಿತ್ತು —ತನ್ನ ಇಷ್ಟದೇವತೆಯಾದ ಶ್ರೀಕೃಷ್ಣನ ದರ್ಶನ ಪಡೆಯಬೇಕು ಎಂದು. ಅದನ್ನು ತಾನು ಶ್ರೀರಾಮಕೃಷ್ಣರೆದುರು ಬಾಯಿಬಿಟ್ಟು ಹೇಳಬೇಕಾದ ಅಗತ್ಯವಿಲ್ಲ ಎಂಬ ಅರಿವು ಅವನಿಗಿತ್ತು. ಮಾತ್ರವಲ್ಲ, ಅವರು ಸ್ಪರ್ಶಮಾತ್ರದಿಂದ ಯಾರಿಗೆ ಯಾವ ಅನುಭವ ವನ್ನಾದರೂ ಕರುಣಿಸಬಲ್ಲರು, ಮತ್ತು ತನ್ನ ಅಭಿಲಾಷೆ ಈಡೇರಬೇಕಾದರೆ ಅವರೊಬ್ಬ ರಿಂದಲೇ ಸಾಧ್ಯ ಎಂಬ ಅವಿಚಲ ವಿಶ್ವಾಸವೂ ಅವನದಾಗಿತ್ತು! ಅಕ್ಷಯನಿಗೆ ಇಂತಹ ನಂಬಿಕೆಯುಂಟಾದದ್ದು ಆಚ್ಚರಿಯ ಸಂಗತಿಯೇ ಸರಿ. ಆದರೆ ಬಹುಶಃ ಅಷ್ಟೇ ಸಾಕಾಗಿರ ಲಿಲ್ಲ. ಅಂತಹ ಅನುಭವವನ್ನು ಪಡೆದುಕೊಂಡು ತಡೆದುಕೊಳ್ಳಲು ಅಂತಸ್ಸತ್ತ್ವವಿರ ಬೇಕಲ್ಲ! ದೃಢವಾದ ಮನಸ್ಸು ಬೇಕಲ್ಲ! ಅವನು ಕೇವಲ ಭಾವಾವೇಗದ ವ್ಯಕ್ತಿ ಯಾಗಿದ್ದ. ವಾಸ್ತವ ರಾಜ್ಯದಿಂದ ಬಹು ಮೇಲೇರಿ ಭಾವನಾಮಯ ಕಿನ್ನರಲೋಕದಲ್ಲೇ ತೇಲಾಡುತ್ತಿದ್ದ. ಪ್ರತಿಸಲ ದಕ್ಷಿಣೇಶ್ವರಕ್ಕೆ ಹೋಗುವಾಗಲೂ ಅವನು, 'ಇಂದು ಶ್ರೀರಾಮಕೃಷ್ಣರು ನನ್ನ ಎದೆಯನ್ನು ಸ್ಪರ್ಶಮಾಡಿಯಾರು, ಕೃಷ್ಣದರ್ಶನವನ್ನು ಮಾಡಿಸಿ ಕೊಟ್ಟಾರು' ಎಂದು ಮಂಡಿಗೆ ಮೆಲ್ಲುತ್ತಲೇ ಹೋಗುತ್ತಿದ್ದ. ಆದರೆ ಅಂಥದೇನೂ ನಡೆ ಯುತ್ತಿರಲಿಲ್ಲ. ಕಡೆಗೆ ನಿರಾಸೆಯಿಂದ ಕಣ್ಣಲ್ಲಿ ನೀರು ತುಂಬಿಕೊಂಡು ಹಿಂದಿರುಗುತ್ತಿದ್ದ.

ಹೀಗೆ ಎಷ್ಟೋ ದಿನಗಳು ಕಳೆದುವು. ಶ್ರೀರಾಮಕೃಷ್ಣರು 'ನಿನ್ನ ಮನಸ್ಸು ಪರಿ ಶುದ್ಧವಾಗಲಿ' ಎಂದು ಹೇಳುತ್ತ ಪಾದಸ್ಪರ್ಶದ ಅವಕಾಶವನ್ನು ತಪ್ಪಿಸುತ್ತಲೇ ಇದ್ದರು. ಈ ಮಧ್ಯೆ ಒಮ್ಮೆ ಅವನು, "ನನ್ನ ಮೇಲೆ ಕೃಪೆ ಮಾಡಬೇಕು ಅಂತ ಶ್ರೀರಾಮಕೃಷ್ಣ ರಿಗೆ ಹೇಳಿ" ಎಂದು ದೇವೇಂದ್ರನನ್ನು ಅಂಗಲಾಚಿದ. ಅವನು ಹೋಗಿ ಆ ಪ್ರಾರ್ಥನೆ ಯನ್ನು ಶ್ರೀರಾಮಕೃಷ್ಣರ ಮುಂದಿಟ್ಟಾಗ ಅವರು, "ನಾನೇನಪ್ಪ ಹೇಳಲಿ? ನೀನೇ ಅವನಿಗೇನಾದರೂ ಬೋಧನೆ ಕೊಡು" ಎಂದು ಹೇಳಿಕಳಿಸಿದರು. ಅವನು ಅಕ್ಷಯನಿಗೆ ಹರಿನಾಮಸ್ಮರಣೆ ಮಾಡುತ್ತ ಬರುವಂತೆ ಹೇಳಿದ. ಅಕ್ಷಯ ಇದನ್ನು ಸ್ವೀಕರಿಸಿ ಭಕ್ತಿ ಯಿಂದ ಹರಿಮಂತ್ರವನ್ನು ಜಪಿಸಲಾರಂಭಿಸಿದ. ಕ್ರಮೇಣ ಅವನು ದೇವೇಂದ್ರನನ್ನು ತನ್ನ ಎರಡನೆಯ ಗುರು ಎಂಬಂತೆ ಕಾಣಲಾರಂಭಿಸಿದ.

ಹೀಗೆ ಅವನ ವ್ಯಕ್ತಿತ್ವ ಚೆನ್ನಾಗಿ ಹದವಾಗುತ್ತ ಬಂತು. ಭಾವನೆಗಳು ಪರಿಪಾಕ ಗೊಂಡುವು. ಶ್ರೀರಾಮಕೃಷ್ಣರ ಮಾತುಗಳನ್ನು ಕೇಳುತ್ತ ಕೇಳುತ್ತ ಅವನಲ್ಲಿ ಭಾವಶುದ್ಧಿ ನೆಲೆಗೊಂಡಿತು. ಅವನ ಬಹುಕಾಲದ ಆಕಾಂಕ್ಷೆ ಕೈಗೂಡುವ ಕಾಲ ಸಮೀಪಿಸಿತು.

ಅದು ೧೮೮೬ರ ಜನವರಿ ಒಂದನೇ ದಿನ. ಅಂದು ಶ್ರೀರಾಮಕೃಷ್ಣರು ಒಂದು ಅಭೂತಪೂರ್ವ ಕರುಣಾಭಾವವನ್ನು ತಳೆದು, ಭಕ್ತರ ಅಭೀಷ್ಟಗಳನ್ನು ಈಡೇರಿಸುವ ಕಲ್ಪವೃಕ್ಷವಾದರು. ತಮ್ಮ ಬಳಿಗೆ ಬಂದ ಪ್ರತಿಯೊಬ್ಬನನ್ನೂ ಹರಸಿ, ಒಬ್ಬೊಬ್ಬನಿಗೂ ಒಂದೊಂದು ಬಗೆಯ ಅದ್ಭುತ ಅನುಭವ ಮಾಡಿಸಿಕೊಟ್ಟರು. ಆಗ ತಮ್ಮೊಳಗೆ ಪ್ರವಾಹದಂತೆ ಉಕ್ಕಿಬಂದ ಭಾವಾವೇಶವನ್ನು ತಾಳಲಾರದೆ ಒಬ್ಬೊಬ್ಬರು ಒಂದೊಂದು ಬಗೆಯಲ್ಲಿ ವರ್ತಿಸಲಾರಂಭಿಸಿದರು. ಆಗ ಅಕ್ಷಯನೂ ಅಲ್ಲೇ ಇದ್ದ. ಆದರೆ ದೂರ ದಲ್ಲೇ ನಿಂತು ಆ ಅದ್ಭುತವನ್ನೆಲ್ಲ ಈಕ್ಷಿಸುತ್ತಿದ್ದ. ಆಗ ಇದ್ದಕ್ಕಿದ್ದಂತೆ ಶ್ರೀರಾಮಕೃಷ್ಣರ ದೃಷ್ಟಿ ಅವನ ಮೇಲೆ ಬಿದ್ದು, "ಬಾ ಇಲ್ಲಿ" ಎಂದು ಕೂಗಿದರು. ಅಕ್ಷಯ ಓಡಿ ಬಂದು ಎರಡು ಸಂಪಿಗೆ ಹೂವುಗಳನ್ನು ಅವರ ಪಾದಕ್ಕೆ ಸಮರ್ಪಿಸಿ ಪ್ರಣಾಮ ಮಾಡಿದ. ಶ್ರೀರಾಮಕೃಷ್ಣರು ಅವನ ಎದೆಯನ್ನು ಮುಟ್ಟಿ ಕಿವಿಯಲ್ಲೊಂದು ಮಂತ್ರವನ್ನು ಉಸುರಿ ದರು. ಮರುಕ್ಷಣವೇ ಅವನಿಗೆ ಮಿತಿಮೀರಿದ ಆನಂದಾನುಭವವಾಯಿತು. ಅದರ ಒತ್ತಡವನ್ನು ತಡೆದುಕೊಳ್ಳಲಾರದೆ ಆತ ನೆಲಕ್ಕೆ ಬಿದ್ದುಬಿಟ್ಟ. ಕೈಕಾಲುಗಳು ಸ್ವಾಧೀನ ವಿಲ್ಲದೆ ತಿರುಚಿಕೊಂಡುವು. ಆನಂದಾಶ್ರು ಅವ್ಯಾಹತವಾಗಿ ಹರಿಯತೊಡಗಿತು. ಪರಮ ಧನ್ಯತಾಭಾವ ಅವನನ್ನು ತುಂಬಿತು.

ಆ ದಿವ್ಯಾವಸ್ಥೆಯಲ್ಲಿ ಅವನು ತನ್ನ ಇಷ್ಟದೇವ ಶ್ರೀಕೃಷ್ಣನನ್ನು ಕಂಡಿರಬಹುದೆ? ಹೇಳಬಲ್ಲವರಿಲ್ಲ! ಆದರೆ ಶ್ರೀರಾಮಕೃಷ್ಣರ ಸಾನ್ನಿಧ್ಯದಲ್ಲಿ ಹೆಚ್ಚೆಚ್ಚು ಸಮಯ ಕಳೆ ಯುತ್ತ, ಸಾಧನೆ ಮಾಡುತ್ತ ಮತ್ತು ಸದಾ ರಾಮಕೃಷ್ಣಭಾವದಲ್ಲೇ ಮುಳುಗಿರುತ್ತ ಬಂದಂತೆ ಅವನ ವ್ಯಕ್ತಿತ್ವದಲ್ಲಿ ಸಮಗ್ರ ಪರಿವರ್ತನೆಯಾಯಿತು; ಅವನಲ್ಲಿ ಹೊಸ ಪರಿಜ್ಞಾನ ಮೂಡಿತು. ಮುಂದೆ ಅವನೇ ರಚಿಸಿದ 'ಶ್ರೀರಾಮಕೃಷ್ಣ ಮಹಿಮಾ' ಎಂಬ ಗ್ರಂಥದಲ್ಲಿ ಅದರ ಪ್ರತಿಫಲನವನ್ನು ಕಾಣಬಹುದಾಗಿದೆ:

"ಶ್ರೀರಾಮಕೃಷ್ಣರು ನನಗೆ ಏನೇನು ತೋರಿಸಿಕೊಟ್ಟು ವಿವರಿಸಿದರೋ ಅದರಿಂದ ನನ್ನಲ್ಲಿ ಈ ಒಂದು ದೃಢ ನಂಬಿಕೆ, ತಿಳಿವಳಿಕೆ ಉಂಟಾಗಿದೆ: ಏನೆಂದರೆ, ಅವರೇ ಸ್ವಯಂ ಶ್ರೀರಾಮ, ಶ್ರೀಕೃಷ್ಣ, ಕಾಳೀ ಮತ್ತು ಅವರೇ ಬುದ್ಧಿಮನಾತೀತನಾದರೂ ಶುದ್ಧ ಮನಸ್ಸು-ಶುದ್ಧಬುದ್ಧಿಗಳಿಗೆ ಗ್ರಾಹ್ಯನಾದ ದಿವ್ಯಾವತಾರ, ವಿಶ್ವಪ್ರಭು, ಸರ್ವಶಕ್ತನಾದ ಸ್ವಯಂ ಭಗವಂತ!"

ಶ್ರೀರಾಮಕೃಷ್ಣರು ತಮ್ಮ ತರುಣಶಿಷ್ಯರಲ್ಲಿ ಆರು ಜನರನ್ನು 'ಈಶ್ವರಕೋಟಿ'ಗಳು ಎಂದು ಹೇಳುತ್ತಿದ್ದರು. 'ಈಶ್ವರಕೋಟಿ'ಗಳೆಂದರೆ ಹುಟ್ಟುವಾಗಲೇ ಮುಕ್ತರಾಗಿದ್ದು, ಯಾವುದೇ ಕರ್ಮಬಂಧನಕ್ಕೆ ಒಳಪಡದವರು. ಅವರು ಯಾವುದೋ ದಿವ್ಯಲೀಲೆಯಲ್ಲಿ ಪಾಲ್ಗೊಂಡು ಇತರ ಸಾಮಾನ್ಯ ಜೀವರ ಒಳಿತನ್ನು ಸಾಧಿಸಲು ಮತ್ತೆ ಮತ್ತೆ ಜನ್ಮವೆತ್ತುತ್ತಾರೆ. ಮಾನವರಲ್ಲಿ ಇನ್ನೊಂದು ವರ್ಗವೆಂದರೆ 'ಜೀವಕೋಟಿ'ಗಳು. ಇವರು ಜನ್ಮತಃ ಮುಕ್ತರಲ್ಲ, ಆದರೆ ಸಾಧನೆಯ ಮೂಲಕ ಮುಕ್ತರಾಗಬಲ್ಲವರು. ಮತ್ತು ಒಮ್ಮೆ ಗುರಿ ಸೇರಿದ ಮೇಲೆ ಇವರು ಮತ್ತೆ ಮಾನವಶರೀರ ತಾಳಿ ಬರುವುದಿಲ್ಲ. ಶ್ರೀರಾಮಕೃಷ್ಣರು ಹೆಸರಿಸಿದ್ದ 'ಈಶ್ವರಕೋಟಿ'ಗಳೆಂದರೆ ನರೇಂದ್ರ, ರಾಖಾಲ, ಬಾಬುರಾಮ, ಯೋಗೇಂದ್ರ, ನಿರಂಜನ ಹಾಗೂ ಪೂರ್ಣಚಂದ್ರ ಘೋಷ್. ಇವರ ಪೈಕಿ ಮೊದಲ ಐವರೂ ಮುಂದೆ ಸಂನ್ಯಾಸಿಗಳಾದರೆ ಕೊನೆಯವನಾದ ಪೂರ್ಣಚಂದ್ರ ಮಾತ್ರ ಗೃಹಸ್ಥನಾದ.

ಶ್ರೀರಾಮಕೃಷ್ಣರ ಸಂಪರ್ಕಕ್ಕೆ ಬಂದಾಗ ಪೂರ್ಣನಿನ್ನೂ ಹದಿಮೂರು ವರ್ಷದ ಹುಡುಗ. ಆಗ ಅವನು, ಮಹೇಂದ್ರನಾಥನು ಮುಖ್ಯೋಪಾಧ್ಯಾಯನಾಗಿ ಕೆಲಸ ಮಾಡುತ್ತಿದ್ದ ವಿದ್ಯಾಸಾಗರನ ಶಾಲೆಯಲ್ಲಿ ಎಂಟನೇ ತರಗತಿ ಓದುತ್ತಿದ್ದ. ಅವನ ತಂದೆ ದೊಡ್ಡ ಸರ್ಕಾರಿ ಅಧಿಕಾರಿ, ತಾಯಿ ಬಲರಾಮ ಬೋಸನ ಸಂಬಂಧಿ. ಅವರದು ಮೇಲ್ವರ್ಗದ ಕುಟುಂಬ. ಅಂತಸ್ತಿನ ಅಭಿಮಾನವುಳ್ಳವರಾದ್ದರಿಂದ ಇತರರೊಂದಿಗೆ ಸಲಿಗೆ ವಹಿಸುತ್ತಿರಲಿಲ್ಲ. ತಂದೆ ಶಿಸ್ತಿನ ಸಿಪಾಯಿ. ಮಗನನ್ನು ತನ್ನಂತೆಯೇ ಯೋಗ್ಯ ಸಾಮಾಜಿಕನನ್ನಾಗಿ ತಯಾರಿ ಮಾಡಲು ಎಚ್ಚರವಹಿಸಿ ಬೆಳೆಸುತ್ತಿದ್ದ.

ಪೂರ್ಣಚಂದ್ರನದು ಹೆಸರಿಗೆ ತಕ್ಕಂಥ ವ್ಯಕ್ತಿತ್ವ. ಮಿಂಚುವ ವಿಶಾಲನಯನಗಳು, ಗೌರವರ್ಣ, ತುಂಬಿಕೊಂಡ ಅಂಗಾಂಗಗಳು, ಮೇಲಾಗಿ ತುಂಬ ಹಿತವಾದ ಗಾಂಭೀರ್ಯಪೂರ್ಣ ನಡೆನುಡಿ. ಅವನನ್ನು ಕಂಡ ಮಹೇಂದ್ರನಾಥ ಒಮ್ಮೆಗೇ ಆಕರ್ಷಿತನಾದ. ಅವನಲ್ಲಿ ಆಧ್ಯಾತ್ಮಿಕ ಒಲವು ಇರಬಹುದೆಂದು ಊಹಿಸಿ, ಪ್ರೀತಿಯಿಂದ ಮಾತನಾಡಿಸಿದ. ಆಮೇಲೆ ಒಂದು ದಿನ 'ಚೈತನ್ಯಚರಿತಾಮೃತ' ಎಂಬ ಪುಸ್ತಕವನ್ನು ಅವನ ಕೈಯಲ್ಲಿಟ್ಟ. ಅವನದನ್ನು ತುಂಬ ಆಸಕ್ತಿಯಿಂದ ಓದಿದ. ಚೈತನ್ಯನ ಜೀವನ-ಬೋಧನೆ ಅವನಿಗೆ ತುಂಬ ಮೆಚ್ಚುಗೆಯಾಯಿತು.

ಈಗ ಈ 'ಮಕ್ಕಳನ್ನು ಕದಿಯುವ ಮಾಸ್ತರು' ಮೆಲ್ಲನೆ ತನ್ನ ಗಾಳ ಹಾಕಿದ:

"ಏನಪ್ಪಾ, ಶ್ರೀಚೈತನ್ಯನಂತಹ ಒಬ್ಬ ಸಂತನನ್ನು ಕಣ್ಣಾರೆ ನೋಡುವ ಮನಸ್ಸಿದೆಯೇ ನಿನಗೆ ?"

"ಓ, ಖಂಡಿತ !"

ಆದರೆ ಪೂರ್ಣನ ಮನೆಮಂದಿಗೆ ಇದರ ಸುಳಿವೇನಾದರೂ ಸಿಕ್ಕಿದರೆ ಗುರು-ಶಿಷ್ಯರಿಬ್ಬರಿಗೂ ಭಾರೀ ಗಂಡಾಂತರ ! ಇದನ್ನರಿತ ಮಹೇಂದ್ರ ಒಂದು ಯೋಜನೆ ಹೂಡಿದ.

೧೮೮೫ರ ಮಾರ್ಚಿನಲ್ಲೊಂದು ದಿನ ಅವನು ಶಾಲೆಯ ಸಮಯದಲ್ಲೇ

ಪೂರ್ಣನನ್ನು ಕರೆದುಕೊಂಡು ಸಾರೋಟಿನಲ್ಲಿ ದಕ್ಷಿಣೇಶ್ವರಕ್ಕೆ ಬಂದ. ಶ್ರೀರಾಮಕೃಷ್ಣ ರನ್ನು ಕಂಡೊಡನೆ ಪೂರ್ಣನಿಗೆ ಏನೋ ಒಂದು ಬಗೆಯ ಹರ್ಷವುಂಟಾಗಿ ಸಾಷ್ಟಾಂಗ ಪ್ರಣಾಮ ಮಾಡಿದ. ಶ್ರೀರಾಮಕೃಷ್ಣರು ಅವನನ್ನು ಹಿಂದೆಯೇ ಅಲೌಕಿಕ ದರ್ಶನ ವೊಂದರಲ್ಲಿ ನೋಡಿ, ಅವನು ತಮ್ಮ ಅತ್ಯಂತ ಆಪ್ತ ವರ್ಗಕ್ಕೆ ಸೇರಿದವನು ಎಂದು ಕಂಡುಕೊಂಡಿದ್ದರು. ಈಗ ಅವನನ್ನು ಸಾಕ್ಷಾತ್ತಾಗಿ ಕಂಡಾಗ ಅವರು, ಉಕ್ಕಿಬಂದ ಆನಂದದಿಂದ ಭಾವೋನ್ಮುಖರಾಗಿ ಅವನನ್ನೇ ನೆಟ್ಟಗಣ್ಣಿನಿಂದ ನೋಡುತ್ತ ನಿಂತು ಬಿಟ್ಟರು. ಕೋಡಿಯೊಡೆದು ಹರಿಯಿತು ಕಣ್ಣೀರು. ಬಳಿಕ ಅವನನ್ನು ಸೆಳೆದು ಬದಿಯಲ್ಲಿ ಕುಳ್ಳಿರಿಸಿಕೊಂಡು ಮಮತೆಯಿಂದ ಮಾತನಾಡಿಸುತ್ತ ತಮ್ಮ ಕೈಯಾರೆ ಮಿಠಾಯಿ ಹಣ್ಣುಗಳನ್ನು ತಿನ್ನಿಸಿದರು. ಪೂರ್ಣಚಂದ್ರ ಹಸುಳೆಯಂತಾಗಿ ಅವರ ವಾತ್ಸಲ್ಯಕ್ಕೆ ಪ್ರತಿ ಸ್ಪಂದಿಸಿದ. ಈ ಅಲೌಕಿಕ ದೃಶ್ಯವನ್ನು ಕಂಗಳ ಮೂಲಕ ತನ್ನೊಳಗೆ ತುಂಬಿಕೊಳ್ಳುವ ಯತ್ನ ನಡೆಸಿದ್ದ ಮಹೇಂದ್ರನಾಥ.

ಬಳಿಕ ಶ್ರೀರಾಮಕೃಷ್ಣರು ಪೂರ್ಣನಿಗೆ ಅಧ್ಯಾತ್ಮಸಂಬಂಧವಾಗಿ ಕೆಲವು ಸೂಚನೆ ಗಳನ್ನಿತ್ತರು. ಅವನಂತೂ ಅವರ ಸಾನ್ನಿಧ್ಯದಲ್ಲಿ ಲೋಕವನ್ನೇ ಮರೆತುಬಿಟ್ಟಿದ್ದ. ಎಷ್ಟು ಸಮಯ ಕಳೆಯಿತೆಂಬ ಪರಿವೆಯೇ ಅವನಿಗಿರಲಿಲ್ಲ. ಆದರೆ ಅವನನ್ನು ಹೊತ್ತಿಗೆ ಸರಿ ಯಾಗಿ ಮನೆಗೆ ತಲುಪಿಸುವ ಹೊಣೆ ಮಹೇಂದ್ರನದಲ್ಲವೆ ? "ಪೂರ್ಣ, ಇನ್ನು ಹೊರ ಡೋಣವೆ ?" ಎಂದಾಗ ಅವನು ನಿದ್ರೆಯಿಂದೆಬ್ಬಿಸಿದ ಮಗುವಿನಂತೆ ಅರೆಮನಸ್ಸಿ ನಿಂದಲೇ ಹೊರಟುನಿಂತ. "ಅವಕಾಶ ಸಿಕ್ಕಾಗಲೆಲ್ಲ ಬಂದುಬಿಡು, ಗಾಡಿಯಲ್ಲಿ ಬಾ, ಅದಕ್ಕೆ ಹಣ ಇಲ್ಲಿ ಸಿಗುತ್ತದೆ" ಎಂದು ಹೇಳಿ ಶ್ರೀರಾಮಕೃಷ್ಣರು ಬೀಳ್ಕೊಟ್ಟರು.

ಅನಂತರ ಅವರು ಪೂರ್ಣನನ್ನು ಬಾಯ್ತುಂಬ ಕೊಂಡಾಡುತ್ತ ಅಲ್ಲಿದ್ದವರ ಮುಂದೆ ಹೇಳುತ್ತಾರೆ:

"ಪೂರ್ಣನು ನಾರಾಯಣನ ಅಂಶವುಳ್ಳವನು; ಸತ್ವಗುಣದಿಂದ ಕೂಡಿದ ಶ್ರೇಷ್ಠ ದರ್ಜೆಯ ಸಾಧಕ. ಈ ವಿಷಯದಲ್ಲಿ ನರೇಂದ್ರನ ಅನಂತರದ ಸ್ಥಾನ ಅವನದೇ ಎನ್ನ ಬೇಕು. ಆಧ್ಯಾತ್ಮಿಕ ಲಾಭವನ್ನು ಪಡೆಯುವುದಕ್ಕಾಗಿ ಒಂದು ವಿಶೇಷ ವರ್ಗಕ್ಕೆ ಸೇರಿದ ಕೆಲವು ವ್ಯಕ್ತಿಗಳು ಇಲ್ಲಿಗೆ ಬರುತ್ತಾರೆ ಎಂದು ಹಿಂದೆ ನಾನೊಂದು ದರ್ಶನದಲ್ಲಿ ಕಂಡಿದ್ದೆ. ಪೂರ್ಣನ ಆಗಮನದೊಂದಿಗೆ ಅಂತಹ ವ್ಯಕ್ತಿಗಳ ಆಗಮನ ಈಗ ಪೂರ್ಣ ಗೊಂಡಿತು ಅಂತ ಜಗನ್ಮಾತೆ ನನಗೆ ತೋರಿಸಿಕೊಟ್ಟಳು. ಆ ದರ್ಜೆಯ ಭಕ್ತರು ಯಾರೂ ಇನ್ನು ಮೇಲೆ ಬರುವುದಿಲ್ಲ." ಅಷ್ಟು ಚಿಕ್ಕ ಹುಡುಗನ ಕುರಿತಾಗಿ, ಅದೂ ಒಮ್ಮೆ ಮಾತ್ರ ನೋಡುವಷ್ಟರಿಂದಲೇ ಶ್ರೀರಾಮಕೃಷ್ಣರು ಆಡಿದ ಸ್ತುತಿಯ ಮಾತುಗಳನ್ನು ಕೇಳಿ ಎಲ್ಲರೂ ಅತ್ಯಾಶ್ಚರ್ಯಗೊಂಡರು.

ಪೂರ್ಣಚಂದ್ರನಲ್ಲೂ ಆ ದಿನ ಅಪೂರ್ವ ಭಾವಾಂತರವುಂಟಾಯಿತು. ಶ್ರೀರಾಮ ಕೃಷ್ಣರೊಂದಿಗಿನ ತನ್ನ ಪೂರ್ವಸಂಬಂಧದ ನೆನಪು ಮರುಕಳಿಸಿ ಅವನ ಮನಸ್ಸು ಅಂತ ರ್ಮುಖವಾಯಿತು. ಆನಂದದ ಕಣ್ಣೀರನ್ನು ತಡೆಯಲೇ ಆಗಲಿಲ್ಲ ಅವನಿಗೆ. ಆದರೂ ತಾಯ್ತಂದೆಯರ ಭಯದಿಂದ, ಉಮ್ಮಳಿಸುತ್ತಿದ್ದ ಭಾವವನ್ನು ಹೇಗೋ ನಿಗ್ರಹಿಸಿ ಕೊಂಡು ಮನೆಗೆ ಹೋದ. ಆದಾದ ಮೇಲೆ ಶ್ರೀರಾಮಕೃಷ್ಣರಿಗೆ ಪುನಃ ಅವನನ್ನು ಕಾಣಬೇಕೆಂಬ ತೀವ್ರವಾದ ಇಚ್ಛೆಯುಂಟಾಯಿತು. ಪೂರ್ಣನಿಗೂ ಅವರನ್ನು ಕಾಣುವ ಬಯಕೆಯಿತ್ತಾದರೂ ಅದಕ್ಕೆ ಅವಕಾಶವಿರಲಿಲ್ಲ. ಶ್ರೀರಾಮಕೃಷ್ಣರು ಆಗಾಗ ಯಾರಾ

ದರೂ ಶಿಷ್ಯರ ಕೈಲಿ ಅವನಿಗಾಗಿ ತಿಂಡಿತಿನಿಸುಗಳನ್ನು ಕೊಟ್ಟು ರಹಸ್ಯವಾಗಿ ತಲುಪಿಸಲು ಹೇಳಿಕಳಿಸುತ್ತಿದ್ದರು. ಎಷ್ಟೋ ಸಲ ಅವನನ್ನು ನೆನೆಸಿಕೊಂಡು ಕಂಬನಿಗರೆಯುತ್ತಿದ್ದರು. ಅವರು ಆ ಹುಡುಗನಿಗಾಗಿ ಅಳುವುದನ್ನು ಕಂಡು ಭಕ್ತರಿಗೆಲ್ಲ ಸೋಜಿಗ. ಅದನ್ನು ಗಮನಿಸಿ ಒಂದು ದಿನ ಅವರೆನ್ನುತ್ತಾರೆ, "ಪೂರ್ಣನ ಬಗ್ಗೆ ನನ್ನ ವ್ಯಾಕುಲತೆಯನ್ನು ಕಂಡು ಇಷ್ಟು ಆಶ್ಚರ್ಯಪಡುತ್ತೀರಲ್ಲ, ಇನ್ನು ಹಿಂದೆಲ್ಲ ನರೇಂದ್ರನಿಗೋಸ್ಕರ ನಾನು ಎಷ್ಟು ಅತ್ತು ಗೋಳಾಡಿ ಚಡಪಡಿಸುತ್ತಿದ್ದೆ ಎನ್ನುವುದನ್ನು ನೋಡಿದ್ದರೆ ಏನೆನ್ನುತ್ತಿದ್ದಿರೋ ನೀವು !"

ಆ ತರುವಾಯ, ಅವರು ಪೂರ್ಣನನ್ನು ಸಂಧಿಸಲಾಗುವಂತೆ ಭಕ್ತರು ಒಂದು ಉಪಾಯ ಹೂಡಿದರು. ಮಧ್ಯಾಹ್ನದ ಹೊತ್ತಿಗೆ ಶ್ರೀರಾಮಕೃಷ್ಣರು ಬಲರಾಮನ ಮನೆಗೋ ಇಲ್ಲವೆ ಬಾಗ್‌ಬಜಾರಿನ ಇನ್ನಾರದಾದರೂ ಮನೆಗೋ ಹೋಗುವುದು; ಅಲ್ಲಿಂದ ಯಾರಾದರೂ ಮಹೇಂದ್ರನ ಶಾಲೆಗೆ ಹೋಗಿ ಸುದ್ದಿ ತಲುಪಿಸಿ ಪೂರ್ಣನನ್ನು ಕರೆತರುವುದು—ಹೀಗೆ ಮಾಡಲಾರಂಭಿಸಿದರು. ಈ ರೀತಿಯಾಗಿ ಬಲರಾಮನ ಮನೆಯಲ್ಲಿ ಅವನಿಗೆ ಎರಡನೆಯ ಬಾರಿ ಶ್ರೀರಾಮಕೃಷ್ಣರ ದರ್ಶನ ಲಭಿಸಿತು. ಆ ದಿನ ಅವನು ಪೂರ್ತಿ ಭಾವಾವಿಷ್ಟನಾಗಿದ್ದ. ಶ್ರೀರಾಮಕೃಷ್ಣರು ಅವನನ್ನು ನೋಡಿ ಅತ್ಯಾನಂದಪಟ್ಟು ಹೆತ್ತ ತಾಯಿಯಂತೆ ಅವನಿಗೆ ತಮ್ಮ ಕೈಯಿಂದಲೇ ಮಿಠಾಯಿ ಮುಂತಾದುವನ್ನು ತಿನ್ನಿಸಿದರು. ಅನಂತರ ಅವನನ್ನು ಕೇಳಿದರು: "ಏನಪ್ಪಾ, ನನ್ನ ವಿಷಯದಲ್ಲಿ ನಿನ್ನ ಅಭಿಪ್ರಾಯವೇನು ?"

ಅದಕ್ಕೆ ಹದಿಮೂರು ವರ್ಷದ ಆ ಹುಡುಗ ಭಕ್ತಿಯಿಂದ, ನಿಶ್ಶಂಕೆಯಿಂದ ಉತ್ತರಿಸುತ್ತಾನೆ:

"ನೀವು ಸಾಕ್ಷಾತ್ ದೇವರೇ ! ಮನುಷ್ಯರೂಪದಲ್ಲಿ ಬಂದಿದ್ದೀರಿ."

ಅವನ ಬಾಯಿಂದ ಅಂಥ ಉತ್ತರವನ್ನು, ಉಳಿದವರಿರಲಿ, ಸ್ವತಃ ಶ್ರೀರಾಮಕೃಷ್ಣರೂ ನಿರೀಕ್ಷಿಸಿರಲಿಲ್ಲ. ಸಾಮಾನ್ಯರು ಹಾಗೆ ಉತ್ತರಿಸಲು ಸಾಧ್ಯವೆ ? ಯಾರೇ ಆಗಲಿ, ಹೇಳಿಕೇಳಿ ಮನುಷ್ಯನೊಬ್ಬನನ್ನು ದೇವರೆಂದು ಕರೆಯುವರೆ ? ಅಲ್ಲದೆ, ಈ ಹುಡುಗನಿಗೆ ಹಾಗೆನ್ನಲು ಯಾರೂ ಹೇಳಿಕೊಟ್ಟದ್ದಲ್ಲ, ಅದು ಅವನ ಪ್ರಾಮಾಣಿಕ ಭಾವನೆ. ಅದನ್ನು ಕೇಳಿ ಶ್ರೀರಾಮಕೃಷ್ಣರು ಅತ್ಯಾಶ್ಚರ್ಯಗೊಂಡರು; ಮತ್ತು ಅದು ಅವನ ಪರಿಪಕ್ವತೆಯ ಕುರುಹು ಎಂದು ತಿಳಿದು ಅಷ್ಟೇ ಸಂತಸಗೊಂಡರು. ಅನಂತರ ಅವನಿಗೆ ಮಂತ್ರೋಪದೇಶ ಮಾಡಿ ಕೆಲವು ರಹಸ್ಯ ಸೂಚನೆಗಳನ್ನು ಕೊಟ್ಟು ಹೃತ್ಪೂರ್ವಕವಾಗಿ ಹರಸಿ ಬೀಳ್ಕೊಂಡರು.

ದಕ್ಷಿಣೇಶ್ವರಕ್ಕೆ ಹಿಂದಿರುಗಿದ ಮೇಲೆ ಶ್ರೀರಾಮಕೃಷ್ಣರು ಮತ್ತೆಮತ್ತೆ ಹೇಳಿದರು: "ನೋಡಿ, ಅವನಿನ್ನೂ ಹುಡುಗ. ಬುದ್ಧಿ ಬಲಿತಿಲ್ಲ. ಹಾಗಿದ್ದರೂ ಅವನು ನನ್ನನ್ನು ಭಗವದವತಾರ ಎಂದು ಗುರುತಿಸಿದನಲ್ಲ, ಹೇಗದು ? ಅವನ ಹಾಗೆಯೇ ಇನ್ನು ಕೆಲವರು ಕೂಡ ಆ ರೀತಿಯಲ್ಲಿ ಉತ್ತರಿಸಿದ್ದರು. ಅವರು ಹಾಗೆ ಹೇಳಿದ್ದು ಅವರ ಪೂರ್ವಜನ್ಮದ ಸಂಸ್ಕಾರಗಳ ಬಲದಿಂದ ಅಂತಲೇ ಹೇಳಬೇಕು. ಇಂಥವರ ಅಂತರ್ಯ ಶುದ್ಧ ಸಾತ್ವಿಕವಾದದ್ದು. ಆದ್ದರಿಂದಲೇ ಸತ್ಯಸಂಗತಿ ಏನಿದೆಯೋ ಅದು ಅವರ ಮನಸ್ಸಿನಲ್ಲಿ ಸ್ಫುಟವಾಗಿ ಮೂಡುತ್ತದೆ."

ಪೂರ್ಣಚಂದ್ರನ ಸಂಬಂಧಿಕರೊಬ್ಬರ ಮನೆ ದಕ್ಷಿಣೇಶ್ವರದ ಬಳಿಯಲ್ಲೇ ಇತ್ತು.

ಒಂದು ದಿನ ಅವರ ಮನೆಗೆ ಹೋಗುತ್ತೇನೆಂಬ ನೆಪ ಹೇಳಿ ಹೊರಟ ಅವನು, ಅನಂತರ ಶ್ರೀರಾಮಕೃಷ್ಣರ ಬಳಿಗೂ ಬಂದ. ಅವನನ್ನು ನೋಡಿದರೆ ಸಾಕು, ಬಾಲಗೋಪಾಲನನ್ನೇ ಕಂಡಂತಾಗಿ ಶ್ರೀರಾಮಕೃಷ್ಣರಲ್ಲಿ ಯಶೋದಾಭಾವದ ಪ್ರಚೋದನೆಯಾಗುತ್ತಿತ್ತು. ಆ ದಿನ ಅವರು ಮಡದಿ ಶಾರದಾದೇವಿಯವರಿಗೆ ಹೇಳಿ ಅವನಿಗಾಗಿ ವಿಶೇಷ ಅಡಿಗೆ ಮಾಡಿಸಿದರು. ಅಲ್ಲದೆ, ಅವನಿಗೆ ಯಾವ ರೀತಿಯಲ್ಲಿ ಸಾಕ್ಷಾತ್ ಭಗವಂತನಿಗೆ ಬಡಿಸುವಂತೆ ಅಂತಃಕರಣಪೂರ್ವಕವಾಗಿ ಉಪಚಾರ ಮಾಡಿ ಬಡಿಸಬೇಕು ಎಂದೂ ಮಡದಿಗೆ ವಿವರಿಸಿದರು! ವಾತ್ಸಲ್ಯದ ಕಲೆಯನ್ನು ಶಾರದಾದೇವಿಯವರಿಗೆ ಹೊಸದಾಗಿ ಹೇಳಿ ಕೊಡಬೇಕೆ? ಇರಲಿ, ಅದರ ಪ್ರಕಾರವೇ ಅವರು ಪೂರ್ಣನ ಮೈಗೆ ಗಂಧಚಂದನ ಲೇಪಿಸಿ, ಹೂಮಾಲೆಯಿಂದ ಅಲಂಕರಿಸಿದರು; ಬಳಿಕ ತಮ್ಮ ನಹಬತ್ತಿನಲ್ಲಿ ಊಟಕ್ಕೆ ಕುಳ್ಳಿರಿಸಿ, ತಾವು ಬದಿಯಲ್ಲೇ ಕುಳಿತು ವಾತ್ಸಲ್ಯದಿಂದ ಉಣಬಡಿಸಿದರು. ಈ ಮಧ್ಯೆ ಶ್ರೀರಾಮಕೃಷ್ಣರ ಕಾತರವನ್ನು ನೋಡಬೇಕು! ಮಡದಿಗೆ ಕೊಡಬೇಕಾದ ಸೂಚನೆಗಳನ್ನೆಲ್ಲ ಕೊಟ್ಟು ತಮ್ಮ ಕೋಣೆಗೆ ಹೊರಟರು; ಆದರೆ ಅರ್ಧದಾರಿಯಲ್ಲೇ ಇನ್ನೇನೋ ನೆನಪಾಯಿತು. ವಾಪಸು ಬಂದು ಹೇಳಿದರು: "ನೋಡು, ಅವನಿಗೆ ಇನ್ನೊಮ್ಮೆ ಆ ಭಕ್ಷ್ಯ ಬಡಿಸು, ಏನು?" ಅದನ್ನು ಹೇಳಿ ಹೊರಟವರಿಗೆ ಅಷ್ಟು ದೂರ ಹೋದಮೇಲೆ ಮತ್ತೊಂದು ವಿಷಯ ಹೊಳೆಯಿತು. ಮತ್ತೆ ಬಂದರು, "ಹ್ಞಾ! ಅವನಿಗೆ ಪಲ್ಯ ಕೇಳಿ ಕೇಳಿ ಬಡಿಸು, ಮರೆತೀಯ!" ಎಂದು ನೆನಪಿಸಿಹೋದರು. ಹೀಗೆ ಅವನ ಊಟ ಮುಗಿಯುವವರೆಗೂ ಅವರು ಅತ್ತಿಂದಿತ್ತ ಇತ್ತಿಂದತ್ತ ಗಡಿಬಿಡಿಯಿಂದ ಓಡಾಡುವುದು ನಿಲ್ಲಲೇ ಇಲ್ಲ! ಊಟವಾದ ಮೇಲೆ ಶಾರದಾದೇವಿಯವರು ಪೂರ್ಣನಿಗೆ ಕೈತೊಳೆಯಲು ತಾವೇ ನೀರುಹಾಕಿದರು. ಅನಂತರ ಶ್ರೀರಾಮಕೃಷ್ಣರು, "ಅವನಿಗೆ ಪೂರ್ಣ ಹದಿನಾರಾಣೆ ದಕ್ಷಿಣೆ ಕೊಡು" ಎಂದು ಹೇಳಿ ಸತಿಯ ಕೈಯಿಂದ ಕೊಡಿಸಿದರು. ಅದನ್ನು ಅವನು ತುಂಬ ಸಂಕೋಚದಿಂದಲೇ ಸ್ವೀಕರಿಸಿದ. ಇಷ್ಟೆಲ್ಲ ಆದರೂ ಅವನಿಗೆ ಶಾರದಾದೇವಿಯವರು ಯಾರು ಎಂದು ಗೊತ್ತಾಗಿರಲಿಲ್ಲ. ಎಷ್ಟೋ ದಿನಗಳವರೆಗೂ, ಅವರು ಯಾರೋ ಭಕ್ತೆಯಿರಬೇಕು ಎಂದೇ ತಿಳಿದುಕೊಂಡಿದ್ದ! ಬಹುಶಃ ಅವರಿಬ್ಬರೂ ದೂರದೂರದಲ್ಲಿ ವಾಸವಾಗಿರುತ್ತಿದ್ದುದನ್ನು ಕಂಡು ಹಾಗೆ ಭಾವಿಸಿರಬೇಕು.

ಒಂದು ಮಧ್ಯಾಹ್ನ ಶ್ರೀರಾಮಕೃಷ್ಣರು ಬಲರಾಮನ ಮನೆಗೆ ಬಂದರು. ಪೂರ್ಣನನ್ನು ನೋಡುವುದು ಅವರ ಒಂದು ಉದ್ದೇಶ. ಆದರೆ ಅವನು ಅಲ್ಲಿ ಇರಲಿಲ್ಲ. ಶ್ರೀರಾಮಕೃಷ್ಣರು ಮಹೇಂದ್ರನನ್ನು ಕೇಳಿದರು:

"ಯಾಕೆ ಪೂರ್ಣನನ್ನು ಕರೆತರಲಿಲ್ಲ?"

"ಅವನು ಬಹಳ ಜನ ನೆರೆದಿರುವಾಗ ನಿಮ್ಮಲ್ಲಿಗೆ ಬರಲು ಇಷ್ಟಪಡುವುದಿಲ್ಲ. ನೀವು ತನ್ನನ್ನು ಎಲ್ಲರೆದುರಿಗೂ ಹೊಗಳಿಬಿಡಬಹುದು, ಆಮೇಲೆ ಅದು ತನ್ನ ಮನೆಯವರ ಕಿವಿಗೆ ಬೀಳಬಹುದು ಎಂಬ ಭಯ ಅವನಿಗೆ."

"ಹೌದು, ಅದು ನಿಜವೇ. ಇನ್ನು ಮೇಲೆ ಹಾಗೆ ಮಾಡುವುದಿಲ್ಲ. ನೀನು ಅವನಿಗೆ ಅಧ್ಯಾತ್ಮಸಂಬಂಧವಾಗಿ ಬೋಧಿಸುತ್ತಿದ್ದೀಯಂತೆ? ಅದು ಬಹಳ ಒಳ್ಳೆಯದೇ ಸರಿ. ಪೂರ್ಣನ ವಿಷಯದಲ್ಲಿ ನಿನ್ನ ಅಭಿಪ್ರಾಯವೇನು? ಅವನಿಗೆ ಯಾವಾಗಲಾದರೂ ಭಾವಾವೇಶವುಂಟಾಗುತ್ತದೆಯೆ?"

"ಇಲ್ಲ, ಅಂತಹ ಬಾಹ್ಯ ಚಿಹ್ನೆಗಳೇನನ್ನೂ ನಾನು ಕಂಡಿಲ್ಲ."

"ನಿಜ, ಅವನು ತನ್ನ ಭಾವವನ್ನು ಹೊರಗೆ ವ್ಯಕ್ತಪಡಿಸುವುದಿಲ್ಲ. ಅವನ ಮಾನಸಿಕ ಸ್ಥಿತಿ ಬೇರೆಯೇ ರೀತಿಯದು. ಅವನ ಇತರ ಲಕ್ಷಣಗಳು ಬಹಳ ಚೆನ್ನಾಗಿವೆ. ಒಳ್ಳೇದು, ಅವನು ನನ್ನ ಪರಿಚಯ ಮಾಡಿಕೊಂಡ ಮೇಲೆ ಅವನಿಗೆ ಏನೇನು ಅನುಭವವಾಯಿತು ಅಂತ ಕೇಳಿದೆಯಾ?"

"ಹೌದು, ಆ ಸಂಬಂಧವಾಗಿ ಮಾತನಾಡಿದೆವು. ಈಗ ನಾಲ್ಕೈದು ದಿನಗಳಿಂದಲೂ ಅವನು 'ದೇವರ ಧ್ಯಾನ, ನಾಮಜಪಗಳನ್ನು ಮಾಡುವಾಗ ಕಣ್ಣಿಂದ ಪ್ರೇಮಾಶ್ರು ಸುರಿಯುತ್ತದೆ, ರೋಮಾಂಚನವಾಗುತ್ತದೆ' ಅಂತ ಹೇಳುತ್ತಿದ್ದಾನೆ."

"ನಿಜವಾಗಿ!? ಅವನಿಗೆ ಬೇಕಾದ್ದೂ ಅಷ್ಟೇನೆ."

ಆಮೇಲೆ ಶ್ರೀರಾಮಕೃಷ್ಣರು ಪೂರ್ಣನ ಬಗ್ಗೆ ಮತ್ತೆ ಹೇಳುತ್ತಾರೆ:

"ಆತ ಒಬ್ಬ ಮಹಾ ವ್ಯಕ್ತಿ! ಹಾಗಲ್ಲದಿದ್ದರೆ ಆತನ ಶ್ರೇಯಸ್ಸಿಗಾಗಿ ನಾನು ಜಪ ಮಾಡಲಾಗುತ್ತಿತ್ತೇ? ಆದರೆ ಅವನಿಗೆ ಇದು ಗೊತ್ತಿಲ್ಲ."

ಈ ವಿಚಿತ್ರ ಸಂಗತಿಯನ್ನು ಕೇಳಿ ಭಕ್ತರು ಆಶ್ಚರ್ಯಚಕಿತರಾದರು.

ತಾನು ಶ್ರೀರಾಮಕೃಷ್ಣರ ಬಳಿಗೆ ಹೋಗುವ ವಿಚಾರ ತನ್ನ ಮನೆಯವರಿಗೆ ತಿಳಿಯಬಾರದೆಂದು ಪೂರ್ಣಚಂದ್ರ ಎಷ್ಟೇ ಪ್ರಯತ್ನ ಪಟ್ಟರೂ ಯಶಸ್ವಿಯಾಗಲಿಲ್ಲ. ಅದು ಹೇಗೋ ತಿಳಿದುಬಂದಾಗ ಅವನ ತಂದೆ ಇನ್ನಷ್ಟು ಕಠಿಣನಾದ. ಆದರೆ ದಿಗ್ಬಂಧನಗಳು ಹೆಚ್ಚಿದರೂ ಅವನು, ಭಕ್ತರ ಮನೆಗಳಲ್ಲಿ ಶ್ರೀರಾಮಕೃಷ್ಣರನ್ನು ಭೇಟಿ ಮಾಡುವುದನ್ನು ಬಿಡಲಿಲ್ಲ. ಮಹೇಂದ್ರನಾಥ ಇದರಲ್ಲಿ ಮಧ್ಯಸ್ಥನ ಪಾತ್ರ ವಹಿಸುತ್ತಿದ್ದ. ಕಡೆಗೆ ಪೂರ್ಣನ ಸಂಬಂಧಿಕರಿಗೆಲ್ಲ ಕೋಪ ಕೆರಳಿತು. "ಇನ್ನೊಮ್ಮೆ ನೀನು ಆ ಪರಮಹಂಸನ ಹತ್ತಿರ ಹೋದರೆ, ಅವನು ಕಲ್ಕತ್ತಕ್ಕೆ ಬಂದಾಗ ಆತನ ಗಾಡಿಗೆ ಕಲ್ಲು ಹೊಡೆದು ಚೂರು ಮಾಡಿಬಿಡುತ್ತೇವೆ!" ಎಂದು ಬೆದರಿಸಿದರು. ಇದಕ್ಕೆಲ್ಲ ಆ ಹಾಳು ಮಾಸ್ತರನೇ ಕಾರಣ ಎಂದು ತೀರ್ಮಾನಿಸಿ ಹುಡುಗನನ್ನು ಆ ಶಾಲೆಯಿಂದ ಬಿಡಿಸಿ ಬೇರೆ ಶಾಲೆಗೆ ಹಾಕಿದರು.

ಇದು ಶ್ರೀರಾಮಕೃಷ್ಣರಿಗೆ ತಿಳಿದಾಗ ಅವರು ಮಹೇಂದ್ರನ ಬಗ್ಗೆ ಆತಂಕಗೊಂಡರು. ಆದರೆ ಅವನೇನೂ ಆ ಬಗ್ಗೆ ಚಿಂತಿಸಲಿಲ್ಲ, ಬದಲಾಗಿ ಶ್ರೀರಾಮಕೃಷ್ಣರಿಗೇ ಸಮಾಧಾನ ಹೇಳಿದ. ಅಲ್ಲದೆ ಅವನು ತನ್ನ ಮಧ್ಯಸ್ತಿಕೆ ಕೆಲಸವನ್ನೇನೂ ಬಿಡಲಿಲ್ಲ. ಒಂದು ರಾತ್ರಿ ಪೂರ್ಣ ತನ್ನ ಕೋಣೆಯಲ್ಲಿ ಒಬ್ಬನೇ ಕುಳಿತು ಓದಿಕೊಳ್ಳುತ್ತಿದ್ದಾನೆ; ಆಗ ಕಿಟಕಿಯಾಚೆ ಯಾರೋ ಸುಳಿದಾಡಿದ್ದು ಕಂಡಿತು. ನೋಡುತ್ತಾನೆ—ಮಾಸ್ತರ್! "ಶ್ರೀರಾಮಕೃಷ್ಣರು ನಿನಗಾಗಿ ಅಲ್ಲಿ ರಸ್ತೆಯ ಮೂಲೆಯಲ್ಲಿ ಕಾದಿದ್ದಾರೆ, ಬರುತ್ತೀಯಾ?" ಎಂದು ಆತ ಪಿಸುಗುಟ್ಟಿದ. ತಕ್ಷಣ ಇವನು ಮೆಲ್ಲನೆದ್ದು ಹೊರಬಂದು ಅವನೊಂದಿಗೆ ನಡೆದೇಬಿಟ್ಟ. ಪೂರ್ಣನನ್ನು ಕಂಡು ಶ್ರೀರಾಮಕೃಷ್ಣರು ಪರಮಾನಂದ ಪಟ್ಟರು. ಕೈಯಾರೆ ಅವನಿಗೆ ಮಿಠಾಯಿ ತಿನ್ನಿಸಿದರು. ಪೂರ್ಣಚಂದ್ರ ಅಳತೊಡಗಿದ. ಅನಂತರ ಮೂವರೂ ಮಹೇಂದ್ರನ ಮನೆಗೆ ನಡೆದರು. ಅಲ್ಲಿ ಶ್ರೀರಾಮಕೃಷ್ಣರು ಅವನಿಗೆ ಸಾಧನೆಗೆ ಸಂಬಂಧಿಸಿದಂತೆ ಕೆಲವು ಸೂಚನೆಗಳನ್ನಿತ್ತರು.

ಪೂರ್ಣನಿಗೆ ತನ್ನ ಮಾಸ್ತರಾದ ಮಹೇಂದ್ರನ ಮೇಲಿದ್ದ ಭಕ್ತಿ ಗೌರವ ಅಪಾರ. ಒಮ್ಮೆ ಮಹೇಂದ್ರ ಶ್ರೀರಾಮಕೃಷ್ಣರಿಗೆ ಆ ಬಗ್ಗೆ ತಿಳಿಸುತ್ತಾನೆ: "ಆ ದಿನ ನಾನು ಟ್ರಾಮ್ ಗಾಡಿಯಲ್ಲಿ ಕುಳಿತು ಹೋಗುತ್ತಿದ್ದೆ. ಪೂರ್ಣ ತನ್ನ ಮನೆಯ ಮಾಳಿಗೆಯ ಮೇಲೆ

ನಿಂತಿದ್ದವನು, ನನ್ನನ್ನು ನೋಡಿದವನೇ ಓಡಿಬಂದು ಭಾವಭರಿತನಾಗಿ ನಮಸ್ಕರಿಸಿದ." ಇದನ್ನು ಕೇಳಿ ಶ್ರೀರಾಮಕೃಷ್ಣರು ಕರಗಿಬಿಟ್ಟರು. ಆರ್ದ್ರನಯನರಾಗಿ ಅವರೆನ್ನುತ್ತಾರೆ: "ಆಹಾ! ಅದೇಕೆ ಗೊತ್ತೆ? ತನ್ನ ಜೀವನದ ಪರಮಗುರಿಯನ್ನು ಕಂಡುಕೊಳ್ಳಲು ನೀನವನಿಗೆ ನೆರವಾದೆಯಲ್ಲ, ಅದಕ್ಕಾಗಿ ಆ ಗೌರವ."

ಬಳಿಕ ಅವರು ಪೂರ್ಣನ ಬಗ್ಗೆ ಮತ್ತೆ ಹೀಗೆನ್ನುತ್ತಾರೆ:

"ಅವನದು ದೈವಿಕ ಸ್ವಭಾವ—ದೇವಸಹಜ ಗುಣಗಳಿವೆ. ಈ ಗುಣಗಳಿದ್ದರೆ ವ್ಯಕ್ತಿಗೆ ಲೋಕಭಯ ಕಡಿಮೆಯಾಗುತ್ತದೆ."

ಬರಬರುತ್ತ ಪೂರ್ಣನಿಗೆ ಶ್ರೀರಾಮಕೃಷ್ಣರನ್ನು ಭೇಟಿಯಾಗುವುದು ಪೂರ್ತಿ ಅಸಾಧ್ಯವಾಯಿತು. ಆದರೆ ಅವನು ಅವರ ಸೂಚನೆಗಳ ಪ್ರಕಾರ ಗುಪ್ತವಾಗಿಯೇ ಧ್ಯಾನಜಪಗಳಲ್ಲಿ ತೊಡಗಿ ಆನಂದದಿಂದಿದ್ದ. ೧೮೮೫ರ ಆಗಸ್ಟ್ ೨೯ ರಂದು ಶ್ರೀರಾಮಕೃಷ್ಣರಿಗೆ ಬರೆದ ಒಂದು ಪತ್ರದಲ್ಲಿ ಅವನು ತನ್ನ ಮನಸ್ಥಿತಿಯನ್ನು ಹೇಳಿಕೊಳ್ಳುತ್ತಾನೆ: "ನಾನು ಅತ್ಯಂತ ಆನಂದದಲ್ಲಿ ಮುಳುಗಿದ್ದೇನೆ. ಆ ಆನಂದದ ದೆಸೆಯಿಂದಾಗಿ ಎಷ್ಟೋ ರಾತ್ರಿಗಳು ನಿದ್ರೆಯೇ ಬರುವುದಿಲ್ಲ." ಅದನ್ನು ತಿಳಿದು ಶ್ರೀರಾಮಕೃಷ್ಣರು ಉದ್ಗರಿಸಿದರು: "ಆಹಾ! ರೋಮಾಂಚನವಾಗುತ್ತಿದೆ... ಈ ಆನಂದಾವಸ್ಥೆ ಅವನಲ್ಲಿ ಮುಂದೆಯೂ ಹೀಗೆಯೇ ಉಳಿದುಕೊಳ್ಳುತ್ತದೆ."

ಶ್ರೀರಾಮಕೃಷ್ಣರಿಗೆ ಪೂರ್ಣನಂತೆಯೇ ಪ್ರಿಯರಾದ ಇನ್ನೂ ಅನೇಕ ಬಾಲಶಿಷ್ಯ ರಿದ್ದರು. ಅವರಲ್ಲಿ ನಾರಾಯಣ, ಚಿಕ್ಕನರೇಂದ್ರ, ತೇಜಚಂದ್ರ, ಹರಿಪದ, ದ್ವಿಜ, ಪ್ರಮಥ (ಪಲ್ಟು), ಕಿರಿಯ ಗೋಪಾಲ—ಇವರ ಹೆಸರನ್ನು ವಿಶೇಷವಾಗಿ ಹೇಳಬಹುದು. ಇವರಲ್ಲಿ ಹೆಚ್ಚಿನವರನ್ನು ಶ್ರೀರಾಮಕೃಷ್ಣರ ಸಾನ್ನಿಧ್ಯಕ್ಕೆ ಕರೆತಂದವನು ಮಹೇಂದ್ರನಾಥ ಗುಪ್ತ.

ನಾರಾಯಣ ಸ್ಥಿತಿವಂತ ಬ್ರಾಹ್ಮಣಕುಟುಂಬಕ್ಕೆ ಸೇರಿದ ತರುಣ. ವಯಸ್ಸು ಹದಿ ನಾರೋ ಹದಿನೇಳೋ. ಇವನು ಮಹೇಂದ್ರನ ವಿದ್ಯಾರ್ಥಿ. ಶ್ರೀರಾಮಕೃಷ್ಣರು ನಾರಾ ಯಣನ ಪ್ರಾಮಾಣಿಕತೆ, ದೈವಭಕ್ತಿ ಹಾಗೂ ಬಾಲಸಹಜ ಮಾಧುರ್ಯವನ್ನು ಮೆಚ್ಚಿ ಕೊಂಡಾಡುತ್ತಿದ್ದರು. ಅವನನ್ನು ಪ್ರೀತಿಯಿಂದ 'ನಾರಾಣ' ಎನ್ನುತ್ತಿದ್ದರು. ಅವನು ಕೆಲವು ದಿನ ಬರದಿದ್ದರೆ ಕಣ್ಣೀರು ಹಾಕುತ್ತಿದ್ದರು. ಒಮ್ಮೆ ಅವನ ಅಂಗಾಂಗಗಳನ್ನು ಪರಿಶೀಲಿಸಿ, "ನೀನು ಆಧ್ಯಾತ್ಮಿಕ ಜೀವನದಲ್ಲಿ ಯಶಸ್ವಿಯಾಗುತ್ತೀಯೆ" ಎಂದು ಹೇಳಿ ದರು. ಆದರೆ ಅವನ ಮನೆಯವರಿಗೆ ಅವನು ಶ್ರೀರಾಮಕೃಷ್ಣರ ಬಳಿಗೆ ಹೋಗುವುದು ಇಷ್ಟವಿರಲಿಲ್ಲ. "ಹೋಗಬೇಡ" ಎಂದು ಎಷ್ಟೋ ಹೇಳಿನೋಡಿದರು. ಅವನು ಕೇಳ ದಿದ್ದಾಗ ದಂಡಪ್ರಯೋಗವನ್ನೂ ಮಾಡಿದರು. ಆದರೆ ಅದೂ ದಂಡವಾಯಿತು. ಅವ ನೇನೂ ತನ್ನ ಸ್ವಭಾವವನ್ನು ಬದಲಿಸಿಕೊಳ್ಳಲಿಲ್ಲ. ಅವನಿಗೆ ಹೊಡೆತ ಬಿದ್ದ ಸುದ್ದಿ ಕೇಳಿ ಶ್ರೀರಾಮಕೃಷ್ಣರು "ಅಯ್ಯೋ ಪಾಪ!" ಎಂದರಾದರೂ "ಬರುವುದನ್ನು ನಿಲ್ಲಿಸು" ಎಂದು ಹೇಳಲಿಲ್ಲ. ಬದಲಾಗಿ, "ನೀನೊಂದು ಚರ್ಮದ ಕೋಟು ಹೊಲಿಸಿಕೊಂಡು ಬಿಡು, ಆಗ ಏಟು ತಗಲುವುದಿಲ್ಲ" ಎಂದು ಹಾಸ್ಯವಾಗಿ ಸಲಹೆ ಮಾಡಿದರು!

ಒಂದು ದಿನ ಶ್ರೀರಾಮಕೃಷ್ಣರು ತಮ್ಮ ಕೋಣೆಯ ವರಾಂಡದಲ್ಲಿ ಸಂಕೀರ್ತನೆ ಕೇಳುತ್ತಿದ್ದಾಗ ನಾರಾಯಣ ಬಂದ. ಅವನನ್ನು ಕಂಡ ತಕ್ಷಣ ಅವರು ಯಾವುದೋ ಶಕ್ತಿಯಿಂದ ಪ್ರಚೋದಿತರಾಗಿ, ಹಾಡು ಮುಗಿಯುವುದಕ್ಕೆ ಮೊದಲೇ ಮೇಲೆದ್ದು ಅವ ನಿಗೆ ಉಪಚಾರ ಮಾಡುತ್ತ ಮಿಠಾಯಿ ತಿನ್ನಿಸಲಾರಂಭಿಸಿದರು. ತಮ್ಮ ಈ ವರ್ತನೆ ಯನ್ನು ಕಂಡು ಆಮೇಲೆ ಅವರೇ ಆಶ್ಚರ್ಯಪಟ್ಟರು. ಇದಕ್ಕೆ ಅವನಲ್ಲಿ ಅಡಗಿರುವ ಆಧ್ಯಾತ್ಮಿಕ ಸತ್ತ್ವವೇ ಕಾರಣ ಎಂದು ವಿವರಿಸಿದರು. ಮತ್ತೊಂದು ದಿನ ಅವನ ತಾಯಿ ಬಂದಳು—'ನನ್ನ ಮಗ ದೇವರ ಬಗ್ಗೆ ತಲೆ ಕೆಡಿಸಿಕೊಳ್ಳುವುದನ್ನು ತಪ್ಪಿಸಿ' ಎಂದು ಶ್ರೀರಾಮಕೃಷ್ಣರನ್ನೇ ಕೇಳಿಕೊಳ್ಳುವುದಕ್ಕಾಗಿ! ಆದರೆ ಶ್ರೀರಾಮಕೃಷ್ಣರು ಚಾತುರ್ಯ ದಿಂದ ಅವಳ ಮನಸ್ಸು ಸಮಾಧಾನಗೊಳ್ಳುವಂತೆ ಮಾತನಾಡಿ, ಅವನ ಆಧ್ಯಾತ್ಮಿಕ ಪಥದಲ್ಲಿ ಆಕೆ ಅಡ್ಡಿಯಾಗಿ ನಿಲ್ಲದಂತೆ ಮಾಡಿದರು.

ಭೂಪತಿ ಒಬ್ಬ ತರುಣ ಬ್ರಾಹ್ಮಸದಸ್ಯ. ಶ್ರೀರಾಮಕೃಷ್ಣರ ಬಗ್ಗೆ ಕೇಳಿ ಕುತೂಹಲ ಗೊಂಡು ಒಮ್ಮೆ ದಕ್ಷಿಣೇಶ್ವರಕ್ಕೆ ಬಂದ. ಪ್ರಥಮ ದರ್ಶನದಲ್ಲೇ ಅವರಿಗೆ ಮನಸೋತು ಭಕ್ತನಾದ. ಆತನ ಶಿಶುವತ್ ಸರಳತೆಯನ್ನೂ ನಿಶ್ಚಲ ದೈವಭಕ್ತಿಯನ್ನೂ ಕಂಡು ಶ್ರೀರಾಮಕೃಷ್ಣರು ಅವನನ್ನು ಬಹುವಾಗಿ ಪ್ರೀತಿಸುತ್ತಿದ್ದರು. ಒಮ್ಮೆ ಅವನು ಕಾಳೀ

ದೇವಾಲಯದ ಹೆಬ್ಬಾಗಿಲಿನ ಬಳಿಯಲ್ಲಿ ಕುಳಿತು, ದೇವರ ಗುಣ ಗಾನ ಮಾಡುವ ಹಾಡೊಂದನ್ನು ಮೈಮರೆತು ಹಾಡುತ್ತಿದ್ದ. ದೂರದಲ್ಲೆಲ್ಲೋ ಇದ್ದ ಶ್ರೀರಾಮಕೃಷ್ಣರು ಅದನ್ನು ಕೇಳಿ ಭಾವಾವಿಷ್ಟರಾಗಿ ಅಲ್ಲಿಗೇ ಧಾವಿಸಿದರು; ಅರ್ಧ ಸಮಾಧಿಸ್ಥಿತಿಯಲ್ಲಿ ಅವನ ಎದೆಗೆ ತಮ್ಮ ಪಾದಸ್ಪರ್ಶ ಮಾಡಿದರು. ತಕ್ಷಣವೇ ಅವನಲ್ಲೊಂದು ಅಪೂರ್ವ ಭಾವಾಂತರವಾಯಿತು. ಅವನು ತನ್ನ ಇಷ್ಟ ದೇವತೆಯನ್ನು ದರ್ಶಿಸಿದ.

'ಚಿಕ್ಕ ನರೇಂದ್ರ' ಅಥವಾ 'ಕಿರಿಯ ನರೇಂದ್ರ' ಎಂಬ ಹೆಸರಿನಿಂದ ಭಕ್ತವೃಂದದಲ್ಲಿ ಪರಿಚಿತನಾಗಿದ್ದ ತರುಣನ ಪೂರ್ತಿ ಹೆಸರು ನರೇಂದ್ರನಾಥ ಮಿತ್ರ ಎಂದು. ಇವನೂ ಮಹೇಂದ್ರನ ವಿದ್ಯಾರ್ಥಿಯೇ. ಆಧ್ಯಾತ್ಮಿಕ ಸ್ವಭಾವ ಬಾಲ್ಯದಿಂದಲೇ ಮೈಗೂಡಿತ್ತು. ಎಳೆಯನಾಗಿದ್ದಾಗಲೇ ಇವನು ದೇವರಿಗಾಗಿ ಅಳುತ್ತಿದ್ದನಂತೆ. ಶ್ರೀರಾಮಕೃಷ್ಣರ ಮೇಲೆ ಇವನಿಗಿದ್ದ ಭಕ್ತಿ-ಪ್ರೀತಿ ಅತಿಶಯವಾದದ್ದು. ನಾರಾಯಣನ ಮನೆಮಂದಿಯಂತೆಯೇ ಇವನ ಮನೆಯವರೂ ಕೂಡ ಇವನು ಶ್ರೀರಾಮಕೃಷ್ಣರ ಬಳಿಗೆ ಹೋಗುವುದನ್ನು ಸಹಿಸದೆ ಶಿಕ್ಷೆ ವಿಧಿಸುತ್ತಿದ್ದರು. ಆದರೂ ಈತ ಆಗಾಗ ದಕ್ಷಿಣೇಶ್ವರಕ್ಕೆ ಓಡಿಬಂದು ಎರಡು ಮೂರು ದಿನ ಇದ್ದುಬಿಡುತ್ತಿದ್ದ.

ಚಿಕ್ಕನರೇಂದ್ರನಲ್ಲಿ ದೈವಭಕ್ತಿ, ವ್ಯಾಕುಲತೆ, ಸರಳತೆ, ಮುಗ್ಧತೆ—ಈ ಗುಣಗಳೆಲ್ಲ ಎದ್ದುಕಾಣುತ್ತಿದ್ದುವು. ಆದ್ದರಿಂದ ಶ್ರೀರಾಮಕೃಷ್ಣರು ಅವನನ್ನು ಹೃತ್ಪೂರ್ವಕವಾಗಿ ಪ್ರೀತಿಸುತ್ತಿದ್ದರು. ಕೆಲವು ದಿನಗಳವರೆಗೆ ಅವನು ಕಾಣಸಿಕೊಳ್ಳದಿದ್ದರೆ ಅವನಿಗಾಗಿ ಅತ್ತು ಜಗನ್ಮಾತೆಯಲ್ಲಿ ಪ್ರಾರ್ಥನೆ ಸಲ್ಲಿಸುತ್ತಿದ್ದರು. ಅವನ ಸದ್ಗುಣಗಳನ್ನು ಎಲ್ಲರ ಮುಂದೆ ಎತ್ತಿ ಆಡುತ್ತಿದ್ದರು. ಚಿಕ್ಕನರೇಂದ್ರನ ಸಹಜ ಒಲವು ನಿರಾಕಾರ ತತ್ತ್ವದೆಡೆಗೆ ಎಂದು ತೋರುತ್ತದೆ. ಆದ್ದರಿಂದ ಶ್ರೀರಾಮಕೃಷ್ಣರು ಒಂದು ದಿನ ತಮ್ಮ ಸ್ಪರ್ಶದಿಂದ ಅವನ ಮನಸ್ಸನ್ನು ಉನ್ನತ ಸ್ಥಿತಿಗೇರಿಸಿದಾಗ ಅವನು ಕೆಲಕಾಲ ನಿರಾಕಾರ ಧ್ಯಾನದಲ್ಲಿ ತೊಡಗಿ ಸಮಾಧಿಸ್ಥನಾಗಿದ್ದ ಎಂದು ತಿಳಿದುಬರುತ್ತದೆ. ಅವನು ಬಹಳ ಹೊತ್ತು ಕುಳಿತು ಧ್ಯಾನ ಮಾಡಬಲ್ಲವನಾಗಿದ್ದ. ಕೀರ್ತನೆಗಳನ್ನು ಕೇಳುತ್ತ ಗಾಢ ಧ್ಯಾನಸ್ಥನಾಗಿ ಬಿಡುತ್ತಿದ್ದ. ಕೆಲವೊಮ್ಮೆ ಆ ಸ್ಥಿತಿ ಎರಡು ಗಂಟೆಗಿಂತ ಹೆಚ್ಚು ಕಾಲ ಮುಂದುವರಿಯು ತ್ತಿತ್ತು. ಶ್ರೀರಾಮಕೃಷ್ಣರು ಅವನ ಬಗ್ಗೆ ಹೇಳುತ್ತಿದ್ದರು: "ಈ ಹುಡುಗ ಅತ್ಯಂತ ಪರಿಶುದ್ಧಾತ್ಮ; ಪ್ರಾಪಂಚಿಕತೆಯ ಸೋಂಕು ಇವನನ್ನು ಸ್ವಲ್ಪವೂ ತಗಲಿಲ್ಲ" ಎಂದು.

ಚಿಕ್ಕನರೇಂದ್ರನ ಮತ್ತೊಂದು ವೈಶಿಷ್ಟ್ಯವೆಂದರೆ ಹರಿತ ಬುದ್ಧಿ, ಸೂಕ್ಷ್ಮಗ್ರಾಹಿತ್ವ. ಅವನ ಬುದ್ಧಿವಂತಿಕೆಯನ್ನು ಪ್ರಶಂಸಿಸುತ್ತ, "ಅದನ್ನು ಕಂಡಾಗ ನನಗೆ ನ್ಯಾಂಗ್ಟನ (ತೋತಾಪುರಿಯ) ನೆನಪಾಗುತ್ತದೆ" ಎನ್ನುತ್ತಿದ್ದರು ಶ್ರೀರಾಮಕೃಷ್ಣರು.

ಒಮ್ಮೆ ಒಂದು ಕುತೂಹಲಕರ ಘಟನೆ ನಡೆಯಿತು. ಭಾವಲೋಕದ ಇಣುಕು ನೋಟವೊಂದನ್ನು ತೋರಿಸುವ ಘಟನೆ ಅದು. ಒಂದು ದಿನ ಶ್ರೀರಾಮಕೃಷ್ಣರು ದೇವ ಸ್ಥಾನದ ನಾಟ್ಯಮಂದಿರದಲ್ಲಿ ಜಗನ್ಮಾತೆಯ ಮೇಲಿನ ಹಾಡೊಂದನ್ನು ಹಾಡುತ್ತಿದ್ದಾರೆ; ಭಕ್ತರಲ್ಲಿ ಕೆಲವರು ನಿಂತುಕೊಂಡು, ಕೆಲವರು ಕುಳಿತುಕೊಂಡು ಅದನ್ನು ಕೇಳುತ್ತ ಆನಂದಿಸುತ್ತಿದ್ದಾರೆ. ಹಾಡುತ್ತ ಹಾಡುತ್ತ ಶ್ರೀರಾಮಕೃಷ್ಣರು ಭಾವಾವಿಷ್ಟರಾಗಿ ಇದ್ದ ಕ್ಕಿದ್ದಂತೆ ಎದ್ದುನಿಂತರು. ಹಾಡು ನಿಂತುಹೋಯಿತು. ಅವರ ತುಟಿಗಳು ಅರೆಬಿರಿದು ದಿವ್ಯ ಮಂದಹಾಸಸೌರಭವನ್ನು ಸೂಸುತ್ತಿರುವಂತಿವೆ; ಭಕ್ತರೆಲ್ಲ ಅವರನ್ನೇ ಎವೆ ಯಿಕ್ಕದೆ ದಿಟ್ಟಿಸುತ್ತಿದ್ದಾರೆ. ಆಗ ಅವರ ಶರೀರ ಸ್ವಲ್ಪ ಓರೆಯಾಯಿತು. ಎಲ್ಲಿ ಅವರು

ಬಿದ್ದುಬಿಟ್ಟಾರೋ ಎಂದು ಹೆದರಿ, ಬಳಿಯಲ್ಲಿದ್ದ ಚಿಕ್ಕನರೇಂದ್ರ ಅವರನ್ನು ಹಿಡಿದು ಆಸರೆ ನೀಡಿದ. ಮರುಕ್ಷಣವೇ ಶ್ರೀರಾಮಕೃಷ್ಣರು ಅಸಹನೀಯ ಯಾತನೆಯಿಂದ ಜೋರಾಗಿ ಕೂಗಿಕೊಂಡರು. ತನ್ನ ಸ್ಪರ್ಶದಿಂದಲೇ ಹೀಗಾಯಿತೆಂದು ತಿಳಿದ ಆತ ದಿಗ್ಭ್ರಾಂತನಾಗಿ ಅವರನ್ನು ಬಿಟ್ಟು ಹಿಂದೆ ಸರಿದ. ಆ ಕೂಗು ಮಂದಿರದೊಳಗಿದ್ದ ರಾಮಲಾಲನ ಕಿವಿಗೂ ಮುಟ್ಟಿತು. ಕೂಡಲೇ ಅವನು ಓಡಿಬಂದ. ಸಂದರ್ಭವನ್ನರಿತು ತಾನು ಶ್ರೀರಾಮಕೃಷ್ಣರಿಗೆ ಆಸರೆಯಾಗಿ ನಿಂತುಕೊಂಡ. ಅವರು ಅದೇ ಸ್ಥಿತಿಯಲ್ಲಿ ಇನ್ನೂ ಸ್ವಲ್ಪ ಹೊತ್ತು ಇದ್ದರು. ಅನಂತರ ಒಬ್ಬನು ಕಾಳಿಯ ಹೆಸರನ್ನು ಗಟ್ಟಿಯಾಗಿ ಉಚ್ಚರಿಸಿದ ಮೇಲೆ ಅವರ ಭಾವವಿಳಿಯಿತು.

ಶ್ರೀರಾಮಕೃಷ್ಣರಿಗೆ ಹಾಗೆ ವೇದನೆಯಾದುದಕ್ಕೆ ಕಾರಣವೇನೆಂಬುದು ಮಾತ್ರ ಯಾರಿಗೂ ಸರಿಯಾಗಿ ಗೊತ್ತಾಗಲಿಲ್ಲ. ಅವರೂ ಹೇಳಲಿಲ್ಲ. ಮನಸ್ಸು ಶುದ್ಧವಿಲ್ಲ ದವರು ಮುಟ್ಟಿದರೆ ಅವರಿಗೆ ಹಾಗಾಗುತ್ತದೆ ಎಂಬ ಸಂಗತಿ ಎಲ್ಲರಿಗೂ ತಿಳಿದದ್ದೇ. ಆದರೆ ಚಿಕ್ಕನರೇಂದ್ರನ ವಿಷಯದಲ್ಲಿ ಹಾಗಾದೀತೆ! ಏಕೆಂದರೆ ಅವನು ಅತ್ಯಂತ ಪರಿ ಶುದ್ಧಚರಿತ ಎಂದು ಅವರೇ ಎಷ್ಟೋ ಸಲ ಹೇಳಿದ್ದಾರೆ. ಎಂದಮೇಲೆ, ಅವರಿಗೆ ಅವನ ಸ್ಪರ್ಶ ಸಹ್ಯವಾಗದಿದ್ದುದಕ್ಕೆ ಕಾರಣವೇನಿರಬಹುದು ?

ಇದು ನಡೆದು ಎಷ್ಟೋ ಹೊತ್ತಾದ ಮೇಲೆ ಕೆಲವರು ಆ ಬಗ್ಗೆ ಆಲೋಚಿಸಿ ಪರಿಶೀಲನೆ ನಡೆಸಿದಾಗ ಒಂದು ಅಂಶ ಗೋಚರವಾಯಿತು. ಏನೆಂದರೆ, ಚಿಕ್ಕನರೇಂದ್ರ ನಿಗೆ ಹಣೆಯ ಎಡ ಪಕ್ಕದಲ್ಲಿ ಒಂದು ಬಾವು ಎದ್ದಿತ್ತು. ಮೈಮೇಲೆ ಗಾಯವಾಗಿರುವಾಗ ದೇವತಾಮೂರ್ತಿಗಳನ್ನು ಮುಟ್ಟಬಾರದು ಎಂಬ ಶಾಸ್ತ್ರನಿಯಮವೇನೋ ಇದೆ. ದೇವತಾರ್ಚನೆಯ ಸಮಯದಲ್ಲಿ ಆ ನಿಯಮವನ್ನು ಪಾಲಿಸುವುದೂ ಸಾಮಾನ್ಯವೇ. ಆದರೆ ಸಮಾಧಿಸ್ಥಿತಿಯಲ್ಲಿ ಶ್ರೀರಾಮಕೃಷ್ಣರು ದೈವೀ ಭಾವೋದ್ದೀಪ್ತರಾಗಿ ಸಾಕ್ಷಾತ್ ದೇವಮೂರ್ತಿಯೇ ಆಗಿರುತ್ತಾರೆ ಎಂಬ ವಿಷಯ ಆಗ ಎಲ್ಲರಿಗೂ ಮರವೆಯಾಗಿತ್ತು! ಅಲ್ಲದೆ, ಅವರು ಸಾಮಾನ್ಯ ಸ್ಥಿತಿಯಲ್ಲಿದ್ದಾಗ ಇತರರೊಂದಿಗೆ ವ್ಯವಹರಿಸು ತ್ತಿದ್ದಂತೆಯೇ ಚಿಕ್ಕನರೇಂದ್ರನನ್ನೂ ಸ್ಪರ್ಶಿಸುತ್ತಿದ್ದರು, ಪ್ರೀತಿಯಿಂದ ಮಾತನಾಡಿಸು ತ್ತಿದ್ದರು. ಆದ್ದರಿಂದ ತನಗೆ ಹುಣ್ಣಾಗಿರುವಾಗ ಅವರೊಂದಿಗೆ ಎಚ್ಚರಿಕೆಯಿಂದ ವ್ಯವಹರಿಸಬೇಕು ಎಂಬ ಅರಿವು ಅವನಿಗೆ ಬರಲು ಸಾಧ್ಯವೇ ಇರಲಿಲ್ಲ. ಅಂತೂ, ಈ ಮೂಲಕ ಶಾಸ್ತ್ರವಾಕ್ಯವೊಂದರ ಸತ್ಯತೆಯನ್ನು ಕಣ್ಣಾರೆ ಕಂಡ ಶಿಷ್ಯರ ಆಶ್ಚರ್ಯಕ್ಕೆ ಮೇರೆಯೇ ಇಲ್ಲವಾಯಿತು.

ಅದೇ ದಿನ ಆ ಶಿಷ್ಯರೆದುರಿಗೆ ಮತ್ತೊಂದು ಸ್ವಾರಸ್ಯ ನಡೆಯಿತು. ನಾಟ್ಯಮಂದಿರ ದಲ್ಲಿ ಸಮಾಧಿಸ್ಥರಾಗಿದ್ದ ಶ್ರೀರಾಮಕೃಷ್ಣರು ಸ್ವಲ್ಪ ಹೊತ್ತಿನ ಮೇಲೆ ಸಾಮಾನ್ಯ ಸ್ಥಿತಿ ಗೇನೋ ಮರಳಿದರು. ಆದರೆ ಶರೀರವಿನ್ನೂ ಸಮತೋಲ ಪಡೆದಿರಲಿಲ್ಲ. ಗಂಟಲ ವರೆಗೂ ಸಾರಾಯಿ ಕುಡಿದವರಂತೆ ತತ್ತರಿಸುತ್ತಿದ್ದರು. ಕಾಲುಗಳು ನಡುಗುತ್ತಿದ್ದುವು.

ಈಗ ಅವರು ತಮ್ಮ ಕೋಣೆಯೆಡೆಗೆ ಹೊರಟರು. ಆದರೆ ನಡೆದುಕೊಂಡಲ್ಲ, ಮಗುವಿನಂತೆ ಅಂಬೆಗಾಲಿಕ್ಕುತ್ತ! ಹಾಗೇ ಮೆಲ್ಲನೆ ನಾಟ್ಯಮಂದಿರದ ಮೆಟ್ಟಿಲುಗಳ ಬಳಿ ಬಂದು, ಗರ್ಭಗುಡಿಯಲ್ಲಿರುವ ಮಾತೆಯತ್ತ ತಿರುಗಿ ತಲೆಯೆತ್ತಿ, ತಮ್ಮ ದೃಷ್ಟಿ ಯನ್ನು ಆಕೆಯಲ್ಲಿಯೇ ಕೀಲಿಸಿ, ಉದ್ಗರಿಸಿದರು: "ಅಮ್ಮಾ, ನಾನು ಬೀಳುವುದಿಲ್ಲ... ಏನಮ್ಮಾ ನಾನು ಬೀಳುವುದಿಲ್ಲ, ಅಲ್ಲವೇನಮ್ಮ?" ಹೀಗೆ ಹೇಳುತ್ತ ಹೇಳುತ್ತ

ಅವರಲ್ಲಿ ಹೊಸ ವಿಶ್ವಾಸ ಮೂಡಿತು; ಅವಳನ್ನೇ ನೋಡುತ್ತ ಧೈರ್ಯದಿಂದ ಮೆಟ್ಟಿಲಿಳಿದರು. ಅವರ ಆ ಅದ್ಭುತ ಬಾಲಕಾವಸ್ಥೆಯನ್ನು ಕಂಡ ಶಿಷ್ಯರು, 'ಭಗವಂತನ ಮೇಲಣ ಇಂತಹ ನಿರ್ಭರತೆಯನ್ನು ಇನ್ನಾರಲ್ಲಿ ಕಂಡೇವು!' ಎಂದು ಭಾವಿಸುತ್ತ ಬೆರಗಾದರು.

ಶ್ರೀರಾಮಕೃಷ್ಣರ ಪ್ರತಿಯೊಂದು ಸಣ್ಣ ಕಾರ್ಯದ ಹಿಂದೆಯೂ ಒಂದು ಅರ್ಥ ಅಡಗಿರುತ್ತಿತ್ತು, ಲೋಕಕಲ್ಯಾಣದ ಒಂದು ಉದ್ದೇಶವಿರುತ್ತಿತ್ತು. ಆದರೆ ಅದೇನೆಂಬು ದನ್ನು ಆ ಘಳಿಗೆಯಲ್ಲಿ ತಿಳಿಯಲು ಸಮರ್ಥರಾಗುತ್ತಿದ್ದವರು ಅಪರೂಪ. ಒಮ್ಮೆ ಅವರು ತಮ್ಮ ಶಿಷ್ಯರಲ್ಲೊಬ್ಬನ ಜೊತೆಯಲ್ಲಿ ಮಾತನಾಡುತ್ತ ಕಿರಿಯ ನರೇಂದ್ರನ ಪ್ರಸ್ತಾಪವೆತ್ತಿ ಹೀಗೆಂದರು: "ಆ ಹುಡುಗ ಇಲ್ಲಿಗೆ ಬರುವುದಕ್ಕೆ ಶುರುಮಾಡಿ ಕೆಲವು ದಿನಗಳಾದುವಷ್ಟೆ. ಆಗಲೇ ಅವನಿಗೆ ಭಾವಾವೇಶವಾಗತೊಡಗಿದೆ! ಆ ದಿನ ಒಂದು ಗಂಟೆಗೂ ಹೆಚ್ಚು ಹೊತ್ತು ಅವನಿಗೆ ಬಾಹ್ಯಬೋಧೆ ತಪ್ಪಿತ್ತು. ತನ್ನ ಮನಸ್ಸು ಈಗ ನಿರಾಕಾರದಲ್ಲಿ ಲೀನವಾಗುತ್ತದೆ ಎನ್ನುತ್ತಾನವನು! ಎಂಥ ಒಳ್ಳೇ ಹುಡುಗ ಅವನು, ಅಲ್ಲವೆ! ಯಾವತ್ತಾದರೂ ಒಂದು ದಿನ ನೀನು ಅವನ ಮನೆಗೆ ಹೋಗಿ ಮಾತಾಡಿ ಕೊಂಡು ಬಾ. ಏನೆನ್ನುವೆ?"

ಆಗ ಆ ಶಿಷ್ಯ ಸಂಕೋಚ ಪಡುತ್ತ ಹೇಳಿದ: "ಮಹಾಶಯರೆ, ನನ್ನದೊಂದು ಮಾತು—ನನಗೆ ಎಲ್ಲರಿಗಿಂತಲೂ ದೊಡ್ಡ ನರೇಂದ್ರನನ್ನು ಕಂಡರೆ ಬಹಳ ಇಷ್ಟ. ಅವ ನನ್ನು ಪ್ರೀತಿಸಿದಹಾಗೆ ನಾನು ಇನ್ಯಾರನ್ನೂ ಪ್ರೀತಿಸಲಾರೆ. ಆದ್ದರಿಂದ ಚಿಕ್ಕನರೇಂದ್ರನ ಮನೆಗೆ ಹೋಗುವುದಕ್ಕೆ ನನಗೆ ಅಷ್ಟೇನೂ ಮನಸ್ಸಿಲ್ಲ."

ಶ್ರೀರಾಮಕೃಷ್ಣರು (ನಸುಮುನಿಸಿನಿಂದ): "ಛಿ ದಡ್ಡ! ಎಂಥ ಸಂಕುಚಿತಬುದ್ಧಿ ನಿನ್ನದು! ನೋಡಯ್ಯ, ಭಗವಂತನ ಹೂಬುಟ್ಟಿಯಲ್ಲಿ ನಾನಾ ವಿಧವಾದ ಹೂಗಳಿವೆ. ಅವನ ಭಕ್ತರಲ್ಲಿ ಅನೇಕ ಭಾವದವರಿದ್ದಾರೆ. ಅವರೆಲ್ಲರ ಜೊತೆಯಲ್ಲೂ ಸೇರಿ ಆನಂದಿ ಸದೆ ಇರುವುದೆಂದರೆ ಹೀನ ಬುದ್ಧಿಯೇ ಸೈ. ಆದ್ದರಿಂದ, ಒಂದು ದಿನ ನೀನು ಚಿಕ್ಕ ನರೇಂದ್ರನ ಮನೆಗೆ ಹೋಗು, ಬಿಡಬೇಡ. ಏನು, ಹೋಗುತ್ತೀಯಾ?"

ಈಗ ಆ ಶಿಷ್ಯ ಅದಕ್ಕೊಪ್ಪಿ, ಅವರಿಗೆ ನಮಸ್ಕಾರ ಮಾಡಿ ನಿರ್ಗಮಿಸಿದ. ಕೆಲದಿನ ಗಳ ಮೇಲೆ, ತನ್ನ ಮಾತಿನಂತೆ ಚಿಕ್ಕನರೇಂದ್ರನ ಮನೆಗೆ ಹೋಗಿ ಭೇಟಿ ಮಾಡಿದ. ಯಾವುದೋ ಒಂದು ದೊಡ್ಡ ಸಮಸ್ಯೆ ಈ ಶಿಷ್ಯನನ್ನು ಬಹುದಿನಗಳಿಂದಲೂ ಕಾಡು ತ್ತಿತ್ತು. ಆ ದಿನ ಚಿಕ್ಕನರೇಂದ್ರ ಸಾಂದರ್ಭಿಕವಾಗಿ ಆಡಿದ ಯಾವುದೋ ಒಂದು ಮಾತಿ ನಿಂದ ಆ ಸಮಸ್ಯೆ ನೀಗಿಹೋಯಿತು! ಈ ಮೂಲಕ ತನಗೆ ದಾರಿತೋರಿ ನೆರವಾದ ಗುರುದೇವನಿಗೆ ಶಿಷ್ಯ ಮನದಲ್ಲೇ ನಮಿಸಿದ.

ಶ್ರೀರಾಮಕೃಷ್ಣರು ಇಷ್ಟೊಂದಾಗಿ ಪ್ರೀತಿಸುತ್ತಿದ್ದ ಈ ಚಿಕ್ಕನರೇಂದ್ರ, ತನ್ನ ತಾಯ್ತಂದೆಯರ ಒತ್ತಡದಿಂದಾಗಿ ಮದುವೆಯಾಗಬೇಕಾಯಿತು. ಅನಂತರ ಒಂದು ದಿನ ಅವನು ತಮ್ಮನ್ನು ನೋಡಲು ಬಂದಾಗ ಶ್ರೀರಾಮಕೃಷ್ಣರು ಅವನ ಕೊರಳನ್ನು ತಮ್ಮಕೈಗಳಿಂದ ಬಳಸಿ, ತಮ್ಮ ಹೆತ್ತ ಮಗನೊಬ್ಬ ತೀರಿಕೊಂಡುಬಿಟ್ಟನೋ ಎಂಬಂತೆ ಸಂಕಟಪಟ್ಟು ಕಣ್ಣೀರ್ಗರೆದರು. ಮತ್ತು "ಮಗು, ದೇವರನ್ನು ಮರೆತು ಪೂರ್ತಿಯಾಗಿ ಸಂಸಾರದಲ್ಲಿ ಮುಳುಗಿಬಿಡಬೇಡಪ್ಪಾ" ಎಂದು ಮತ್ತೆಮತ್ತೆ ಹೇಳಿದರು.

* * * *

ಉಪೇಂದ್ರನಾಥ ಎಂಬವನು ಸ್ವಲ್ಪ ವಿಭಿನ್ನ ಹಿನ್ನೆಲೆಯುಳ್ಳ ತರುಣ ಶಿಷ್ಯ. ಜಾತಿಯಿಂದ ಬ್ರಾಹ್ಮಣನಾದರೂ ಬಡತನದಲ್ಲೇ ಹುಟ್ಟಿ ಬೆಳೆದವನಾದ್ದರಿಂದ ಹಣಗಳಿಕೆಯೇ ಅವನ ಮುಖ್ಯೋದ್ದೇಶವಾಗಿ ಪರಿಣಮಿಸಿತ್ತು. ಶಾಲೆಯ ಓದು ಮೂರನೇ ತರಗತಿಯಿಂದ ಮುಂದೆ ಸಾಗಲಿಲ್ಲ. ಚಿಕ್ಕಂದಿನಲ್ಲೇ ಒಂದು ಪುಸ್ತಕದ ಅಂಗಡಿಯ ಕೆಲಸಗಾರನಾಗಿ ಸೇರಿ, ಕೆಲವರ್ಷಗಳ ಮೇಲೆ ತಾನೇ ಆ ಅಂಗಡಿಯನ್ನು ಕೊಂಡು ಕೊಂಡು ಅದರ ಮಾಲಿಕನಾದ. ಆದರೆ ಸಂಪಾದನೆ ಮಾತ್ರ ಅಷ್ಟಕ್ಕಷ್ಟೇ. ಚೆನ್ನಾಗಿ ದುಡಿದು ಕೈತುಂಬ ಸಂಪಾದಿಸಬೇಕೆಂಬುದೊಂದೇ ಅವನ ಆಕಾಂಕ್ಷೆ. ಅವನದು ಎದ್ದುಕಾಣುವಂಥ ಧಾರ್ಮಿಕ ಸ್ವಭಾವವೇನೂ ಅಲ್ಲ. ಆದರೆ ಆತ ಸರಳ ಸ್ವಭಾವದವ; ಶ್ರಮಜೀವಿ. ನೋಡುವುದಕ್ಕೆ ತುಂಬ ಲಕ್ಷಣವಂತ.

ಸುಮಾರು ಹದಿನಾರು ವರ್ಷದವನಿದ್ದಾಗ ಉಪೇಂದ್ರನಿಗೆ ದೇವೇಂದ್ರನಾಥ ಮಜುಮ್ದಾರನ ಮೂಲಕ ಶ್ರೀರಾಮಕೃಷ್ಣರ ಸಹವಾಸ ದೊರೆಯಿತು. ಶೀಘ್ರದಲ್ಲೇ ಆತ ಅವರ ಮೋಡಿಗೊಳಗಾದ. ಹೆಚ್ಚುಕಡಿಮೆ, ಪ್ರತಿದಿನವೆಂಬಂತೆ ಅವರ ಬಳಿಗೆ ಬರಲಾರಂಭಿಸಿದ. ಜೊತೆಗೆ ತನ್ನ ಕೆಲವು ಸ್ನೇಹಿತರನ್ನೂ ಕರೆತಂದ.

ಅನೇಕ ಭಕ್ತರು ಶ್ರೀರಾಮಕೃಷ್ಣರಿಗೆ ತಪ್ಪದೆ ಹಣ್ಣು ಮಿಠಾಯಿಗಳ ಕಾಣಿಕೆ ತರುವುದನ್ನು ಕಂಡ ಉಪೇಂದ್ರ ತನಗೆ ಅಂಥ ಶಕ್ತಿಯಿಲ್ಲವಲ್ಲಾ ಎಂದು ಒಳಗೊಳಗೇ ಕೊರಗುತ್ತಿದ್ದ. ಅದನ್ನರಿತ ಶ್ರೀರಾಮಕೃಷ್ಣರು ಒಮ್ಮೆ ಅವನಿಗೆ, "ಇಲ್ಲಿಗೆ ಬರುವಾಗ ನೀನು ಎರಡು ಪೈಸೆಯ ಜಿಲೇಬಿ ತಾ" ಎಂದು ತಾವಾಗಿಯೇ ಹೇಳಿದರು. ಇಷ್ಟು ಸುಲಭದಲ್ಲಿ ತನ್ನ ಬಯಕೆ ಈಡೇರೀತೆಂದು ಊಹಿಸಲೇ ಸಾಧ್ಯವಿರಲಿಲ್ಲ ಆ ಬಡವನಿಗೆ!

ಶ್ರೀರಾಮಕೃಷ್ಣರು ತಮ್ಮ ತರುಣಶಿಷ್ಯರಿಗೆ ಮದುವೆಯಾಗದಿರುವಂತೆ ಬೋಧಿಸುತ್ತಿದ್ದುದನ್ನು ಈವರೆಗೆ ಅನೇಕರ ವಿಷಯದಲ್ಲಿ ನೋಡಿದ್ದೇವೆ. ಆದರೆ ಅದು ಅವರ ಸಾರ್ವತ್ರಿಕ ಬೋಧನೆಯೇನೂ ಅಲ್ಲ. ಅತ್ಯಂತ ಸತ್ವಶಾಲಿಗಳೂ ಸಂಯಮವುಳ್ಳವರೂ ಆದ ಕೆಲವೇ ತರುಣರಿಗಲ್ಲದೆ ಮತ್ತಾರಿಗೂ ಅವರು ಹಾಗೆ ಬೋಧಿಸುತ್ತಿದ್ದವರಲ್ಲ. ಅಷ್ಟೇ ಅಲ್ಲ, ಮಿಕ್ಕವರಿಗೆ, ಮತ್ತು ಬ್ರಹ್ಮಚಾರಿಗಳಾಗಿ ಉಳಿದುಕೊಳ್ಳಬೇಕೆಂಬ ಇಚ್ಛೆಯಿದ್ದರೂ ಹಾಗೆ ಮಾಡುವ ಸಾಮರ್ಥ್ಯವಿಲ್ಲದವರಿಗೆ ಅವರು, ಮದುವೆಯಾಗಿ ಯೋಗ್ಯರೀತಿಯಲ್ಲಿ ಸಂಸಾರಜೀವನ ನಡೆಸುವಂತೆಯೇ ಬೋಧಿಸುತ್ತಿದ್ದುದು. ಇದಕ್ಕೆ ಉಪೇಂದ್ರನನ್ನು ಉದಾಹರಣೆಯಾಗಿ ಹೆಸರಿಸಬಹುದು.

ಶ್ರೀರಾಮಕೃಷ್ಣರಿಗೆ ದಂಪತಿಗಳಿಬ್ಬರ ಪರಿಚಯವಿತ್ತು. ಈ ದಂಪತಿಗಳಿಗೆ ಒಬ್ಬಳು ಮಗಳು—ಹಬಿ ಎಂದು ಹೆಸರು. ಆಕೆಯ ಮೈಬಣ್ಣ ಬಹಳ ಕಪ್ಪು. ಶ್ರೀರಾಮಕೃಷ್ಣರಿಗೆ ಅವಳ ಬಣ್ಣದ ಬಗ್ಗೆಯೇನೂ ಬೇಸರವಿಲ್ಲ; ಆದರೆ ಅವಳ ಹೆಸರು ಅವರಿಗೆ ಒಪ್ಪಿಗೆಯಾಗಲಿಲ್ಲ. ಅವಳ ತಾಯ್ತಂದೆಯರಿಗೆ ಹೇಳಿ, ಅವಳ ಹೆಸರನ್ನು 'ಭವತಾರಿಣಿ' ಎಂದು ಬದಲಿಸಿದರು.

ಒಂದು ದಿನ ಉಪೇಂದ್ರನ ತಾಯಿ ತಮ್ಮನ್ನು ಕಾಣಲು ಬಂದಾಗ ಶ್ರೀರಾಮಕೃಷ್ಣರು, "ನಿನ್ನ ಮಗನಿಗೆ ಭವತಾರಿಣಿಯನ್ನು ತಂದುಕೊಳ್ಳಬಾರದೇಕೆ?" ಎಂದು ಸೂಚಿಸಿದರು. ಆಗ ಅಲ್ಲೇ ಇದ್ದ ನರೇಂದ್ರ, "ಛೇ ಛೆ! ಉಪೇಂದ್ರನಿಗೆ ಅಂಥ ಹೆಣ್ಣೆ? ಅವಳು ತೀರಾ ಕಪ್ಪು. ನೋಡಲೂ ಲಕ್ಷಣವಾಗಿಲ್ಲ" ಎಂದು ಪ್ರತಿಭಟಿಸಿದ. ಆಗ ಶ್ರೀರಾಮಕೃಷ್ಣರು, "ಇರಬಹುದು, ಆದರೆ ಅವಳಲ್ಲಿ ಕೆಲವು ಒಳ್ಳೇ ಚಿಹ್ನೆಗಳಿವೆ.

ಅವಳನ್ನು ಮದುವೆಯಾದರೆ ಉಪೇಂದ್ರನ ಪಾಲಿಗೆ ಭಾಗ್ಯದೇವತೆಯಾಗುತ್ತಾಳೆ'' ಎಂದರು. ಅದರಂತೆ ೧೮೮೩ರಲ್ಲಿ ಅವಳೊಂದಿಗೆ ಉಪೇಂದ್ರನ ಮದುವೆ ಜರುಗಿತು*.

ಚಿಕ್ಕಂದಿನಿಂದಲೂ ಉಪೇಂದ್ರನನ್ನು ಸಾಕಿದವನು ಅವನ ಚಿಕ್ಕಪ್ಪ. ಈತನಿಗೆ ಉಪೇಂದ್ರನೆಂದರೆ ಉಪೇಕ್ಷೆ. ಆಗಾಗ ಅವನನ್ನು, ''ಏನೋ, ನಿನಗೆ ವಿದ್ಯೆಯೂ ಇಲ್ಲ, ಸಂಪಾದನೆಯೂ ಇಲ್ಲ, ಮೂದೇವಿ!'' ಎಂದು ಮೂದಲಿಸುತ್ತಿದ್ದ. ಉಪೇಂದ್ರ ತನ್ನ ಷ್ಟಕ್ಕೆ ತಾನು ತನ್ನ ಅಲ್ಪ ಗಳಿಕೆಯಲ್ಲೇ ತೃಪ್ತನಾಗಿರುತ್ತಿದ್ದನೋ ಏನೋ. ಆದರೆ ಈ ಮೂದಲಿಕೆಯನ್ನು ಕೇಳಿ ಕೇಳಿ ತಾನು ಸಿರಿವಂತನಾಗಲೇಬೇಕು ಎಂಬ ಛಲ ಅವನಲ್ಲಿ ಬಂದುಬಿಟ್ಟಿತ್ತು. ಆದರೆ ಉಪಾಯವೇನು? ತನ್ನಿಂದಾದ ಪ್ರಯತ್ನವನ್ನೇನೋ ಮಾಡು ತ್ತಿದ್ದ. ಆದರೆ ಅಷ್ಟೇ ಸಾಕಾದೀತೆ? ಈಗ ಅವನು ಶ್ರೀರಾಮಕೃಷ್ಣರ ಅನುಗ್ರಹಕ್ಕಾಗಿ ಮೌನವಾಗಿ ಮೊರೆಯಿಡತೊಡಗಿದ.

ಶ್ರೀರಾಮಕೃಷ್ಣರಿಗೆ ಅವನ ಮೊರೆ ಕೇಳಿಸಿದರೂ ಕೇಳಿಸದವರಂತೆ ಬಹಳ ದಿನ ಮೌನವಾಗಿಯೇ ಇದ್ದುಬಿಟ್ಟರು. ಅವನು ಮಾತ್ರ ತಪ್ಪದೆ ಅವರ ಬಳಿಗೆ ಬರುತ್ತಲೇ ಇದ್ದ. ಒಂದು ದಿನ ಅನೇಕ ಭಕ್ತರು ನೆರೆದಿದ್ದಾಗ ಶ್ರೀರಾಮಕೃಷ್ಣರು ಎಲ್ಲರನ್ನೂ ಆಶೀರ್ವದಿಸಿದರಾದರೂ ಉಪೇಂದ್ರನನ್ನು ಮಾತ್ರ ಆಶೀರ್ವದಿಸಿದಂತೆ ಕಾಣಲಿಲ್ಲ. ಆಗ ಒಬ್ಬ ಭಕ್ತ ಅದಕ್ಕೆ ಕಾರಣವೇನೆಂದು ಕೇಳಿದ. ಶ್ರೀರಾಮಕೃಷ್ಣರು ಮುಗುಳ್ನಗುತ್ತ ನುಡಿದರು: ''ತನಗೇನು ಬೇಕು ಅಂತ ಅವನು ಹೇಳಲಿಲ್ಲ. ಆದರೆ ನನಗೆ ಗೊತ್ತು— ಧನಲಕ್ಷ್ಮಿ ಒಲಿಯಬೇಕೆನ್ನುವುದೇ ಅವನ ಆಸೆ. ಅದು ಈಡೇರುತ್ತದೆ.''

೧೮೮೬ರ ಜನವರಿ ಒಂದರಂದು ಶ್ರೀರಾಮಕೃಷ್ಣರು ಹಲವಾರು ಭಕ್ತರಿಗೆ ಅದ್ಭುತ ಅನುಭವಗಳನ್ನು ಮಾಡಿಸಿಕೊಟ್ಟು ಇಷ್ಟಾರ್ಥಗಳನ್ನು ಈಡೇರಿಸಿದ ಸಂದರ್ಭದಲ್ಲಿ ಉಪೇಂದ್ರನನ್ನು ಕೇಳಿದರು: ''ನಿನಗೇನು ಬೇಕು?'' ಆತ ಕೂಡಲೇ ಉತ್ತರಿಸಿದ: ''ಐಶ್ವರ್ಯ!'' ''ಸರಿ; ನಿನಗದು ಯಥೇಚ್ಛವಾಗಿ ಸಿಗುತ್ತದೆ!''

ಅನತಿಕಾಲದಲ್ಲೇ ಶ್ರೀರಾಮಕೃಷ್ಣರ ಆಶೀರ್ವಾದದ ಫಲ ಗೋಚರವಾಗತೊಡ ಗಿತು. ಉಪೇಂದ್ರ ಹಂತಹಂತವಾಗಿ ವ್ಯಾಪಾರದಲ್ಲಿ ಮೇಲೇರಿದ. ಪುಸ್ತಕ ಮುದ್ರಣ ವನ್ನೂ ಪ್ರಕಟಣೆಯನ್ನೂ ಕೈಗೊಂಡು ಧನ ಯಶಸ್ಸು ವಿಖ್ಯಾತಿಗಳನ್ನು ಯಥೇಚ್ಛವಾಗಿ ಗಳಿಸಿದ. ಆದರೆ ಅವನಿಗೆ ಧನಪಿಶಾಚಿ ಹತ್ತಿಕೊಂಡಿತು ಎಂದೇನೂ ಭಾವಿಸಬೇಕಾಗಿಲ್ಲ. ಸಂಪತ್ತು ಬಂದಂತೆಲ್ಲ ಅವನ ಭಕ್ತಿ ವೈರಾಗ್ಯಗಳೂ ವರ್ಧಿಸಿದುವು. ಅವನು ಶ್ರೀರಾಮ ಕೃಷ್ಣರ ಸಂನ್ಯಾಸೀ ಶಿಷ್ಯರೆಲ್ಲರಿಗೂ ತುಂಬ ಪ್ರೀತಿಪಾತ್ರನಾಗಿದ್ದ. ಶ್ರೀರಾಮಕೃಷ್ಣರನ್ನು ನೆನೆನೆನೆಯುತ್ತ ಅವರ ಬೋಧನೆಯಂತೆಯೇ ಬಾಳುತ್ತ ಸಾರ್ಥಕ ಜೀವನ ನಡೆಸಿದ.

---

*ಮುಂದೊಮ್ಮೆ ಸ್ವಾಮಿ ವಿವೇಕಾನಂದರು ಉಪೇಂದ್ರನ ಮನೆಗೆ ಬಂದಾಗ, ಈ ಭವತಾರಿಣಿ ಅವರಿಗೆ ಉಪಾಹಾರದ ಆತಿಥ್ಯ ನೀಡುವುದಕ್ಕೆ ಹಿಂದೆಮುಂದೆ ನೋಡಿದಳಂತೆ — ತನ್ನ ಬಣ್ಣವನ್ನು ಎತ್ತಿಹಿಡಿದು ಮದುವೆ ತಪ್ಪಿಸಲು ನೋಡಿದವರು ಎಂಬ ಮುನಿಸಿನಿಂದ. ಆಗ ವಿವೇಕಾನಂದರು ತಮಾಷೆಯಾಗಿ, ''ಆದದ್ದಾಯಿತು ಬಿಡು; ಹೇಗಿದ್ದರೂ ನೀನೀಗ ಉಪೇಂದ್ರನ ಕೊರಳಿಗೆ ಗಂಟುಬಿದ್ದಾಯಿತಲ್ಲ! ನೀನು ಮಾಡಿದ್ದನ್ನು ನಾನೀಗ ಉಣ್ಣಲೇ ಬೇಕು'' ಎಂದು ಹೇಳಿ 'ಸಮಾಧಾನ'ಗೊಳಿಸಿದರಂತೆ!

ಶ್ರೀರಾಮಕೃಷ್ಣರ ಸ್ತ್ರೀಭಕ್ತವೃಂದದಲ್ಲಿ ಪ್ರಮುಖರಲ್ಲೊಬ್ಬಳು ಗೊಲಾಪ್ ಮಾ. ಅವಳ ಹುಟ್ಟುಹೆಸರು ಅನ್ನಪೂರ್ಣಾದೇವಿ ಎಂದಿದ್ದರೂ ಮುಂದೆ ಗೊಲಾಪಸುಂದರೀ ದೇವಿ ಅಥವಾ ಗೊಲಾಪ್ ಮಾ ಎಂಬ ಹೆಸರು ಪ್ರಚಲಿತವಾಯಿತು. (ಗೊಲಾಪ್ ಎಂದರೆ ಬಂಗಾಳಿಯಲ್ಲಿ 'ಗುಲಾಬಿ'.)

ಗೊಲಾಪ್ ಮಾ ಬಡ ಬ್ರಾಹ್ಮಣನೊಬ್ಬನ ಪತ್ನಿಯಾಗಿದ್ದಳು. ಆಕೆಗೆ ಇಬ್ಬರು ಮಕ್ಕಳು—ಒಂದು ಹೆಣ್ಣು, ಒಂದು ಗಂಡು. ಯೌವನದಲ್ಲೇ ಆಕೆಯ ಪತಿ ತೀರಿ ಹೋದ. ಕೆಲದಿನಗಳಲ್ಲೇ ಮಗನೂ ತಂದೆಯನ್ನು ಅನುಸರಿಸಿದ. ಈಗ ಮಗಳು ಚಂಡಿಯೇ ಅವಳ ಪಾಲಿಗೆ ಸರ್ವಸ್ವವಾದಳು.

ಚಂಡಿ ಅತ್ಯಂತ ಲಾವಣ್ಯವತಿ. ಅವಳ ಅದೃಷ್ಟವೋ ಎಂಬಂತೆ ಭಾರೀ ಶ್ರೀಮಂತನೂ ಕೀರ್ತಿವಂತನೂ ಆದ ರಾಜಾ ಸೌರೀಂದ್ರಮೋಹನ ಟಾಗೋರ್ ಎಂಬವ ನೊಂದಿಗೆ ಆಕೆಯ ವಿವಾಹವಾಯಿತು. ಅಂತೂ ಕಡೆಗೆ 'ಸುಖ' ಎಂಬ ವಸ್ತುವೊಂದು ಗೋಲಾಪಳ ಕೈಗೆಟಕಿದಂತಾಯಿತು. 'ದೇವರು ಕಣ್ತೆರೆದ' ಎಂದು ಆಕೆ ಭಾವಿಸಿದಳು. ಆದರೆ ಅಯ್ಯೋ! ಆ ಸುಖ ಹೆಚ್ಚು ದಿನ ಉಳಿಯಲಿಲ್ಲ. ಅವಳ ಕಣ್ಮಣಿಯಂತಿದ್ದ ಮಗಳು ಕೂಡ ಇದ್ದಕ್ಕಿದ್ದಂತೆ ಒಂದು ದಿನ ವಿಧಿವಶಳಾದಳು.

ಈಗ ಗೊಲಾಪಳ ದುಃಖವನ್ನು ಅಳೆಯಬಲ್ಲವರಾರು? ಗಂಡನನ್ನೂ ಇಬ್ಬರು ಮಕ್ಕಳನ್ನೂ ಕಳೆದುಕೊಂಡ ಅವಳು ಚಂಡಮಾರುತಕ್ಕೆ ಸಿಲುಕಿದ ತರಗೆಲೆಯಂತಾದಳು.

ಆಶ್ಚರ್ಯದ ಸಂಗತಿಯೆಂದರೆ, ಇಂಥ ಮರ್ಮಾಘಾತಕ್ಕೀಡಾದರೂ ಅವಳು ಹತಾಶಳಾಗಿ ಬುದ್ಧಿಗೆಡಲಿಲ್ಲ. ಸರ್ವನಿಯಾಮಕನನ್ನು ಸ್ಮರಿಸುತ್ತ ಆತನ ಇಚ್ಛೆಗೆ ಮಣಿದು ಮನಸ್ಸನ್ನು ಶಾಂತಗೊಳಿಸುವ ಯತ್ನ ಮಾಡಿದಳು. ಈ ಸಂಧಿಕಾಲದಲ್ಲೇ ಆಕೆಯ ನೆರೆಮನೆಯ ಸ್ನೇಹಿತೆ ಯೋಗೀಂದ್ರ ಮೋಹಿನಿ (ಯೋಗಿನ್ ಮಾ) ನೆರವಿಗೊದಗಿದಳು. ಕಳೆದೆರಡು ವರ್ಷಗಳಿಂದಲೂ ಶ್ರೀರಾಮಕೃಷ್ಣರ ಚರಣಾಶ್ರಯದಲ್ಲಿದ್ದ ಇವಳು, ಗೊಲಾಪಳ ಘಾಸಿಗೊಂಡ ಜೀವಕ್ಕೆ ತಂಪೆರೆಯಬಲ್ಲವರು ಶ್ರೀರಾಮಕೃಷ್ಣರೊಬ್ಬರೇ ಎಂದು ಮನಗಂಡು, ಒಂದು ದಿನ ಅವಳನ್ನು ದಕ್ಷಿಣೇಶ್ವರಕ್ಕೆ ಕರೆತಂದಳು.

ಮಂದಿರೋದ್ಯಾನದಲ್ಲಿ ಅತ್ತಿಂದಿತ್ತ ಓಡಾಡುತ್ತಿದ್ದ ಶ್ರೀರಾಮಕೃಷ್ಣರು ಈ ಆಗಂತುಕಳನ್ನು ಹಾರ್ದಿಕವಾಗಿ ಸ್ವಾಗತಿಸಿದರು. ಅವಳನ್ನೇ ನಿರೀಕ್ಷಿಸುತ್ತಿದ್ದಂತಿತ್ತು ಅವರ ವರ್ತನೆ. ಅದನ್ನು ಗಮನಿಸಿ ಗೊಲಾಪ್ ಆಶ್ಚರ್ಯಪಟ್ಟಳು. "ಎಲ್ಲಿಂದ ಬರುತ್ತಿದ್ದೀಯಮ್ಮಾ? ಏನು ಹೆಸರು?" ಎಂದು ಶ್ರೀರಾಮಕೃಷ್ಣರು ವಾತ್ಸಲ್ಯದಿಂದ ಮಾತನಾಡಿಸಿದರು. ಅವಳು ಮಾತನಾಡಲು ಬಾಯ್ತೆರೆದೊಡನೆ, ಬಹು ದಿನಗಳಿಂದ ಹತ್ತಿಕ್ಕಿದ್ದ ದುಃಖ ಒಮ್ಮೆಗೇ ಉಮ್ಮಳಿಸಿತು. ತನ್ನ ಪ್ರಿಯ ಪುತ್ರಿಯ ಸಾವನ್ನು ಬಣ್ಣಿಸಿ ಬಿಕ್ಕಿಬಿಕ್ಕಿ ಅತ್ತಳು. ಶ್ರೀರಾಮಕೃಷ್ಣರು ಪರಮ ಕರುಣೆಯಿಂದ ಅವಳನ್ನೇ ವೀಕ್ಷಿಸುತ್ತ ಅವಳ ಕತೆಯನ್ನು ಕೇಳಿದರು. ಅವರ ಅಂಗಪ್ರತ್ಯಂಗವೂ ಅವಳ ದುಃಖಕ್ಕೆ ಪ್ರತಿಸ್ಪಂದಿಸುತ್ತ

ಅನುಕಂಪೆ ಸೂಸುತ್ತಿರುವಂತಿತ್ತು. ಅವರೀಗ ಮೆಲ್ಲನೆ ಉನ್ನತ ಭಾವರಾಜ್ಯವನ್ನು ಪ್ರವೇಶಿಸಿದರು. ಅವರ ಮೊಗದಲ್ಲಿ ನಗೆ ಮೂಡಿತು. ಗೊಲಾಪಳಿಗೆಂದರು:

"ಮಗಳೇ, ನೀನು ಭಾಗ್ಯವಂತೆ! ಈಗ ಭಗವಂತನಲ್ಲದೆ ನಿನ್ನ ಮನಸ್ಸನ್ನು ಸೆಳೆಯುವಂತಹ ವಸ್ತು ಇನ್ನಾವುದೂ ಈ ಜಗತ್ತಿನಲ್ಲಿಲ್ಲ. ನಿನ್ನನ್ನು ತನುಮನಪೂರ್ವಕ ವಾಗಿ ಆತನಲ್ಲಿ ಸಮರ್ಪಿಸಿಕೊಳ್ಳುವ ಅವಕಾಶ ನಿನಗೆ ಲಭ್ಯವಾಗಿದೆ. ಇನ್ನು ಆತನ ಸಾಕ್ಷಾತ್ಕಾರಕ್ಕಾಗಿಯೇ ಈ ಜೀವನವನ್ನು ಮುಡಿಪಾಗಿಟ್ಟು ಸಾರ್ಥಕಗೊಳಿಸಿಕೊ!"

ಹೀಗೆಂದ ಶ್ರೀರಾಮಕೃಷ್ಣರು ದಿವ್ಯೋನ್ಮತ್ತತೆಯಿಂದ ಹಾಡಲಾರಂಭಿಸಿದರು:

*ನಿನ್ನಲ್ಲಿಯೆ ನೀನಿರು ಮನವೆ*
*ಹೊರಗೆಲ್ಲಿಯು ನೀನರಸದಿರು।*
*ಅವುದನೀತರ ಹುಡುಕುತಲಿಹೆಯೋ*
*ಅದ ನಿನ್ನೆದೆಯೊಳಗಿರುತಿರಲು॥*

*ಹೃದಯದ ಕರೆಗೋಗೊಡುವನು ಅವನು*
*ಸರ್ವಸಿದ್ಧಿಗಳ ಪರುಷಮಣಿ*
*ನಿನ್ನ ಎದೆಯೊಳೇ ಹುದುಗಿದೆ ಕಾಣೋ*
*ಸಕಲೈಶ್ವರ್ಯದ ರನ್ನ ಗಣಿ॥*

*ಮುತ್ತುರತುನಗಳೊ ಪಚ್ಚೆಹರಳುಗಳೊ*
*ಹೃದಯಮಂದಿರದ ಅಂಗಳದಿ*
*ಚದುರಿ ಬಿದ್ದಿರಲು ಎಲ್ಲಿ ಹುಡುಕುತಿಹೆ*
*ಮರುಳನಂತೆ ಅನ್ಯಾಶ್ರಯದಿ॥*

ಶ್ರೀರಾಮಕೃಷ್ಣರ ಮಧುರ ಕಂಠದಿಂದ ಹೊಮ್ಮಿದ ಈ ಹಾಡು ನೇರವಾಗಿ ಆಕೆಯ ಹೃದಯವನ್ನು ಹೊಕ್ಕಿತು; ಬಹು ಕಾಲದಿಂದ ಮುಚ್ಚಿಹೋಗಿದ್ದ ಕವಾಟ ವೊಂದನ್ನು ತೆರೆಸಿ ಅಂತರಂಗದೊಳಕ್ಕೆ ಬೆಳಕು ಬೀರಿತು. ಈಗ ಶ್ರೀರಾಮಕೃಷ್ಣರು ಕೃಪಾ ಪೂರ್ವಕವಾಗಿ ಒಮ್ಮೆ ಗೊಲಾಪಳ ಬೆನ್ನು ನೇವರಿಸಿದರು. ಮರುಕ್ಷಣದಲ್ಲೇ ಅವಳ ಲ್ಲೇನೋ ಒಂದು ವಿಚಿತ್ರ ಮಾರ್ಪಾಡಾಯಿತು. ಆ ಸ್ಪರ್ಶ ತನ್ನ ದುಃಖವನ್ನೆಲ್ಲ ಹೀರಿ ಕೊಂಡಂತೆ ಅವಳಿಗನ್ನಿಸಿತು. ಇದ್ದಕ್ಕಿದ್ದಂತೆ, ಈ ಇಡೀ ಜೀವನವೇ ಒಂದು ನಾಟಕದಂತೆ ಗೋಚರವಾಗಿ, ಒಮ್ಮೆ ಗಟ್ಟಿಯಾಗಿ ನಕ್ಕುಬಿಟ್ಟಳು. 'ಕಡೆಗೆ ನೋಡಿದರೆ ಯಾರು ತಾಯಿ ಯಾರು ಮಗಳು? ಆ ಮಗಳಿಗೋಸ್ಕರ ನಾನೇಕೆ ಅಳಬೇಕು? ದೇವರಿಗಾಗಿ ಅಳುವುದರಲ್ಲೇ ಸಾರ್ಥಕ್ಯವಿರುವುದು' ಎಂಬ ಭಾವನೆ ಅವಳಲ್ಲಿ ಮೂಡಿತು.

ಅನಂತರ ಶ್ರೀರಾಮಕೃಷ್ಣರು ಅವಳನ್ನು ನಹಬತ್‌ಖಾನೆಗೆ ಕರೆತಂದು ಸತಿ ಶಾರದಾದೇವಿಯವರಿಗೆ ಪರಿಚಯಿಸಿ, "ನೋಡು, ಇವಳಿಗೆ ಚೆನ್ನಾಗಿ, ಹೊಟ್ಟೆತುಂಬ ಊಟ ಹಾಕು. ಆಗ ದುಃಖ ಸ್ವಲ್ಪ ಕಡಿಮೆಯಾಗುತ್ತದೆ" ಎಂದು ಸೂಚಿಸಿದರು. ಅಲ್ಲದೆ "ಈ ಬ್ರಾಹ್ಮಣ ಹೆಂಗಸನ್ನು ಚೆನ್ನಾಗಿ ನೋಡಿಕೊ! ನಿನ್ನ ಜೀವನದುದ್ದಕ್ಕೂ ನಿನ್ನನ್ನು ನೆರಳಿನ ಹಾಗೆ ಹಿಂಬಾಲಿಸುವವಳು ಇವಳು" ಎಂದೂ ಹೇಳಿದರು. ಅವರ ಭವಿಷ್ಯವಾಣಿ ಅಕ್ಷರಶಃ ಸತ್ಯವಾಯಿತು.

ಅಂದು ಹಗುರಗೊಂಡ ಹೃದಯದಿಂದ ಗೊಲಾಪ್ ಮಾ ಮನೆಗೆ ಮರಳಿದಳು.

ಅವಳ ಮನಸ್ಸನ್ನು ಶ್ರೀರಾಮಕೃಷ್ಣರು ಸಂಪೂರ್ಣವಾಗಿ ತುಂಬಿಬಿಟ್ಟಿದ್ದರು. ಸದಾ ಅವರದೇ ಧ್ಯಾನ! ಅಂದಿನಿಂದ ಅವಳು, ತಾನು ಕಂಡುಕೊಂಡ ಆ ಶಾಂತಿಧಾಮಕ್ಕೆ ಮತ್ತೆಮತ್ತೆ ಹೋಗಲಾರಂಭಿಸಿದಳು. ಅಲ್ಲಿಗೆ ಹೋಗುವಾಗ ಅವಳಲ್ಲಿ ಅದೆಂಥ ಆತುರ, ಅದೆಂಥ ಉತ್ಸಾಹ! ಹುಚ್ಚಿಯಂತೆ, ಬೇರಾವುದರ ಪರಿವೆಯಿಲ್ಲದೆ, ಹೆಚ್ಚು ಕಡಿಮೆ ಓಡಿಕೊಂಡೇ ಹೋಗುತ್ತಿದ್ದಳು! ಕ್ರಮೇಣ ಶ್ರೀರಾಮಕೃಷ್ಣರ ಸಾಂತ್ವನದ ಮಾತುಗಳನ್ನೂ ಬೋಧನೆಗಳನ್ನೂ ಕೇಳುತ್ತ ಕೇಳುತ್ತ, ಅವಳು ಪಡೆದುಕೊಂಡ ಶಾಂತಿ ದೃಢವಾಗುತ್ತ ಬಂದಿತು.

ಕೆಲದಿನಗಳ ಮೇಲೆ ಗೋಲಾಪಳಿಗೆ, ಒಮ್ಮೆ ಶ್ರೀರಾಮಕೃಷ್ಣರನ್ನು ತನ್ನ ಬಡ ಕುಟೀರಕ್ಕೆ ಬರಮಾಡಿಕೊಂಡು ಆದರಿಸಬೇಕೆಂಬ ಹಂಬಲವುಂಟಾಯಿತು. ಅವಳ ವ್ಯಾಕುಲಿತ ಪ್ರಾರ್ಥನೆಗೆ ಅವರು ಸಮ್ಮತಿಸಿದರು. ೧೮೮೪ರ ಜುಲೈ ೨೮ರಂದು ಭೇಟಿ ಯೆಂದು ನಿಶ್ಚಯವಾಯಿತು. ಅಂದು ಸಂಜೆ ಶ್ರೀರಾಮಕೃಷ್ಣರು ತಮ್ಮ ಭಕ್ತರೊಂದಿಗೆ ನಂದ ಬೋಸ್ ಎಂಬ ಗಣ್ಯನ ಮನೆಗೆ ಭೇಟಿ ನೀಡಿ, ಆಮೇಲೆ ಹತ್ತಿರವೇ ಇದ್ದ ಅವಳ ಮತ್ತು ಯೋಗಿನ್‌ಮಾಳ ಮನೆಗಳಿಗೆ ಬರಲಿದ್ದರು. ಅಂದಿನ ಆ ಹೃದಯ ಸ್ಪರ್ಶೀ ಪ್ರಸಂಗವನ್ನು ವೀಕ್ಷಿಸುತ್ತ ಭಾವಿಸಿದಷ್ಟೂ ಅದರ ಸ್ವಾದ ಹೆಚ್ಚುತ್ತದೆ.

ಗೋಲಾಪ್ ಮಾ ವಾಸಿಸುತ್ತಿದ್ದುದು ತನ್ನ ಸೋದರರ ಮತ್ತು ವಿಧವೆ ಸೋದರಿಯ ಜೊತೆಯಲ್ಲಿ. ಆ ದಿನ ಅವಳು ಶ್ರೀರಾಮಕೃಷ್ಣರ ಬರವನ್ನು ಎದುರು ನೋಡುತ್ತ, ತನ್ನ ಮನೆ ಇಂದು ಪಾವನವಾಗುವುದೆಂಬ ನಿರೀಕ್ಷೆಯಲ್ಲಿ ಹಿರಿಹಿರಿ ಹಿಗ್ಗು ತ್ತಿದ್ದಳು. ಅವರನ್ನೂ ಅವರ ಭಕ್ತವೃಂದವನ್ನೂ ಸತ್ಕರಿಸುವುದಕ್ಕಾಗಿ ಸಿದ್ಧತೆ ಮಾಡುವು ದರಲ್ಲೇ ಬೆಳಗಿನಿಂದಲೂ ನಿರತಳಾಗಿದ್ದಳು.

ಸಂಜೆಯಾಯಿತು. ಕೊನೆಯ ಹಂತದ ಕೆಲಸಗಳು ಭರದಿಂದ ನಡೆದಿವೆ. ಅಕ್ಕಪಕ್ಕದ ಮನೆಯವರೆಲ್ಲ ಆಗಲೇ ಬಂದು ಸೇರಿಬಿಟ್ಟಿದ್ದಾರೆ. ಶ್ರೀರಾಮಕೃಷ್ಣರು ಯಾವ ಕ್ಷಣದಲ್ಲಾದರೂ ಬರಬಹುದು. ಗೋಲಾಪ್ ಮಾ ಸಂಭ್ರಮದಿಂದ ಒಳಗಿಂದ ಹೊರಕ್ಕೆ, ಹೊರಗಿನಿಂದ ಒಳಕ್ಕೆ ದುಡುದುಡು ಓಡಾಡುತ್ತಿದ್ದಾಳೆ. ಆಗಾಗ ಬೀದಿಬಾಗಿ ಲಿಗೆ ಬಂದು ನೋಡುತ್ತಿದ್ದಾಳೆ; 'ಯಾಕಿನ್ನೂ ಬರಲಿಲ್ಲ?' ಎಂದು ಚಡಪಡಿಸುತ್ತಿದ್ದಾಳೆ. 'ಹೊತ್ತಾಯಿತು, ಆದರೇಕೋ ಇನ್ನೂ ಅವರ ಸೂಚನೆಯೇ ಇಲ್ಲವಲ್ಲ! ಕಡೆಗೆ ಅವರು ಬರದೆಯೇ ಇದ್ದುಬಿಟ್ಟರೆ? ಹಾಗಿಂದಹಾಗೇ ಹೋಗಿಬಿಟ್ಟರೆ?...' ಈ ಯೋಚನೆ ಬಂದಾಗ ಮಾತ್ರ ಅವಳಿಗಿನ್ನು ತಡೆದುಕೊಳ್ಳಲು ಸಾಧ್ಯವಾಗಲಿಲ್ಲ. ತಾನೇ ನಂದ ಬೋಸನ ಮನೆಗೆ ಓಡಿದಳು.

ಆದರೆ ಅವಳು ಆ ಕಡೆ ಹೋಗುತ್ತಿದ್ದಂತೆ ಈ ಕಡೆ ಶ್ರೀರಾಮಕೃಷ್ಣರು ಮಹೇಂದ್ರ ನಾಥ, ದೇವೇಂದ್ರ, ರಾಖಾಲ, ಚಿಕ್ಕ ನರೇಂದ್ರ, ಯೋಗೀಂದ್ರ, ನಾರಾಯಣ ಮೊದಲಾ ದವರೊಂದಿಗೆ—ಪ್ರಾಯಶಃ ಬೇರೊಂದು ದಾರಿಯಿಂದ—ಅವಳ ಮನೆಗೆ ಬಂದೇ ಬಿಟ್ಟರು. ಗೋಲಾಪಳ ಸೋದರಿ ಎಲ್ಲರನ್ನೂ ಸ್ವಾಗತಿಸಿ, ಶ್ರೀರಾಮಕೃಷ್ಣರಿಗೆ ಪ್ರಣಾಮ ಮಾಡಿದಳು. ಎಲ್ಲರೂ ತಾರಸಿಯ ಮೇಲಕ್ಕೆ ಹೋಗಿ ಜಮಖಾನಗಳ ಮೇಲೆ ಕುಳಿತರು.

ಮನೆಮಂದಿಯೂ ಇತರರೂ ಅತ್ಯಂತ ಭಕ್ತಿಯುತರಾಗಿ ಕುಳಿತಿದ್ದ ಪರಿಯನ್ನು ಕಂಡು ಮಹೇಂದ್ರನಾಥ ದೇವೇಂದ್ರನ ಕಿವಿಯಲ್ಲಿ ಪಿಸುಗುಟ್ಟಿದ:

"ಆಹ್ ! ಎಂಥ ಅದ್ಭುತ ದೃಶ್ಯ ನೋಡು ! ಪರಮಹಂಸರ ದರ್ಶನ ಪಡೆಯುವುದಕ್ಕಾಗಿ, ಅವರ ಅಮೃತವಾಣಿಯನ್ನು ಕೇಳುವುದಕ್ಕಾಗಿ ದೊಡ್ಡವರು ಚಿಕ್ಕವರು ಮಕ್ಕಳು ಹೆಂಗಸರು ಗಂಡಸರು ಎಲ್ಲರೂ ಹೇಗೆ ಉತ್ಸುಕತೆಯಿಂದ ಕಾದು ಕುಳಿತಿದ್ದಾರೆ !"

ದೇವೇಂದ್ರ (ಶ್ರೀರಾಮಕೃಷ್ಣರಿಗೆ): "ಮಾಸ್ಟರ್ ಹೇಳುತ್ತಿದ್ದಾನೆ, ಈ ಜಾಗ ನಂದ ಬೋಸನ ಮನೆಗಿಂತ ಎಷ್ಟೋ ಮೇಲು ಅಂತ. ನಿಜವಾಗಿಯೂ, ಈ ಮನೆಯವರ ಭಕ್ತಿ ಎಷ್ಟು ಅದ್ಭುತವಾದದ್ದು !"

ಶ್ರೀರಾಮಕೃಷ್ಣರು ನಕ್ಕರು.

ಇತ್ತ ಗೊಲಾಪ್ ಮಾ ನಂದಬೋಸನ ಮನೆಗೆ ಹೋಗಿ ವಿಚಾರಿಸಿದಾಗ, "ಅವರೆಲ್ಲ ಈಗತಾನೆ ಹೊರಟರಲ್ಲ !" ಎಂಬ ಉತ್ತರ ಬಂದಿತು. 'ಅಯ್ಯಯ್ಯೋ ಠಾಕೂರರು ಮನೆಗೆ ಬಂದಾಗ ಅಲ್ಲಿದ್ದು ಸ್ವಾಗತಿಸುವುದನ್ನು ಬಿಟ್ಟು ಇಲ್ಲಿಗೆ ಬಂದಿದ್ದೇನಲ್ಲಪ್ಪಾ !' ಎಂದುಕೊಳ್ಳುತ್ತ ಅಲ್ಲಿಂದ ಹೊರಟಳು. ನೋಡಿದವರು ಏನೆಂದುಕೊಂಡಾರು ಎಂಬ ಯೋಚನೆಯೇ ಇಲ್ಲದೆ, ಓಡೋಡಿಕೊಂಡೇ ಮನೆಗೆ ಬಂದಳು.

ಅಲ್ಲಿ ಹಸನ್ಮುಖಿಯಾಗಿ ಕುಳಿತ ತನ್ನ ಆರಾಧ್ಯದೇವತೆಯನ್ನು ಕಂಡು, ಧಾವಿಸಿ, ಅವರಿಗೆ ಪ್ರಣಾಮ ಮಾಡಿ ನಿಂತಳು. ಅವಳಿಗೆ ಆನಂದ ಉಕ್ಕಿಉಕ್ಕಿ ಬರುತ್ತಿದೆ. ಏನು ಮಾಡಲಿ ಎಂಬುದೇ ತೋಚುತ್ತಿಲ್ಲ. ಶ್ರೀರಾಮನನ್ನು ಕಂಡ ಶಬರಿಯಂತೆ, ಶ್ರೀಕೃಷ್ಣನನ್ನು ಮನೆಗೆ ಬರಮಾಡಿಕೊಂಡ ವಿದುರನಂತೆ ಭಾವೋದ್ವಿಗ್ನಳಾಗಿದ್ದಾಳೆ. ಕೈ ಮುಗಿದುಕೊಂಡು ಅರ್ಧ ಉಸಿರುಕಟ್ಟಿದ ಸ್ವರದಿಂದ ತನ್ನ ಮನಸ್ಸನ್ನು ತೋಡಿಕೊಳ್ಳುವ ಪ್ರಯತ್ನ ಮಾಡಿದಳು:

"ಈ ಆನಂದವನ್ನು ನಾನು ತಡೆದುಕೊಳ್ಳಲಾರೆ. ಇದರಿಂದಲೇ ಸತ್ತು ಹೋಗಿಬಿಡುವೆನೇನೋ ಅನ್ನಿಸುತ್ತಿದೆ ! (ಹೆಂಗಳೆಯರತ್ತ ತಿರುಗಿ) ಗೆಳತಿಯರಿರಾ, ಹೇಳಿ, ನಾನಿನ್ನು ಹೇಗೆ ಬದುಕುಳಿಯಲಿ ? ಹಿಂದೆ ನನ್ನ ಮಗಳು ಚಂಡಿ, ರಸ್ತೆಯ ಎರಡು ಬದಿಯಲ್ಲೂ ನಿಂತ ಸಶಸ್ತ್ರ ಸೈನಿಕರ ಗೌರವರಕ್ಷೆಯೊಂದಿಗೆ ಮನೆಗೆ ಬರುತ್ತಿದ್ದಳು. ಆಗಲೂ ಕೂಡ ನನಗೆ ಇಷ್ಟೊಂದು ಸಂತೋಷವಾಗಿರಲಿಲ್ಲ. ಓಹ್ ! ನನ್ನ ಹೃದಯದಲ್ಲೀಗ ಅವಳ ಸಾವಿನ ಶೋಕ ಕಿಂಚಿತ್ತೂ ಇಲ್ಲ. ಯಾವಾಗ ಇವರು (ಪರಮಹಂಸರು) ಬರುವುದು ತಡವಾಯಿತೋ, ಆಗ ಮಾತ್ರ, 'ಒಂದು ಪಕ್ಷ ಅವರೇನಾದರೂ ಬಾರದೆ ಹೋದರೆ, ಇವತ್ತಿನ ಅಡಿಗೆಯನ್ನೆಲ್ಲ ಗಂಗೆಗೆ ಬಿಸಾಡಿಬಿಡಬೇಕು, ಇನ್ನೆಂದಿಗೂ ಅವರ ಜೊತೆಯಲ್ಲಿ ಮಾತನಾಡಬಾರದು; ಅವರು ಇಲ್ಲೆಲ್ಲಿಗಾದರೂ ಬಂದರೆ, ಸುಮ್ಮನೆ ದೂರದಿಂದಲೇ ನೋಡಿಕೊಂಡು ಬಂದುಬಿಡಬೇಕು' ಅಂತೆಲ್ಲ ಯೋಚನೆ ಮಾಡಿದೆ !

"ತಾಳಿ, ನನಗೆ ಎಷ್ಟು ಆನಂದವಾಗಿಬಿಟ್ಟಿದೆ ಅಂತ ಎಲ್ಲರಿಗೂ ಹೋಗಿ ಹೇಳಿಕೊಂಡುಬರುತ್ತೇನೆ ! ನನ್ನ ಸೌಭಾಗ್ಯ ಎಂಥದು ಅಂತ ಯೋಗಿನ್ನಳಿಗೆ ಹೇಳಿಬರುತ್ತೇನೆ !"

ಭಕ್ತರೆಲ್ಲ ಬೆರಗಾಗಿ ಅವಳ ಮಾತನ್ನು ಕೇಳುತ್ತಿದ್ದಾರೆ. ಇನ್ನೂ ಅವಳ ಆವೇಶ ಇಳಿದಿಲ್ಲ. ಮತ್ತೆ ಹೇಳಿದಳು:

"ಒಬ್ಬ ಕೂಲಿಯವನಿಗೆ ಲಾಟರಿಯಲ್ಲಿ ಒಂದು ಲಕ್ಷ ರೂಪಾಯಿ ಬಂದು

ಬಿಟ್ಟಿತು. ಆ ಸಮಾಚಾರ ಕೇಳುತ್ತಲೇ ಆತ ಖುಷಿಯನ್ನು ತಾಳಲಾರದೆ ಸತ್ತೇಹೋದ! ಹೌದು, ನಿಜವಾಗಿಯೂ ಸತ್ತುಹೋದ! ಈಗ ನನಗೂ ಅದೇ ಸ್ಥಿತಿ ಬಂದುಬಿಟ್ಟಿದೆ. ಸ್ನೇಹಿತರೇ, ನೀವೆಲ್ಲ ನನಗೆ ಆಶೀರ್ವಾದ ಮಾಡಿ, ಇಲ್ಲದಿದ್ದರೆ ನಾನೂ ಕೂಡ ಸಾಯುವುದೇ ಖಂಡಿತ."

ಆಕೆಯ ವ್ಯಾಕುಲತೆಯನ್ನೂ ಭಾವಾವಿಷ್ಟತೆಯನ್ನೂ ಕಂಡು ಮಹೇಂದ್ರನಾಥ ಮುಗ್ಧನಾಗಿ, ಅವಳ ಪಾದಧೂಳಿ ಸ್ವೀಕರಿಸಲು ಮುಂದೆ ಬಾಗಿದ. "ಅಯ್ಯೋ ಇದೇನು ಮಾಡುತ್ತಿದ್ದೀರಿ!" ಎಂದು ಕೂಗಿಕೊಂಡು ಅವಳು ಆತನಿಗೆ ಪ್ರತಿ ಪ್ರಣಾಮ ಮಾಡಿದಳು.

ಶ್ರೀರಾಮಕೃಷ್ಣರ ಜೊತೆಯಲ್ಲಿ ಬಂದಿದ್ದ ಭಕ್ತರನ್ನು ನೋಡುತ್ತ ಅವಳೆಂದಳು: "ನೀವೆಲ್ಲ ಬಂದಿರುವುದು ನನಗೆ ತುಂಬಾ ಸಂತೋಷದ ವಿಷಯ. ಚಿಕ್ಕ ನರೇಂದ್ರನನ್ನೂ ಕರೆತಂದಿದ್ದೇನೆ. ಇಲ್ಲದಿದ್ದರೆ ನಮ್ಮನ್ನೆಲ್ಲ ನಗಿಸುವವರು ಯಾರು?"

ಗೊಲಾಪ್ ಮಾ ಹೀಗೆಲ್ಲ ಸಂಭ್ರಮ ಪಡುತ್ತಿದ್ದರೆ ಅವಳ ಸೋದರಿ ಬಂದು ಅವಳನ್ನು ಕರೆದಳು: "ಗೊಲಾಪ್! ಕೆಳಗಡೆ ಬಾ! ನೀನು ಅಲ್ಲೇ ಇದ್ದುಬಿಟ್ಟರೆ ಹೇಗಮ್ಮಾ? ನಾನೊಬ್ಬಳೇ ಎಲ್ಲವನ್ನೂ ನಿಭಾಯಿಸುವುದಕ್ಕಾಗುತ್ತದೆಯೆ!"

ಆದರೆ ಗೊಲಾಪ್ ಆನಂದಲೋಕದಲ್ಲಿದ್ದಾಳೆ. ಶ್ರೀರಾಮಕೃಷ್ಣರನ್ನೂ ಭಕ್ತರನ್ನೂ ಪ್ರೇಮಭರಿತ ನಯನಗಳಿಂದ ಸುಮ್ಮನೆ ದೃಷ್ಟಿಸುತ್ತಿದ್ದಾಳೆ. ಅವರನ್ನು ಬಿಟ್ಟು ಹೋಗಲು ಆಕೆಗೆ ಮನಸ್ಸೇ ಇಲ್ಲ.

ಸ್ವಲ್ಪ ಹೊತ್ತಿನ ಮೇಲೆ ಗೊಲಾಪ್ ಮಾ ಶ್ರೀರಾಮಕೃಷ್ಣರನ್ನು ಬೇರೊಂದು ಕೋಣೆಗೆ ಕರೆದೊಯ್ದು ಸಿಹಿತಿನಿಸಿನಿಂದ ಕೂಡಿದ ಉಪಾಹಾರವನ್ನು ಮಾಡಿಸಿದಳು. ಭಕ್ತರೆಲ್ಲ ತಾರಸಿಯ ಮೇಲೆಯೇ ಉಪಾಹಾರ ಸ್ವೀಕರಿಸಿದರು.

ಸಮಯ ರಾತ್ರಿ ಎಂಟು ಗಂಟೆ. ಶ್ರೀರಾಮಕೃಷ್ಣರು ಹೊರಟುನಿಂತರು. ಅವರು ಬಾಗಿಲ ಬಳಿ ಬಂದಾಗ, "ಪರಮಹಂಸರಿಗೆ ನಮಸ್ಕಾರ ಮಾಡಿ!" ಎಂದು ಗೊಲಾಪ್ ಮನೆಯವರಿಗೆಲ್ಲ ಕೂಗಿ ಹೇಳಿದಳು. ತನ್ನ ಸೋದರ ನಮಸ್ಕರಿಸುವಾಗ ಅವನನ್ನು ಶ್ರೀರಾಮಕೃಷ್ಣರಿಗೆ ಪರಿಚಯಿಸುತ್ತ ಹೇಳಿದಳು, "ಇವನು ನನ್ನ ಸೋದರರಲ್ಲೊಬ್ಬ; ಮೂರ್ಖ."

ಶ್ರೀರಾಮಕೃಷ್ಣರೆಂದರು: "ಇಲ್ಲ ಇಲ್ಲ! ಎಲ್ಲ ಒಳ್ಳೆಯವರೇ."

ಈಗ ಅವರು ಅಲ್ಲಿಂದ ಪರಿವಾರಸಮೇತರಾಗಿ ಯೋಗಿನ್ ಮಾಳ ಮನೆಗೆ ಹೋದರು. ಗೊಲಾಪಳೂ ಅವರನ್ನು ಹಿಂಬಾಲಿಸಿದಳು; ಅಲ್ಲಿ ಸ್ವಲ್ಪ ಹೊತ್ತು ಕಳೆದು ಅವರು ಬಲರಾಮನ ಮನೆಗೆ ಬಂದರು.

ರಾತ್ರಿ ಹನ್ನೊಂದು ಗಂಟೆಯ ಸಮಯ. ಮಹೇಂದ್ರ ಶ್ರೀರಾಮಕೃಷ್ಣರ ಪಾದಗಳನ್ನು ಒತ್ತುತ್ತಿದ್ದಾನೆ: ಬಳಿಯಲ್ಲಿ ಬೇರೆ ಯಾರೂ ಇಲ್ಲ.

ಶ್ರೀರಾಮಕೃಷ್ಣರು ಗೊಲಾಪಳ ಮನೆಯಲ್ಲಿ ನಡೆದ ಆಗುಹೋಗುಗಳನ್ನು ನೆನಪಿಸಿಕೊಳ್ಳುತ್ತ ನುಡಿದರು: "ಆಹಾ! ಅವರೆಲ್ಲ ಎಷ್ಟು ಆನಂದಪಟ್ಟರು!"

ಮಹೇಂದ್ರ: "ಏನಾಶ್ಚರ್ಯ! ಏಸುಕ್ರಿಸ್ತ ಬದುಕಿದ್ದಾಗ ಅವನ ಭಕ್ತೆಯರಾದ ಮಾರ್ಥಾ ಮತ್ತು ಮೇರಿ ಎಂಬಿಬ್ಬರು ಸೋದರಿಯರು ಅವನೊಂದಿಗೆ ತದ್ವತ್ ಇದೇ ರೀತಿಯಲ್ಲಿ ವ್ಯವಹರಿಸುತ್ತಿದ್ದರು."

ಶ್ರೀರಾಮಕೃಷ್ಣರು (ಉತ್ಸುಕರಾಗಿ): "ಅದೇನು ಕತೆ, ಹೇಳು ನೋಡೋಣ ?"

ಮಹೇಂದ್ರ: "ನಿಮ್ಮ ಹಾಗೆಯೇ ಒಮ್ಮೆ ಏಸುಕ್ರಿಸ್ತ ಭಕ್ತರೊಡನೆ ಆ ಸೋದರಿಯರ ಮನೆಗೆ ಹೋಗಿದ್ದ. ಮೇರಿ ಅವನ ದರ್ಶನಮಾತ್ರದಿಂದಲೇ ಭಾವೋಲ್ಲಾಸಭರಿತಳಾದಳು. ಆ ದೃಶ್ಯ ನನಗೆ ಗೌರಾಂಗದೇವನ ಕುರಿತಾದ ಒಂದು ಹಾಡನ್ನು ನೆನಪಿಗೆ ತರುತ್ತದೆ:

*ಶ್ರೀಗೌರಾಂಗನ ರೂಪಸಾಗರದಿ ಮುಳುಗಿದ ನನ್ನೀ ಕಣ್ಣುಗಳು*
*ಹೊರಬರದಾದುವು, ಮನವೂ ಮುಳುಗಿತು*
*ಈಜುವುದನ್ನೂ ಮರೆಮರೆತು!*

"ಇತ್ತ ಮಾರ್ಥಾ ತಾನೊಬ್ಬಳೇ ಅತಿಥಿಗಳ ಊಟೋಪಚಾರಕ್ಕೆ ಅಣಿ ಮಾಡುತ್ತಿದ್ದಳು. ಅವಳು ಏಸುವಿನ ಬಳಿ ಬಂದು, 'ಪ್ರಭು, ನೀನೇ ನೋಡು, ಮೇರಿ ಏನನ್ಯಾಯ ಮಾಡುತ್ತಿದ್ದಾಳೆ. ನಾನೊಬ್ಬಳೇ ಅಲ್ಲಿ ಒದ್ದಾಡುತ್ತಿದ್ದೇನೆ, ಇವಳು ಬಂದು ಇಲ್ಲಿ ಸುಮ್ಮನೆ ಕುಳಿತಿದ್ದಾಳಲ್ಲ! ಇವಳು ನನಗೆ ಸ್ವಲ್ಪ ನೆರವಾಗುವಂತೆ ಹೇಳು' ಅಂತ ದೂರು ಹೇಳಿದಳು. ಆಗ ಏಸು ಹೇಳಿದ, 'ಮಾರ್ಥಾ, ನೀನು ಬಹಳ ಜಾಣೆಯೇ ಸರಿ, ನೂರೆಂಟು ವಿಷಯಗಳಿಗೆ ಗಮನಕೊಡಬಲ್ಲೆ! ಆದರೆ ನಿನ್ನ ಸೋದರಿ ನಿಜಕ್ಕೂ ಧನ್ಯೆ, ಅವಳು ಜೀವನದ ಅತಿ ಮುಖ್ಯ ಧ್ಯೇಯವಾದ ಭಗವತ್ಪ್ರೇಮವನ್ನು ಗಳಿಸಿಕೊಂಡಿದ್ದಾಳೆ' ಅಂತ."

ಶ್ರೀರಾಮಕೃಷ್ಣರು: "ಒಳ್ಳೇದು, ಇದನ್ನೆಲ್ಲ ನೋಡಿ ನಿನಗೇನೆನಿಸುತ್ತದೆ ?"

ಮಹೇಂದ್ರ ಭಾವಪೂರ್ಣನಾಗಿ ಹೇಳುತ್ತಾನೆ: "ನನಗನ್ನಿಸುತ್ತಿದೆ—ನೀವು, ಏಸುಕ್ರಿಸ್ತ, ಚೈತನ್ಯದೇವ ಮೂವರೂ ಒಂದೇ; ಒಬ್ಬನೇ ಈ ಮೂರು ರೂಪಗಳನ್ನು ತಳೆದಿದ್ದಾನೆ ಅಂತ."

ಶ್ರೀರಾಮಕೃಷ್ಣರು ತಕ್ಷಣ ಉದ್ಗರಿಸಿದರು: "ಹೌದು ಹೌದು! ಒಬ್ಬನೇ! ಒಬ್ಬನೇ! ನಿಜವಾಗಿಯೂ ಒಬ್ಬನೇ! ಇಲ್ಲಿ ಈ ರೀತಿಯಾಗಿ ವಾಸಿಸುತ್ತಿರುವವನು ಭಗವಂತನೇ ಎಂಬುದು ನಿನಗೆ ಗೋಚರಿಸುತ್ತಿಲ್ಲವೇನು ?"

ಈಗ ಗೊಲಾಪ್ ಮಾ ತನ್ನ ಸಾಂಸಾರಿಕ ಬಂಧನ-ಗೊಂದಲಗಳಿಂದೆಲ್ಲ ಪಾರಾಗಿ, ದಕ್ಷಿಣೇಶ್ವರಕ್ಕೆ—ಅದರಲ್ಲೂ ಶಾರದಾದೇವಿಯವರ ಸಾನಿಧ್ಯಕ್ಕೆ—ಹೆಚ್ಚು ಹೆಚ್ಚಾಗಿ ಬರಲಾರಂಭಿಸಿದಳು. ಶಾರದಾದೇವಿಯವರು ಅವಳಿಗೆ ತಮ್ಮ ಪ್ರೀತಿಯ ಮಡಿಲಿನಲ್ಲಿ ಆಶ್ರಯವಿತ್ತರು. ಕ್ರಮೇಣ ಆಕೆ ಅವರ ಅತ್ಯಂತ ಆಪ್ತ ಭಕ್ತೆ-ಸಂಗಾತಿಯಾದಳು. ಅಡಿಗೆಯೇ ಮುಂತಾದ ಎಲ್ಲ ಕೆಲಸಕಾರ್ಯಗಳಲ್ಲೂ ಅವರಿಗೆ ನೆರವಾಗುತ್ತಿದ್ದಳು. ಗೊಲಾಪ್ ಜೊತೆಗಿದ್ದರೆ ಶಾರದಾದೇವಿಯವರಿಗೆ ಏನೋ ಒಂದು ಧೈರ್ಯ. ವರ್ಷಗಳು ಕಳೆದಂತೆ ಇಬ್ಬರ ನಡುವಿನ ನಂಟು ಇನ್ನಷ್ಟು ದೃಢವಾಯಿತು. ಶ್ರೀವಿಷ್ಣುವಿಗೆ ಜಯ-ವಿಜಯರಿದ್ದಂತೆ ಜಗನ್ಮಾತೆ ರಾಜರಾಜೇಶ್ವರಿಗೆ ಜಯಾ ಮತ್ತು ವಿಜಯಾ ಎಂಬಿಬ್ಬರು ಸಖಿಯರು. ಹಾಗೆಯೇ ಗೊಲಾಪ್ ಮಾ, ಯೋಗಿನ್ ಮಾ ಇವರನ್ನು ಶ್ರೀಶಾರದಾದೇವಿಯವರು ತಮ್ಮ ಜಯಾ–ವಿಜಯಾ ಎಂದು ಕರೆಯುತ್ತಿದ್ದರು.

ಗೊಲಾಪ್ ಮಾ ಸ್ವಭಾವತಃ ಒಳ್ಳೆಯವಳೇ; ಶ್ರೀರಾಮಕೃಷ್ಣರ-ಶ್ರೀಶಾರದಾದೇವಿಯರಿಬ್ಬರ ಮೇಲೂ ಗಾಢ ಭಕ್ತಿಯಿಟ್ಟವಳೇ. ಆದರೆ ಅವಳ ಮಾತುಕತೆ, ವ್ಯವ

ಹಾರಗಳೆಲ್ಲ ಒರಟು; ನಯ ನಾಜೂಕಿನ ಗಂಧವೇ ಇಲ್ಲ. ಮನಸ್ಸಿಗೆ ಬಂದದ್ದನ್ನು—ಹಿಂದೆಮುಂದೆ ನೋಡದೆ, ಅದರಿಂದ ಯಾರಿಗೆ ನೋವಾಗುತ್ತದೆಯೋ ಎಂದು ಯೋಚಿಸದೆ—ಒದರಿಬಿಡುವುದು ಅವಳ ದುರಭ್ಯಾಸ. ಅವಳ ಉದ್ದೇಶ ಎಷ್ಟೇ ಒಳ್ಳೆಯದಾಗಿದ್ದರೂ ಈ ಬಗೆಯ ಒರಟುತನದಿಂದಾಗಿ ಆಗಾಗ ತೊಂದರೆ ತಲೆಹಾಕುತ್ತಿತ್ತು. ಶಾರದಾ ದೇವಿಯವರಿಗಂತೂ ಕೆಲವೊಮ್ಮೆ ಅವಳಿಂದಾಗಿ ಸಾಕು ಸಾಕೆನಿಸುವಷ್ಟು ಕರಕರೆಯೇ ಆಯಿತು. ಆದರೂ ಅವರು ಅದೆಲ್ಲವನ್ನೂ ಸಹಿಸಿಕೊಂಡು, ಪ್ರೀತಿಯಿಂದಲೇ ಅವ ಳನ್ನು ತಿದ್ದುತ್ತ ಬಂದರು.

ಶಾರದಾದೇವಿಯವರ ಸಾನ್ನಿಧ್ಯದಲ್ಲಿ, ಶ್ರೀರಾಮಕೃಷ್ಣರ ಮಾರ್ಗದರ್ಶನದಲ್ಲಿ ದಿನದಿನಕ್ಕೂ ಹೊಸ ಪಾಠಗಳನ್ನು ಕಲಿಯುತ್ತ ಗೋಲಾಪ್ ಮಾ ಆಧ್ಯಾತ್ಮಿಕ ಪಥದಲ್ಲಿ ಮುನ್ನಡೆದಳು. ಅನೇಕ ದರ್ಶನಗಳ ಮೂಲಕ ಆಕೆಗೆ ಶ್ರೀರಾಮಕೃಷ್ಣರ ಮಹಿಮೆ ಮತ್ತಷ್ಟು ಮನವರಿಕೆಯಾಯಿತು. ಕೆಲವೊಮ್ಮೆ ಅವರ ಕೋಣೆಯನ್ನು ಶುಚಿಗೊಳಿಸುವ ಮತ್ತು ಅವರಿಗೆ ಊಟ ತೆಗೆದುಕೊಂಡು ಹೋಗಿ ಕೊಡುವ ವಿಶೇಷ ಭಾಗ್ಯ ಅವಳಿಗೆ ದೊರಕುತ್ತಿತ್ತು. ಒಂದು ದಿನ ಆಕೆ, ಊಟ ಬಡಿಸಿದ ತಟ್ಟೆಯನ್ನು ತಂದು ಅವರ ಮುಂದಿಟ್ಟು ತಾನು ಸ್ವಲ್ಪ ದೂರದಲ್ಲಿ ಕುಳಿತುಕೊಂಡಳು. ಶ್ರೀರಾಮಕೃಷ್ಣರು ಉಣಲಾರಂಭಿಸಿದರು. ಗೋಲಾಪ್ ಅವರನ್ನೇ ದಿಟ್ಟಿಸುತ್ತ ಸ್ತಂಭಿತಳಾದಳು; ಮುಖದಲ್ಲಿ ವಿಸ್ಮಯಭಾವ ಮೂಡಿತು. ಈಗ ಅವಳು ಇದ್ದಕ್ಕಿದ್ದ ಹಾಗೆ ಆವೇಶ ಬಂದವರಂತೆ ಗಹಗಹಿಸಿ ನಗಲಾರಂಭಿಸಿದಳು. ಶ್ರೀರಾಮಕೃಷ್ಣರಿಗೆ ಗೊತ್ತು, ಅವಳೇಕೆ ನಗುತ್ತಿದ್ದಾಳೆ ಎಂಬುದು. ಕೇಳಿದರು:

"ಏನು, ಇಲ್ಲಿ ಊಟ ಮಾಡುತ್ತಿರುವವರು ಯಾರು ಅಂತ ಹೇಳಬಲ್ಲೆಯಾ? ನಾನೋ ಅಥವಾ ಮತ್ತಾರೋ?"

ಗೋಲಾಪ್: "ನೀವಲ್ಲ; ನೀವು ತುತ್ತನ್ನು ಬಾಯೊಳಗೆ ಇಟ್ಟೊಡನೆಯೇ ಒಂದು ಹಾವಿನಂಥ ಜಂತು ಒಳಗಿಂದ ಬಂದು ಅದನ್ನು ನುಂಗಿಹಾಕುವುದನ್ನು ಕಾಣುತ್ತಿದ್ದೇನೆ! ಊಟ ಮಾಡುತ್ತಿರುವುದು ಆ ಹಾವೇ."

ಶ್ರೀರಾಮಕೃಷ್ಣರು: "ಭೇಷ್. ಸರಿಯಾಗಿಯೇ ಕಂಡೆ. ನೀನೆಂದದ್ದು ನಿಜ. ಇದನ್ನು ಕಂಡು ಅರ್ಥ ಮಾಡಿಕೊಳ್ಳಲು ಸಾಧ್ಯವಾದದ್ದು ನಿನ್ನ ಪುಣ್ಯಫಲ."

ಶಾಸ್ತ್ರಗಳಲ್ಲಿ ಈ ಬಗೆಯ ಆಹಾರ ಸೇವನೆಯ ಪ್ರಸ್ತಾಪವಿದೆ; ಇದನ್ನು 'ಕುಂಡಲಿನೀ ಶಕ್ತಿಗೆ ನೀಡುವ ನೈವೇದ್ಯ' ಎಂದು ಕರೆಯಲಾಗಿದೆ.

ಮತ್ತೊಂದು ದಿನ ಗೋಲಾಪಳಿಗೆ ಶ್ರೀರಾಮಕೃಷ್ಣರು ಇನ್ನೊಂದು ದರ್ಶನಭಾಗ್ಯವನ್ನು ಕರುಣಿಸಿದರು. ಅವರು ಅತ್ತಿಂದಿತ್ತ ನಡೆದಾಡುವುದನ್ನು ನೋಡುತ್ತಿದ್ದ ಗೋಲಾಪ್—ಹಿಂದೆ ಮಥುರ ಕಂಡಿದ್ದಂತೆ—ಅವರನ್ನು ಸಾಕ್ಷಾತ್ ಕಾಳಿಕಾದೇವಿಯೆಂಬಂತೆ ಸ್ಪಷ್ಟವಾಗಿ ಕಂಡು ರೋಮಾಂಚನಗೊಂಡಳು.

ಇದು ಮುಂದೊಮ್ಮೆ (೧೮೮೫ ರಲ್ಲಿ) ನಡೆದ ಪ್ರಸಂಗ: ಶ್ರೀರಾಮಕೃಷ್ಣರಿಗೆ ಗಂಟಲಿನಲ್ಲಿ ಹುಣ್ಣು ಕಾಣಿಸಿಕೊಂಡಿತ್ತು. ಆ ವಿಷಯ ತಿಳಿದಾಗ ಗೋಲಾಪ್ ಮಾ ವ್ಯಾಕುಲಗೊಂಡಳು. ಶ್ರೀರಾಮಕೃಷ್ಣರ ಬಳಿ ಬಂದು, "ನನಗೆ ಕಲ್ಕತ್ತದಲ್ಲಿ ಒಬ್ಬರು ತಜ್ಞ ಡಾಕ್ಟರರ ಪರಿಚಯವಿದೆ. ನೀವು ಅವರ ಹತ್ತಿರ ಪರೀಕ್ಷೆ ಮಾಡಿಸಿಕೊಳ್ಳಬೇಕು" ಎಂದು ಕೋರಿಕೊಂಡಳು. ಶ್ರೀರಾಮಕೃಷ್ಣರು ಸಂತೋಷದಿಂದ ಒಪ್ಪಿ, "ಆಗಲಿ,

ನಾಳೆಯೇ ಹೋಗೋಣ" ಎಂದರು. ಅಂತೆಯೇ ಮರುದಿನ ಬೆಳಿಗ್ಗೆ ಗೋಲಾಪ್ ಮಾ, ಲಾಟು ಮತ್ತು ಕಾಳೀಪ್ರಸಾದ ಈ ಮೂವರೊಂದಿಗೆ ದೋಣಿಯಲ್ಲಿ ಹೋದರು. ಆ ಡಾಕ್ಟರು ಶ್ರೀರಾಮಕೃಷ್ಣರನ್ನು ಪರೀಕ್ಷೆ ಮಾಡಿ ಕೆಲವು ಔಷಧಗಳನ್ನು ನೀಡಿದರು. ವಾಪಸು ಬರುವಾಗ ಅಪರಾಹ್ನವಾಗಿಬಿಟ್ಟಿತ್ತು. ಎಲ್ಲರಿಗೂ ಹೊಟ್ಟೆ ಚುರುಗುಟ್ಟ ಲಾರಂಭಿಸಿತ್ತು. "ಏನಾದರೂ ಕೊಂಡು ತಿನ್ನೋಣ" ಎಂದು ಶ್ರೀರಾಮಕೃಷ್ಣರು ಸೂಚಿಸಿದರು. ಆದರೆ ಅವರ ಪೈಕಿ ಹಣವಿದ್ದದ್ದು ಗೋಲಾಪಳ ಬಳಿ ಮಾತ್ರ—ಅದೂ ನಾಲ್ಕೇ ನಾಲ್ಕು ಪೈಸೆ! ಆದರಿಂದೇನಾದೀತು! ಆದರೂ ಶ್ರೀರಾಮಕೃಷ್ಣರು "ಅದರಲ್ಲೇ ಏನಾದರೂ ತಿಂಡಿ ತಾ" ಎಂದು ಕಾಳೀಪ್ರಸಾದನನ್ನು ಕಳಿಸಿದರು. ಅವನು ಬಾರಾ ನಾಗೋರಿನ ಅಂಗಡಿಯೊಂದರಿಂದ ಒಂದಿಷ್ಟು ಮಿಠಾಯಿ ತಂದ. ಶ್ರೀರಾಮಕೃಷ್ಣರು ಅಷ್ಟನ್ನೂ ತಿಂದುಬಿಟ್ಟು, ಗಂಗೆಯ ನೀರು ಕುಡಿದು, "ಆಹ್, ಹೊಟ್ಟೆ ತುಂಬಿತು! ನಾನು ತೃಪ್ತನಾದೆ!" ಎಂದು ಉದ್ಗರಿಸಿದರು. ಅವರು ಹಾಗೆಂದದ್ದೇ ತಡ, ಈ ಮೂವರ ಹಸಿವೂ ಇಂಗಿಹೋಗಿ, ಹೊಟ್ಟೆ ಭರ್ತಿಯಾದಂತೆನಿಸಿತ್ತು! 'ಇದೇ ನಾಶ್ಚರ್ಯ! ಇದು ಹೇಗಾಯಿತು?' ಎಂದು ಆಲೋಚಿಸುತ್ತ ಅವರು ಚಕಿತರಾದರು.

ಹಿಂದೆ ದ್ವಾಪರಯುಗದಲ್ಲಿ ಶ್ರೀಕೃಷ್ಣನೂ ಇದೇ ರೀತಿಯಲ್ಲಿ ಲೀಲೆಯೆಸಗಿದ್ದನ್ನು ನಾವು ಬಲ್ಲೆವಲ್ಲವೆ?

ಶಾರದಾದೇವಿಯವರೊಂದಿಗೆ ಜೀವಿಸುವುದೇ ಅವರ ಸಂಗಾತಿಯರ ಪಾಲಿಗೊಂದು ತಪಸ್ಸು. ಶಾರದಾದೇವಿಯವರು ತಮ್ಮ ಪ್ರತಿಯೊಂದು ಕಾರ್ಯದಲ್ಲೂ ತೋರುತ್ತಿದ್ದ ಶ್ರದ್ಧೆ, ಅಚ್ಚುಕಟ್ಟುತನ, ಶಿಸ್ತು-ಸಂಯಮ ಇವನ್ನು ಸನಿಹದಿಂದ ನೋಡುತ್ತ ನೋಡುತ್ತ ಗೋಲಾಪ್ ಅವುಗಳನ್ನು ತಾನೂ ಮೈಗೂಡಿಸಿಕೊಂಡು ಬಂದಳು. ಅದನ್ನು ಕಂಡು ಶಾರದಾದೇವಿಯವರೇ ಒಮ್ಮೆ ಉದ್ಗರಿಸುತ್ತಾರೆ: "ಗೋಲಾಪ್ ಯಾವುದಾದರೊಂದು ಕೆಲಸ ಮಾಡುತ್ತಿದ್ದರೆ, ಧ್ಯಾನದಲ್ಲಿ ಮುಳುಗಿದ್ದಾಳೋ ಎಂಬಂಥ ನಿಶ್ಚಲ ಮನಸ್ಸಿನಿಂದ ಮಾಡುತ್ತಾಳೆ. ಅಂಥ ತನ್ಮಯತೆ ಅವಳದು."

ನಿಜಕ್ಕೂ ಗೋಲಾಪ್ ಮಾ ಜಪಧ್ಯಾನಗಳಲ್ಲಿ ಪರಿಣತಳಾಗಿದ್ದಳು. "ಶ್ರೀರಾಮಕೃಷ್ಣರ ಕೃಪೆಯಿಂದ ನನಗೆ ಧ್ಯಾನಕಾಲದಲ್ಲಿ ನನ್ನ ಇಷ್ಟದೇವತೆ ತಾರಾದೇವಿಯ ನೇರ ದರ್ಶನ ಲಭಿಸಿದೆ" ಎಂದು ಅವಳೇ ಹೇಳಿಕೊಳ್ಳುತ್ತಾಳೆ. ಒಮ್ಮೆ ಶಾರದಾದೇವಿಯವರು ಆಕೆಯ ಜಪಸಿದ್ಧಿಯ ಬಗ್ಗೆ ಹೇಳುತ್ತಾರೆ:

"ಗೋಲಾಪ್-ಯೋಗಿನ್ ಇಬ್ಬರೂ ಅದೆಷ್ಟು ಧ್ಯಾನ ಮಾಡಿದ್ದಾರೆ! ಜಪದ ಮೂಲಕವೇ ಗೋಲಾಪ್ ಬೆಳಕು ಪಡೆದುಕೊಂಡಿದ್ದಾಳೆ."

ಇನ್ನೊಮ್ಮೆ ಅವರೆನ್ನುತ್ತಾರೆ: "ಗೋಲಾಪಳಿಗೆ ಇದೇ ಕಡೆಯ ಜನ್ಮ."

# ಶಿಷ್ಯ ಶಿಕ್ಷಣ-ಪರೀಕ್ಷಣ ೧೯

ಶ್ರೀರಾಮಕೃಷ್ಣರು ಯಾವ ರೀತಿಯಲ್ಲಿ ತಮ್ಮ ಶಿಷ್ಯರಿಗೆ ಅವರವರ ಸಾಮರ್ಥ್ಯ, ಅಗತ್ಯ, ಹಿನ್ನೆಲೆಗಳಿಗೆ ತಕ್ಕಂತೆ ಆಧ್ಯಾತ್ಮಿಕ, ಲೌಕಿಕ—ಎರಡೂ ಬಗೆಯ ಶಿಕ್ಷಣ ನೀಡುತ್ತಿದ್ದರು ಎಂಬುದಕ್ಕೆ ಈಗಾಗಲೇ ಅಸಂಖ್ಯಾತ ನಿದರ್ಶನಗಳನ್ನು ನೋಡಿದ್ದೇವೆ. ಆದರೂ ಅವರ ಗುರುಶಕ್ತಿಯನ್ನಾಗಲಿ, ಅವರ ವ್ಯಕ್ತಿತ್ವದ ವೈವಿಧ್ಯವನ್ನಾಗಲಿ ಸಂಪೂರ್ಣವಾಗಿ ತಿಳಿದಂತಾಗಲಿಲ್ಲ. ಈಗ ಅವುಗಳನ್ನು ಮತ್ತಷ್ಟು ವಿವರವಾಗಿ ಅರಿತುಕೊಳ್ಳುವ ಪ್ರಯತ್ನ ಮಾಡೋಣ.

ಶಿಷ್ಯರ ಶಿಕ್ಷಣದ ವಿಚಾರದಲ್ಲಿ ಶ್ರೀರಾಮಕೃಷ್ಣರ ಧೋರಣೆಯೆನ್ನುವುದು 'ಲಘು-ಬಿಗಿ'ಗಳ ವಿಶಿಷ್ಟ ಮಿಶ್ರಣ—ಒಮ್ಮೆ ಲಘು, ಒಮ್ಮೆ ಬಿಗಿ. ಕೆಲವೊಮ್ಮೆ ಅವರು ಶಿಸ್ತಿನ ತಂದೆಯಂತೆ ಕಠಿಣರಾಗಬಲ್ಲವರಾಗಿದ್ದರು. ಆದರೆ ಸಾಮಾನ್ಯವಾಗಿ ಅವರ ವರ್ತನೆ ಮಮತೆಯ ಮಾತೆಯಂತೆ. ಮಗು ಸಂತೋಷದಿಂದಿರಬೇಕು, ಆಯುರಾರೋಗ್ಯಭಾಗ್ಯವಂತನಾಗಬೇಕು ಎಂಬುದೊಂದೇ ತಾಯ ಹೃದಯದ ಹಂಬಲ. ಅದು ಕೈಕಾಲು ಕೆಸರು ಮಾಡಿಕೊಂಡು ಬಂದು ತನ್ನ ಬಟ್ಟೆಯನ್ನೂ ಕೊಳೆ ಮಾಡಿದರೂ ಅವಳಿಗೆ ಬೇಸರವಿಲ್ಲ. ತನ್ನಲ್ಲಿ ವಿಶ್ವಾಸವಿರಿಸಿ, ನಗುನಗುತ್ತ ಆಟವಾಡಿಕೊಂಡಿದ್ದರೆ ಸಾಕು, ಅವಳಿಗೆ ಇನ್ನಾವ ಪ್ರತಿಫಲವೂ ಬೇಡ.

ಶ್ರೀರಾಮಕೃಷ್ಣರು ತಮ್ಮ ಶಿಷ್ಯರಿಗಾಗಿ ಏನು ಬೇಕಾದರೂ ಮಾಡಲು ಸಿದ್ಧರಾಗಿದ್ದರು; ಆದರೆ ಅವರಿಂದ ಒಂದಿಷ್ಟು ಪ್ರಮಾಣದ ಕನಿಷ್ಠ ಪ್ರಯತ್ನವನ್ನೂ ನಿರೀಕ್ಷಿಸುತ್ತಿದ್ದರು. ಸ್ವತಃ ಶ್ರೀರಾಮಕೃಷ್ಣರು ತಮ್ಮ ತಾರುಣ್ಯದಲ್ಲೂ ಅನಂತರವೂ ನಡೆಸಿದ ಸಾಧನೆಗಳ ತೀವ್ರತೆ ಎಂಥದು! ಅಂತಹ ಸಾಧನೆಯ ವರದಿಗಳು ಆಧ್ಯಾತ್ಮಿಕ ಇತಿಹಾಸದಲ್ಲೇ ಬೇರಾವ ಸಾಧಕನ ಜೀವನದಲ್ಲೂ ದಾಖಲಾಗಿಲ್ಲ. ತತ್ಫಲವಾಗಿ ತಾವು ಗಳಿಸಿದ್ದನ್ನು ಎಲ್ಲರಿಗೂ ಮುಕ್ತಹಸ್ತದಿಂದ ನೀಡಲು ಅವರು ಉತ್ಸುಕರಾಗಿದ್ದರು. ಶಿಷ್ಯರಿಗೆ ಅವರೆನ್ನುತ್ತಿದ್ದರು: "ನಾನು ಸಾಧನೆ ಮಾಡಿದ್ದರಲ್ಲಿ ನೀವು ಹದಿನಾರನೆಯ ಒಂದು ಭಾಗದಷ್ಟು ಮಾಡಿದರೂ ಸಾಕು, ನೀವು ಖಂಡಿತವಾಗಿ ಗುರಿ ಸೇರುತ್ತೀರಿ" ಎಂದು. ಆದರೆ ಇಷ್ಟು ಪ್ರಯತ್ನವನ್ನಂತೂ ಮಾಡದೆ ವಿಧಿಯಿಲ್ಲ. ಏಕೆ, ಶ್ರೀರಾಮಕೃಷ್ಣರು ಅದನ್ನೂ ಮಾಫಿ ಮಾಡಬಹುದಲ್ಲ? ಒಮ್ಮೆ ಒಬ್ಬ ಕೇಳುತ್ತಾನೆ: "ನೀವು ಸ್ಪರ್ಶಮಾತ್ರದಿಂದಲೇ ಒಬ್ಬನನ್ನು ಪರಿಪೂರ್ಣನನ್ನಾಗಿಸಬಲ್ಲಿರಿ. ಹಾಗಿದ್ದರೂ ಏಕೆ ಅದನ್ನು ಮಾಡಲೊಲ್ಲಿರಿ?" ಅದಕ್ಕೆ ಅವರೆನ್ನುತ್ತಾರೆ, "ಹೌದಪ್ಪ, ಮಾಡಬಹುದು. ಆದರೆ ಆ ಮನುಷ್ಯನಿಗೆ ಅದನ್ನು ಉಳಿಸಿಕೊಳ್ಳಲು ಸಾಧ್ಯವಾಗುವುದಿಲ್ಲ. ತನಗೆ ಸಿಕ್ಕಿದ್ದನ್ನು ದಕ್ಕಿಸಿಕೊಳ್ಳಲು ಮೊದಲು ಅವನು ಶಕ್ತಿ ಪಡೆದುಕೊಂಡು ಸಿದ್ಧನಾಗಿರಬೇಕು."

ಶ್ರೀರಾಮಕೃಷ್ಣರು ತಮ್ಮ ಭಕ್ತರನ್ನು ಎರಡು ವರ್ಗಗಳಾಗಿ ವಿಂಗಡಿಸಿದ್ದರು—ಸರ್ವಸಂಗ ಪರಿತ್ಯಾಗ ಮಾಡಿ ವಿರಕ್ತ ಜೀವನ ನಡೆಸಲು ಬೇಕಾದ ಸತ್ತ್ವಗುಣ ಸಂಪನ್ನರಾದ ತರುಣಶಿಷ್ಯರದು ಮೊದಲ ವರ್ಗ; ಇಂಥವರ ಸಂಖ್ಯೆ ಬೆರಳೆಣಿಕೆಯಷ್ಟು ಮಾತ್ರವೇ. ಗೃಹಸ್ಥರದು, ಅಥವಾ ಮುಂದೆ ಗೃಹಸ್ಥರಾಗಲಿರುವವರದು ಇನ್ನೊಂದು

ವರ್ಗ. ಇದರಲ್ಲಿ ಯುವಕರು, ಪ್ರೌಢರು, ವಯಸ್ಕರು ಎಲ್ಲರೂ ಸೇರುತ್ತಾರೆ. ಈ ಎರಡೂ ವರ್ಗದವರಿಗೂ ಶ್ರೀರಾಮಕೃಷ್ಣರ ಬೋಧನೆ ಬೇರೆ ಬೇರೆ ರೀತಿಯದು. ಭಾವೀ ಸಂನ್ಯಾಸಿಗಳಿಗೆ 'ಅಸಿಧಾರಾ ವ್ರತ' (ಕತ್ತಿಯಲಗಿನ ಮೇಲೆ ನಡೆಯುವಂತಹ ವ್ರತ). ಆದರೆ ಉಳಿದವರಿಗೆ ಅಂತಹ ಕಟ್ಟುನಿಟ್ಟಿನ ನಿಯಮ ನಿರ್ಬಂಧಗಳೇನೂ ಇರಲಿಲ್ಲ. ಇವರಿಗೆ 'ಮಾನಸಿಕ ತ್ಯಾಗ'ವನ್ನಷ್ಟೇ ಬೋಧಿಸುತ್ತಿದ್ದರು ಶ್ರೀರಾಮಕೃಷ್ಣರು. ಭೋಗಾಭಿಲಾಷೆಯಿರುವವರಿಗೆ ಅವರೆಂದೂ "ಪ್ರಾಪಂಚಿಕ ಸುಖವನ್ನು ಬಯಸುವುದು ತಪ್ಪು; ಆ ಬಯಕೆಯನ್ನು ಬಿಟ್ಟುಬಿಡು" ಎಂದು ಹೇಳಿದವರಲ್ಲ. ಬದಲಾಗಿ ಅವರೆನ್ನುತ್ತಿದ್ದರು, "ಹೋಗು, ಬೇಕೆಂಬಷ್ಟು ಸುಖವನ್ನು ಅನುಭವಿಸು. ಅದಕ್ಕಾಗಿಯೇ ಜಗನ್ಮಾತೆ ಈ ಜಗತ್ತನ್ನು ಸೃಷ್ಟಿಸಿದ್ದಾಳೆ. ಆದರೆ ಸುಖಿಸುತ್ತಿರುವಾಗ ನೆನೆಪಿಟ್ಟುಕೊ, ಈ ಭೋಗ ನಿನಗೆ ದೊರೆತದ್ದು ಅವಳ ಕೃಪೆಯಿಂದಲೇ ಅಂತ. ಸುಖದಲ್ಲಿ ಅವಳನ್ನೆಂದಿಗೂ ಮರೆಯಬೇಡ." ಹೀಗೆ ಭಗವತಿಯ ಸ್ಮರಣೆ ಮಾಡುತ್ತ ಮಾಡುತ್ತ ವ್ಯಕ್ತಿಗೆ ಭೋಗಾಕಾಂಕ್ಷೆ ತನ್ನಷ್ಟಕ್ಕೇ ಬಿಟ್ಟುಹೋಗುತ್ತದೆ ಎಂಬುದು ಅವರು ಕಂಡುಕೊಂಡಿದ್ದ ವಿಷಯ.

ಬೋಧನೆಯನ್ನರಸಿ ತಮ್ಮಲ್ಲಿಗೆ ಯಾರೇ ಬರಲಿ, ಅವರ ಮನಸ್ಸಿನ ಸ್ಥಿತಿಯನ್ನು ಶ್ರೀರಾಮಕೃಷ್ಣರು ಒಮ್ಮೆಗೇ ನಿಖರವಾಗಿ ಕಂಡುಕೊಂಡು, ಅನಂತರ ಸೂಕ್ತ ಮಾರ್ಗದರ್ಶನ ಮಾಡುತ್ತಿದ್ದರು. ಅವರ ಬೋಧನಾ ವಿಧಾನವೆಂಬುದು ಎಷ್ಟು ವಿಶಿಷ್ಟವೂ ಪರಿಣಾಮಕಾರಿಯೂ ಆಗಿರುತ್ತಿತ್ತು ಎಂಬುದಕ್ಕೆ ಒಂದೆರಡು ಉದಾಹರಣೆಗಳು:

ಮಣಿಮಲ್ಲಿಕನ ಸಂಬಂಧಿಯಾದ ಒಬ್ಬ ಹೆಂಗಸು ಶ್ರೀರಾಮಕೃಷ್ಣರಲ್ಲಿ ತುಂಬ ಭಕ್ತಿಯಿಂದಿದ್ದಳು. ಅವಳಿಗೆ ಸಾಧನೆ ಮಾಡುತ್ತ ಮುಂದುವರಿಯಬೇಕೆಂಬ ಪ್ರಾಮಾಣಿಕ ಹಂಬಲವೇನೋ ಇತ್ತು. ಆದರೆ ಧ್ಯಾನಕ್ಕೆ ಕುಳಿತೊಡನೆ ಏನೋ ಚಿಂತೆ ಹುಟ್ಟಿಕೊಂಡು ಮನಸ್ಸು ಚಂಚಲವಾಗಿಬಿಡುತ್ತಿತ್ತು. ತನ್ನ ಮನಸ್ಸನ್ನು ಸ್ಥಿರಗೊಳಿಸುವ ಉಪಾಯಗಾಣದೆ, ಖಿನ್ನಳಾಗಿ ಶ್ರೀರಾಮಕೃಷ್ಣರಲ್ಲಿ ಕಷ್ಟವನ್ನು ತೋಡಿಕೊಂಡಳು. ಅವಳನ್ನು ಗಮನಿಸಿದೊಡನೆ ಅವರಿಗೆ ಆಕೆಯ ಚಾಂಚಲ್ಯದ ಕಾರಣ ಗೋಚರವಾಯಿತು. ಅವಳು ಯಾರನ್ನೋ ಬಹಳವಾಗಿ ಪ್ರೀತಿಸುತ್ತಿದ್ದಾಳೆ, ಅವಳ ಮನಸ್ಸು ಆ ವ್ಯಕ್ತಿಯಲ್ಲೇ ನೆಟ್ಟುಹೋಗಿದೆ ಎಂದರಿತು, "ನಿನ್ನ ಮನಸ್ಸನ್ನು ತುಂಬಿರುವ ಆ ವ್ಯಕ್ತಿ ಯಾರು ?" ಎಂದು ಕೇಳಿದರು. ಆಗ ಅವಳು, ತನ್ನ ತಮ್ಮನ ಕಿರಿವಯಸ್ಸಿನ ಮಗನೊಬ್ಬನನ್ನು ಬಹುವಾಗಿ ಪ್ರೀತಿಸುತ್ತಿರುವ, ಆತನನ್ನು ಲಾಲಿಸಿ ಪೋಷಿಸುತ್ತಿರುವ ವಿಷಯವನ್ನು ಹೊರಗೆಡವಿದಳು. ಅದಕ್ಕೆ ಶ್ರೀರಾಮಕೃಷ್ಣರು, "ಒಳ್ಳೆಯದು. ನೀನು ಅವನನ್ನು ಹಾಗೆಯೇ ಪ್ರೀತಿಸು, ಅಡ್ಡಿಯಿಲ್ಲ. ಆದರೆ ಅವನು ಸಾಕ್ಷಾತ್ ಬಾಲಗೋಪಾಲ, ಭಗವಂತ ಎಂಬ ದೃಷ್ಟಿಯಿಂದ ನೋಡು; ಅವನಿಗೆ ಏನೇನು ಸೇವೆ-ಉಪಚಾರ ಮಾಡುತ್ತೀಯೋ ಎಲ್ಲವನ್ನೂ ಪರಮಾತ್ಮನಿಗೆ ಸಲ್ಲಿಸುತ್ತಿರುವ ಸೇವೆ ಎನ್ನುವ ಭಾವದಿಂದ, ಅಷ್ಟೇ ಭಕ್ತಿಯಿಂದ ಮಾಡುತ್ತ ಬಾ. ಭಾವದಂತೆ ಲಾಭ!" ಎಂದು ಬೋಧಿಸಿದರು. ಆ ಮಾತನ್ನು ಅವಳು ಶ್ರದ್ಧೆಯಿಂದ ನಡೆಸುತ್ತ ಬಂದಳು. ತತ್ಫಲವಾಗಿ ಕೆಲದಿನಗಳಲ್ಲೇ ಅವಳಿಗೆ ವಿಶೇಷ ಮಾನಸಿಕ ಉನ್ನತಿ ಉಂಟಾಯಿತಲ್ಲದೆ ಭಾವಸಮಾಧಿಯನ್ನೂ ಅನುಭವಿಸಿದಳು!

ಒಮ್ಮೆ ನರೇಂದ್ರ, ತನಗೆ ಹೊರಗಿನ ಸದ್ದುಗದ್ದಲದಿಂದಾಗಿ ಧ್ಯಾನದಲ್ಲಿ ಮನಸ್ಸು ನಿಲ್ಲುತ್ತಿಲ್ಲ ಎಂದು ದೂರು ತಂದ. ವಿಚಾರಿಸಿದಾಗ, ಅವನ ಮನೆಯ ಸಮೀಪದ

ಕಾರ್ಖಾನೆಯೊಂದರ ಸೈರನ್ನಿನ ಕೂಗಿನಿಂದಾಗಿ ಅವನಿಗೆ ಈ ತೊಂದರೆಯುಂಟಾಗಿರುವುದು ಎಂದು ತಿಳಿಯಿತು. ಆಗ ಶ್ರೀರಾಮಕೃಷ್ಣರು ಆ ಸೈರನ್ನಿನ ಕೂಗಿನ ಮೇಲೆಯೇ ಮನಸ್ಸನ್ನು ಏಕೀಕರಿಸುವಂತೆ ಸಲಹೆ ನೀಡಿದರು. ನರೇಂದ್ರ ಹಾಗೆಯೇ ಮಾಡಿದ. ದೀರ್ಘವಾದ ಆ ಸಿಳ್ಳಿನ ಶಬ್ದದ ಮೇಲೆ ಪೂರ್ಣ ಗಮನ ಹರಿಸಿ, ಮನಸ್ಸನ್ನು ಏಕಾಗ್ರಗೊಳಿಸುತ್ತಿದ್ದ. ಬಳಿಕ ಅದು ಆತನ ಧ್ಯಾನವಸ್ತುವಿನ ಕಡೆಗೆ—ಭಗವಂತನೆಡೆಗೆ—ಸುಲಭವಾಗಿ ಹರಿಯುತ್ತಿತ್ತು.

ಶಿಷ್ಯರ ದುರಭ್ಯಾಸಗಳನ್ನು ದೂರ ಮಾಡುವಲ್ಲಿ ಅವರು ಅನುಸರಿಸುತ್ತಿದ್ದ ಉಪಾಯ ಎಂಥದು ಎನ್ನುವುದಕ್ಕೆ ಅವರೇ ಹೇಳುತ್ತಿದ್ದ ದೃಷ್ಟಾಂತವೊಂದನ್ನು ನೋಡಬಹುದು. ಒಬ್ಬ ಮನುಷ್ಯನಿಗೆ ಅತಿಯಾಗಿ ಅಫೀಮು ಸೇದುವ ಚಟ. ಅದರಿಂದ ಪಾರಾಗಲು ಆತ ಒಬ್ಬ ವೈದ್ಯನ ಸಲಹೆ ಕೇಳಿದ. ಆಗ ಆ ವೈದ್ಯನೆಂದ, "ನೀನು ಅದನ್ನು ಬಿಟ್ಟುಬಿಡುವ ಪ್ರಯತ್ನವನ್ನೇನೂ ಮಾಡಬೇಡ. ಆದರೆ ಹೀಗೆ ಮಾಡು: ಒಂದು ಸೀಮೆಸುಣ್ಣದ ತುಂಡು ತೆಗೆದುಕೊ. ದಿನಾಲೂ ಅದನ್ನು ತಕ್ಕಡಿಯ ಒಂದು ತಟ್ಟೆಯಲ್ಲಿರಿಸಿ ಇನ್ನೊಂದು ತಟ್ಟೆಯಲ್ಲಿ ಅದರಷ್ಟೇ ಅಫೀಮು ತೆಗೆದುಕೊಂಡು, ಅಷ್ಟನ್ನೇ ಸೇವಿಸುತ್ತ ಬಾ. ಆದರೆ ತೂಕ ಮಾಡುವುದಕ್ಕೆ ಮೊದಲು ಸೀಮೆಸುಣ್ಣದಿಂದ ಒಂದು ಗೆರೆ ಎಳೆಯಬೇಕು, ಅಷ್ಟೆ." ಆ ಮನುಷ್ಯ ಹಾಗೇ ಮಾಡಿಕೊಂಡು ಬಂದ. ಸೀಮೆಸುಣ್ಣ ದಿನದಿನಕ್ಕೂ ಸವೆದಹಾಗೆ ಅಫೀಮಿನ ಪ್ರಮಾಣವೂ ಕಡಿಮೆಯಾಯಿತು. ಆರು ತಿಂಗಳಾಗುವಷ್ಟರಲ್ಲಿ ಸೀಮೆಸುಣ್ಣ ಪೂರ್ತಿ ಸವೆದುಹೋಯಿತು. ಆ ಹೊತ್ತಿಗೆ ಅವನ ಚಟವೂ ಬಿಟ್ಟುಹೋಯಿತು.

ಇನ್ನು ಕೆಲವೊಮ್ಮೆ ಅವರು ಒಂದು ಮಾತನ್ನೂ ಆಡದೆಯೇ ಶಿಷ್ಯರ ದೋಷಗಳನ್ನು ತಿದ್ದುತ್ತಿದ್ದರು. ಅವರ ಶಿಷ್ಯರಲ್ಲೊಬ್ಬ ಇನ್ನೂ ಹದಿನೈದು-ಹದಿನಾರು ವರ್ಷದ ಹುಡುಗ—ಆಗಲೇ ನಶ್ಯದ ಚಾಳಿ ಬೆಳೆಸಿಕೊಂಡಿದ್ದ. ಶ್ರೀರಾಮಕೃಷ್ಣರಿಗೆ ಈ ವಿಷಯ ತಿಳಿಯಿತು. ಆದರೆ ಅವರು ಅವನೆದುರು ಅದರ ಪ್ರಸ್ತಾಪವನ್ನೇ ಎತ್ತಲಿಲ್ಲ. ಬದಲಾಗಿ, ಒಮ್ಮೆ ಆತನಿಗೆ ಒಂದು ದಿನವಿಡೀ ತಮ್ಮೊಂದಿಗೆ ಇರುವಂತೆ ಹೇಳಿದರು. ಆತ ಅದ ಕ್ಕೊಪ್ಪಿಕೊಂಡು ಬಂದ. ನಶ್ಯದ ಡಬ್ಬಿ ಜೇಬಿನಲ್ಲಿ ಅಡಗಿತ್ತು. ಶ್ರೀರಾಮಕೃಷ್ಣರು ಅವನಿಗೆ ಯಾವುದೋ ಕೆಲಸ ಹೇಳಿ ಕುಳ್ಳಿರಿಸಿದರು. ಅದು ಮುಗಿಯುತ್ತಿದ್ದಂತೆಯೇ ಆತ ಅಲ್ಲಿಂದೆದ್ದು ಹೊರಗೋಡಲು ನೋಡಿದ—ಗೋಡೆಯ ಹಿಂದೆಯೋ, ಪೊದೆಯ ಸಂದಿಯಲ್ಲೋ ಅಡಗಿಕೊಂಡು ಒಂದು ಚಿಟಿಕೆ ನಶ್ಯವೇರಿಸಿ, ಚಡಪಡಿಸುತ್ತಿರುವ ಜೀವಕ್ಕೆ ಸಮಾಧಾನ ತಂದುಕೊಳ್ಳುವ ಆತುರ. ಆದರೆ ಆ ಹೊತ್ತಿಗೆ ಸರಿಯಾಗಿ ಶ್ರೀರಾಮಕೃಷ್ಣರು ಅವನಿಗೆ ಮತ್ತೊಂದು ಅವಸರದ ಕೆಲಸ ಒಪ್ಪಿಸಿದರು. ಆ ದಿನವೆಲ್ಲ ಹೀಗೆಯೇ ಆಗಿಹೋಯಿತು—ಒಂದಲ್ಲ ಒಂದು ಕೆಲಸ. ಕಡೆಗೂ ಅವನಿಗೆ ತನ್ನ ಆಶೆಯನ್ನು ಈಡೇರಿಸಿಕೊಳ್ಳಲು ಸಾಧ್ಯವೇ ಆಗಲಿಲ್ಲ. ಅದೆಂಥ ಒದ್ದಾಟ, ಅದೆಂಥ ತಳಮಳ ಎಂಬುದನ್ನು ಅನುಭವಿಸಿದವರೇ ಹೇಳಬಲ್ಲರು. ಅವನಿಗೆ ಗೊತ್ತಾಗಿಹೋಯಿತು—ಶ್ರೀರಾಮಕೃಷ್ಣರಿಗೆ ತನ್ನ ಗುಟ್ಟು ತಿಳಿದು ಹೋಗಿದೆ, ತನಗೆ ಬುದ್ಧಿ ಕಲಿಸುವುದಕ್ಕಾಗಿಯೇ ಹೀಗೆ ಮಾಡಿದ್ದಾರೆ ಎಂದು. ಆತನಿಗೆ ತುಂಬ ನಾಚಿಕೆಯಾಯಿತು. ಜೊತೆಗೆ ಅವರ ಶಕ್ತಿಯನ್ನೂ ತನ್ನ ಮೇಲಿನ ಪ್ರೀತಿಯನ್ನೂ ಊಹಿಸಿ ವಿಸ್ಮಯಗೊಂಡ. ಅಂತೂ ಆ ದಿನದಿಂದಲೇ ಅವನ ಆ ಚಾಳಿ ತೊಲಗಿಹೋಯಿತೆಂಬುದು ಗಮನೀಯ ಅಂಶ.

ಶ್ರೀರಾಮಕೃಷ್ಣರ ಈ ಬಗೆಯ ಉಪಾಯಗಳು ಗಿರೀಶ ಮತ್ತು ಕಾಳೀಪದರ ವಿಷಯದಲ್ಲಿ ಹೇಗೆ ಯಶಸ್ವಿಯಾದುವು ಎಂಬುದನ್ನು ಆದಾಗಲೇ ನೋಡಿದ್ದೇವೆ.

ಶ್ರೀರಾಮಕೃಷ್ಣರು ಯಾವ ವಿಷಯಕ್ಕೂ ಬೇಸರಿಸುತ್ತಿರಲಿಲ್ಲ; ಶಿಷ್ಯರ ಯಾವ ತಪ್ಪನ್ನಾದರೂ ಅವರು ಕ್ಷಮಿಸಲು ಸಿದ್ಧರಾಗಿದ್ದರು. ಆದರೆ ಯಾರಾದರೂ ಜೋಲು ಮೋರೆ ಹಾಕಿಕೊಂಡರೆ ಮಾತ್ರ ಸಹಿಸುತ್ತಿರಲಿಲ್ಲ. ಸದಾ ಪ್ರಫುಲ್ಲವದನರಾಗಿರುವಂತೆ ಅವರು ಶಿಷ್ಯರಿಗೆ ಬೋಧಿಸುತ್ತಿದ್ದರು. "ಆನಂದಮಯಿ ಭಗವತಿಯ ಶಿಶುವಾದವನು ಸದಾ ಆನಂದದಿಂದಲೇ ಇರಬೇಕು. ಇತರರಿಗೆ ನಗುಮುಖ ತೋರಿಸುವ ಶಕ್ತಿಯಿಲ್ಲ ದವನು ತನ್ನ ಮನಸ್ಥಿತಿ ಸುಧಾರಿಸುವವರೆಗೆ ಕೋಣೆಯೊಳಗೆ ಕುಳಿತಿರುವುದೇ ಲೇಸು" ಎನ್ನುತ್ತಿದ್ದರು.

ಶ್ರೀರಾಮಕೃಷ್ಣರು ತಮ್ಮ ಬಳಿಗೆ ಬಂದ ಅನೇಕ ತರುಣರನ್ನೂ ಗೃಹಸ್ಥರನ್ನೂ ಪ್ರೀತಿಯಿಂದ ಸ್ವಾಗತಿಸಿ ತಮ್ಮವರನ್ನಾಗಿ ಮಾಡಿಕೊಂಡ ಅನೇಕ ಪ್ರಸಂಗಗಳನ್ನು ಈವರೆಗೆ ನೋಡುತ್ತ ಬಂದಿದ್ದೇವೆ. ಅವುಗಳನ್ನು ಗಮನಿಸಿದಾಗ, ಅವರು ತಮ್ಮನ್ನು ಭೇಟಿಯಾದ ಪ್ರತಿಯೊಬ್ಬನನ್ನೂ ಹೀಗೆಯೇ ಗೆದ್ದುಕೊಂಡು, ತಮ್ಮ ಶಕ್ತಿಯಿಂದ ಅದ್ಭುತ ಅನುಭವಗಳನ್ನು ಮಾಡಿಸಿಕೊಟ್ಟು, ಅನುಯಾಯಿಯನ್ನಾಗಿಸಿಕೊಳ್ಳುತ್ತಿದ್ದ ರೇನೋ ಎಂಬ ಅಭಿಪ್ರಾಯ ಬರಬಹುದು. ಆದರೆ ಹಾಗೇನಿಲ್ಲ. ಅವರ ದರ್ಶನಕ್ಕಾಗಿ ಬರುತ್ತಿದ್ದವರ ಸಂಖ್ಯೆ ಅಗಣಿತ. ಆದರೆ ಇಷ್ಟೆಲ್ಲ ಜನರ ಪೈಕಿ ಅವರು ತಮ್ಮ ಆಪ್ತರೆಂದು ಗುರುತಿಸಿ ಸೆಳೆದುಕೊಂಡದ್ದು ಕೆಲವೇ ಕೆಲವರನ್ನು.

ಶಿಷ್ಯರನ್ನು ಸ್ವೀಕರಿಸುವ ಮುನ್ನ ಪೂರ್ವಪರೀಕ್ಷೆಗೆ ಒಳಪಡಿಸುವುದಕ್ಕೆ ಶ್ರೀರಾಮ ಕೃಷ್ಣರು ತುಂಬ ಮಹತ್ವ ಕೊಡುತ್ತಿದ್ದರು. ಕಾರಣಾಂತರಗಳಿಂದ ಕೇಶವಸೇನನ ಬ್ರಾಹ್ಮ ಸಮಾಜ ಇಬ್ಭಾಗವಾಗುವಂತಾದ ಸಂದರ್ಭದಲ್ಲಿ ಶ್ರೀರಾಮಕೃಷ್ಣರು ಅವನಿಗೆನ್ನುತ್ತಾರೆ: "ನೀನು ಜನರನ್ನು ಪರೀಕ್ಷೆ ಮಾಡದೆ ಸಿಕ್ಕಸಿಕ್ಕವರನ್ನೆಲ್ಲ ಸೇರಿಸಿಕೊಂಡು ಸಮಾಜವನ್ನು ಬೆಳೆಸಿದ್ದೀಯೆ. ಆದ್ದರಿಂದ ನಿನ್ನ ಸಮಾಜ ಒಡೆದುಹೋಗುವುದರಲ್ಲಿ ಆಶ್ಚರ್ಯ ವೇನಿದೆ? ಆದರೆ ನಾನು ಯಾರನ್ನೂ ಪರೀಕ್ಷೆ ಮಾಡದೆ ಅಂಗೀಕರಿಸುವುದೇ ಇಲ್ಲ."

ತಮ್ಮಲ್ಲಿಗೆ ಬಂದ ಭಕ್ತರನ್ನು ಶ್ರೀರಾಮಕೃಷ್ಣರು ಅವರಿಗೆ ಗೊತ್ತಾಗುವಂತೆಯೂ ಗೊತ್ತಿಲ್ಲದಂತೆಯೂ ಎಷ್ಟೋ ಪ್ರಕಾರವಾಗಿ ಪರೀಕ್ಷೆಗೊಳಪಡಿಸುತ್ತಿದ್ದರು. ಆ ಬಗ್ಗೆ ಆಲೋಚಿಸಿದರೆ ನಮ್ಮ ಆಶ್ಚರ್ಯಕ್ಕೆ ಮಿತಿಯಿರುವುದಿಲ್ಲ. ಅವರಿಗೆ ಇಂತಹ ಅದ್ಭುತ ಸಾಮರ್ಥ್ಯ ಹೇಗಾದರೂ ಬಂದಿರಬಹುದೊ! ಅವರು ಪ್ರಯೋಗಿಸುತ್ತಿದ್ದ ಉಪಾಯ ಗಳ ವಿವರಗಳು ಯಾವ ಗ್ರಂಥದಲ್ಲೂ ಕಾಣಸಿಗುವುದಿಲ್ಲ. ಅಲ್ಲದೆ ಅವರು ಯಾವ ಪುಸ್ತಕವನ್ನಾದರೂ ಓದಿದವರೂ ಅಲ್ಲ; ಅಥವಾ ಯಾರಿಂದಲಾದರೂ ಅವುಗಳನ್ನು ಹೇಳಿಸಿಕೊಂಡು ಕಲಿತದ್ದೂ ಇಲ್ಲ! ಇದು ಅವರ ಸಾಧನೆಗಳ ಫಲವಾಗಿ ದೊರೆತ ಸಿದ್ಧಿಯೆ? ಪೂರ್ವಜನ್ಮಾರ್ಜಿತವಾದ ವಿದ್ಯೆಯೆ? ಉತ್ತರಿಸಬಲ್ಲವರಿಲ್ಲ.

ಸಾಮಾನ್ಯವಾಗಿ ತಮ್ಮಲ್ಲಿಗೆ ಯಾವನೇ ಒಬ್ಬ ವ್ಯಕ್ತಿ ಬರಲಿ, ಒಡನೆಯೇ ಶ್ರೀರಾಮಕೃಷ್ಣರು ಅವನನ್ನು ಒಂದು ವಿಶಿಷ್ಟ ರೀತಿಯಲ್ಲಿ ಚೆನ್ನಾಗಿ ಗಮನಿಸುತ್ತಿದ್ದರು. ಆಗ ತಮ್ಮ ಮನಸ್ಸು ಸ್ವಾಭಾವಿಕವಾಗಿ ಅವನೆಡೆಗೆ ಆಕರ್ಷಿತವಾದರೆ, ಬಳಿಕ ಅವ ನೊಂದಿಗೆ ಧರ್ಮಸಂಬಂಧವಾಗಿ ಏನಾದರೂ ಮಾತಾಡತೊಡಗುತ್ತಿದ್ದರು; ಆಗಾಗ ತಮ್ಮಲ್ಲಿಗೆ ಬಂದುಹೋಗುವಂತೆ ಹೇಳುತ್ತಿದ್ದರು. ದಿನಕಳೆದಂತೆ, ಅವನಿಗೆ ತಿಳಿಯದ

ಹಾಗೆ ಅವನ ಅಂಗಾಂಗರಚನೆ, ಮಾನಸಿಕ ಭಾವ, ಭೋಗಾಸಕ್ತಿಯ ಪ್ರಮಾಣ, ಅವನು ತಮ್ಮನ್ನು ಯಾವ ಭಾವದಿಂದ ನೋಡುತ್ತ ಎಷ್ಟರ ಮಟ್ಟಿಗೆ ಆಕರ್ಷಿತನಾಗಿದ್ದಾನೆ—ಎಂಬೀ ವಿವರಗಳನ್ನೆಲ್ಲ ಗಮನಿಸುತ್ತಿದ್ದರು. ಅವರ ಗ್ರಹಣಶಕ್ತಿ ಎಷ್ಟು ಸೂಕ್ಷ್ಮವೆಂದರೆ, ಆತ ನಾಲ್ಕಾರು ಸಲ ಬಂದುಹೋಗುವಷ್ಟರಲ್ಲಿ ಅವನ ಚಾರಿತ್ರ್ಯ-ವ್ಯಕ್ತಿತ್ವಗಳ ಬಗ್ಗೆ ಅವರೊಂದು ನಿಶ್ಚಿತಾಭಿಪ್ರಾಯಕ್ಕೆ ಬಂದುಬಿಡುತ್ತಿದ್ದರು. ಅನಂತರ, ಅವನ ಅಂತರಂಗಕ್ಕೆ ಸಂಬಂಧಿಸಿದ ನಿಗೂಢ ವಿಷಯವೇನನ್ನಾದರೂ ತಿಳಿದುಕೊಳ್ಳಬೇಕಾದ ಅಗತ್ಯವುಂಟಾದರೆ, ಅದನ್ನು ತಮ್ಮ ಯೋಗಶಕ್ತಿಯ ಮೂಲಕ ತಿಳಿದುಕೊಳ್ಳುತ್ತಿದ್ದರು. ಅವರೊಮ್ಮೆ ತಮ್ಮ ಆಪ್ತಶಿಷ್ಯರ ಮುಂದೆ ಈ ಬಗ್ಗೆ ತಾವಾಗಿಯೇ ಹೇಳುತ್ತಾರೆ:

"ಬ್ರಾಹ್ಮೀಮುಹೂರ್ತದಲ್ಲಿ ನಾನು ಒಬ್ಬಂಟಿಗನಾಗಿರುವಾಗ ಎಷ್ಟೋ ಸಲ ನನ್ನ ಮನಸ್ಸು ನಿಮ್ಮೆಲ್ಲರ ಶ್ರೇಯಸ್ಸಿನ ಚಿಂತನೆಯಲ್ಲಿ ಮುಳುಗಿರುತ್ತದೆ. ನೀವು ಒಬ್ಬೊಬ್ಬರೂ ಎಷ್ಟೆಷ್ಟು ಮುಂದುವರಿದಿದ್ದೀರಿ, ಯಾರ ಹಾದಿಯಲ್ಲಿ ಯಾವ ವಿಘ್ನ ಬಂದೊದಗಿದೆ—ಈ ವಿಷಯಗಳನ್ನೆಲ್ಲ ತಾಯಿ ನನಗೆ ತಿಳಿಸಿಕೊಡುತ್ತಾಳೆ..."

ಆದರೆ ಆ ಸಮಯದಲ್ಲಿ ಮಾತ್ರ ಶ್ರೀರಾಮಕೃಷ್ಣರ ಯೋಗದೃಷ್ಟಿ ತೆರೆದುಕೊಳ್ಳುತ್ತಿತ್ತು, ಇತರ ಸಮಯದಲ್ಲಿ ಅಲ್ಲ ಎಂದರ್ಥ ಮಾಡಿಕೊಳ್ಳಬಾರದು. ಯಾವಾಗ ಬೇಕಾದರೂ ತಮ್ಮ ಮನಸ್ಸು ಇಚ್ಛಾಮಾತ್ರದಿಂದ ಅಂತಹ ಸ್ಥಿತಿಗೇರಬಲ್ಲುದು ಎಂದು ಇತರ ಎಷ್ಟೋ ಸಂದರ್ಭಗಳಲ್ಲಿ ಅವರೇ ಸೂಚಿಸುತ್ತಾರೆ.

ತಮ್ಮ ಸಂದರ್ಶಕನ ಅರ್ಹತೆಯನ್ನು ಅರಿತುಕೊಳ್ಳಲು ಅವರು ಈ ವಿಧಾನವನ್ನು ಅನುಸರಿಸುತ್ತಿದ್ದುದು ಸಾಮಾನ್ಯರ ವಿಷಯದಲ್ಲಿ ಎನ್ನಬಹುದು. ಆದರೆ ಪ್ರಮುಖರಾದ ಅಂತರಂಗ ಭಕ್ತರ ವಿಷಯದಲ್ಲಿ ಇದು ವಿಭಿನ್ನವಾಗಿರುತ್ತಿತ್ತು. ಇಂಥವರನ್ನು ಅವರು ಪ್ರತ್ಯಕ್ಷವಾಗಿ ಭೇಟಿ ಮಾಡುವ ಮೊದಲೇ ತಮ್ಮ ಭಾವಲೋಕದಲ್ಲಿ ಕಂಡಿರುತ್ತಿದ್ದರು. ಮತ್ತು ತಮ್ಮ ಬಳಿಗೆ ಬಂದ ಆ ವ್ಯಕ್ತಿ ಯಾವ ಆಧ್ಯಾತ್ಮಿಕ ಭಾವದವನಾಗಿರುತ್ತಾನೋ—ಉದಾಹರಣೆಗೆ ಅವನು ವಿಷ್ಣುಭಕ್ತನಾಗಿರಬಹುದು, ಕಾಳೀಭಕ್ತನಾಗಿರಬಹುದು, ಅಥವಾ ಅದ್ವೈತತತ್ತ್ವದಲ್ಲಿ ಮನಸ್ಸಿಟ್ಟವನಾಗಿರಬಹುದು—ಅದೇ ಭಾವ ಅವರೊಳಗೆ ತಾನೇತಾನಾಗಿ ಪ್ರಚೋದನೆಗೊಳ್ಳುತ್ತಿತ್ತು. ಅಲ್ಲದೆ ಆತ ಯಾವ ಆಧ್ಯಾತ್ಮಿಕ ಮಟ್ಟದಲ್ಲಿರುತ್ತಿದ್ದನೋ ಅದೇ ಮಟ್ಟಕ್ಕೇ ಅವರ ಮನಸ್ಸು ಏರಿಹೋಗಿ ಅವನ ಅಂತರ್ಯದ ವಿಷಯಗಳನ್ನೆಲ್ಲ ಗ್ರಹಿಸಿಬಿಡುತ್ತಿತ್ತು. ನರೇಂದ್ರನ ಪ್ರಥಮ ಸಂದರ್ಶನ ಇದಕ್ಕೊಂದು ಉದಾಹರಣೆ.

ಭಕ್ತರನ್ನು ಪರೀಕ್ಷೆಮಾಡಲು ಶ್ರೀರಾಮಕೃಷ್ಣರು ನಾಲ್ಕು ಪ್ರಮುಖ ವಿಧಾನಗಳನ್ನು ಅನುಸರಿಸುತ್ತಿದ್ದರು. ಇದರಲ್ಲಿ ಮೊದಲನೆಯದೆಂದರೆ ವ್ಯಕ್ತಿಯ ಶರೀರಲಕ್ಷಣಗಳನ್ನು ಪರೀಕ್ಷಿಸುವುದು. 'ವ್ಯಕ್ತಿಯ ಶರೀರವನ್ನು ನಿರ್ಮಿಸುವುದು ಆತನ ಮನಸ್ಸೇ' ಎಂಬ ಮಾತನ್ನು ವೇದಗಳೂ ಇತರ ಶಾಸ್ತ್ರಗ್ರಂಥಗಳೂ ಘಂಟಾಘೋಷವಾಗಿ ಸಾರಿವೆ. ಆಧುನಿಕ ಮನೋವಿಜ್ಞಾನ-ಶರೀರವಿಜ್ಞಾನಗಳೂ ಕೂಡ, 'ಮನಸ್ಸಿನಲ್ಲುಂಟಾದ ಪ್ರತಿಯೊಂದು ಭಾವನೆಯೂ ಮನುಷ್ಯನ ಮೆದುಳು ಮತ್ತು ಶರೀರದ ಕೆಲವು ವಿಶಿಷ್ಟ ಭಾಗಗಳಲ್ಲಿ ಒಂದೊಂದು ಬಗೆಯ ಗುರುತನ್ನು ಮೂಡಿಸುತ್ತವೆ' ಎಂಬ ಮಾತನ್ನು ಬಹುಮಟ್ಟಿಗೆ ಒಪ್ಪಿಕೊಂಡಿವೆ. 'ಯದ್ಭಾವಂ ತದ್ಭವತಿ' ಎಂಬ ಪ್ರಸಿದ್ಧ ವಾಕ್ಯವನ್ನೂ ಈ ದೃಷ್ಟಿಯಿಂದ ಅರ್ಥೈಸಬಹುದು. ಆದ್ದರಿಂದ ಶ್ರೀರಾಮಕೃಷ್ಣರು ಈ ತತ್ತ್ವದ ಆಧಾ

ರದ ಮೇಲೆ ತಮ್ಮ ಶಿಷ್ಯರನ್ನು ಪರೀಕ್ಷಿಸುತ್ತಿದ್ದುದರಲ್ಲಿ ಹೊಸತನವೇನಿಲ್ಲ ಎನ್ನ ಬಹುದು. ಆದರೆ ಇದರ ಬಗ್ಗೆ ಅವರು ತಮ್ಮದೇ ಆದ ಸಿದ್ಧಾಂತಗಳನ್ನು ವಿವರಿಸಿದಾಗ ಮಾತ್ರ ಶಿಷ್ಯರು ಪರಮಾಶ್ಚರ್ಯಭರಿತರಾಗುತ್ತಿದ್ದರು. ಉದಾಹರಣೆಗೆ ಅವರು ಹೇಳು ತ್ತಿದ್ದರು: "ಕಣ್ಣುಗಳು ಒಬ್ಬೊಬ್ಬನಿಗೆ ಒಂದೊಂದು ಬಗೆಯಾಗಿರುತ್ತವೆ. ಅವು ಕಮಲದ ದಳದಂತಿದ್ದರೆ ವ್ಯಕ್ತಿ ಸದ್ಭಾವನೆಗಳಿಂದ ಕೂಡಿದವನಾಗಿರುತ್ತಾನೆ, ಸಾಧು ಪ್ರವೃತ್ತಿಯುವ ನಾಗಿರುತ್ತಾನೆ, ಗೂಳಿಯ ಕಣ್ಣಿನಂಥವನಲ್ಲಿ ಕಾಮಪ್ರವೃತ್ತಿ ಪ್ರಬಲವಾಗಿರುತ್ತದೆ. ಕಣ್ಣು ಗಳು ಊರ್ಧ್ವಮುಖವಾಗಿದ್ದು ಕೆಂಪೇರಿದ್ದರೆ ಅದು ಯೋಗಿಯ ಲಕ್ಷಣ. ದೇವತೆಯ ಕಣ್ಣುಗಳು ಎನ್ನುವಂಥವೂ ಇವೆ, ಅವು ಅಷ್ಟು ದೊಡ್ಡದಾಗಿರುವುದಿಲ್ಲ; ಆದರೆ ಬಹಳ ನೀಳವಾಗಿರುತ್ತವೆ, ಕಿವಿಗೆ ಹತ್ತಿರವಾಗಿರುತ್ತವೆ. ಸಂಭಾಷಣೆ ನಡೆಸುವಾಗ, ಮಧ್ಯೆಮಧ್ಯೆ ಓರೆನೋಟ ಬೀರುವವರು ಹೆಚ್ಚು ಬುದ್ಧಿವಂತರಾಗಿರುತ್ತಾರೆ." ಶರೀರರಚನೆಯ ವಿಷಯದಲ್ಲಿ ಶ್ರೀರಾಮಕೃಷ್ಣರು ಹೀಗೆನ್ನುತ್ತಾರೆ: "ಭಕ್ತಿವಂತನಾದವನ ದೇಹ ಸಹಜ ವಾಗಿಯೇ ಕೋಮಲವಾಗಿರುತ್ತದೆ. ಕೈಕಾಲುಗಳ ಗಂಟುಗಳು ಬಿಗಿಯಾಗಿರದೆ, ಸುಲಭ ವಾಗಿ ಅಲ್ಲಾಡಿಸಲು ಸಾಧ್ಯವಾಗುತ್ತದೆ. ಆತ ಸಣಕಲನಾಗಿದ್ದರೂ ಮೂಳೆಮೂಳೆ ಯಾಗಿ ಕಾಣುವುದಿಲ್ಲ." ಒಬ್ಬನ ಬುದ್ಧಿವಂತಿಕೆಯೆಂಬುದು ಯಾವ ಕಡೆಗೆ ವಾಲಿದೆ— ಶ್ರೇಯಸ್ಸಿನೆಡೆಗೋ ಇಲ್ಲವೆ ಪ್ರೇಯಸ್ಸಿನೆಡೆಗೋ ಎನ್ನುವುದನ್ನು ಅವರು ಹೀಗೆ ನಿರ್ಣಯಿಸುತ್ತಿದ್ದರು: ಅವನಿಗೆ ತನ್ನ ಮುಂಗೈಯನ್ನು ಹಗುರವಾಗಿರಿಸಿಕೊಳ್ಳಲು ಹೇಳಿ, ಅದನ್ನು ತಮ್ಮ ಕೈಯಿಂದ ತೂಗಿ ನೋಡುತ್ತಿದ್ದರು. ಅದು ಸಾಮಾನ್ಯಕ್ಕಿಂತ ಹಗುರವಾಗಿ ಕಂಡುಬಂದರೆ, ಆತ ಪರಿಶುದ್ಧಮನಸ್ಕ ಎಂಬುದು ಅವರ ನಿರ್ಣಯ.

ಒಮ್ಮೆ ಅವರ ಆಪ್ತ ಶಿಷ್ಯ ಶರಚ್ಚಂದ್ರ ಚಕ್ರವರ್ತಿಯ ತಮ್ಮ ಚಾರುಚಂದ್ರ ಎನ್ನು ವವನು ಅವರನ್ನು ನೋಡಲು ಬಂದ. ಅವನನ್ನು ಕಂಡು ಅವರು ಬಹಳ ಸಂತುಷ್ಟ ರಾದರು. ಆತ್ಮೀಯತೆಯಿಂದ ಮಾತನಾಡಿಸುತ್ತ ಅಧ್ಯಾತ್ಮವಿಷಯವಾಗಿ ಅನೇಕ ಬೋಧನೆಗಳನ್ನಿತ್ತರು. ಅಷ್ಟು ಹೊತ್ತಿಗೆ ಶರಚ್ಚಂದ್ರ ಅಲ್ಲಿಗೆ ಬಂದ. ಆಗ ಶ್ರೀರಾಮಕೃಷ್ಣ ರೆಂದರು: "ಇವನು ನಿನ್ನ ತಮ್ಮ ಅಲ್ಲವೆ ? ಒಳ್ಳೆ ಹುಡುಗ. ನಿನಗಿಂತ ತುಸು ಹೆಚ್ಚು ಬುದ್ಧಿವಂತ. ಎಲ್ಲಿ, ಇವನದು ಸದ್ಬುದ್ಧಿಯೋ ಅಸದ್ಬುದ್ಧಿಯೋ ನೋಡೋಣ—" ಹೀಗೆನ್ನುತ್ತ ಚಾರುಚಂದ್ರನ ಮುಂಗೈಯನ್ನು ತೂಗಿ ನೋಡಿ, "ಹ್ಞೂ, ಪರವಾಗಿಲ್ಲ! ಸದ್ಬುದ್ಧಿಯೇ" ಎಂದು ತಮ್ಮಷ್ಟಕ್ಕೇ ಹೇಳಿಕೊಂಡರು. ಬಳಿಕ ಶರಚ್ಚಂದ್ರನನ್ನು ಕೇಳಿ ದರು, "ಏನಪ್ಪಾ, ಇವನನ್ನೂ ಆಕರ್ಷಿಸಿಬಿಡಲೆ ?" ಎಂದರೆ, 'ಇವನ ಮನಸ್ಸನ್ನೂ ಕೂಡ ನಿನ್ನಂತೆಯೇ ದೇವರ ಕಡೆಗೆ ತಿರುಗಿಸಿಬಿಡಲೆ ?' ಎಂದು. ಶರಚ್ಚಂದ್ರ ತಕ್ಷಣ ಉತ್ತರಿಸಿದ, "ಹಾಗೇ ಮಾಡಿ ಸ್ವಾಮಿ ! ಬಹಳ ಒಳ್ಳೆಯದು." ಆದರೆ ಶ್ರೀರಾಮಕೃಷ್ಣರು ಸ್ವಲ್ಪ ಆಲೋಚನೆ ಮಾಡಿ ಹೇಳಿದರು: "ಬೇಡ, ಒಬ್ಬನನ್ನು (ಶರಚ್ಚಂದ್ರನನ್ನು) ಆದಾ ಗಲೇ ಸೆಳೆದುಕೊಂಡಿದ್ದೇನೆ. ಇನ್ನೊಬ್ಬನನ್ನೂ ಸೆಳೆದುಕೊಂಡುಬಿಟ್ಟರೆ ನಿನ್ನ ತಾಯ್ತಂದೆ ಯರು—ಅದರಲ್ಲೂ ತಾಯಿ—ಬಹಳ ಸಂಕಟಪಡುತ್ತಾರೆ. ಈಗಾಗಲೇ ನಾನು ನನ್ನ ಜೀವನದಲ್ಲಿ ಅನೇಕ ಶಕ್ತಿಯರಿಗೆ (ಎಂದರೆ ಜಗನ್ಮಾತೆಯ ಪ್ರತಿರೂಪರಾದ ತಾಯಂದಿ ರಿಗೆ) ಕೋಪ ಬರಿಸಿದ್ದೇನೆ. ಇನ್ನು ಸಾಕು." ಬಳಿಕ ಅವರು ಚಾರುಚಂದ್ರನಿಗೆ ತಿಂಡಿ ತಿನಿಸುಗಳನ್ನಿತ್ತು ಉಪಚರಿಸಿ, ಇನ್ನೂ ಕೆಲವು ಬೋಧನೆಗಳನ್ನು ನೀಡಿ ಬೀಳ್ಕೊಂಡರು.

ಕೈ ಕಾಲು ಕಣ್ಣುಗಳು ಮಾತ್ರವಲ್ಲದೆ ಇತರೆಲ್ಲ ಅಂಗಾಂಗಗಳ ಆಕೃತಿಗಳೂ,

ಮತ್ತು ನಿದ್ರೆ ಮುಂತಾದ ದೈಹಿಕಕ್ರಿಯೆಗಳೂ ಹೇಗೆ ವ್ಯಕ್ತಿಯ ವಿಶಿಷ್ಟಸ್ವಭಾವಗಳನ್ನು ಪ್ರತಿಬಿಂಬಿಸುತ್ತವೆ ಎಂಬುದನ್ನು ಶ್ರೀರಾಮಕೃಷ್ಣರು ತಮ್ಮ ಶಿಷ್ಯರೆದುರು ವಿವರವಾಗಿ ಬಣ್ಣಿಸುತ್ತಿದ್ದರು. ನರೇಂದ್ರನ ಶರೀರಲಕ್ಷಣಗಳನ್ನು ಪರಿಶೀಲಿಸಿ ಅವರೆನ್ನುತ್ತಾರೆ: "ನಿನ್ನ ಎಲ್ಲ ಅವಯವಗಳೂ ಸುಲಕ್ಷಣವಾಗಿವೆ. ಆದರೆ ಒಂದೇ ದೋಷ. ನೀನು ನಿದ್ರಿಸುವಾಗ ನಿನ್ನ ನಿಃಶ್ವಾಸ ಸ್ವಲ್ಪ ಜೋರಾಗಿರುತ್ತದೆ. ಅಷ್ಟು ಜೋರಾಗಿ ನಿಃಶ್ವಾಸ ಬಿಡುವವರು ಅಲ್ಪಾಯುಗಳಾಗುತ್ತಾರೆ ಎಂಬುದು ಯೋಗಿಗಳ ಅಭಿಮತ."

ಶರೀರದ ಬಾಹ್ಯಲಕ್ಷಣಗಳನ್ನು ಪರಿಶೀಲಿಸುವುದು ಶ್ರೀರಾಮಕೃಷ್ಣರ ಪರೀಕ್ಷಾ ವಿಧಾನದ ಮೊದಲ ಉಪಾಯವಾದರೆ, ಚಲನವಲನಗಳನ್ನು ಗಮನಿಸುವುದರ ಮೂಲಕ ಆತನ ಮಾನಸಿಕ ಸ್ಥಿತಿಯನ್ನು ಕಂಡುಕೊಳ್ಳುವುದು ಎರಡನೆಯ ಉಪಾಯ. ತಮ್ಮಲ್ಲಿಗೆ ಒಬ್ಬ ಹೊಸಬ ಬಂದನೆಂದರೆ, ಕೆಲವು ದಿನಗಳ ಕಾಲ ಅವನನ್ನು ಗೋಪ್ಯವಾಗಿ ಗಮನಿಸಿ ತಮಗೆ ಬೇಕಾದ ಮಾಹಿತಿಯನ್ನು ಪಡೆದುಕೊಳ್ಳುತ್ತಿದ್ದರು. ಅವನನ್ನು ತಮ್ಮ ಆಪ್ತವಲಯಕ್ಕೆ ಸೇರಿಸಿಕೊಳ್ಳಬಹುದು ಎಂದು ತೋರಿದರೆ ಮೆಲ್ಲನೆ ಅವನ ಲೋಪದೋಷಗಳನ್ನು ತಿದ್ದಿ ಸರಿಪಡಿಸಲು ತೊಡಗುತ್ತಿದ್ದರು. ಅಗತ್ಯ ಬಿದ್ದರೆ, ಒಂದು ಮಾತಿನ ಪೆಟ್ಟು ನೀಡಲೂ ಹಿಂಜರಿಯುತ್ತಿರಲಿಲ್ಲ. ಆತ ಮುಂದೆ ಗೃಹಸ್ಥನಾಗುವವನೋ ಸಂನ್ಯಾಸಿಯಾಗುವವನೋ ಎಂದು ಕೂಡ ಆಗಲೇ ಕಂಡುಕೊಂಡು, ತತ್ಪ್ರಕಾರವಾಗಿಯೇ ಬೋಧನೆ ನೀಡುತ್ತಿದ್ದರು. ಆದ್ದರಿಂದ ಆತ ಬಂದಾಗ, ಅವನಿಗೆ ಮದುವೆಯಾಗಿದೆಯೋ ಇಲ್ಲವೋ, ಮನೆಯ ಆರ್ಥಿಕ ಸ್ಥಿತಿಗತಿ ಎಂಥದು, ಒಂದು ವೇಳೆ ಸಂನ್ಯಾಸಿಯಾದನೆಂದರೆ ಅವನ ಸಂಸಾರದ ಭಾರವನ್ನು ಹೊರಲು ಬೇರೆ ಯಾರಾದರೂ ಇದ್ದಾರೆಯೋ ಎಂಬ ವಿಷಯಗಳನ್ನೆಲ್ಲ ಕೇಳಿ ತಿಳಿದುಕೊಳ್ಳುತ್ತಿದ್ದರು.

ವ್ಯಕ್ತಿಯ ಮಾನಸಿಕ ಸ್ವಭಾವವನ್ನು ಸ್ಥೂಲವಾಗಿ ಅರಿತ ತರುವಾಯ ಆತ ಎಷ್ಟರಮಟ್ಟಿಗೆ ಸರಳನೂ ಸತ್ಯನಿಷ್ಠನೂ ಆಗಿದ್ದಾನೆ, ತಾವು ನೀಡಿದ ಬೋಧನೆಗಳನ್ನು ಎಷ್ಟರಮಟ್ಟಿಗೆ ಅರ್ಥ ಮಾಡಿಕೊಂಡು ಅನುಷ್ಠಾನಕ್ಕೆ ತರುತ್ತಿದ್ದಾನೆ ಎಂಬೀ ವಿಷಯಗಳನ್ನು ಕಂಡುಹಿಡಿಯುತ್ತಿದ್ದರು.

ಈ ಸಂಬಂಧವಾಗಿ ಒಂದೆರಡು ಸ್ವಾರಸ್ಯದ ಪ್ರಸಂಗಗಳನ್ನು ನೋಡಬಹುದು.

ಒಮ್ಮೆ ಶ್ರೀರಾಮಕೃಷ್ಣರು ಒಬ್ಬ ಹುಡುಗನೊಂದಿಗೆ ಮಾತನಾಡುತ್ತ ಹೀಗೆಂದರು: "ಏನಪ್ಪಾ, ನನ್ನ ಸೊಂಟದ ಮೇಲೆ ಬಟ್ಟೆ ನಿಲ್ಲುವುದೇ ಇಲ್ಲವಲ್ಲ! ಅದು ಯಾವಾಗ ಬಿದ್ದುಹೋಗುತ್ತದೆ ಎನ್ನುವುದೂ ಗೊತ್ತಾಗುವುದಿಲ್ಲ ನನಗೆ. ಒಳ್ಳೇ ಮುದಿಗೂಬೆಯ ಹಾಗೆ ಬೆತ್ತಲೆ ಅಲೆದಾಡುತ್ತೇನೆ! ಮೊದಮೊದಲು, ನನ್ನನ್ನು ಯಾರು ನೋಡುತ್ತಾರೋ ಎಂಬ ಲಕ್ಷ್ಯವೂ ಇರುತ್ತಿರಲಿಲ್ಲ. ಆದರೆ ಈಚೀಚೆಗೆ, ನೋಡಿದವರು ನಾಚಿಕೆಪಟ್ಟುಕೊಂಡಾರು ಎಂಬ ಕಾರಣಕ್ಕೆ ಒಂದು ಬಟ್ಟೆಯನ್ನು ಬಲವಂತವಾಗಿ ಸುತ್ತಿಕೊಂಡಿರುತ್ತೇನೆ. ಅದಿರಲಿ, ನೀನೂ ನನ್ನ ಹಾಗೆ ಜನಗಳ ಮುಂದೆ ಬೆತ್ತಲೆ ನಿಲ್ಲಬಲ್ಲೆಯಾ?"

"ಸರಿಯಾಗಿ ಹೇಳಲಾರೆ... ಆದರೆ ನೀವು ಅಪ್ಪಣೆ ಮಾಡಿದರೆ ಬಟ್ಟೆಯನ್ನು ಕಳಚಬಲ್ಲೆ."

"ಹೌದೆ? ಹಾಗಾದರೆ ಹೋಗು. ಉಟ್ಟ ಬಟ್ಟೆಯನ್ನು ಕಳಚಿ ತಲೆಯ ಮೇಲೆ ಮುಂಡಾಸಿನ ಹಾಗೆ ಸುತ್ತಿಕೊಂಡು ದೇವಸ್ಥಾನದ ಪ್ರಾಂಗಣದಲ್ಲಿ ಒಂದು ಸುತ್ತು ಬಾ,

ನೋಡೋಣ ?"

"ಅದು ಸಾಧ್ಯವಿಲ್ಲ! ಬೇಕಾದರೆ ನಿಮ್ಮೆದುರಿಗೆ ಮಾತ್ರ ಹಾಗೆ ಮಾಡಬಲ್ಲೆ."

ಶ್ರೀರಾಮಕೃಷ್ಣರು ಮುಗುಳ್ನಕ್ಕು, "ನಿಜ, ಇನ್ನೂ ಎಷ್ಟೋ ಜನ ಹೀಗೇ ಹೇಳುತ್ತಾರೆ" ಎಂದರು.

ಮತ್ತೊಂದು ಸಂದರ್ಭ; ಹುಣ್ಣಿಮೆಯಾದ ಎರಡನೇ ಅಥವಾ ಮೂರನೇ ದಿನ ಇರಬೇಕು, ಒಳ್ಳೇ ಬೆಳದಿಂಗಳ ರಾತ್ರಿ. ಅಂದು ಅನೇಕ ತರುಣರು ದಕ್ಷಿಣೇಶ್ವರದಲ್ಲೇ ಉಳಿದುಕೊಂಡಿದ್ದರು. ಎಲ್ಲರೂ ಮಲಗಿ ಸ್ವಲ್ಪ ಹೊತ್ತಿನ ಮೇಲೆ ಗಂಗಾನದಿಯಲ್ಲಿ ದೊಡ್ಡ ಅಲೆ*ಯೊಂದು ಭೋರ್ಗರೆಯುತ್ತ ಬಂತು. ಆ ಶಬ್ದವನ್ನು ಕೇಳಿ ಶ್ರೀರಾಮಕೃಷ್ಣರು ಎದ್ದು ಉತ್ಸಾಹದಿಂದ, "ಬಾನ್ ಬರುತ್ತಿದೆ, ಬಾನ್ ಬರುತ್ತಿದೆ, ಎಲ್ಲರೂ ಬನ್ನಿರೋ!" ಎನ್ನುತ್ತ ಓಡಿದರು. ಶಾಂತಗಂಭೀರವಾಗಿರುವ ನದೀಜಲ ಬಾನ್ ಬಂದಾಗ ಇದ್ದಕ್ಕಿದ್ದಂತೆ ರುದ್ರರೂಪ ತಾಳುತ್ತದೆ; ಫೇನಬುದ್ಬುಧ ತರಂಗಗಳಿಂದೊಡಗೂಡಿ ಪ್ರಚಂಡ ವೇಗದಿಂದ ದಡಕ್ಕೆ ಬಂದು ಅಪ್ಪಳಿಸುತ್ತದೆ. ಆದರೆ ಈ ದೃಶ್ಯವಿರುವುದು ಒಂದೆರಡು ನಿಮಿಷ ಮಾತ್ರ. ಮಲಗಿದ್ದ ಹುಡುಗರು ಎದ್ದು, ಉಟ್ಟ ಬಟ್ಟೆಗಳನ್ನು ಸರಿಪಡಿಸಿಕೊಂಡು ನದಿಯ ಕಟ್ಟೆಗೆ ಹೋಗುವಷ್ಟರಲ್ಲಿ ಸ್ವಲ್ಪ ತಡವಾಯಿತು. ಓಡೋಡಿ ಬಂದ ಶಿಷ್ಯರು, ಶ್ರೀರಾಮಕೃಷ್ಣರೊಬ್ಬರೇ ಕಟ್ಟೆಯ ಮೇಲೆ ನಿಂತು ಆ ಗಂಭೀರ ಮನೋಹರ ದೃಶ್ಯವನ್ನು ನೋಡುತ್ತ ಬಾಲಕನಂತೆ ಆನಂದದಿಂದ ಕುಣಿದಾಡುತ್ತಿರುವುದನ್ನು ಕಂಡರು. ಅವರಲ್ಲಿ ಕೆಲವರಿಗೆ ಮಾತ್ರ ಬಾನ್‌ನ ನೋಟ ಭಾಗಶಃ ಕಾಣಸಿಕ್ಕಿತು; ಉಳಿದವರಿಗೆ ಅದೂ ಸಿಗಲಿಲ್ಲ. ನೆರೆ ಪೂರ್ತಿ ಹೊರಟುಹೋದ ಮೇಲೆ ಶ್ರೀರಾಮಕೃಷ್ಣರು ಇತ್ತ ತಿರುಗಿದರು. ಶಿಷ್ಯರನ್ನು ಕಂಡು, "ನೋಡಿದಿರಾ, ಹೇಗಿತ್ತು!" ಎಂದರು. ಆದರೆ, ಅವರೆಲ್ಲ ಬಟ್ಟೆ ತೊಟ್ಟು ಬರುವಷ್ಟರಲ್ಲಿ ಅದು ಹೊರಟುಹೋಗಿತ್ತು ಎಂದು ತಿಳಿದಾಗ ಶ್ರೀರಾಮಕೃಷ್ಣರೆನ್ನುತ್ತಾರೆ: "ಅಯ್ಯೋ ದಡ್ಡರಾ! ನೀವು ಬಟ್ಟೆ ಸರಿಪಡಿಸಿಕೊಂಡು ಬರುವವರೆಗೂ ನಿಲ್ಲುತ್ತದೆಯೇ ಅದು ? ನೀವೂ ನನ್ನ ಹಾಗೆ ಬಟ್ಟೆಯನ್ನು ಅತ್ತ ಬಿಸಾಡಿ ಬರಲಿಲ್ಲವೇಕೆ ?"

ಶ್ರೀರಾಮಕೃಷ್ಣರೇನೋ ಸುಲಭವಾಗಿ ಹೇಳಿಬಿಟ್ಟರು. ಆದರೆ, ಎಲ್ಲರೂ ಒಮ್ಮೆಗ್ರೇ ಪರಮಹಂಸರಾಗಲು ಸಾಧ್ಯವೆ!

ತಮ್ಮ ಬಳಿಗೆ ಬಂದ ವ್ಯಕ್ತಿ ಆಧ್ಯಾತ್ಮಿಕವಾಗಿ ಹೇಗೆ ಮುಂದುವರಿಯುತ್ತಿದ್ದಾನೆ, ಮತ್ತು ಆತ ಯಾವ ಬಗೆಯ ಭಕ್ತಿ-ಶ್ರದ್ಧೆಗಳಿಂದ ಮೊದಲು ತಮ್ಮ ಬಳಿಗೆ ಬಂದನೋ ಆ ಭಾವ ಅವನಲ್ಲಿ ವರ್ಧಿಸುತ್ತಿದೆಯೋ ಇಲ್ಲವೋ ಎಂಬುದನ್ನು ಶ್ರೀರಾಮಕೃಷ್ಣರು ಒಂದು ವಿಶಿಷ್ಟ ವಿಧಾನದಿಂದ ಪರೀಕ್ಷಿಸುತ್ತಿದ್ದರು. ಇದೇ ಅವರ ಶಿಷ್ಯಪರೀಕ್ಷಣದ

---

*ಬಂಗಾಳದಲ್ಲಿ 'ಬಾನ್' ಎಂದು ಕರೆಯಲ್ಪಡುವ ಈ ಅಲೆ ಪ್ರತಿದಿನವೂ ಒಮ್ಮೆ ನಿಶ್ಚಿತ ಸಮಯದಲ್ಲಿ ಸಮುದ್ರದಿಂದ ಹೊರಟು ಗಂಗಾಪ್ರವಾಹದ ವಿರುದ್ಧ ದಿಕ್ಕಿನಲ್ಲಿ ರಭಸದಿಂದ ಹರಿದುಕೊಂಡು ಬರುತ್ತದೆ. ಹುಣ್ಣಿಮೆ-ಅಮಾವಾಸ್ಯೆ ಸಮೀಪಿಸಿದಂತೆ ಅದರ ಆರ್ಭಟ ಹೆಚ್ಚು. ಆಗ ಅದು ಸುಮಾರು ಎಂಟ್ಹತ್ತು ಅಡಿಗಳಷ್ಟು ಎತ್ತರ ಮುಟ್ಟುತ್ತದೆ. ಅದನ್ನು ನೋಡಲು ನಗರದ ಜನರೂ ಮುಂಚಿತವಾಗಿ ಬಂದು ಕಾದು ಕುಳಿತಿರುತ್ತಾರೆ. ಗಂಗೆ ಸಮುದ್ರವನ್ನು ಸೇರುವ 'ಗಂಗಾಸಾಗರ' ಎಂಬಲ್ಲಿಂದ ಹೊರಟ ಈ ಅಲೆಯು ನದಿಯಲ್ಲಿ ಸುಮಾರು ೫೦-೬೦ ಕಿಲೋಮೀಟರಿನಷ್ಟು ದೂರದವರೆಗೂ ಹೋಗುತ್ತದೆ.

ನಾಲ್ಕನೆಯ ಉಪಾಯ.

ಶಿಷ್ಯ ನಾಲ್ಕೈದು ಬಾರಿ ತಮ್ಮಲ್ಲಿಗೆ ಬಂದುಹೋದ ಮೇಲೆ ಅವರು ಅವನಿಗೊಂದು ಪ್ರಶ್ನೆ ಹಾಕುತ್ತಿದ್ದರು. ಆದರೆ ಅತ ತಾವು ಹಿಂದೆಯೇ ದರ್ಶನದಲ್ಲಿ ಕಂಡಿದ್ದವನಾದರೆ, ಆ ಪ್ರಶ್ನೆಯನ್ನು ಮೊದಲ ಭೇಟಿಯಲ್ಲೇ ಕೇಳುತ್ತಿದ್ದುದೂ ಉಂಟು: "ಏನಪ್ಪಾ, ನನ್ನ ವಿಷಯವಾಗಿ ನಿನ್ನ ಅಭಿಪ್ರಾಯವೇನು ? ನಾನು ಯಾರೆಂದು ನಿನಗನ್ನಿಸುತ್ತದೆ ?"

ಇದಕ್ಕೆ ಒಬ್ಬೊಬ್ಬನೂ ಒಂದೊಂದು ಬಗೆಯಾಗಿ ಉತ್ತರಿಸುತ್ತಿದ್ದ—"ಮಹಾಶಯರೇ, ನೀವು ನಿಜವಾದ ಸಾಧುಗಳು"; "ನೀವು ನಿಜವಾದ ದೈವಭಕ್ತರು"; "ನೀವೊಬ್ಬರು ಮಹಾತ್ಮರೇ ಸರಿ"; "ನಿಜಕ್ಕೂ ನೀವು ಸಿದ್ಧಪುರುಷರು"; "ಭಗವಂತನ ಅವತಾರ !"; "ಸಾಕ್ಷಾತ್ ಚೈತನ್ಯರೇ ನೀವು" ಇತ್ಯಾದಿ. ಬ್ರಾಹ್ಮಸಮಾಜದ ಪ್ರಭಾವಕ್ಕೊಳಗಾಗಿ, ಅವತಾರತತ್ತ್ವವನ್ನು ಒಪ್ಪದಿರುವವರಲ್ಲಿ ಕೆಲವರು ಹೀಗೆನ್ನುತ್ತಿದ್ದರು: "ಕೃಷ್ಣ, ಏಸು, ಬುದ್ಧರ ವರ್ಗಕ್ಕೆ ಸೇರುವ ಮಹಾಭಕ್ತರು ನೀವು."

ಹೀಗೆಲ್ಲ ಉತ್ತರಿಸಿದವರು ನಿಜಕ್ಕೂ ಶ್ರೀರಾಮಕೃಷ್ಣರನ್ನು ಎಷ್ಟರಮಟ್ಟಿಗೆ ಅರ್ಥಮಾಡಿಕೊಂಡಿದ್ದರು ಎಂದು ಹೇಳುವುದು ಕಷ್ಟ. ಆದರೆ ಒಂದು ವಿಷಯವಂತೂ ನಿಜ. ಅವರು ತಮ್ಮ ಆ ಒಂದು ಮಾತಿನ ಮೂಲಕವೇ ದೇವರ ಬಗ್ಗೆ, ಹಾಗೆಯೇ ಶ್ರೀರಾಮಕೃಷ್ಣರ ಬಗ್ಗೆ, ತಮ್ಮ ಅಂತರಂಗಕ್ಕೆ ಅನ್ನಿಸಿದ್ದೇನು ಎಂಬುದನ್ನು ಪ್ರಾಮಾಣಿಕವಾಗಿ ವ್ಯಕ್ತಪಡಿಸಿದ್ದರು ಎನ್ನಬಹುದು. ಶ್ರೀರಾಮಕೃಷ್ಣರು ಆ ಉತ್ತರವನ್ನು ಕೇಳಿ, ಆ ಒಬ್ಬೊಬ್ಬನೊಂದಿಗೂ ಅವನವನ ಭಾವಕ್ಕನುಸಾರವಾಗಿ ಸ್ಪಂದಿಸಿ, ತಕ್ಕ ಬೋಧನೆ ನೀಡುತ್ತಿದ್ದರು. ಅವರು ಸಕಲ ಆಧ್ಯಾತ್ಮಿಕ ಭಾವಗಳ ಮೂರ್ತರೂಪರು. ಆದ್ದರಿಂದ ಅವರು ಯಾರ ಭಾವವನ್ನೂ ಕೆಡಿಸದೆ, ಬದಲಾಗಿ ಅದದನ್ನೇ ಪುಷ್ಟೀಕರಿಸಿ ಅತ್ಯುನ್ನತ ಸ್ಥಿತಿಗೆ ತಂದು, ತನ್ಮೂಲಕ ಸತ್ಯಸ್ವರೂಪನಾದ ಭಗವಂತನನ್ನು ಸಾಕ್ಷಾತ್ಕರಿಸಿಕೊಳ್ಳಲು ನೆರವಾಗುತ್ತಿದ್ದರು. ಆದರೆ ತಮ್ಮ ಪ್ರಶ್ನೆಗೆ ಉತ್ತರಿಸಿದ ವ್ಯಕ್ತಿ ತನ್ನ ನಿಜವಾದ ಅನಿಸಿಕೆಯನ್ನು ಹೇಳುತ್ತಿದ್ದಾನೋ ಅಥವಾ ಇತರರ ಪ್ರೇರಣೆಗೊಳಗಾಗಿ ಹಾಗೆನ್ನುತ್ತಿದ್ದಾನೋ ಎನ್ನುವುದನ್ನು ಮಾತ್ರ ಎಚ್ಚರದಿಂದ ಗಮನಿಸುತ್ತಿದ್ದರು.

ಶ್ರೀರಾಮಕೃಷ್ಣರು ತಮ್ಮ ಭಕ್ತರೊಂದಿಗೆ ಯಾವಯಾವ ರೀತಿಗಳಲ್ಲಿ ವ್ಯವಹರಿಸುತ್ತಿದ್ದರು ಎಂಬುದರ ವಿವರಗಳು ವೈವಿಧ್ಯಮಯ. ವಿಶೇಷ ವರ್ಗದ ಭಕ್ತರು ಯಾರಾದರೂ ಮೊದಲ ಬಾರಿ ಬರುವುದಿದ್ದರೆ ಅದು ಅವರಿಗೆ ಮೊದಲೇ ಗೊತ್ತಾಗಿ ಬಿಡುತ್ತಿತ್ತು. "ಇವತ್ತು (ಯಾವುದಾದರೊಂದು ದಿಕ್ಕಿನ ಕಡೆಗೆ ಬೆರಳುಮಾಡಿ ತೋರಿಸಿ) ಈ ದಿಕ್ಕಿನಿಂದ ಇಲ್ಲಿಗೆ (ತಮಗೆ) ಸೇರಿದವನೊಬ್ಬನು ಬರಲಿದ್ದಾನೆ" ಎಂದು ಹೇಳಿಬಿಡುತ್ತಿದ್ದರು. ಮತ್ತು ಅದು ಹಾಗೆಯೇ ನಡೆದುಹೋಗುತ್ತಿತ್ತು. ಇನ್ನು ಕೆಲವೊಮ್ಮೆ ಹೊಸಬರು ಯಾರಾದರೂ ಬಂದರೆ ಕೂಡಲೇ ಅವರನ್ನು ಆದರಿಸಿ, "ನೀನು ಇಲ್ಲಿಗೆ ಸೇರಿದವನು" ಎನ್ನುತ್ತಿದ್ದರು. ಮತ್ತೆ ಕೆಲವು ಭಾಗ್ಯಶಾಲಿಗಳು ಬಂದಾಗ, ಅವರ ಬಗ್ಗೆ ಅತ್ಯಾಸಕ್ತಿ ವಹಿಸಿ, ತಿಂಡಿ ತಿನಿಸು ಕೊಟ್ಟು ಉಪಚರಿಸಿ, ಬೋಧನೆ ನೀಡುತ್ತಿದ್ದರು. ಹೊಸದಾಗಿ ಬಂದ ಭಕ್ತರಿಗೆ ಅವರಂಥದೇ ಸ್ವಭಾವವುಳ್ಳ ಹಳಬರೊಂದಿಗೆ ಪರಿಚಯ ಮಾಡಿಸಿ ನಂಟು ಹಾಕುತ್ತಿದ್ದರು—ಅವರು ತಮ್ಮತಮ್ಮಲ್ಲಿ ವಿಚಾರವಿನಿಮಯ ಮಾಡಿಕೊಳ್ಳುತ್ತ ತಮ್ಮ ಭಾವವನ್ನು ಅಭಿವೃದ್ಧಿ ಪಡಿಸಿಕೊಳ್ಳಲಿ ಎಂಬ ಉದ್ದೇಶದಿಂದ.

ಒಮ್ಮೊಮ್ಮೆ ಆಹ್ವಾನವಿಲ್ಲದೆಯೇ ಕೆಲವು ಶಿಷ್ಯರ ಮನೆಗೆ ಹೋಗಿಬಿಡುತ್ತಿದ್ದರು. ತಮ್ಮ ಮಧುರ ನಡೆನುಡಿಗಳಿಂದ ಮನೆಯ ಹಿರಿಯರನ್ನು ಸಂತೋಷಪಡಿಸಿ ಗೆದ್ದುಕೊಂಡು, ಅವರ ಮಕ್ಕಳು ತಮ್ಮಲ್ಲಿಗೆ ಬಂದುಹೋಗುವುದಕ್ಕೆ ಯಾವ ಅಡಚಣೆಯೂ ಇಲ್ಲದಂತೆ ಮಾಡುತ್ತಿದ್ದರು.

ಮೇಲ್ತರಗತಿಯ ಭಕ್ತನೊಬ್ಬ ಮೊದಲ ಸಲ ಬಂದಾಗ ಶ್ರೀರಾಮಕೃಷ್ಣರು ಅವನನ್ನು ಬದಿಗೆ ಕರೆದು ಧ್ಯಾನ ಮಾಡಲು ಹೇಳುತ್ತಿದ್ದರು. ಅನಂತರ ದಿವ್ಯ ಭಾವಾನ್ವಿತರಾಗಿ, ಆತನ ನಾಲಿಗೆ, ಎದೆ ಮುಂತಾದ ಅಂಗಗಳನ್ನು ಸ್ಪರ್ಶಿಸುತ್ತಿದ್ದರು. ತತ್ಪರಿಣಾಮವಾಗಿ ಭಕ್ತನ ಮನಸ್ಸು ಇದ್ದಕ್ಕಿದಂತೆ ಅಂತರ್ಮುಖಿಯಾಗುತ್ತಿತ್ತು. ಸುಪ್ತರೂಪದಲ್ಲಿದ್ದ ಆಧ್ಯಾತ್ಮಿಕ ಸಂಸ್ಕಾರಗಳೆಲ್ಲ ಒಮ್ಮೆಗೇ ಜಾಗೃತಗೊಂಡು ಆತನಲ್ಲಿ ತೀವ್ರ ಪ್ರಚೋದನೆಯುಂಟುಮಾಡುತ್ತಿದ್ದುವು. ಇದರ ಫಲವಾಗಿ ಅವನಿಗೊಂದು ಅಪೂರ್ವ ಅನುಭವವಾಗುತ್ತಿತ್ತು. ಕೆಲವರಿಗೆ ದಿವ್ಯ ಜ್ಯೋತಿಯ ಇಲ್ಲವೆ ವಿವಿಧ ದೇವದೇವಿಯರ ದರ್ಶನವಾದರೆ, ಇನ್ನು ಕೆಲವರಿಗೆ ಧ್ಯಾನಸ್ಥಿತಿಯುಂಟಾಗುತ್ತಿತ್ತು. ಕೆಲವರಿಗೆ ಒಂದು ಅಪೂರ್ವ ಆನಂದದ ಅನುಭವವಾದರೆ, ಕೆಲವರಿಗೆ ಹೃದಯದಲ್ಲಿ ಒಂದು ಬಗೆಯ ಅಡಚಣೆಯಂತಿದ್ದ ಗಂಟುಗಳೆಲ್ಲ ಇದ್ದಕ್ಕಿದ್ದಂತೆ ಬಿಚ್ಚಿಕೊಂಡಂತಾಗಿ ತೀವ್ರವಾದ ಭಗವದ್ವ್ಯಾಕುಲತೆಯುಂಟಾಗುತ್ತಿತ್ತು. ಕೆಲವರಿಗೆ ಆ ಸ್ಪರ್ಶ, ಭಾವಾವೇಶವನ್ನೂ ಸವಿಕಲ್ಪ ಸಮಾಧಿಯನ್ನೂ ತಂದುಕೊಟ್ಟರೆ, ಅಪರೂಪಕ್ಕೊಬ್ಬನಿಗೆ ಅದು ನಿರ್ವಿಕಲ್ಪ ಸಮಾಧಿಯ ರುಚಿ ತೋರಿಸಿದ್ದೂ ಉಂಟು. ಈ ಕೊನೆಯ ಅನುಭವ ಪಡೆದುಕೊಂಡ ವ್ಯಕ್ತಿ ಬೇರಾರೂ ಅಲ್ಲ, ನರೇಂದ್ರ !

ಹೀಗೆ ಸ್ಪರ್ಶ ಮಾಡುವುದಲ್ಲದೆ ಕೆಲವರಿಗೆ ಶ್ರೀರಾಮಕೃಷ್ಣರು ಮಂತ್ರದೀಕ್ಷೆಯನ್ನೂ ನೀಡುತ್ತಿದ್ದರು. ಗುರುಗಳು ಶಿಷ್ಯನ ಜಾತಕವನ್ನೊಮ್ಮೆ ಪರೀಕ್ಷಿಸಿ, ಅವನು ಶೈವನೋ ವೈಷ್ಣವನೋ ಎಂದೆಲ್ಲ ತಿಳಿದುಕೊಂಡು, ಪೂಜಾದಿಗಳನ್ನು ಮಾಡಿ, ಶಾಕ್ತರಾದರೆ ಶಕ್ತಿಮಂತ್ರ, ಶೈವರಾದರೆ ಶಿವಮಂತ್ರ—ಇವುಗಳನ್ನು ಕೊಡುವುದು ರೂಢಿ. ಆದರೆ ಶ್ರೀರಾಮಕೃಷ್ಣರು ಈ ಯಾವ ವಿಧಾನವನ್ನೂ ಅನುಸರಿಸುತ್ತಿರಲಿಲ್ಲ. ಯೋಗದೃಷ್ಟಿಯಿಂದಲೇ ಶಿಷ್ಯನ ಜನ್ಮಾಂತರದ ಸಂಸ್ಕಾರಗಳನ್ನು ಕಂಡುಕೊಂಡು, "ಇದು ನಿನ್ನ ಮಂತ್ರ" ಎಂದು ಹೇಳಿ ದೀಕ್ಷೆ ನೀಡುತ್ತಿದ್ದರು. ಹೀಗೆ, ಕೆಲವು ಶಾಕ್ತರಿಗೆ ವಿಷ್ಣುಮಂತ್ರವನ್ನೂ ಕೆಲವು ವೈಷ್ಣವರಿಗೆ ಶಕ್ತಿಮಂತ್ರವನ್ನೂ ನೀಡಿದ್ದರು.

ಬಂಗಾಳದಲ್ಲಿ ವೈಷ್ಣವರಿಗೆ ಶಾಕ್ತರ ಬಗ್ಗೆಯೂ ಶಾಕ್ತರಿಗೆ ವೈಷ್ಣವರ ಬಗ್ಗೆಯೂ ಒಂದು ಬಗೆಯ ಅಸಡ್ಡೆ, ತಿರಸ್ಕಾರ ಇರುವುದು ಸಾಮಾನ್ಯವಾಗಿ ಕಂಡುಬರುತ್ತಿದ್ದ ಸಂಗತಿ. ಶ್ರೀರಾಮಕೃಷ್ಣರು ವೈಷ್ಣವ ಕುಲಕ್ಕೆ ಸೇರಿದವರು. ಆದ್ದರಿಂದ ತಮ್ಮ ಮನೆ ಮಂದಿಯಲ್ಲೂ ಈ ಬಗೆಯ ಭೇದಭಾವವಿದ್ದರೆ ಅದನ್ನು ಸಂಪೂರ್ಣ ತೊಡೆದುಹಾಕುವಂತೆ ಮಾಡಲು ಒಂದು ಕಾಲದಲ್ಲಿ ಶ್ರೀರಾಮಕೃಷ್ಣರು ಅವರೆಲ್ಲರಿಗೂ ಶಕ್ತಿಮಂತ್ರ ವಿಷ್ಣುಮಂತ್ರಗಳೆರಡರಲ್ಲೂ ದೀಕ್ಷೆ ಕೊಡಿಸಿದ್ದರು.

ತಮ್ಮ ಶಿಷ್ಯರೊಂದಿಗೆ ಅವರು ಇರಿಸಿಕೊಂಡಿದ್ದ ಬಾಂಧವ್ಯ ಅತ್ಯಂತ ವಿಶೇಷ ರೀತಿಯದು. ಸ್ವಾರಸ್ಯವೆಂದರೆ ಅವರಲ್ಲಿ ಬಹಳಷ್ಟು ಜನ, 'ಶ್ರೀರಾಮಕೃಷ್ಣರು ಎಲ್ಲರಿಗಿಂತ ಹೆಚ್ಚಾಗಿ ಪ್ರೀತಿಸುವುದು ನನ್ನನ್ನೇ' ಎಂದು ದೃಢವಾಗಿ ನಂಬಿಕೊಂಡಿದ್ದರು. ಮತ್ತು ಹಾಗೆಯೇ ಹೇಳಿಕೊಳ್ಳುತ್ತಲೂ ಇದ್ದರು ! ಪ್ರಾಯಶಃ ಇದಕ್ಕೊಂದು ಪ್ರಬಲವಾದ

ಕಾರಣವಿತ್ತು. ಅದು ಶ್ರೀರಾಮಕೃಷ್ಣರು ಪ್ರತಿಯೊಬ್ಬನ ಭಾವನೆಗಳೊಂದಿಗೂ ಪ್ರತಿಸ್ಪಂದಿಸುತ್ತಿದ್ದ ರೀತಿ; ಪ್ರತಿಯೊಬ್ಬನ ಸುಖ-ದುಃಖ, ಸಂತೋಷ-ಬೇಸರಗಳೊಂದಿಗೆ ಅವರು ತೋರುತ್ತಿದ್ದ ಸಹಾನುಭೂತಿ. ನಿಜಕ್ಕೂ ಸಹಾನುಭೂತಿಯೇ ಬೇರೆ, ಪ್ರೀತಿಯೇ ಬೇರೆ. ಆದರೆ ಅವುಗಳನ್ನು ತೋರ್ಪಡಿಸುವ ರೀತಿಯಲ್ಲಿ ಹೆಚ್ಚು ವ್ಯತ್ಯಾಸವಿಲ್ಲದಿರುವುದರಿಂದ ಸಹಾನುಭೂತಿಯನ್ನೇ ಪ್ರೀತಿಯೆಂದು ಭಾವಿಸಿದರೆ ಆಶ್ಚರ್ಯವಿಲ್ಲ. ಯಾವುದೇ ವಸ್ತುವಿನ ಅಥವಾ ವಿಷಯದ ಬಗ್ಗೆ ಆಲೋಚಿಸುವಾಗ ಅದರಲ್ಲೇ ತನ್ಮಯರಾಗುವುದು ಶ್ರೀರಾಮಕೃಷ್ಣರ ಮನಸ್ಸಿನ ಸಹಜ ಗುಣ. ಇದರಿಂದಾಗಿಯೇ ಅವರು ಪ್ರತಿಯೊಬ್ಬ ಶಿಷ್ಯನ ಮನಸ್ಥಿತಿಯನ್ನೂ ಸರಿಯಾಗಿ ಅರ್ಥ ಮಾಡಿಕೊಂಡು, ಅವನ ಭಾವಕ್ಕೆ ತಕ್ಕಂತೆ ಪ್ರತಿಸ್ಪಂದಿಸಲು ಮತ್ತು ಅವನ ಮುನ್ನಡೆಗೆ ಅಗತ್ಯವಾದ ಬೋಧನೆ ನೀಡಲು ಸಮರ್ಥರಾಗಿದ್ದುದು.

ಶ್ರೀರಾಮಕೃಷ್ಣರು ತಮ್ಮ ಶಿಷ್ಯರಿಗೆ, ಯಾವುದೇ ಕೆಲಸದಲ್ಲಿ ತೊಡಗುವ ಮೊದಲು ವಿಚಾರಶಕ್ತಿಯನ್ನು ಪ್ರಯೋಗಿಸಬೇಕಾದ್ದರ ಮಹತ್ವವನ್ನು ಒತ್ತಿ ಹೇಳುತ್ತಿದ್ದರು. ಈ ಬಗೆಯ ವಿವೇಚನೆಯಿಂದ ಮಾತ್ರವೇ ಸಕಲ ವಸ್ತುಗಳ, ವಿಷಯಗಳ ಗುಣಾವಗುಣಗಳನ್ನು ಕಂಡುಕೊಂಡು, ನಿಜವಾದ ವೈರಾಗ್ಯವನ್ನು ಗಳಿಸಲು ಸಾಧ್ಯ ಎಂದು ತಿಳಿಸುತ್ತಿದ್ದರು. ಪಕ್ಷಪಾತಬುದ್ಧಿಯವರನ್ನಾಗಲಿ, ತನ್ನ ಮತವೊಂದೇ ಸರಿ ಎನ್ನುವವರನ್ನಾಗಲಿ ಅವರೆಂದೂ ಮೆಚ್ಚುತ್ತಿರಲಿಲ್ಲ. "ಭಕ್ತನಾಗಿರಬೇಕೆಂದ ಮಾತ್ರಕ್ಕೆ ಮಂಕನಂತಿರಬೇಕೆ ?" ಎಂಬ ಅವರ ಮಾತಂತೂ ಶಿಷ್ಯರಿಗೆಲ್ಲ ಚಿರಪರಿಚಿತ.

ಭಗವಂತ ಒಬ್ಬನೇ ಎಂಬ ಮಾತು ನಿಜವಾದರೂ, ಯಾವುದೇ ಯೋಗಮಾರ್ಗವನ್ನವಲಂಬಿಸಿ ಅವನನ್ನು ಅನುಭವಿಸಬಹುದೆಂಬ ಸತ್ಯ ಸರ್ವಮಾನ್ಯವಾದರೂ, ಶ್ರೀರಾಮಕೃಷ್ಣರು ಮಾತ್ರ ವಿವಿಧ ಮಾರ್ಗಗಳಿಂದ ಅವನನ್ನು ಸಮೀಪಿಸಿ ಸರಸವಾಡಲಿಚ್ಛಿಸುವವರು. ಅವರೇ ಹೇಳುತ್ತಾರೆ: "ನಾನು ವಾಲಗದಿಂದ 'ಪ್ಪೋ' ಅಂತ ಒಂದೇ ಸ್ವರವನ್ನು ಊದುವವನಲ್ಲ; ಸಪ್ತಸ್ವರಗಳನ್ನೂ ಉಪಯೋಗಿಸಿಕೊಂಡು ನಾನಾ ರಾಗರಾಗಿಣಿಗಳನ್ನು ನುಡಿಸುವವನು ನಾನು. ತರಕಾರಿ ಒಂದೇ ಆದರೂ ಅದರಿಂದ ಬಗೆ ಬಗೆಯ ಮೇಲೋಗರ ಮಾಡಿಕೊಂಡು ತಿನ್ನುವ ಸ್ವಭಾವ ನನ್ನದು." ತಾನು ಹಿಡಿದ ದಾರಿಯೇ ಸರಿಯೆಂದು ಭ್ರಮಿಸಿ, ಕಣ್ಣಾಪು ಹಾಕಿದ ಕುದುರೆಯಂತೆ ನಡೆಯುವುದನ್ನು ಅವರು 'ಅದೊಂದು ನೀರಸ ಧೋರಣೆ' ಎಂದು ಹೀಗಳೆಯುತ್ತಿದ್ದರು. ಯಾವನಾದರೊಬ್ಬ ಶಿಷ್ಯ ತನಗೊಪ್ಪಿಗೆಯಾದ ಭಾವವನ್ನು ಬಿಟ್ಟು ಬೇರೆ ಯಾವ ಭಾವವನ್ನೂ ಇಷ್ಟಪಡುವುದಿಲ್ಲ ಎಂದು ಕಂಡುಬಂದರೆ ಶ್ರೀರಾಮಕೃಷ್ಣರು, "ಛೆ, ಎಂಥಾ ಸಪ್ಪೆ ಬುದ್ಧಿ ನಿನ್ನದು!" ಎಂಬ ಒಂದು ಮಾತಿನಿಂದ ಅವನಿಗೆ ಛೀಮಾರಿ ಹಾಕುತ್ತಿದ್ದರು. ಆ ಮಾತಿನಲ್ಲಿ ಎಂತಹ ಶಕ್ತಿಯೆಂದರೆ ಆ ಶಿಷ್ಯ ನಾಚಿಕೆಯಿಂದ ತಲೆ ತಗ್ಗಿಸುತ್ತಿದ್ದ!

ಶ್ರೀರಾಮಕೃಷ್ಣರು ಒಂದು ಕಡೆಯಿಂದ ಐದು ವರ್ಷದ ಬಾಲಕನಂತೆ ಭಕ್ತರೊಂದಿಗೆ ತಮಾಷೆ-ಕೀಟಲೆ ಮಾಡುತ್ತಿದ್ದರು, ನಕ್ಕು ಹೊರಳಾಡುವಂತೆ ಮಾಡುತ್ತಿದ್ದರು. ಹಾಗೆಯೇ ಇನ್ನೊಂದು ಕಡೆಯಿಂದ, ಅಗತ್ಯ ಬಿದ್ದಾಗ, ಅಷ್ಟೇ ಕಠಿಣವಾಗಿ ವರ್ತಿಸಬಲ್ಲವರಾಗಿದ್ದರು. ಯಾರಲ್ಲೇ ಆಗಲಿ, ದುರ್ವರ್ತನೆ ಕಂಡರೆ ಸಹಿಸುತ್ತಿರಲಿಲ್ಲ. ಸಣ್ಣಪುಟ್ಟ ವಿಷಯಗಳು ಕೂಡ ಅವರಿಂದ ಕಣ್ತಪ್ಪಿಸಿಕೊಳ್ಳಲು ಸಾಧ್ಯವಿರಲಿಲ್ಲ.

ಯಾವೊಬ್ಬನ ನಡವಳಿಕೆಯಲ್ಲಾದರೂ ಒಂದು ಕಿಂಚಿತ್ ವ್ಯತ್ಯಾಸವಾದರೂ ಅವರ ತೀಕ್ಷ್ಣದೃಷ್ಟಿ ಅವನ ಮೇಲೆ ಬೀಳುತ್ತಿತ್ತು. ಅಷ್ಟೇ ಸಾಕು, ತಕ್ಷಣವೇ ಆತ ತನ್ನ ತಪ್ಪನ್ನು ಕಂಡುಕೊಂಡು ತಿದ್ದಿಕೊಳ್ಳಲು ಸಕಲ ಪ್ರಯತ್ನ ಮಾಡುತ್ತಿದ್ದ. ಒಂದು ಮುಖ್ಯ ವಿಷಯವೆಂದರೆ ಶ್ರೀರಾಮಕೃಷ್ಣರ ಆ ವರ್ತನೆಯಲ್ಲಿ ಅಸಹಜತೆಯೇನೂ ಇರುತ್ತಿರಲಿಲ್ಲ. ಅವರು ಗಂಭೀರ ಮುಖಮುದ್ರೆ ಧರಿಸಿ, ಸ್ವಲ್ಪ ಹೊತ್ತು ಆ ವ್ಯಕ್ತಿಯನ್ನು ಮಾತನಾಡಿಸದೆ ಇದ್ದರೆ ಆತ ಒದ್ದಾಡಿಬಿಡುತ್ತಿದ್ದ; ತನ್ನ ದೋಷಕ್ಕಾಗಿ ಸಂತಾಪ ಪಡುತ್ತಿದ್ದ. ಒಂದು ವೇಳೆ ಇದರಿಂದಲೂ ಆತ ಸುಧಾರಿಸದಿದ್ದರೆ, ಅವರು ತಮ್ಮ ಶ್ರೀಮುಖದಿಂದ ಆಡಿದ ಒಂದೆರಡು ಖಾರವಾದ ಮಾತುಗಳೇ ಅವನನ್ನು ಸರಿಪಡಿಸಲು ಧಾರಾಳವಾಗುತ್ತಿದ್ದುವು. ಶ್ರೀರಾಮಕೃಷ್ಣರ ವ್ಯವಹಾರದ ರೀತಿ ಅತ್ಯದ್ಭುತ. ಪ್ರತಿಯೊಬ್ಬನನ್ನೂ ಅವರು ಮೊದಲು ತಮ್ಮ ದಿವ್ಯ ಪ್ರೇಮದಿಂದ ಗೆದ್ದುಕೊಂಡು, ಆತನ ಹೃದಯದ ಮೇಲೆ ಪೂರ್ಣಾಧಿಕಾರ ಸ್ಥಾಪಿಸುತ್ತಿದ್ದರು. ಆನಂತರ ಅವನಿಗೆ ತಿಳಿಯಹೇಳುವುದು ಎರಡೇ ಮಾತುಗಳಿಂದ !

ರಾಖಾಲ ಶ್ರೀರಾಮಕೃಷ್ಣರ ಜೊತೆಯಲ್ಲೇ ಇರಲಾರಂಭಿಸಿದ್ದ ಸಮಯ ಅದು. ಅವನು ಸಂಸಾರವನ್ನು ಬಿಟ್ಟು ಸಂನ್ಯಾಸಿಯಂತಿರುವುದು ಅವನ ಸಂಬಂಧಿಕರಿಗೆ ಇಷ್ಟವಿರಲಿಲ್ಲ. ಅವರು ಕೆಲವರು ಬಂದು ಶ್ರೀರಾಮಕೃಷ್ಣರಿಗೇ ಹೇಳಿದರು, 'ಅವನನ್ನು ಇಟ್ಟುಕೊಳ್ಳಬೇಡಿ, ಮನೆಗೆ ಕಳಿಸಿಬಿಡಿ' ಎಂದು. ಆದರೆ ಅವರು ಅದನ್ನು ಕಿವಿಗೇ ಹಾಕಿಕೊಳ್ಳಲಿಲ್ಲ. ಹಾಗೆ ಇಷ್ಟ ಪಡದ ಸಂಬಂಧಿಕರಲ್ಲಿ ರಾಖಾಲನ ಹೆಂಡತಿಯ ಅಣ್ಣ ಮನಮೋಹನ ಮಿತ್ರನೂ ಒಬ್ಬನೆಂದು ಕಾಣುತ್ತದೆ. ತನ್ನ ಅಭಿಪ್ರಾಯವನ್ನು ತಾನೇ ಶ್ರೀರಾಮಕೃಷ್ಣರಿಗೆ ಹೇಳಲು ಧೈರ್ಯ ಸಾಲದೆಯೋ ಏನೋ, ಒಂದು ದಿನ, "ಮಹಾಶಯರೇ, ಸುರೇಂದ್ರನಿಗೆ ರಾಖಾಲ ಇಲ್ಲಿರುವುದು ಇಷ್ಟವಿಲ್ಲ" ಎಂದ.

ನಾವು ಹಿಂದೆ ನೋಡಿರುವಂತೆ ಸುರೇಂದ್ರ ಶ್ರೀರಾಮಕೃಷ್ಣರ ಪರಮಭಕ್ತರಲ್ಲೊಬ್ಬ. ದಕ್ಷಿಣೇಶ್ವರದಲ್ಲೇ ಆಗಾಗ ಉಳಿದುಕೊಳ್ಳುವ ಭಕ್ತರಿಗಾಗಿ ಆತ ಕೆಲವು ಹಾಸಿಗೆಗಳನ್ನು ತಂದುಹಾಕಿದ್ದ. ಮತ್ತು ಅವರ ಊಟ ತಿಂಡಿಯ ಖರ್ಚಿಗೆಂದು ಪ್ರತಿ ತಿಂಗಳೂ ಹತ್ತು ರೂಪಾಯಿ ಕೊಡುತ್ತಿದ್ದ. ಶ್ರೀರಾಮಕೃಷ್ಣರಿಗೂ ಅವನ ಮೇಲೆ ತುಂಬ ವಿಶ್ವಾಸ. ಆ ವಿಶ್ವಾಸದಿಂದಾಗಿ ಅವರು ಅವನ ಮಾತಿಗೆ ಬೆಲೆ ಕೊಟ್ಟಾರು ಎಂದು ಮನಮೋಹನ ಊಹಿಸಿದ್ದನೇನೋ. ಆದರೆ ಈಗ ಅವನು ರಾಖಾಲನ ವಿಷಯದಲ್ಲಿ ತಲೆ ಹಾಕಿದ್ದಾನೆ ಎಂದು ಕೇಳಿದಾಗ ಶ್ರೀರಾಮಕೃಷ್ಣರು ಒಮ್ಮೆಗೇ ರೇಗಿಬಿಟ್ಟರು: "ಏನು ! ಯಾವನೋ ಅವನು ಸುರೇಂದ್ರ ? ತಾನೇನೋ ನನಗೆ ಬಹಳ ಉಪಕಾರ ಮಾಡಿದ್ದೇನೆ ಅಂತಂದುಕೊಂಡು ಹಾಗೆ ಹೇಳಿದನೊ ಅವನು ! ಎಲ್ಲಿ, ಅವನು ತಂದು ಹಾಕಿದ ಆ ಹಾಸಿಗೆಗೀಸಿಗೆಯನ್ನೆಲ್ಲ ತೆಗೆದು ಆಚೆಗೆಸಿ !... ಈ ಹುಡುಗರಿಂದೆಲ್ಲ ನನಗೇನಾದರೂ ಆಗಬೇಕಾದ್ದಿದೆಯೇ ? ಇವರಲ್ಲಿ ಒಳ್ಳೇ ಆಧ್ಯಾತ್ಮಿಕ ಲಕ್ಷಣಗಳಿವೆ ಅನ್ನುವ ಕಾರಣಕ್ಕೆ ನನ್ನ ಜೊತೆಯಲ್ಲಿ ಇಟ್ಟುಕೊಂಡಿದ್ದೇನೆ, ಅಷ್ಟೆ. ಇವರಿಗೆಲ್ಲ ಜ್ಞಾನ ದೊರೆಯಲಿ ಅಂತ ತಾಯಿಯ ಬಳಿ ಪ್ರಾರ್ಥಿಸುತ್ತೇನೆ. ಇವರುಗಳು ಮೊದಲು ಸಾಕ್ಷಾತ್ಕಾರ ಪಡೆದುಕೊಂಡು ಆಮೇಲೆ ಎಲ್ಲಿ ಬೇಕಾದರೂ ಇದ್ದುಕೊಳ್ಳಲಿ. ಅಷ್ಟೇ ನನ್ನ ಉದ್ದೇಶ."

ಶ್ರೀರಾಮಕೃಷ್ಣರು ರೇಗಿದ್ದನ್ನು ಕಂಡು ಮನಮೋಹನ ಮರವಡಿಸಿದ್ದಿರಬೇಕು ! ಸುರೇಂದ್ರನಿಗೆ ಈ ವಿಷಯ ಮುಟ್ಟಿತು. ಕೂಡಲೇ ಅವನು ಓಡೋಡಿ ಬಂದ. ಗುರು

ವಿನ ಪಾದಕ್ಕೆ ಬಿದ್ದು ಕಣ್ಣೀರು ಹಾಕುತ್ತ, ತಾನು ಅಂಥ ಮಾತನ್ನು ಎಂದೂ ಆಡಲಿಲ್ಲ, ಆದೆಲ್ಲ ಸುಳ್ಳು ವದಂತಿ ಅಷ್ಟೇ, ಎಂದು ವಿವರಿಸಿದ. ಅಷ್ಟಕ್ಕೆ ಆ ವಿಷಯ ಮುಕ್ತಾಯ ವಾಯಿತು.

ಶ್ರೀರಾಮಕೃಷ್ಣರ 'ಪ್ರಾಪಂಚಿಕ' ಕೆಲಸಕಾರ್ಯಗಳು ಅತ್ಯಲ್ಪ. ಆದರೆ ಅವುಗಳ ಲ್ಲೆಲ್ಲ ಅವರ ಶಿಸ್ತುಬದ್ಧತೆ, ಅಚ್ಚುಕಟ್ಟುತನ ಆದೆಷ್ಟು ಚೆನ್ನಾಗಿ ಎದ್ದುಕಾಣುತ್ತಿತ್ತು! ತಮ್ಮ ಕೋಣೆ, ಬಟ್ಟೆಬರೆ, ಹಾಸಿಗೆ ಇವುಗಳನ್ನೆಲ್ಲ ಚೊಕ್ಕಟವಾಗಿ, ಶುದ್ಧವಾಗಿ ಇಟ್ಟು ಕೊಳ್ಳುವುದು ಅವರ ಅಭ್ಯಾಸ. ಅವರು ಪ್ರತಿಯೊಂದು ವಸ್ತುವನ್ನೂ ಅದರದರ ಜಾಗ ದಲ್ಲಿ ತಪ್ಪದೆ ಇಡುತ್ತಿದ್ದರು. ಮತ್ತು ಇತರರಿಗೂ ಹಾಗೇ ಮಾಡಲು ಕಲಿಸಿಕೊಡು ತ್ತಿದ್ದರು. ಎಲ್ಲಿಗೇ ಹೋಗುವಾಗಲೂ ತಮ್ಮ ಚೌಕ, ಅಡಿಕೆ ಸಂಚಿ ಇವುಗಳನ್ನೆಲ್ಲ ತೆಗೆದು ಕೊಂಡದ್ದಾಗಿದೆಯೇ ಎಂದು ವಿಚಾರಿಸುತ್ತಿದ್ದರು. ವಾಪಸು ಹೊರಡುವಾಗ ಅವನ್ನು ಮರೆತುಬಿಡದಂತೆ ಜೊತೆಯಲ್ಲಿದ್ದವನಿಗೆ ನೆನಪು ಮಾಡುತ್ತಿದ್ದರು. ಅವರ ಸಮಯ ಪ್ರಜ್ಞೆ ಅಸಾಮಾನ್ಯವಾದದ್ದು. ಅಲ್ಲದೆ, ಸಣ್ಣಪುಟ್ಟ ವಿಷಯಗಳಲ್ಲೂ ಅವರು ತಾವಾ ಡಿದ ಮಾತಿಗೆ ಎಂದೂ ತಪ್ಪುತ್ತಿರಲಿಲ್ಲ—ಇದಕ್ಕೆ ಆದಾಗಲೇ ಬೇಕಾದಷ್ಟು ಉದಾಹರಣೆ ಗಳನ್ನು ನೋಡಿದ್ದೇವೆ.

ಶ್ರೀರಾಮಕೃಷ್ಣರ ಸ್ವಭಾವದ ಮತ್ತೊಂದು ವಿಶೇಷ ಅಂಶವೇನೆಂದರೆ, ಯಾರೇ ಆಗಲಿ, ಹರಕಲಾದ ಬಟ್ಟೆ ಚಪ್ಪಲಿ ಛತ್ರಿ ಇಂಥವನ್ನು ಬಳಸುವುದನ್ನು ಕಂಡರೆ ಅಸಂತುಷ್ಟರಾಗುತ್ತಿದ್ದರು. ಅವರು ಅನುಕೂಲಸ್ಥರಾದರೆ ಹೊಸದನ್ನು ಕೊಂಡುಕೊಳ್ಳು ವಂತೆ ಹೇಳುತ್ತಿದ್ದರು; ಬಡವರಾದರೆ ಕೆಲವೊಮ್ಮೆ ತಾವೇ ಭಕ್ತರಿಗೆ ಹೇಳಿ ತೆಗೆಸಿಕೊಡು ತ್ತಿದ್ದರು. ಅಂತಹ ವಸ್ತುಗಳನ್ನು ಉಪಯೋಗಿಸುವುದು ದಾರಿದ್ರ್ಯಕ್ಕೆ ಆಹ್ವಾನವಿತ್ತಂತೆ ಎನ್ನುತ್ತಿದ್ದರು.

ಶ್ರೀರಾಮಕೃಷ್ಣರು ಸಣ್ಣ ಮಗುವಿನಂತೆ ಎಷ್ಟೋ ಕೆಲಸಕಾರ್ಯಗಳಿಗೆ ಇತರರನ್ನು ಆಶ್ರಯಿಸಿಕೊಂಡಿದ್ದರು. ಅವರಿಗೆ ಒಂದು ಸಣ್ಣ ಸೇವೆ ಸಲ್ಲಿಸುವ ಅವಕಾಶ ಸಿಕ್ಕಿದರೂ ಅದು ತಮ್ಮ ಮಹಾಭಾಗ್ಯ ಎಂದು ತಿಳಿದು ಮುನ್ನುಗ್ಗುವವರು ನೂರಾರು ಮಂದಿ ಇದ್ದರು, ನಿಜ. ಆದರೆ ತಮ್ಮಿಂದಾಗಿ ಯಾರಿಗೂ ಕಿಂಚಿತ್ತೂ ತೊಂದರೆ, ಶ್ರಮ ಉಂಟಾಗ ದಂತೆ ಶ್ರೀರಾಮಕೃಷ್ಣರು ಅತಿ ಹೆಚ್ಚಿನ ಎಚ್ಚರಿಕೆ ವಹಿಸುತ್ತಿದ್ದರು. ಇದಕ್ಕೊಂದು ಒಳ್ಳೆಯ ಉದಾಹರಣೆ ಕೊಡಬಹುದು.

೧೮೮೬ರಲ್ಲೊಂದು ದಿನ. ಶ್ರೀರಾಮಕೃಷ್ಣರು ಗಂಟಲ ಬೇನೆಯಿಂದ ಹಾಸಿಗೆ ಹಿಡಿದಿದ್ದಾರೆ. ಬಾರ್ಲಿ, ರವೆ ಇವುಗಳ ಗಂಜಿಯಲ್ಲದೆ ಬೇರೇನನ್ನೂ ಸೇವಿಸುವಂತಿರ ಲಿಲ್ಲ. ಗಟ್ಟಿ ಆಹಾರ ಪದಾರ್ಥಗಳು ಗಂಟಲಲ್ಲಿ ಇಳಿಯುವುದಿಲ್ಲ ಎನ್ನುವುದರ ಜೊತೆಗೆ, ತಿಂದರೂ ಅಜೀರ್ಣವಾದೀತೆಂಬ ಭಯ ಭಕ್ತರಿಗೆ. ಹೀಗಿರುವಾಗ ಒಮ್ಮೆ ಶ್ರೀರಾಮಕೃಷ್ಣರಿಗೆ ಮಿಠಾಯಿ ಅಂಗಡಿಯಲ್ಲಿ ಸಿಗುವಂತಹ ಶತಾವರಿ ಬೆರೆಸಿದ ಹಾಲು ಕೆನೆ ತಿನ್ನಬೇಕೆಂಬ ಆಸೆಯಾಯಿತು. (ಶತಾವರಿ ಎನ್ನುವುದು ಒಂದು ಬಗೆಯ ಗಡ್ಡೆಯ ಹಿಟ್ಟು. ರುಚಿಗೋಸ್ಕರ ಇದನ್ನು ಕೆನೆಗೆ ಬೆರೆಸಿ, ಔತಣಗಳಲ್ಲಿ ಬಡಿಸುತ್ತಾರೆ.) ಆದರಿಂದ ಆರೋಗ್ಯಕ್ಕೇನೂ ತೊಂದರೆಯಾಗುವ ಸಂಭವವಿಲ್ಲ ಎಂದು ಯೋಚಿಸಿ ಭಕ್ತರು ಯಾರೂ ಅದಕ್ಕೆ ಅಭ್ಯಂತರವೆತ್ತಲಿಲ್ಲ. ಆಗಲೇ ಸಂಜೆಯಾಗಿತ್ತು; ಆದ್ದರಿಂದ ಮರುದಿನ ಬೆಳಗ್ಗೆ ಅದನ್ನು ಕೊಂಡುತರಲು ಶಿಷ್ಯ ಯೋಗೀಂದ್ರ ಕಲ್ಕತ್ತಕ್ಕೆ ಹೊರಟ.

ದಾರಿಯಲ್ಲಿ ಅವನಿಗೊಂದು ಯೋಚನೆ ಬಂತು: 'ಹಾಲುಕೆನೆಯನ್ನು ಅಂಗಡಿಯಲ್ಲಿ ಕೊಳ್ಳುವುದೆ? ಅಂಗಡಿಗಳಲ್ಲಿ ಶತಾವರಿಯನ್ನಲ್ಲದೆ ಇನ್ನೂ ಎಂತೆಂಥದೋ ಪದಾರ್ಥಗಳನ್ನೆಲ್ಲ ಕಲಬೆರಕೆ ಮಾಡಿಬಿಡುತ್ತಾರೆ. ಆ ಹಾಳು ಪದಾರ್ಥಗಳನ್ನು ತಿಂದು, ಆಮೇಲೆ ಠಾಕೂರರ ಆರೋಗ್ಯ ಮತ್ತಷ್ಟು ಹದಗೆಟ್ಟರೆ ಏನು ಗತಿ?...' ಎಂದು. ಭಕ್ತರಿಗೆಲ್ಲ ಶ್ರೀರಾಮಕೃಷ್ಣರು ಪ್ರಾಣಸಮಾನರಲ್ಲವೆ? ಆದ್ದರಿಂದ ಯೋಗೇಂದ್ರನಿಗೆ ಅಂಥ ಯೋಚನೆ ಬಂದದ್ದು ಸಹಜವೇ. ಅವನು ಹೀಗೂ ಆಲೋಚಿಸಿದ: 'ಆದರೆ ಹೊರಡುವುದಕ್ಕೆ ಮೊದಲು ಠಾಕೂರರನ್ನೇ ಈ ಬಗ್ಗೆ ಕೇಳಿ ಬಿಡಬೇಕಾಗಿತ್ತು. ಹೋಗಲಿ, ಈಗಲೂ ಯಾರಾದರೂ ಭಕ್ತರ ಮನೆಗೆ ಹೋಗಿ ಅಂಥ ಕೆನೆಯನ್ನು ಮಾಡಿಸಿಕೊಂಡು ಒಯ್ಯಲೆ? ಆದರೆ ಠಾಕೂರರು ಅದನ್ನು ಇಷ್ಟಪಡದೆ ಬೈದುಬಿಟ್ಟರೆ?' ಹೀಗೆಲ್ಲ ಚಿಂತಿಸುತ್ತಲೇ ಅವನು ಬಲರಾಮನ ಮನೆಗೆ ಬಂದ. ಅಲ್ಲಿ ವಿಷಯವನ್ನೆಲ್ಲ ಹೇಳಿದ. ಅದನ್ನು ಕೇಳಿ ಬಲರಾಮನ ಮನೆಮಂದಿ, "ಛೆ ಛೆ! ಅಂಗಡಿಯ ಕೆನೆಯೇಕೆ? ನಾವೇ ಹೊಸದಾಗಿ ಚೆನ್ನಾಗಿ ಮಾಡಿಕೊಡುತ್ತೇವೆ. ಸಮಯ ಹಿಡಿಯುತ್ತದೆ ಅಷ್ಟೆ. ದಯವಿಟ್ಟು ನೀನು ಇಲ್ಲೇ ಊಟ ಮಾಡು. ಅಷ್ಟೊತ್ತಿಗೆ ಕೆನೆ ಸಿದ್ಧವಾಗುತ್ತದೆ" ಎಂದರು. ಯೋಗೇಂದ್ರ ಒಪ್ಪಿದ. ಸುಮಾರು ಮೂರುಗಂಟೆಗೆ ಕೆನೆ ತಯಾರಾಯಿತು. ಅವನು ಅದನ್ನು ತೆಗೆದುಕೊಂಡು ಹೊರಟ.

ಇತ್ತ ಶ್ರೀರಾಮಕೃಷ್ಣರು ಮಧ್ಯಾಹ್ನವೇ ಅದನ್ನು ತಿನ್ನಬೇಕೆಂದು ಕಾದಿದ್ದು, ಕೊನೆಗೂ ಅದು ಬಾರದ್ದನ್ನು ಕಂಡು, ತಮ್ಮ ನಿತ್ಯದ ಊಟವನ್ನು ಮುಗಿಸಿ ಸುಮ್ಮನಾದರು. ಅವರು ಯೋಚನೆ ಮಾಡುತ್ತಿದ್ದಾರೆ—ಇನ್ನೂ ಯಾಕೆ ಬರಲಿಲ್ಲ ಅವನು, ಎಂದು. ಅಂತೂ ನಾಲ್ಕು ಗಂಟೆಯ ಹೊತ್ತಿಗೆ ಬಂದ ಮಹಾರಾಯ! ಎಲ್ಲ ವಿಷಯವೂ ತಿಳಿಯಿತು. ಆಗ ಶ್ರೀರಾಮಕೃಷ್ಣರು ಸ್ವಲ್ಪ ಖಾರವಾಗಿ ಹೇಳಿದರು: "ಅಲ್ಲಯ್ಯಾ, ಹಾಲುಕೆನೆಯನ್ನು ಪೇಟೆಯಿಂದ ಕೊಂಡು ತಾ ಅಂತಲ್ಲವೆ ನಾನು ಹೇಳಿದ್ದು? ಅಂತಹ ಮಾರಾಟದ ತಿಂಡಿಯನ್ನು ತಿನ್ನಬೇಕು ಅಂತಲೇ ನನಗೆ ಇಚ್ಛೆಯಾಗಿತ್ತು. ನೀನು ಭಕ್ತರ ಮನೆಗೆ ಹೋಗಿ ಅವರಿಗೆಲ್ಲ ಕಷ್ಟಕೊಟ್ಟಿದ್ದೇಕೆ? ಅದೂ ಅಲ್ಲದೆ ಈ ಕೆನೆ ಬಹಳ ದಪ್ಪ; ನನಗೆ ಜೀರ್ಣವಾಗುವುದಿಲ್ಲ. ನಾನಿದನ್ನು ತಿನ್ನಲಾರೆ." ಹೀಗೆಂದು ಅದನ್ನು ರುಚಿ ಕೂಡ ನೋಡದೆ, ಶಾರದಾದೇವಿಯವರನ್ನು ಕರೆದು, "ನೋಡು, ಇದು ಭಕ್ತರು ಕೊಟ್ಟದ್ದು. ಇದನ್ನು ಗೋಪಾಲೇರ್ ಮಾಗೆ ಕೊಡು. ಅವಳಲ್ಲಿ ಸ್ವಯಂ ಗೋಪಾಲ ನಿದ್ದಾನೆ. ಅವಳು ತಿಂದರೆ ನಾನು ತಿಂದಂತೆಯೇ" ಎಂದು ಹೇಳಿ ಅವರ ಕೈಗೆ ಕೊಟ್ಟುಬಿಟ್ಟರು.

ಇತರರಿಂದ ಯಾವುದಾದರೊಂದು ಸೇವೆಯನ್ನು ಮಾಡಿಸಿಕೊಳ್ಳಬೇಕೆಂದರೆ ಶ್ರೀರಾಮಕೃಷ್ಣರು ಎಷ್ಟು ಸಂಕೋಚ ಪಡುತ್ತಿದ್ದರೆಂಬುದಕ್ಕೆ ಇನ್ನೊಂದು ಸ್ವಾರಸ್ಯದ ಪ್ರಸಂಗವನ್ನು ನೋಡಬೇಕು.

ಸಾಮಾನ್ಯವಾಗಿ ತಮಗೆ ಶ್ರೀಮಂತಭಕ್ತರಿಂದ ಬಂದ ಬಾದಾಮಿ ಉತ್ತುತ್ತೆ ಮುಂತಾದುವನ್ನೆಲ್ಲ ಅವರು ನರೇಂದ್ರನಿಗೆ ಕೊಟ್ಟುಕಳಿಸಿಬಿಡುತ್ತಿದ್ದರು ಎಂದು ತಿಳಿದಿದ್ದೇವೆ. ಹೀಗೆ ಕಳಿಸುವುದಕ್ಕೆ ಬೇರೆ ಯಾರೂ ಸಿಗದೆ ಹೋದರೆ ಆಗ ಅಣ್ಣನ ಮಗ ರಾಮಲಾಲನ ನೆರವು ಕೋರುತ್ತಿದ್ದರು. ಅವನ ಹತ್ತಿರ ಅವರೇನೂ ಸಂಕೋಚ ಪಡಬೇಕಾಗಿರಲಿಲ್ಲ; 'ಲೋ, ಇಂಥ ಕೆಲಸ ಮಾಡೋ' ಎಂದು ಸಲಿಗೆಯಿಂದ ಹೇಳಬಹು

ದಾಗಿತ್ತು. ಆದರೂ ತಾವು ಆಗಾಗ ಇಂಥ ಕೆಲಸಗಳನ್ನೆಲ್ಲ ಹೇಳುತ್ತಲೇ ಇದ್ದರೆ ಅವನಿಗೆ ಬೇಸರವಾಗಬಹುದಲ್ಲವೆ? ಆದ್ದರಿಂದ ಆ ಕೆಲಸವನ್ನು ಹೇಳಬೇಕಾದಾಗ ಅವರು ಪ್ರಾರಂಭಿಸುತ್ತಿದ್ದುದು ಹೀಗೆ: "ರಾಮಲಾಲ್, ನಿನಗೆ ಕಲ್ಕತ್ತದಲ್ಲೇನಾದರೂ ಕೆಲಸ ಇದೆಯೆ?"

"ಅಂಥದೇನಿಲ್ಲ; ನೀವು ಹೇಳಿದರೆ ಹೋಗಿಬರುತ್ತೇನೆ. ಆದಕ್ಕೇನು?"

"ಇಲ್ಲ, ಹೀಗೇ ಕೇಳಿದೆ ಅಷ್ಟೆ. ಬಹಳ ದಿನ ಆಯಿತಲ್ಲ ನೀನು ಸುತ್ತಾಡಿಕೊಂಡು ಬಂದು, ಇವತ್ತೇನಾದರೂ ಹೋಗುವುದಕ್ಕೆ ಇಷ್ಟವಿತ್ತೇನೋ ಅಂತ... ಮನಸ್ಸಿದ್ದರೆ ಒಮ್ಮೆ ಹೋಗಿ ಬಾ. ಹೋಗುವ ಹಾಗಿದ್ದರೆ, ದಯವಿಟ್ಟು ಆ ಡಬ್ಬದಿಂದ ಎಷ್ಟು ಬೇಕೋ ಅಷ್ಟು ದುಡ್ಡು ತೆಗೆದುಕೊಂಡು ಗಾಡಿಯಲ್ಲಿ ಹೋಗು. ಇಲ್ಲದಿದ್ದರೆ ಬಿಸಿಲಿಗೆ ತಲೆ ಸುತ್ತೀತು. ಹಾಗೇ ಹೋಗುತ್ತ ಈ ಬಾದಾಮಿ ದ್ರಾಕ್ಷಿ ಗೋಡಂಬಿಯನ್ನೆಲ್ಲ ನರೇಂದ್ರನಿಗೆ ತಲುಪಿಸಿಬಿಡಪ್ಪಾ; ಅವನು ಹೇಗಿದ್ದಾನೆ ಅಂತ ನೋಡಿಕೊಂಡು ಬಾ. ಯಾಕೋ ಅವನು ಬಹಳ ದಿನಗಳಿಂದ ಬರಲೇ ಇಲ್ಲ. ಅವನ ಕ್ಷೇಮಸಮಾಚಾರ ಕೇಳುವುದಕ್ಕೆ ಮನಸ್ಸು ಬಹಳ ಚಡಪಡಿಸುತ್ತಿದೆ."

"ಅಷ್ಟೇ ತಾನೆ? ಇದೊ ಈಗಲೇ ಹೊರಟೆ" ಎನ್ನುತ್ತ ರಾಮಲಾಲ ಹೊರಡುತ್ತಿದ್ದ. ಮತ್ತು 'ಆಹಾ, ನನ್ನ ಹತ್ತಿರ ಕೂಡ ಎಷ್ಟು ಸಂಕೋಚ! ಎಂಥ ವಿನಮ್ರತೆ!' ಎಂದು ತನಗೆ ತಾನೇ ಹೇಳಿಕೊಳ್ಳುತ್ತಿದ್ದ.

ವಿದ್ಯೆಯಿಂದ ವಿನಯ ಎಂಬ ಮಾತಿದೆ. ಹಾಗಿರುವಾಗ ಪರಾವಿದ್ಯೆಯನ್ನು ಪಡೆದವನ ವಿನಯ ಇನ್ನೆಂಥದಿರಬೇಕು! ಒಮ್ಮೆ ಶ್ರೀರಾಮಕೃಷ್ಣರು ತಾವು ಉಟ್ಟಿದ್ದ ಪಂಚೆಯ ತುದಿಯನ್ನೇ ಕೊರಳಿನ ಸುತ್ತ ಬರುವಂತೆ ಹೊದ್ದು ಮಂದಿರದ ಹೂದೋಟದಲ್ಲಿ ಅತ್ತಿತ್ತ ನಡೆದಾಡುತ್ತಿದ್ದರು. ಆಗ ಒಬ್ಬಾತ, ಹೊಸಬ—ಡಾಕ್ಟರ್ ಕೈಲಾಸ್ ಎಂದು ಆತನ ಹೆಸರು—ಅವರನ್ನು ನೋಡಿದ. ಆ ವೇಷವನ್ನು ಕಂಡು 'ಇವನು ಈ ತೋಟದ ಕೆಲಸಗಾರನಿರಬೇಕು' ಎಂದೂಹಿಸಿ, "ಅಯ್ಯಾ, ಆ ಹೂವುಗಳನ್ನೊಂದಿಷ್ಟು ಕಿತ್ತು ಕೊಡು" ಎಂದು ಕೇಳಿದ. ಶ್ರೀರಾಮಕೃಷ್ಣರು ಮರುಮಾತಾಡದೆ ಅವನು ಬೇಕೆಂದ ಹೂಗಳನ್ನು ಕಿತ್ತುಕೊಟ್ಟರು. ಮತ್ತು ಅಲ್ಲಿ ನಿಲ್ಲದೆ ಸೀದಾ ಹೊರಟುಹೋದರು.

ಯಾವನೋ ತೋಟದ ಕೆಲಸದವನು ಎಂದುಕೊಂಡು ತಾನು ಮಾತಾಡಿಸಿದ ವ್ಯಕ್ತಿ ಸ್ವಯಂ ಶ್ರೀರಾಮಕೃಷ್ಣ ಪರಮಹಂಸರು ಎಂಬ ಸಂಗತಿ ಆಮೇಲೆ ಯಾವಾಗಲೋ ತಿಳಿದಾಗ ಡಾಕ್ಟರ್ ಕೈಲಾಸನಿಗಾದ ಆಶ್ಚರ್ಯವೆಷ್ಟೆಂದು ಊಹಿಸಿಯೇ ತಿಳಿಯಬೇಕು! ಅದು ಸರಿ, ಆದರೆ ಹೂಗಳನ್ನು ಕಿತ್ತುಕೊಟ್ಟ ತಕ್ಷಣ ಅವರೇಕೆ ಅಲ್ಲಿಂದ ಕಣ್ಮರೆ ಯಾದರು?—ಆಲೋಚಿಸಿದಾಗ ಕೈಲಾಸನಿಗೆ ಉತ್ತರ ಹೊಳೆಯಿತು: ಒಂದು ವೇಳೆ ಅವರು ಅಲ್ಲೇ ನಿಂತಿದ್ದು, ಯಾರಾದರೂ ಬಂದು ಅವರನ್ನು ಮಾತನಾಡಿಸಿದರೆ, ಅವರು ಜವಾನನಲ್ಲ ಎಂದು ತನಗೆ ಗೊತ್ತಾಗುತ್ತಿತ್ತು. ಆಗ ಅವರೆದುರಿನಲ್ಲಿ ತನಗೆ ಎಷ್ಟು ಕಸಿವಿಸಿಯಾಗುತ್ತಿತ್ತು! ಅದನ್ನು ತಪ್ಪಿಸುವುದಕ್ಕಾಗಿಯೇ ಅವರು ಹಾಗೆ ಹೊರಟುಹೋದದ್ದು. ಆಹಾ, ನಿರಹಂಕಾರದ ಪರಮಾವಧಿಯಲ್ಲವೆ ಇದು?

ಒಮ್ಮೆ ಯಾರೋ ಒಬ್ಬ ಭಕ್ತ ಶ್ರೀರಾಮಕೃಷ್ಣರೆದುರು ಸ್ವಲ್ಪ ಅನುಚಿತವಾಗಿ ವರ್ತಿಸಿದ. ಅಲ್ಲೇ ಇದ್ದ ಲಾಟುವಿಗೆ ಸಿಟ್ಟು ತಡೆದುಕೊಳ್ಳಲಾಗಲಿಲ್ಲ. ಆತನನ್ನು ಚೆನ್ನಾಗಿ ದಬಾಯಿಸಿ ಮುಖದಲ್ಲಿ ನೀರಿಳಿಸಿಬಿಟ್ಟ. ಆ ಭಕ್ತ ದುಃಖ, ಅಪಮಾನಗಳಿಂದ ಖಿನ್ನನಾಗಿ

ಹೊರಟುಹೋದ. ಅವನ ಮನಸ್ಸಿಗೆ ಎಷ್ಟು ಘಾಸಿಯಾಯಿತೆಂಬುದನ್ನು ಕಂಡ ಶ್ರೀರಾಮಕೃಷ್ಣರು ಆಮೇಲೆ ಲಾಟುವಿಗೆ ಹೇಳಿದರು:

"ಲಾಟು, ಇಲ್ಲಿಗೆ ಬಂದವರನ್ನು ಅಷ್ಟೊಂದು ಖಾರವಾಗಿ ಅಂದುಬಿಟ್ಟರೆ ಹೇಗಪ್ಪಾ ? ಅವರು ತಮ್ಮ ಸಾಂಸಾರಿಕ ಕಷ್ಟಕೋಟಲೆಗಳಿಂದ ಬೇಸತ್ತು ಇಲ್ಲಿಗೆ ಬರುತ್ತಾರೆ. ಅವರ ಲೋಪದೋಷಗಳ ಬಗ್ಗೆ ನಾವೂ ಅಷ್ಟು ಕಟುವಾಗಿ ವರ್ತಿಸಿದರೆ ಅವರು ಇನ್ನೆಲ್ಲಿಗೆ ಹೋಗಬೇಕು ? ಇನ್ನು ಮೇಲೆ ನೀನು ಸಾಧುವಿನ ಸಾನ್ನಿಧ್ಯದಲ್ಲಿ ಎಂದಿಗೂ ಮತ್ತೊಬ್ಬನಿಗೆ ನೋವುಂಟಾಗುವಂತೆ ನಡೆದುಕೊಳ್ಳಬಾರದು."

ಇಷ್ಟು ಹೇಳಿ ಅವರು ಸುಮ್ಮನಾಗಲಿಲ್ಲ. ಇನ್ನೊಂದು ಮಾತು ಹೇಳಿದರು:

"ನೋಡು, ನಾಳೆಯೇ ಆತನ ಮನೆಗೆ ಹೋಗಿ ಅವನ ಜೊತೆಯಲ್ಲಿ ಮಾತನಾಡಿಕೊಂಡು ಬಾ. ಹೇಗೆ ಮಾತನಾಡಿಸಬೇಕು ಎಂದರೆ ನೀನು ಇವತ್ತು ಅಂದದ್ದನ್ನೆಲ್ಲ ಅವನು ಮರೆತುಬಿಡಬೇಕು, ಗೊತ್ತಾಯಿತೆ ?"

ಲಾಟುವಿನ ದರ್ಪವೆಲ್ಲ ಒಮ್ಮೆಗೇ ಇಳಿದುಹೋಯಿತು. ಮಾರನೇ ದಿನ ಅವನು ಆ ಭಕ್ತನ ಮನೆಗೆ ಹೋಗಿ, ಬಹಳ ನಯವಿನಯದಿಂದ ಮಾತನಾಡಿಸಿ, ತನ್ನ ತಪ್ಪಿಗೆ ಪ್ರಾಯಶ್ಚಿತ್ತ ಮಾಡಿಕೊಂಡು ಬಂದ. ಅವನು ಬರುತ್ತಿದ್ದಂತೆಯೇ ಶ್ರೀರಾಮಕೃಷ್ಣರು ಕೇಳಿದರು:

"ಅವನಿಗೆ ನನ್ನ ಪರವಾಗಿ ನಮಸ್ಕಾರ ಹೇಳಿದೆಯಾ ?"

ಲಾಟು ಸ್ತಬ್ಧನಾಗಿ ಹೋದ. "ಇಲ್ಲ ಮಹಾಶಯರೆ !"

"ಹೋಗು. ಈಗಲೇ ಹೋಗಿ ಅವನಿಗೆ ನನ್ನ ನಮಸ್ಕಾರಗಳನ್ನು ತಿಳಿಸಿ ಬಾ."

ಲಾಟು ಮತ್ತೆ ಹೋಗಿ ಆ ಮನುಷ್ಯನಿಗೆ ಶ್ರೀರಾಮಕೃಷ್ಣರ ಪರವಾಗಿ ನಮಸ್ಕಾರ ಸಲ್ಲಿಸಿದ. ಈಗ ಮಾತ್ರ ಅವನು ಕರಗಿಹೋದ. ತನ್ನಂತಹ ಸಾಮಾನ್ಯನ ಮೇಲೂ ಶ್ರೀರಾಮಕೃಷ್ಣರು ತೋರಿಸಿದ ಔದಾರ್ಯ ಎಷ್ಟೆಂಬುದನ್ನು ಕಂಡು ಕಣ್ಣೀರ್ಗರೆಯಲಾರಂಭಿಸಿದ. ಅದನ್ನು ನೋಡಿ ಲಾಟುವಿಗೂ ಗಂಟಲು ಬಿಗಿದುಬಂತು. ಅವನು ವಾಪಸು ಬಂದು, ನಡೆದುದನ್ನು ಹೇಳಿದಾಗ ಶ್ರೀರಾಮಕೃಷ್ಣರು "ಈಗ ನಿನ್ನ ತಪ್ಪಿಗೆ ಕ್ಷಮೆ ಸಿಕ್ಕಿತು" ಎಂದರು.

ಒಮ್ಮೆ ಗಿರೀಶ ತನ್ನ ಕೈಗಳನ್ನು ಹಣೆಯ ಮುಂದಕ್ಕೆ ಜೋಡಿಸಿ ಶ್ರೀರಾಮಕೃಷ್ಣರಿಗೆ ಪ್ರಣಾಮ ಸಲ್ಲಿಸಿದ. ಕೂಡಲೇ ಅವರು ನಡುವಿನವರೆಗೆ ಬಾಗಿ ಪ್ರತಿನಮಸ್ಕರಿಸಿದರು. ಗಿರೀಶ ಮತ್ತೆ ನಮಸ್ಕರಿಸಿದ. ಶ್ರೀರಾಮಕೃಷ್ಣರು ಇನ್ನಷ್ಟು ಬಾಗಿ ನಮಿಸಿದರು ! ಕಡೆಗೆ ಅವನು ಸಾಷ್ಟಾಂಗವೆರಗಿಬಿಟ್ಟ; ಆಗ ಅವರು ಅವನನ್ನು ಹೃತ್ಪೂರ್ವಕವಾಗಿ ಹರಸಿದರು. ಮುಂದೆ ಗಿರೀಶನೆನ್ನುತ್ತಿದ್ದ:

"ಈ ಬಾರಿ ಭಗವಂತನು ಜಗತ್ತನ್ನು ತನ್ನ ನಮಸ್ಕಾರಗಳ ಮೂಲಕವೇ ಗೆಲ್ಲಲು ಬಂದಿದ್ದಾನೆ. ಕೃಷ್ಣಾವತಾರದಲ್ಲಿ ಕೊಳಲೇ ಅವನ ಅಸ್ತ್ರವಾಗಿತ್ತು. ಚೈತನ್ಯಾವತಾರದಲ್ಲಿ ನಾಮಸಂಕೀರ್ತನೆಯೆಂಬ 'ನಾಮಾಸ್ತ್ರ'. ಆದರೆ ಈ ಶಕ್ತಿಯುತ ಅವತಾರದಲ್ಲಿ ನಮಸ್ಕಾರಾಸ್ತ್ರ."

# ಸಂತನಾದ ಮನ್ಮಥ ೨೦

ಪ್ರಮುಖ ಸ್ತ್ರೀಭಕ್ತೆಯಾದ ಯೋಗಿನ್ ಮಾ ಸಿರಿವಂತ ಮನೆತನಕ್ಕೆ ಸೇರಿದ್ದವಳು ಎಂಬ ವಿಷಯವನ್ನು ಹಿಂದೆ ನೋಡಿದ್ದೇವೆ. ಅವಳು ಶ್ರೀರಾಮಕೃಷ್ಣರ ಶಿಷ್ಯೆಯಾಗಿ ವಿರಕ್ತಳಂತೆ ಜೀವಿಸತೊಡಗಿದುದು ಅವಳ ಸೋದರ ಹೀರಾಲಾಲನಿಗೆ ಸಹ್ಯವಾಗಿರಲಿಲ್ಲ. ಅದು ತಮ್ಮ ಘನತೆಗೆ ಮಸಿ ಬಳಿಯುವ ಸಂಗತಿ ಎಂದು ಭಾವಿಸಿ ಸೋದರಿಗೆ ತಿಳಿಯಹೇಳಿದ. ಆದರೆ ಯೋಗಿನ್ ಮಾ ಅವನನ್ನು ಲೆಕ್ಕಿಸಲಿಲ್ಲ. ಹೀರಾಲಾಲ ಸಿಟ್ಟಿಗೆದ್ದ. 'ಇದಕ್ಕೆ ಮದ್ದು ಮಾಡುವುದು ನನಗೆ ಗೊತ್ತು' ಎಂದುಕೊಂಡು ಒಂದು ಯೋಜನೆ ಹೂಡಿದ.

ಮನ್ಮಥ ಎಂಬವನು ಬಾಗ್ ಬಜಾರಿನ ಒಬ್ಬ ಹೆಸರಾಂತ ಪುಂಡ. ಇನ್ನೂ ಚಿಕ್ಕವನೇ—ಇಪ್ಪತ್ತಿಪ್ಪತ್ತೈದು ವರ್ಷವಿರಬಹುದು. ಆದರೆ ಕುಸ್ತಿ ಹೊಡೆದಾಟಗಳಲ್ಲಿ ಅತಿರಥ. ತನ್ನಂತಹ ಅನೇಕ ಪುಂಡುಪೋಕರಿಗಳ ನಾಯಕ. ಒಳ್ಳೇ ಧಾಂಡಿಗ. ಅವನ ತಂಡಕ್ಕೂ ಊರಿನ ಇತರ ತಂಡಗಳಿಗೂ ಆಗಾಗ ಮಾರಾಮಾರಿ ನಡೆಯುವುದಿತ್ತು. ಆಗೆಲ್ಲ ಈ ಮನ್ಮಥನ ಶೌರ್ಯ ಸಾಹಸಗಳು ಚೆನ್ನಾಗಿ ಪ್ರದರ್ಶನಕ್ಕೆ ಬರುತ್ತಿದ್ದುವು. ಇವನು ದೊಡ್ಡ ಶ್ರೀಮಂತನೊಬ್ಬನ ಪಾರುಪತ್ಯಗಾರ ಬೇರೆ. ಒಟ್ಟಿನಲ್ಲಿ, ಮದವೇರಿದ ಕಾಡಾನೆಯಂತೆ ಸೊಕ್ಕಿ ಬೆಳೆಯುತ್ತಿದ್ದ.

'ತನ್ನ ಸೋದರಿ ದಕ್ಷಿಣೇಶ್ವರಕ್ಕೆ ಹೋಗುವುದನ್ನು ತಪ್ಪಿಸಬೇಕಾದರೆ ಮೊದಲು ಆ ಪರಮಹಂಸನಿಗೆ ಪಾಠ ಕಲಿಸಬೇಕು' ಎಂದು ಆಲೋಚಿಸಿ ಹೀರಾಲಾಲ ಈ ಮನ್ಮಥನನ್ನು ಹಿಡಿದ. ಶ್ರೀರಾಮಕೃಷ್ಣರು ಯೋಗಿನ್ ಮಾಳ ಮನೆಗೆ ಭೇಟಿ ನೀಡಲು ಒಂದು ದಿನ ನಿಶ್ಚಯವಾಗಿತ್ತು. ಅಂದು ಅವರನ್ನು ಸ್ವಲ್ಪ 'ನೋಡಿಕೊಳ್ಳಲು' ತನ್ನ ಗೆಳೆಯರೊಂದಿಗೆ ಬರುವುದಾಗಿ ಮನ್ಮಥ ಒಪ್ಪಿದ. ಯಾರಾದರೇನು ಅವನಿಗೆ? ಸಂಭಾವನೆ ಸಿಕ್ಕಿದರೆ ಸಾಕು.

ಆದರೆ ಯೋಗಿನ್ ಮಾಳಿಗಾಗಲಿ ಇತರ ಯಾವ ಭಕ್ತರಿಗಾಗಲಿ ಇದರ ಸುಳಿವು ಸಿಕ್ಕಿರಲಿಲ್ಲ. ಶ್ರೀರಾಮಕೃಷ್ಣರು ತಮ್ಮ ಕೆಲವು ಭಕ್ತರೊಂದಿಗೆ ಬಂದಿಳಿದರು. ಅಂದು ಅಲ್ಲಿ ಸೇರಿದ್ದವರಲ್ಲಿ ಹೆಚ್ಚಿನವರು ಸ್ತ್ರೀಯರು. ಶ್ರೀರಾಮಕೃಷ್ಣರು ಮನೆಯ ಒಳಗಿನ ಹಜಾರದಲ್ಲಿ ಆ ಭಕ್ತೆಯರೊಂದಿಗೆ ಭಗವತ್ ಸಲ್ಲಾಪದಲ್ಲಿ ತೊಡಗಿದರು. ಎಲ್ಲರೂ ಆನಂದದಿಂದ ಅವರ ಮಾತುಗಳನ್ನು ಕೇಳುತ್ತಿದ್ದಾರೆ. ಆಗ, ಶ್ರೀರಾಮಕೃಷ್ಣರು ಇದ್ದಕ್ಕಿದ್ದಂತೆ ಎದ್ದು ಗಡಿಬಿಡಿಯಿಂದ ಹೊರಟರು. ಎಲ್ಲಿಗೆ? ಯಾರಿಗೂ ಗೊತ್ತಿಲ್ಲ!

ಶ್ರೀರಾಮಕೃಷ್ಣರು ಹೊರಬಾಗಿಲಿನ ಬಳಿಗೆ ಬಂದರು. ಅಲ್ಲೊಂದು ಕೋಣೆಯಲ್ಲಿ ಸಂಗಾತಿಗಳೊಡನೆ ಕಾದು ನಿಂತಿದ್ದಾನೆ ಮನ್ಮಥ. ಸೀದಾ ಅವನ ಹತ್ತಿರಕ್ಕೇ ಬಂದು, ಅವನ ಭುಜದ ಮೇಲೆ ಕೈಯಿಟ್ಟರು. ಮನ್ಮಥ ಬೆಚ್ಚಿಬಿದ್ದು ತಿರುಗಿದ. ಶ್ರೀರಾಮಕೃಷ್ಣರು ಕೇಳಿದರು: "ಏನಪ್ಪಾ, ನನಗೆ ಚೆನ್ನಾಗಿ ಹೊಡೆಯಬೇಕು ಅಂತ ಕಾದಿದ್ದೀಯಾ?" ನೋಡುತ್ತಾನೆ, ಅತ್ಯಂತ ಪ್ರಶಾಂತವಾದ ಮುಖ. ತುಟಿಯಂಚಿನಲ್ಲಿ ಕಂಡೂಕಾಣದಂತಹ ಕಿರುನಗೆ. ಭಾವಸಾಗರದ ದರ್ಶನ ಮಾಡಿಸುವ ಆ ಜೋಡಿ ಕಂಗಳನ್ನು

ನೋಡಿದೊಡನೆ, ಎಲ್ಲಿ ಅದರೊಳಕ್ಕೆ ಬಿದ್ದು ಮುಳುಗಿಹೋಗುತ್ತೇನೋ ಎಂದು ತಲ್ಲಣಿಸಿದ ಮನ್ಮಥ! ನಾಚಿಕೆಯಿಂದ ಮುಖ ಕಪ್ಪಿಟ್ಟಿತು. ಬಾಯಿಂದ ಸದ್ದು ಹೊರಡದೆ ಬೆಪ್ಪಾದ. ಇನ್ನೇನು ಮಾಡಲೂ ತೋಚದೆ ಶ್ರೀರಾಮಕೃಷ್ಣರ ಪಾದಕ್ಕೆರಗಿ, "ಕ್ಷಮಿಸಿಬಿಡಿ ಸ್ವಾಮಿ, ಅಪರಾಧಿ ನಾನು" ಎನ್ನುತ್ತ ಕಣ್ಣೀರು ಹರಿಸಿದ. ಶ್ರೀರಾಮಕೃಷ್ಣರು ಅವನನ್ನು ವಾತ್ಸಲ್ಯದಿಂದ ಮೇಲೆತ್ತಿ, ಒಮ್ಮೆ ದಕ್ಷಿಣೇಶ್ವರಕ್ಕೆ ಬರುವಂತೆ ಆಹ್ವಾನಿಸಿದರು. ಅದಕ್ಕೆ ಅವನು ಕೂಡಲೇ ಸಮ್ಮತಿಸಿದ.

ಪರಿಸ್ಥಿತಿ ಹೀಗೆ ನಾಟಕೀಯವಾಗಿ ತಿರುಗಿಕೊಂಡದ್ದನ್ನು ಕಂಡು ಅವನ ಸಂಗಾತಿಗಳೆಲ್ಲ ಕಕ್ಕಾಬಿಕ್ಕಿಯಾದರು. ಆದರೆ, 'ಇದೆಲ್ಲ ಏನೋ ಮೋಸ' ಎನ್ನಿಸಿ ಅವರಿಗೆ ಕೋಪವೇರಿತು. ಅದನ್ನು ಕಂಡ ಮನ್ಮಥ, ತನ್ನ ಮುಷ್ಟಿಬಿಗಿದ ಕೈಯನ್ನು ಮೇಲೆತ್ತಿ "ಯಾವನಾದರೂ ಇವರನ್ನು ಮುಟ್ಟೀರಿ, ಹುಷಾರ್, ಮೂಳೆ ಮುರಿದುಬಿಡುತ್ತೇನೆ" ಎಂದು ಘರ್ಜಿಸಿದ!

ಒಂದೆರಡು ನಿಮಿಷದಲ್ಲೇ ಇದೆಲ್ಲ ನಡೆದುಹೋಯಿತು. ಶ್ರೀರಾಮಕೃಷ್ಣರು ಏನೂ ಆಗದವರಂತೆ ಮತ್ತೆ ಒಳಕ್ಕೆ ಹೋಗಿ ಕುಳಿತರು. ಸಲ್ಲಾಪ ಇನ್ನೂ ಒಂದು ಗಂಟೆ ಕಾಲ ಮುಂದುವರಿಯಿತು. ಕಡೆಗೆ ಅವರು ಆಚೆಗೆ ಬಂದಾಗ, ಮನ್ಮಥ ಇನ್ನೂ ಅಲ್ಲೇ ಇದ್ದ. ಅವನ ಜೊತೆಗಾರರು ಯಾರೂ ಕಾಣಲಿಲ್ಲ. ಆತ ಅವರಿಗೆ ಗಾಡಿಯೇರಲು ನೆರವಾಗಿ, ಅದರ ಬಾಗಿಲು ಮುಚ್ಚಿದ. ಗಾಡಿ ಹೊರಟಾಗ ಅವನೂ ಅದರ ಬದಿಯಲ್ಲೇ ಓಡತೊಡಗಿದ. ಅದನ್ನು ಕಂಡು ಶ್ರೀರಾಮಕೃಷ್ಣರು, "ಯಾಕೆ ಸುಮ್ಮನೆ ಕಷ್ಟ ತೆಗೆದುಕೊಳುತ್ತೀ? ಸಾಕಿನ್ನು, ಹಿಂದಿರುಗು" ಎಂದಾಗ ಅವನು ಓಡೋಡುತ್ತಲೇ, "ಇಲ್ಲ, ನನ್ನ ಸ್ನೇಹಿತರಿಗೆ ಕೋಪ ಬಂದಿದೆ. ಈಗಲೂ ಅವರಿಂದ ಏನಾದರೂ ತೊಂದರೆಯಾದೀತು ಅಂತ ಬರುತ್ತಿದ್ದೇನೆ" ಎಂದುತ್ತರಿಸಿ ಬಹಳ ದೂರದವರೆಗೂ ಬಂದ!

ಅವನಿಗೆ ಯಾರ ಮೂಲಕವೋ ಶ್ರೀರಾಮಕೃಷ್ಣರ ಆಪ್ತ ಶಿಷ್ಯ ಗಂಗಾಧರನೊಂದಿಗೆ ಆತ್ಮೀಯತೆ ಬೆಳೆಯಿತು. "ಒಂದು ದಿನ ನನ್ನನ್ನೂ ಠಾಕೂರರ ಬಳಿಗೆ ಕರೆದುಕೊಂಡು ಹೋಗುತ್ತೀಯಾ? ಅವರೇ ಬರಹೇಳಿದ್ದಾರೆ" ಎಂದು ಆತ ಗಂಗಾಧರನ ಬಳಿ ಗೋಗರೆದ. ದಿನ ನಿಶ್ಚಿತವಾಯಿತು. ಒಂದು ಕುಡಿಕೆ ತುಂಬ ರಸಗುಲ್ಲ ತೆಗೆದುಕೊಂಡು ಇಬ್ಬರೂ ದಕ್ಷಿಣೇಶ್ವರಕ್ಕೆ ಹೋದರು. ಶ್ರೀರಾಮಕೃಷ್ಣರು ಪ್ರೀತಿಯಿಂದ ಸ್ವಾಗತಿಸಿದರು. ಅವರು ಮನ್ಮಥನನ್ನು ಆ ದಿನ ಯೋಗಿನ್ ಮಾಳ ಮನೆಯಲ್ಲಿ ಭೆಟ್ಟಿಯಾಗಿದ್ದರಾದರೂ ಆತನ ಪರಿಚಯವಾಗಿರಲಿಲ್ಲ. ಗಂಗಾಧರ ಅವನನ್ನು "ಮಹಾಶಯರೇ, ಈತ ಹೆಸರುವಾಸಿಯಾದ ರೌಡಿ. ಗಲಭೆಗಳು ನಡೆದಾಗ ಯಾವಾಗಲೂ ಅಗ್ರಸ್ಥಾನದಲ್ಲಿರುವವನು ಇವನು" ಎಂದು ಪರಿಚಯಿಸಿದ. ಶ್ರೀರಾಮಕೃಷ್ಣರು, "ಹೌದೇನು!" ಎಂದುದ್ಗರಿಸಿ, ಅವನ ಮೈಯನ್ನು ತೋರ್ಬೆರಳಿನಿಂದ ಒತ್ತಿನೋಡಿ, "ಅಬ್ಬ, ಎಷ್ಟು ಗಟ್ಟಿ!" ಎಂದರು.

ಗಂಗಾಧರ: "ಇವನು ಜಾತಿಯಿಂದ ಬ್ರಾಹ್ಮಣ. ಆದರೆ ಜನಿವಾರವನ್ನು ಕಿತ್ತು ಹಾಕಿಬಿಟ್ಟಿದ್ದಾನೆ."

ಶ್ರೀರಾಮಕೃಷ್ಣರು: "ಯಾಕಪ್ಪಾ ಹಾಗೆ ಮಾಡಿದೆ?"

ಮನ್ಮಥ: "ಸ್ವಾಮಿ, ವ್ಯಾಯಾಮ ಮಾಡುವಾಗ ತುಂಬ ಬೆವರು ಬಂದು ಅದು

ವೈಗೇ ಅಂಟಿಕೊಳ್ಳುತ್ತದೆ. ಅದಕ್ಕೇ ತೆಗೆದುಬಿಟ್ಟೆ."

ಶ್ರೀರಾಮಕೃಷ್ಣರು: "ಜನಿವಾರ ಬ್ರಾಹ್ಮಣ್ಯದ ಚಿಹ್ನೆ. ಏನೇ ಆದರೂ ನೀನದನ್ನು ಧರಿಸಲೇಬೇಕು."

ಬಳಿಕ ಅವರು ಅವನನ್ನು ಕಾಳೀ ದೇವಾಲಯಕ್ಕೆ ಕರೆದುಕೊಂಡು ಹೋದರು. ದೇವಿಗೆ ಪ್ರದಕ್ಷಿಣೆ ಬರುತ್ತಿರುವಾಗ, ಏಕಾಂತದಲ್ಲಿ ಅವನಿಗೆ ಏನೋ ಹೇಳಿ ಅವನನ್ನು ಹರಸಿದರು. ಮತ್ತೊಮ್ಮೆ ಒಂದು ಭಾನುವಾರದಂದು ಬರುವಂತೆ ಹೇಳಿದರು. ಅಂತೆಯೇ ಅವನು ಇನ್ನೊಂದು ದಿನ ಗಂಗಾಧರನೊಂದಿಗೆ ಬಂದು ಒಂದು ಕುಡಿಕೆ ರಸಗುಲ್ಲ ಸಮರ್ಪಿಸಿ, ಅವರ ದರ್ಶನ ಮಾಡಿದ. ಇದೇ ಅವನ ಕಡೆಯ ಭೇಟಿ. ಆಮೇಲೆ ಅವನು ಮತ್ತೆಂದೂ ಅವರನ್ನು ಕಾಣಲಿಲ್ಲ.

ಆದರೆ ಅಷ್ಟರಲ್ಲೇ, ಆಗಬೇಕಾದ್ದು ಆಗಿಬಿಟ್ಟಿತ್ತು. ಅವನೊಳಗೆ ಭಕ್ತಿಯ ಬೀಜ ಬಿದ್ದಾಗಿತ್ತು. ಅದು ಹೇಗೆ ಮೊಳೆತು ದಿನದಿನಕ್ಕೂ ಬೆಳೆದು ಹೆಮ್ಮರವಾಯಿತೆಂದರೆ ಅವನ ಹಿಂದಿನ ವ್ಯಕ್ತಿತ್ವ ನಾಶವೇ ಆಗಿಹೋಯಿತು—ಅಂತಹ ಪರಿವರ್ತನೆ! ತಾನು ಶ್ರೀರಾಮಕೃಷ್ಣರ ವಿಶೇಷ ಕೃಪೆಗೆ ಪಾತ್ರನಾದೆನೆಂಬ ವಿಷಯವನ್ನು ಆತ ಯಾರ ಮುಂದೂ ಹೇಳಿಕೊಳ್ಳಲಿಲ್ಲ. ಆದರೆ ಅವನು ಗುಪ್ತವಾಗಿ ಪರಿಶುದ್ಧ ಧಾರ್ಮಿಕ ಜೀವನ ನಡೆಸಲಾರಂಭಿಸಿದ. ಕಾಳಿಯ ಪರಮ ಭಕ್ತನಾದ.

ಮೊದಮೊದಲು ಈ ವಿಷಯ ಯಾರಿಗೂ ಗೊತ್ತಾಗಲಿಲ್ಲ. ಆದರೆ ಎಷ್ಟು ದಿನ ಹಾಗಿದ್ದೀತು? ಕ್ರಮೇಣ ಆತನ ದೈತ್ಯಶರೀರ ಸೊರಗಿ ಸಣ್ಣಗಾಯಿತು. ಕೂದಲು ಜಟೆಗಟ್ಟಿತು. ಸದಾ ತನ್ನ ಕೋಣೆಯಲ್ಲಿ ಅಡಗಿರುತ್ತಿದ್ದ. ಆ ದಾರಿಯಲ್ಲಿ ಹೋಗುವವರಿಗೆಲ್ಲ, ಅವನು ದೈನ್ಯದಿಂದ 'ಅಮ್ಮಾ, ಅಮ್ಮಾ!' ಎಂದು ಉದ್ಗರಿಸುವುದು ಕಿವಿಗೆ ಬೀಳುತ್ತಿತ್ತು. ಅವನನ್ನು ಹಿಂದೆ ನೋಡಿದ್ದವರಿಗೆ ಈಗ ಅವನ ಗುರುತು ಸಿಕ್ಕುವುದೇ ಅಸಾಧ್ಯವಾಯಿತು.

ವರ್ಷಗಳುರುಳಿದಂತೆ ಅವನ ವ್ಯಕ್ತಿತ್ವ ಇನ್ನಷ್ಟು ಮಾಗುತ್ತ ಬಂದಿತು. ಅವನನ್ನು ನೋಡಿದರೆ ಶ್ರೀರಾಮಕೃಷ್ಣರು ಬಣ್ಣಿಸುತ್ತಿದ್ದ ಉನ್ಮತ್ತ ಬ್ರಹ್ಮಜ್ಞಾನಿಯಂತೆ ಕಾಣುತ್ತಿದ್ದ! ಸೊಂಟದ ಮೇಲೊಂದು ತುಂಡು ಬಟ್ಟೆ ಬಿಟ್ಟರೆ ಮತ್ತೆಲ್ಲ ಬರಿ ಮೈ. ಸದಾ ದೀನನಾಗಿ ಕೈಜೋಡಿಸಿಕೊಂಡಿರುತ್ತಿದ್ದ. 'ಓ ನನ್ನ ಪ್ರಿಯನಾಥ! ಓ ನನ್ನ ಪ್ರಿಯನಾಥ!' ಎಂಬ ಉದ್ಗಾರವಲ್ಲದೆ ಬಾಯಲ್ಲಿ ಬೇರೆ ಶಬ್ದವೇ ಇಲ್ಲ. ಅಥವಾ ಶೂನ್ಯವನ್ನು ದಿಟ್ಟಿಸುತ್ತ ಬಾಹ್ಯಪ್ರಜ್ಞೆಯಿಲ್ಲದವನಂತೆ ಬಿದ್ದಿರುತ್ತಿದ್ದ.

ಶ್ರೀರಾಮಕೃಷ್ಣರ ಸಂನ್ಯಾಸೀ ಶಿಷ್ಯರೆಂದರೆ ಮನ್ಮಥನಿಗೆ ಪರಮಾದರ. ಅವನ ಆ ಉನ್ನತ ಸ್ಥಿತಿಯನ್ನು ಕಂಡ ಶಿಷ್ಯರು ಮೂಕವಿಸ್ಮಿತರಾಗುತ್ತಿದ್ದರು. ಕಾಡುಮೇಡುಗಳಲ್ಲಿ ನಡೆಸಿದ ಸುದೀರ್ಘ ಸಾಧನೆಗಳಿಂದ ಕೂಡ ಯಾವುದು ಲಭಿಸದಿರಬಹುದೋ ಅದನ್ನು ಶ್ರೀರಾಮಕೃಷ್ಣರ ಕೃಪಾಲೇಶವೇ ನೀಡಬಲ್ಲುದು ಎಂಬ ತಥ್ಯವನ್ನು ಅವರು ಮತ್ತೆಮತ್ತೆ ಮನಗಾಣುತ್ತಿದ್ದರು.

ಶ್ರೀರಾಮಕೃಷ್ಣರ ಸಂದರ್ಶನಾರ್ಥಿಗಳಲ್ಲಿ ಕ್ರೈಸ್ತರು, ಸಿಕ್ಖರು ಮುಂತಾದ ಅನ್ಯ ಧರ್ಮೀಯರು ಅನೇಕರಿದ್ದರು. ಇವರಲ್ಲಿ ಬಹಳಷ್ಟು ಜನರು ಶ್ರೀರಾಮಕೃಷ್ಣರನ್ನು ಭೇಟಿಯಾದದ್ದು ಕೆಲವೇ ಬಾರಿಯಾದರೂ ಅಷ್ಟರಲ್ಲೇ ಅವರ ಗಾಢ ಪ್ರಭಾವಕ್ಕೊಳಗಾಗಿದ್ದರು ಎಂಬುದಕ್ಕೆ ಅನೇಕ ಸಾಕ್ಷ್ಯಗಳು ಸಿಗುತ್ತವೆ.

ಬ್ರಾಹ್ಮಸಮಾಜದ ನಾಯಕನಾದ ಪಂಡಿತ ಶಿವನಾಥ ಶಾಸ್ತ್ರಿ ಶ್ರೀರಾಮಕೃಷ್ಣರ ಸಂಪರ್ಕಕ್ಕೆ ಬಂದು, ಅವರ ಬೋಧನೆಗಳಲ್ಲಿನ ನಾವೀನ್ಯವನ್ನೂ ಸಾರ್ವತ್ರಿಕತೆಯನ್ನೂ ಕಂಡು ಮೆಚ್ಚಿಕೊಂಡ ಮೇಲೆ ತನ್ನ ಕೆಲವು ಆಪ್ತರನ್ನು ಅವರ ಬಳಿಗೆ ಕರೆತಂದ. ಇವರ ಪೈಕಿ ಕ್ರೈಸ್ತರಲ್ಲೊಬ್ಬನೆಂದರೆ ರೆವರೆಂಡ್ ಹರಿಹರ ಸನ್ಯಾಲ. ಈತ ಕಲ್ಕತ್ತದಲ್ಲಿ 'ಹೈ ಚರ್ಚ್' ಎಂಬ ಇಗರ್ಜಿಗೆ ಸೇರಿದ ಒಬ್ಬ ಪಾದರಿ. ಶಿವನಾಥನ ಬಾಯಿಂದ ಶ್ರೀರಾಮಕೃಷ್ಣರ ವರ್ಣನೆಯನ್ನು ಕೇಳಿ ಮಾರುಹೋಗಿ ತಾನೊಮ್ಮೆ ಅವರನ್ನು ನೋಡಬಯಸಿದ.

ಅದು ೧೮೭೮ ಅಥವಾ ೭೯ನೇ ಇಸವಿಯಿರಬೇಕೆಂದು ಅಂದಾಜು. ಕೇಶವಸೇನ ಶ್ರೀರಾಮಕೃಷ್ಣರ ಬಳಿಗೆ ಬಂದು ಕೆಲಕಾಲವಾಗಿತ್ತಷ್ಟೆ. ಜನಪ್ರವಾಹವಿನ್ನೂ ಪ್ರಾರಂಭವಾಗಿರಲಿಲ್ಲ. ಆಗೊಂದು ದಿನ ಶಿವನಾಥ, ಹರಿಹರ ಸನ್ಯಾಲ ಇಬ್ಬರೂ ದಕ್ಷಿಣೇಶ್ವರಕ್ಕೆ ಬಂದರು. ಅಂದಿನ ಸಂದರ್ಶನದ ಕೆಲವು ಅಂಶಗಳು ಮಾತ್ರ ನಮಗಿಂದು ಶಿವನಾಥನ ಬರಹದ ಮೂಲಕ ಲಭ್ಯವಿವೆ.

ಶ್ರೀರಾಮಕೃಷ್ಣರು ಅತಿಥಿಗಳಿಬ್ಬರನ್ನೂ ಸ್ವಾಗತಿಸಿದರು. ಈಗ ಶಿವನಾಥನೆಂದ:

"ಸ್ವಾಮಿ, ಈತ ನನ್ನ ಒಬ್ಬ ಕ್ರೈಸ್ತ ಸ್ನೇಹಿತ; ನಿಮ್ಮನ್ನು ನೋಡಬೇಕು ಅಂತ ಬಹಳ ಉತ್ಸುಕನಾಗಿ ಬಂದಿದ್ದಾನೆ."

'ಕ್ರೈಸ್ತ' ಎಂಬ ಪದವನ್ನು ಕೇಳಿದೊಡನೆ ಕ್ರಿಸ್ತನ ನೆನಪಾಗಿ ಶ್ರೀರಾಮಕೃಷ್ಣರು ತಲೆಯನ್ನು ನೆಲಕ್ಕೆ ತಾಗಿಸಿ, "ಏಸು ಕ್ರಿಸ್ತನ ಪವಿತ್ರಪಾದಗಳಿಗೆ ಮತ್ತೆಮತ್ತೆ ನಮಸ್ಕಾರ" ಎಂದುದ್ಗರಿಸಿದರು.

ಸನ್ಯಾಲ (ಆಶ್ಚರ್ಯದಿಂದ): "ಮಹಾಶಯರೆ, ಇದೇನು, ನೀವು ಕ್ರಿಸ್ತನಿಗೆ ನಮಸ್ಕಾರ ಸಲ್ಲಿಸುತ್ತಿದ್ದೀರಲ್ಲ ? ಆತನ ಬಗ್ಗೆ ನಿಮ್ಮ ಅಭಿಪ್ರಾಯವೇನು ?"

ಶ್ರೀರಾಮಕೃಷ್ಣರು: "ಏಕೆ ! ನಾನವನನ್ನು ಅವತಾರನೆಂದು ಪರಿಗಣಿಸುತ್ತೇನೆ !"

ಸನ್ಯಾಲ: "ಏನು ! ದೇವರ ಅವತಾರವೆಂದೆ ? ದಯುವಿಟ್ಟು ಅದನ್ನು ವಿವರಿಸುತ್ತೀರಾ ? ಅವನು ನಿಮ್ಮ ರಾಮ, ಕೃಷ್ಣ ಇವರಂತೆಯೇ ಅವತಾರಪುರುಷನೇನು ?"

ಶ್ರೀರಾಮಕೃಷ್ಣರು: "ಹೌದು, ಹಾಗೆಯೇ. ಅವನು ರಾಮಕೃಷ್ಣ ಇವರಂತೆಯೇ ಒಬ್ಬ ಅವತಾರ. ನಿನಗೆ ಗೊತ್ತಿಲ್ಲವೆ ? ಭಾಗವತದಲ್ಲಿ ಒಂದು ಮಾತಿದೆ, 'ಅವತಾರಾ ಹಿ ಅಸಂಖ್ಯೇಯಾಃ'—ಎಂದರೆ ವಿಷ್ಣುವಿನ ಅವತಾರಗಳು ಅಸಂಖ್ಯಾತ ಅಂತ."

ಸನ್ಯಾಲ: "ದಯುವಿಟ್ಟು ಆ ಅಂಶವನ್ನು ಸ್ವಲ್ಪ ವಿಶದಪಡಿಸಬೇಕು. ನನಗದು ಸರಿಯಾಗಿ ಅರ್ಥವಾಗಲಿಲ್ಲ."

ಶ್ರೀರಾಮಕೃಷ್ಣರು: "ಸಾಗರದ ಉದಾಹರಣೆ ತೆಗೆದುಕೊ. ಅದನ್ನು ಅನಂತ

ವೆಂದೇ ಭಾವಿಸಬಹುದು. ಆದರಲ್ಲಿ ಕೆಲವು ಸ್ಥಳಗಳಲ್ಲಿ ಮಾತ್ರ ವಿಶೇಷ ಕಾರಣಗಳಿಂದಾಗಿ ನೀರು ಗಡ್ಡೆ ಕಟ್ಟಿ ಮಂಜಾಗುತ್ತದೆ. ಹೀಗೆ ಗಡ್ಡೆ ಕಟ್ಟಿದ ನೀರು, ಎಂದರೆ ಮಂಜುಗಡ್ಡೆ—ಅನೇಕ ಉಪಯೋಗಗಳಿಗೆ ಒದಗುತ್ತದೆ. ಅವತಾರ ಎನ್ನುವುದೂ ಹೀಗೆಯೇ. ಸಾಗರದ ನೀರು ಹೇಗೆ ಅನಂತವೋ ಹಾಗೆಯೇ ವಿಶ್ವದಲ್ಲಿ ಅನಂತ ಶಕ್ತಿಯೊಂದಿದೆ; ಇದು ಕೆಲಕೆಲವು ಸ್ಥಳಗಳಲ್ಲಿ ಒಂದು ಆಕಾರ ತಳೆದು ಹುಟ್ಟುತ್ತದೆ. ಇಂಥ ಆಕಾರಗಳನ್ನೇ ನೀವು 'ಮಹಾಪುರುಷರು' ಎನ್ನುತ್ತೀರಿ. ಆದರೆ ಸರಿಯಾಗಿ ಹೇಳಬೇಕೆಂದರೆ, ಅವರು ಸರ್ವವ್ಯಾಪಕವಾದ ಆದ್ಯಾಶಕ್ತಿಯ ಆಂಶಿಕ ರೂಪ, ಅಥವಾ ಭಗವಂತನ ಅವತಾರರು. ಮಹಾಪುರುಷನೊಬ್ಬನ ಮಹಿಮೆಯೆಂಬುದು ತತ್ತ್ವತಃ ಆದ್ಯಾಶಕ್ತಿಯ ಸ್ವರೂಪವೇ ಆಗಿದೆ.''

ಸನ್ಯಾಲ: ''ಅಭಿಪ್ರಾಯವಾಯಿತು; ಆದರೆ ಈ ಮಾತನ್ನು ನಾವು ಪೂರ್ತಿಯಾಗಿ ಅನುಮೋದಿಸಲಾರೆವು.''

ಹೀಗೆ ಮಾತು ಮುಂದುವರಿಯಿತು. ಶ್ರೀರಾಮಕೃಷ್ಣರು ತಮ್ಮ ಮನಮುಟ್ಟುವ ಶೈಲಿಯಲ್ಲಿ ಇನ್ನೂ ಅನೇಕಾನೇಕ ಆಧ್ಯಾತ್ಮಿಕ ಸತ್ಯಗಳನ್ನು ತಿಳಿಸಿಕೊಟ್ಟರು. ಆ ವಿವರಣೆಗಳನ್ನು ಕೇಳಿ ಹರಿಹರ ಸನ್ಯಾಲ ಮಾರುಹೋದ. ಅತ್ಯಂತ ಉದಾರವೂ ಸಾರ್ವಲೌಕಿಕವೂ ಆದ ಅವರ ಬೋಧನೆಗಳು ಅವನಿಗೆ ಬಹಳವಾಗಿ ಹಿಡಿಸಿದುವು. ಮತ ಯಾವುದೇ ಆದರೂ ಸಾಧಕ ಪ್ರಾಮಾಣಿಕನಾಗಿದ್ದರೆ ಕೊನೆಯಲ್ಲಿ ಒಂದೇ ಸತ್ಯವನ್ನು ಸಾಕ್ಷಾತ್ಕರಿಸಿಕೊಳ್ಳುತ್ತಾನೆಂಬ ಮಾತು ಅವನಿಗೆ ಸಂಪೂರ್ಣ ಒಪ್ಪಿಗೆಯಾಯಿತು. ಹೀಗೆ, ಶ್ರೀರಾಮಕೃಷ್ಣರಿಂದ ಬೀಳ್ಕೊಂಡು ಹೊರಡುವಾಗ ಅವನಲ್ಲೊಂದು ಪರಿವರ್ತನೆಯೇ ಆಗಿತ್ತು.

ಶ್ರೀರಾಮಕೃಷ್ಣರಿಂದ ಪ್ರಭಾವಿತನಾದ ಮತ್ತೊಬ್ಬ ಕ್ರೈಸ್ತಪ್ರಮುಖನೆಂದರೆ, ಮುಂದೆ ೧೮೮೪ರಲ್ಲಿ ಅವರ ಬಳಿ ಬಂದ ವಿಲಿಯಮ್ಸ್ ಎಂಬಾತ. ಇವನು ಪಂಜಾಬಿನ ಬಳಿಯಲ್ಲೆಲ್ಲೋ ವಾಸವಾಗಿದ್ದವನು. ಈತ ಬೈಬಲ್ಲಿನಲ್ಲಿ ಪಾರಂಗತನಾದ ವಿದ್ವಾಂಸ; ಮೇಲಾಗಿ ನಿಷ್ಠಾವಂತ ಸಾಧಕ. ಬ್ರಾಹ್ಮಸಮಾಜದ ಕೇದಾರನಾಥ ಚಟರ್ಜಿ ಎಂಬವನು ಆ ಪ್ರಾಂತಕ್ಕೆ ತನ್ನ ಸಮಾಜದ ಪ್ರಚಾರಕ್ಕಾಗಿ ಬಂದಿದ್ದಾಗ ವಿಲಿಯಮ್ಸನಿಗೆ ಅವನೊಂದಿಗೆ ನಿಕಟತೆಯುಂಟಾಯಿತು. ದಕ್ಷಿಣೇಶ್ವರದ ಪರಮಹಂಸರ ಆಶ್ರಯ ದೊರೆತ ಮೇಲೆ ಹೇಗೆ ತನ್ನ ಧಾರ್ಮಿಕ ಜೀವನದಲ್ಲಿ ಅಸಾಧಾರಣ ಪರಿವರ್ತನೆಯಾಯಿತೆಂಬುದನ್ನು ಕೇದಾರಬಾಬು ಹೇಳಿಕೊಂಡಾಗ ವಿಲಿಯಮ್ಸನ ಕುತೂಹಲ ಗರಿಗೆದರಿತು. ಬ್ರಾಹ್ಮಸಮಾಜದ ಪತ್ರಿಕೆಗಳಲ್ಲಿ ಆಗಾಗ ಬರುತ್ತಿದ್ದ ಅವರ ಕುರಿತಾದ ವರದಿಗಳನ್ನು ಓದುತ್ತ ಅವರನ್ನು ಕಣ್ಣಾರೆ ಕಾಣಬೇಕೆಂಬ ತೀವ್ರ ಆಕಾಂಕ್ಷೆಯುದಿಸಿತು. ಕಡೆಗೊಂದು ದಿನ ಆ ಉದ್ದೇಶದಿಂದಲೇ ಸಾವಿರಾರು ಮೈಲಿಗಳ ಅಂತರವನ್ನು ಕ್ರಮಿಸಿ ಕಲ್ಕತ್ತಕ್ಕೆ ಬಂದಿಳಿದ. ಆಗ 'ಗುಡ್ ಫ್ರೈಡೇ'ಗೆ ಕೆಲವೇ ದಿನಗಳಿದ್ದುವು. ಅವರನ್ನು ಸಂದರ್ಶಿಸುವ ಕಾರ್ಯಕ್ರಮವನ್ನು ಆ ಶುಭದಿನದವರೆಗೆ ಮುಂದೂಡಿದ.

ಗುಡ್ ಫ್ರೈಡೇಯಂದು ಅವನು ಕೇದಾರ ಚಟರ್ಜಿಯ ಸಂಗಡ ದಕ್ಷಿಣೇಶ್ವರಕ್ಕೆ ಬಂದ. ಆತ ಮಧ್ಯವಯಸ್ಕ; ಸ್ಥೂಲಕಾಯ, ಕಂದುಬಣ್ಣ. ಐರೋಪ್ಯ ಉಡುಗೆ ಧರಿಸಿದ್ದ. ಆತ ಶ್ರೀರಾಮಕೃಷ್ಣರ ಕೋಣೆಯ ಹೊರಗಡೆಯೇ ತನ್ನ ಹ್ಯಾಟು-ಬೂಟುಗಳನ್ನು ಕಳಚಿಟ್ಟು, ಬಾಗಿಲ ಬಳಿ ವಿನಮ್ರತೆಯಿಂದ ಕೈಮುಗಿದು ನಿಂತ. ಒಳಗೆ ಶ್ರೀರಾಮಕೃಷ್ಣರು

ರಾಮಚಂದ್ರ ದತ್ತನೂ ಸೇರಿದಂತೆ ಅನೇಕ ಭಕ್ತರನ್ನುದ್ದೇಶಿಸಿ ಮಾತನಾಡುತ್ತಿದ್ದರು. ದಿವ್ಯಾನಂದವನ್ನು ಸೂಸುವ ಅವರ ಮಗುವಿನಂಥ ಮುಖ ವಿಲಿಯಮ್ಸ್‌ನನ್ನು ಒಮ್ಮೆಗೇ ಸೆರೆಹಿಡಿಯಿತು.

ಭಕ್ತರಲ್ಲೊಬ್ಬ ಇತ್ತ ನೋಡಿ, "ಯಾರೋ ಒಬ್ಬ ಸಾಹೇಬ ಬಂದಿದ್ದಾನೆ; ಕೇದಾರ ಬಾಬು ಹೇಳುತ್ತಿದ್ದನಲ್ಲ, ಅವನೇ ಇರಬೇಕು" ಎನ್ನುತ್ತ ಶ್ರೀರಾಮಕೃಷ್ಣರ ಗಮನ ಸೆಳೆದ. ಹಠಾತ್ತನೆ ಅವರಲ್ಲೊಂದು ಪರಿವರ್ತನೆಯುಂಟಾದಂತೆ ಕಂಡಿತು. ಭಾವವಶ ರಾಗಿ ಮೇಲೆದ್ದು ಮೈಮೇಲೆ ಸ್ವಾಧೀನವಿಲ್ಲದವರಂತೆ ಆಗಂತುಕನನ್ನು ಸ್ವಾಗತಿಸಲು ಧಾವಿಸಿದರು. ತಮ್ಮ ಪಂಚೆಯ ಒಂದು ತುದಿ ಜಾರಿ ನೆಲ ಗುಡಿಸುತ್ತಿರುವುದರ ಪರಿ ವೆಯೂ ಅವರಿಗಿರಲಿಲ್ಲ.

ಶ್ರೀರಾಮಕೃಷ್ಣರು ಹೊರಬರುತ್ತಿದ್ದಂತೆಯೇ ವಿಲಿಯಮ್ಸ್ ಅವರ ಮುಂದೆ ಮಂಡಿಯೂರಿ ಕೈಮುಗಿದು ಕುಳಿತುಬಿಟ್ಟ. ಕಂಬನಿ ಸುರಿಯುವ ಕಂಗಳಿಂದ ಅವರನ್ನೇ ದಿಟ್ಟಿಸತೊಡಗಿದ. ಶ್ರೀರಾಮಕೃಷ್ಣರು ಗಾಢ ಸಮಾಧಿಗೇರಿ ನಿಶ್ಚಲರಾಗಿ ನಿಂತುಬಿಟ್ಟರು. ಅವರ ವ್ಯಕ್ತಿತ್ವದಿಂದ ಆನಂದವೆಂಬುದು ಎಲ್ಲೆಡೆಗೂ ಸುಮ್ಮನೆ ಚಿಮ್ಮುತ್ತಿರುವಂತೆ ತೋರುತ್ತಿತ್ತು. ವಿಲಿಯಮ್ಸ್ ಅವರ ಪಾದಗಳಿಗೆ ಮುತ್ತಿಟ್ಟು ತನ್ನ ಹರ್ಷಾಶ್ರು ಗಳಿಂದಲೇ ಅವುಗಳನ್ನು ತೊಳೆದ. ನಿಮಿಷಾರ್ಧದಲ್ಲಿ ನಡೆದ ಈ ವಿಸ್ಮಯಕರ ಪ್ರಸಂಗ ವನ್ನು ತೆರೆದ ಕಂಗಳಿಂದ ವೀಕ್ಷಿಸುತ್ತಿದ್ದ ಭಕ್ತರೆಲ್ಲ ವಿಗ್ರಹಗಳಂತಾದರು. ಇವರಿರ್ವರ ನಡುವೆ ಯಾವ ಮೌನಸಂವಾದ ಸಾಗಿದೆಯೆಂಬುದನ್ನು ಅವರು ಊಹಿಸಲಾರ ದಾಗಿದ್ದರು.

ಸ್ವಲ್ಪ ಹೊತ್ತಿನಲ್ಲಿ ಶ್ರೀರಾಮಕೃಷ್ಣರು ಪ್ರಕೃತಿಸ್ಥರಾಗಿ, ಅವನ ಕೈಹಿಡಿದು ಒಳಗೆ ಕರೆತಂದರು. ಅವನಿಗಾಗಿ ಒಂದು ಚಾಪೆ ಹಾಕಿ, ತಾವೊಂದರ ಮೇಲೆ ಕುಳಿತರು. ಎರಡು ಚಾಪೆಗಳ ಮಧ್ಯೆ ಸಣ್ಣ ಅಂತರವಿದ್ದುದನ್ನು ತೋರಿಸುತ್ತ ಸ್ವಲ್ಪ ಹಾಸ್ಯವಾಗಿ, "ನೋಡು, ಒಂದು ಬೆರಳಿನಷ್ಟು ಅಂತರವಿರಿಸಿದ್ದೇನೆ" ಎಂದರು. ವಿಲಿಯಮ್ಸ್ ಮುಗುಳ್ನಕ್ಕು ನುಡಿದ: "ಸ್ವಾಮಿ, ಚಾಪೆಗಳ ನಡುವೆ ಅಂತರವಿರಬಹುದು. ಆದರೆ ನನ್ನ ಹೃದಯ ಅದಾಗಲೇ ನಿಮ್ಮದರೊಂದಿಗೆ ಸೇರಿಕೊಂಡುಬಿಟ್ಟಿದೆ."

'ಯಾರಾದರೂ ದೇವರನ್ನು ಪ್ರತ್ಯಕ್ಷ ಕಾಣಲು ಸಾಧ್ಯವೆ?'—ಈ ಪ್ರಶ್ನೆಗೆ ಉತ್ತರವನ್ನು ಕಂಡುಕೊಳ್ಳುವುದೇ, ಅವನು ಪಂಜಾಬಿನಿಂದ ಬಂಗಾಳದವರೆಗೆ ಬಂದ ದ್ದರ ಮುಖ್ಯೋದ್ದೇಶ. ಆದರೆ ಪರಮಾಶ್ಚರ್ಯದ ಸಂಗತಿಯೆಂದರೆ ಅವನು ಆ ಪ್ರಶ್ನೆಯನ್ನು ಹಾಕುವ ಪ್ರಮೇಯವೇ ಬರಲಿಲ್ಲ. ಅವನು ತನ್ನ ಕಲ್ಪನೆಗೆ ಮೀರಿದ ಅನುಭವವೊಂದನ್ನು ಅದಾಗಲೇ ಪಡೆದುಕೊಂಡಿದ್ದ! ಏನದು? ಅವನೇ ಅದನ್ನು ಆಮೇಲೆ ಭಕ್ತರಿಗೆ ತಿಳಿಸುತ್ತಾನೆ: "ನಾನು ಶ್ರೀರಾಮಕೃಷ್ಣರಲ್ಲಿ ಸ್ವಯಂ ಏಸು ಕ್ರಿಸ್ತನನ್ನು ಕಣ್ಣಾರೆ ಕಂಡು ಧನ್ಯನಾದೆ" ಎಂದು. ತಾನು ಬಂದಿರುವುದು ಒಬ್ಬ ಹಿಂದೂವಿನ ಸನ್ನಿಧಿಗೆ ಎನ್ನುವುದನ್ನೇ ಆತ ಮರೆತಂತಿತ್ತು. ತನ್ನ ಇಷ್ಟದೈವವಾದ ಏಸುಕ್ರಿಸ್ತನು ಶ್ರೀರಾಮಕೃಷ್ಣರ ಶರೀರದಲ್ಲಿ ಆವಿರ್ಭವಿಸಿದ್ದಾನೆಂದು ಕಂಡುಕೊಂಡ ಆತ ಪರಮಭಕ್ತಿ ಯಿಂದ ಕೈಮುಗಿದುಕೊಂಡೇ ಕುಳಿತಿದ್ದ.

ಪ್ರಾರಂಭದ ಕೆಲವು ಮಾತುಗಳಾದ ಮೇಲೆ ಶ್ರೀರಾಮಕೃಷ್ಣರು ಆತನನ್ನು ಇದ್ದ ಕ್ಕಿದ್ದಂತೆ ಪ್ರಶ್ನಿಸಿದರು:

"ಒಳ್ಳೇದು, ಇದರ (ತಮ್ಮ) ಬಗ್ಗೆ ನಿನ್ನ ಅಭಿಪ್ರಾಯವೇನು ? ಇದು ಯಾರೆಂದು ನಿನ್ನ ಭಾವನೆ ?"

ಒಡನೆಯೇ ಆತ ದೃಢಸ್ವರದಲ್ಲಿ ಉತ್ತರಿಸುತ್ತಾನೆ: "ಸ್ವಾಮಿ, ಭಗವಂತನ ಪುತ್ರನೂ ಜ್ಯೋತಿರ್ಮಯನೂ ಆದ ಏಸುಕ್ರಿಸ್ತನೇ ನೀವು !"

ಅದಾದ ಮೇಲೆ ಅವನು ಇನ್ನೂ ಕೆಲವು ಬಾರಿ ಶ್ರೀರಾಮಕೃಷ್ಣರನ್ನು ಸಂದರ್ಶಿಸಿದ. ಇವು ಅವನಲ್ಲಿ ಅಚ್ಚಳಿಯದ ಪ್ರಭಾವ ಬೀರಿ, ಆತನ ಆಧ್ಯಾತ್ಮಿಕ ಜೀವನವನ್ನು ಸಮೃದ್ಧಗೊಳಿಸಿದುವು. ಶ್ರೀರಾಮಕೃಷ್ಣರು ಅವತಾರಪುರುಷರೆಂಬ ನಂಬಿಕೆ ಅವನಿಗುಂಟಾಯಿತು. ಕೆಲಕಾಲದ ಮೇಲೆ ಅವರ ಆಜ್ಞೆಯಂತೆ ಸಾಂಸಾರಿಕ ಜೀವನವನ್ನು ತ್ಯಜಿಸಿ, ಹಿಮಾಲಯದಲ್ಲಿ ವಾಸವಾಗಿದ್ದುಕೊಂಡು ಸಾಧನೆಗಳಲ್ಲಿ ತನ್ನ ಆಯುಷ್ಯವನ್ನು ಸವೆಸಿ ಲೋಕಯಾತ್ರೆ ಮುಗಿಸಿದ.

ಹತ್ತೊಂಬತ್ತನೇ ಶತಮಾನದ ಉತ್ತರ ಭಾಗವು ವಂಗಸಾಹಿತ್ಯ ಚರಿತ್ರೆಯಲ್ಲಿ ಮಹತ್ವಪೂರ್ಣವಾದುದು. ವಂಗಸಾಹಿತ್ಯದ ಕೀರ್ತಿಪತಾಕೆಯನ್ನು ಎತ್ತರಕ್ಕೆ ಏರಿಸಿದ ಅನೇಕಾನೇಕ ಲೇಖಕರೂ ಕೃತಿಗಳೂ ಬೆಳಕಿಗೆ ಬಂದದ್ದು ಆ ಅವಧಿಯಲ್ಲೇ. ಆ ಸಾಹಿತಿಗಳ ಪೈಕಿ ಬಹುಶಃ ಅಗ್ರಗಣ್ಯನೂ ಅತ್ಯಂತ ಪ್ರತಿಭಾವಂತನೂ ಆದವನೆಂದರೆ ಬಂಕಿಮಚಂದ್ರ ಚಟರ್ಜಿ ('ವಂದೇಮಾತರಂ'ನ ಕರ್ತೃ). ಇವನನ್ನು ಭಾರತೀಯ-ಪಾಶ್ಚಾತ್ಯ ಸಂಸ್ಕೃತಿಗಳ ಸಂಮಿಶ್ರಣದ ಪ್ರತಿನಿಧಿ ಎನ್ನಬಹುದು. ಈತ ಹಿಂದೂಶಾಸ್ತ್ರಗಳಿಗೆ ಆಧುನಿಕ ವ್ಯಾಖ್ಯಾನ ನೀಡುತ್ತಿದ್ದ; ತೀವ್ರತರ ಸಾಮಾಜಿಕ ಸುಧಾರಣೆಗಳನ್ನು ಬೆಂಬಲಿಸುತ್ತಿದ್ದ.

ನಾವು ಹಿಂದೆಯೇ ನೋಡಿದಂತೆ, ಶ್ರೀರಾಮಕೃಷ್ಣರ ಆತ್ಮೀಯ ಭಕ್ತ ಅಧರಸೇನನಿಗೆ ಬಂಕಿಮಚಂದ್ರನ ಪರಿಚಯ ಚೆನ್ನಾಗಿತ್ತು. ಬಂಕಿಮನಿಗೂ ತನ್ನ ಇತರ ಗಣ್ಯ ಸ್ನೇಹಿತರಿಗೂ ಒಮ್ಮೆ ಶ್ರೀರಾಮಕೃಷ್ಣರನ್ನು ಸಂಧಿಸುವ ಅವಕಾಶ ಕಲ್ಪಿಸಿಕೊಡುವುದಕ್ಕಾಗಿ ಅವನು ಒಂದು ದಿನವನ್ನು ಗೊತ್ತುಪಡಿಸಿದ.

ಅಂದು ೬ನೇ ಡಿಸೆಂಬರ್, ೧೮೮೪. ಅಧರಸೇನನ ಮನೆಯಲ್ಲಿ ದೊಡ್ಡ ಔತಣ ಏರ್ಪಾಡಾಗಿದೆ. ಶ್ರೀರಾಮಕೃಷ್ಣರು ತಮ್ಮ ಭಕ್ತರೊಂದಿಗೆ ಆಗಮಿಸಿದ್ದಾರೆ. ಅವರನ್ನು ಭೇಟಿಯಾಗಿ ಅವರ ಯೋಗ್ಯತೆಯನ್ನಳೆಯಲು ಬಂಕಿಮಚಂದ್ರನೂ ಅಧರನ ಸ್ನೇಹಿತರಾದ ಕೆಲವು ಡೆಪ್ಯುಟಿ ಮ್ಯಾಜಿಸ್ಟ್ರೇಟರುಗಳೂ ಬಂದಿದ್ದಾರೆ.

ಅಧರಸೇನ ಶ್ರೀರಾಮಕೃಷ್ಣರಿಗೆ ಬಂಕಿಮನನ್ನು ಪರಿಚಯಿಸಿದ:

"ಇವರು ಬಂಕಿಮಬಾಬು ಅಂತ. ದೊಡ್ಡ ವಿದ್ವಾಂಸರು. ಅನೇಕ ಗ್ರಂಥಗಳನ್ನು ರಚಿಸಿದ್ದಾರೆ."

ಈಗ ನಡೆದ ಅವರಿಬ್ಬರ ಸಂಭಾಷಣೆಯ ಮೊದಲ ಒಂದೆರಡು ಮಾತುಗಳೇ ಅಂದಿನ ಇಡೀ ಸಂದರ್ಶನದ ಚಿತ್ರವನ್ನು ಕೊಡುವಂತಿದೆ.

ಶ್ರೀರಾಮಕೃಷ್ಣರು (ಮುಗುಳ್ನಗುತ್ತ): "ಏನು, 'ಬಂಕಿಮ'? ಒಳ್ಳೇದು, ಯಾವುದಪ್ಪಾ ನಿನ್ನನ್ನು ಬಾಗುವಂತೆ ಮಾಡಿದ್ದು?"('ಬಂಕಿಮ' ಎಂದರೆ 'ಬಾಗಿದ' ಎಂದರ್ಥ.)

ಬಂಕಿಮಚಂದ್ರ ಹಾಸ್ಯವಾಗಿಯೇ ಉತ್ತರಿಸಿದ: "ಬೂಟ್ಸು ಸ್ವಾಮಿ ಬೂಟ್ಸು! ಬಿಳಿಯರ ಬೂಟ್ಸಿನ ಒದೆತದಿಂದಾಗಿ ಬಾಗಿಹೋಗಿದ್ದೇನೆ." (ಅದು ಬಿಳಿಯರ ಆಳ್ವಿಕೆಯ ಕಾಲ.)

ಆಗ ಶ್ರೀರಾಮಕೃಷ್ಣರು, "ಛೆ ಛೆ, ಹಾಗಲ್ಲ ಅದು" ಎನ್ನುತ್ತ ಮಾತನ್ನು ಭಗವದ್ವಿಚಾರವಾಗಿ ತಿರುಗಿಸಿ, ಶ್ರೀಕೃಷ್ಣನನ್ನು ತಾತ್ತ್ವಿಕ ಆಧಾರದ ಮೇಲೆ ವಿವರಿಸತೊಡಗಿದರು:

"ರಾಧೆಯ ಪ್ರೇಮದ ದೆಸೆಯಿಂದ ಕೃಷ್ಣ ಬಾಗಿ ತ್ರಿಭಂಗಿಯಲ್ಲಿ ನಿಂತಿದ್ದಾನೆ ಅಂತ ಹೇಳುತ್ತಾರೆ. ಕೃಷ್ಣನ ಬಣ್ಣ ಕಪ್ಪು; ಮತ್ತು ಆತ ಕುಬ್ಜ. ಇದರ ಅರ್ಥವೇನುಗೊತ್ತೆ? ದೂರದಿಂದ ನೋಡಿದಾಗ ಸಮುದ್ರ ಕಪ್ಪಾಗಿ ಕಾಣುತ್ತದೆ. ಆದರೆ ಹತ್ತಿರ ಬಂದು

ಕೈಯಲ್ಲಿ ಒಂದು ಬೊಗಸೆ ನೀರು ತೆಗೆದುಕೊಂಡು ನೋಡಿದಾಗ ಅದಕ್ಕೆ ಯಾವ ಬಣ್ಣವೂ ಇಲ್ಲ. ಹಾಗೆಯೇ ನಾವು ಭಗವಂತನಿಂದ ಬಹುದೂರದಲ್ಲಿರುವಾಗ ಆತ ಶ್ಯಾಮವರ್ಣದವನಾಗಿ ತೋರುತ್ತಾನೆ. ಗಾತ್ರದ ವಿಷಯವೂ ಅಷ್ಟೆ. ಸೂರ್ಯ ತುಂಬ ದೂರದಲ್ಲಿರುವುದರಿಂದ ಬಹಳ ಚಿಕ್ಕದಾಗಿ ಕಾಣುತ್ತಾನೆ. ಆದರೆ ಹತ್ತಿರ ಹೋಗಿ ನೋಡಿದರೆ ಆತ ಚಿಕ್ಕದಾಗಿ ತೋರುವುದಿಲ್ಲ. ಆದರೆ ಇದೆಲ್ಲ ಬಹುದೂರದ ಮಾತು. ಸಮಾಧಿಸ್ಥಿತಿಗೇರಿದ ಹೊರತು ಆ ಅನುಭವ ದೊರೆಯದು. ಎಲ್ಲಿಯವರೆಗೆ ನಾನು-ನೀನು ಎಂಬ ಭಾವ ನಮ್ಮೊಳಗಿರುತ್ತದೆಯೋ ಅಲ್ಲಿಯವರೆಗೆ ನಾಮ-ರೂಪಗಳೂ ಇದ್ದೇ ಇರುತ್ತವೆ. ಇವೆಲ್ಲವೂ ಆತನ ಲೀಲೆಯೇ.''

ಈಗ ಶ್ರೀರಾಮಕೃಷ್ಣರು ರಾಧಾಕೃಷ್ಣ ತತ್ತ್ವವನ್ನು ತಿಳಿಸಿಕೊಟ್ಟರು:

''ಕೃಷ್ಣ ರಾಧೆಯರೆಂದರೆ ಪುರುಷ (ಭಗವಂತ) ಮತ್ತು ಆತನ ಶಕ್ತಿ—ಆದ್ಯಾಶಕ್ತಿ. ಅವರಿಬ್ಬರಿಗೂ ಯಾವ ಭೇದವೂ ಇಲ್ಲ. ಪುರುಷನಿಲ್ಲದೆ ಪ್ರಕೃತಿಯಿಲ್ಲ, ಪ್ರಕೃತಿಯಿಲ್ಲದೆ ಪುರುಷನಿಲ್ಲ. ಇದು ಅಗ್ನಿ ಮತ್ತು ಅದರ ದಾಹಕ ಗುಣದಂತೆ—ಒಂದನ್ನು ಬಿಟ್ಟು ಮತ್ತೊಂದನ್ನು ಭಾವಿಸಲಾಗದು. ಆದ್ದರಿಂದಲೇ ರಾಧಾಕೃಷ್ಣರ ಯುಗಲಮೂರ್ತಿಯಲ್ಲಿ ಕೃಷ್ಣನ ದೃಷ್ಟಿ ರಾಧೆಯ ಕಡೆಗಿರುವುದು, ರಾಧೆಯ ದೃಷ್ಟಿ ಕೃಷ್ಣನ ಕಡೆಗಿರುವುದು. ರಾಧೆಯದು ಮಿಂಚಿನಂತಹ ಗೌರವರ್ಣ; ಅದಕ್ಕಾಗಿಯೇ ಕೃಷ್ಣ ಪೀತಾಂಬರವನ್ನುಡುವುದು. ಕೃಷ್ಣನದು ನೀಲಮೇಘವರ್ಣ; ಆದ್ದರಿಂದಲೇ ರಾಧೆ ನೀಲಾಂಬರ ತೊಡುವುದು, ನೀಲರತ್ನಗಳಿಂದ ಸಿಂಗರಿಸಿಕೊಳ್ಳುವುದು. ರಾಧೆ ಕಾಲಿಗೆ ಗೆಜ್ಜೆ ತೊಡುತ್ತಾಳೆ; ಆದ್ದರಿಂದ ಕೃಷ್ಣನೂ ಗೆಜ್ಜೆ ತೊಡುತ್ತಾನೆ. ಇವುಗಳ ಅರ್ಥ ಏನೆಂದರೆ, ಪ್ರಕೃತಿಪುರುಷರಲ್ಲಿ ಅಂತರಂಗ-ಬಹಿರಂಗಗಳೆರಡರಲ್ಲಿಯೂ ಸಂಪೂರ್ಣ ಸಾಮರಸ್ಯವಿದೆ ಅಂತ.''

ಶ್ರೀರಾಮಕೃಷ್ಣರು ತಮ್ಮ ಮಾತನ್ನು ನಿಲ್ಲಿಸಿದಾಗ ಬಂಕಿಮ ಮತ್ತು ಅವನ ಸ್ನೇಹಿತರು ಪರಸ್ಪರ ಇಂಗ್ಲಿಷಿನಲ್ಲಿ ಮಾತಾಡಿಕೊಳ್ಳತೊಡಗಿದರು.

ಶ್ರೀರಾಮಕೃಷ್ಣರು (ಮುಗುಳ್ನಗುತ್ತ): ''ಏನು ಸಮಾಚಾರ ? ಇಂಗ್ಲಿಷಿನಲ್ಲಿ ಏನು ಮಾತನಾಡಿಕೊಳ್ಳುತ್ತಿದ್ದೀರಿ ?''

ಅವರು ಕೇಳಿದ ಧಾಟಿಯನ್ನು ಕಂಡೇ ಎಲ್ಲರೂ ನಕ್ಕರು.

ಅಧರಸೇನ: ''ಅಂಥದೇನಿಲ್ಲ. ನೀವು ಕೃಷ್ಣರೂಪಕ್ಕೆ ವಿವರಣೆ ಕೊಟ್ಟಿರಲ್ಲ, ಅದರ ಬಗ್ಗೆ ವಿಚಾರ ಮಾಡುತ್ತಿದ್ದೆವು ಅಷ್ಟೆ.''

ಶ್ರೀರಾಮಕೃಷ್ಣರು (ಮುಗುಳು ನಗುತ್ತ): ''ನನಗೊಂದು ಕಥೆ ಜ್ಞಾಪಕಕ್ಕೆ ಬಂದು ನಗು ಬರುತ್ತಿದೆ. ಒಮ್ಮೆ ಒಬ್ಬ ಕ್ಷೌರಿಕ ದೊಡ್ಡಮನುಷ್ಯನೊಬ್ಬನಿಗೆ ಕ್ಷೌರ ಮಾಡುತ್ತಿದ್ದನಂತೆ. ಆಕಸ್ಮಾತ್ತಾಗಿ ಕತ್ತಿ ತಗಲಿ ಆ ದೊಡ್ಡ ಮನುಷ್ಯನಿಗೆ ಸ್ವಲ್ಪ ಗಾಯವಾಯಿತು. ತಕ್ಷಣ ಆತ 'ಡ್ಯಾಮ್ !' (Damn ಎಂದರೆ 'ಥತ್ !' ಎಂದಂತೆ) ಅಂತ ಕೂಗಿಕೊಂಡ. ಕ್ಷೌರಿಕನಿಗೆ 'ಡ್ಯಾಮ್' ಅಂದರೇನು ಅಂತ ಗೊತ್ತಿರಲಿಲ್ಲ. ಅದೇನೋ ಬೈಗುಳ ಇರಬೇಕು ಎಂದುಕೊಂಡು ತನ್ನ ಸಲಕರಣೆಯನ್ನೆಲ್ಲ ಬದಿಗಿಟ್ಟುಬಿಟ್ಟ. ಅಂಗಿಯ ತೋಳುಗಳನ್ನು ಹಿಂದಕ್ಕೆ ಸರಿಸಿಕೊಂಡು ಒಳ್ಳೇ ಜಗಳಕ್ಕೆ ನಿಂತುಕೊಂಡವನ ಹಾಗೆ ಕೇಳಿದ: 'ಯಜಮಾನ್ರೇ, ನನ್ನನ್ನು ಅದೇನೋ 'ಡ್ಯಾಮ್' ಅಂತ ಕರೆದಿರಲ್ಲ, ಹಾಗೆಂದರೆ ಏನರ್ಥ ಹೇಳಿ.' ಆಗ ಆ ದೊಡ್ಡಮನುಷ್ಯ, 'ಅಯ್ಯೋ ! ನೀನು ಸುಮ್ಮನೆ ಕ್ಷೌರ ಮಾಡಿ ಮುಗಿಸಯ್ಯ ! ಅದಕ್ಕೊಂದು ಅರ್ಥಗಿರ್ಥ ಏನೂ ಇಲ್ಲ. ಸ್ವಲ್ಪ ಹುಷಾರಾಗಿ ಕೆಲಸ ಮಾಡು

ಅಷ್ಟೇ' ಎಂದ. ಆದರೆ ಈ ಕ್ಷೌರಿಕ ಅಷ್ಟಕ್ಕೆ ಸುಮ್ಮನಾಗೋ ಆಸಾಮಿಯಲ್ಲ. ಅವನೆಂದ, 'ಇಲ್ಲಿ ನೋಡ್ರೀ, ಆ ಡ್ಯಾಮ್ ಅನ್ನೋದಕ್ಕೆ ಏನಾದರೂ ಒಳ್ಳೇ ಅರ್ಥ ಇದ್ದರೆ, ನಾನೂ ಒಬ್ಬ ಡ್ಯಾಮ್, ನಮ್ಮಪ್ಪನೂ ಡ್ಯಾಮ್, ನಮ್ಮ ತಾತ ಮುತ್ತಾತ ಹದಿನಾಲ್ಕು ತಲೆ ಮಾರಿನವರೆಲ್ಲರೂ ಡ್ಯಾಮ್‌ಗಳು. (ಎಲ್ಲರೂ ನಕ್ಕರು.) ಇಲ್ಲಾ, ಅದಕ್ಕೇನಾದರೂ ಕೆಟ್ಟ ಅರ್ಥ ಇದ್ದರೆ, ನೀವೂ ಡ್ಯಾಮ್, ನಿಮ್ಮಪ್ಪನೂ ಡ್ಯಾಮ್, ನಿಮ್ಮ ಹದಿನಾಲ್ಕು ತಲೆ ಯವರೆಲ್ಲರೂ ಡ್ಯಾಮ್‌ಗಳು. (ನಗು) ಅಷ್ಟೇ ಅಲ್ಲ, ಅವರೆಲ್ಲ ಡ್ಯಾ ಡ್ಯಾ ಡ್ಯಾಮ್‌ಗಳು, ತಿಳಿದುಕೊಳ್ಳಿ."

ಎಲ್ಲರೂ ನಕ್ಕುನಕ್ಕು ಬಿದ್ದು ಹೊರಳಾಡತೊಡಗಿದರು.

ಬಳಿಕ ಬಂಕಿಮಚಂದ್ರ ಗಂಭೀರವಾಗಿ ಕೇಳಿದ:

"ನೀವೇಕೆ ಪ್ರಚಾರಕಾರ್ಯ ಮಾಡುವುದಿಲ್ಲ?"

ಆಗಿನ ಕಾಲದಲ್ಲಿ ಪಾಂಡಿತ್ಯವುಳ್ಳವರ ಪ್ರಥಮ-ಸಹಜ ಕರ್ತವ್ಯವೇ ತತ್ತ್ವ ಬೋಧನೆ ಮಾಡುವುದು ಎಂಬ ಭಾವನೆ ಜನರಲ್ಲಿ ಬಂದುಬಿಟ್ಟಿತ್ತು. ಅದರಲ್ಲೂ ಶ್ರೀರಾಮಕೃಷ್ಣರು ಇಷ್ಟೊಂದು ವಿಷಯವನ್ನು ತಿಳಿದುಕೊಂಡವರು! ಇಷ್ಟು ಚೆನ್ನಾಗಿ ಮಾತನಾಡಬಲ್ಲವರು! ಇಂಥವರೇಕೆ ಜನರನ್ನು ಸೇರಿಸಿ, ವೇದಿಕೆ ಹತ್ತಿ ನಿಂತು ಉಪದೇಶ ಕೊಡಬಾರದು?—ಎನ್ನಿಸಿರಬೇಕು ಬಂಕಿಮನಿಗೆ. ಆದ್ದರಿಂದಲೇ ಆ ಪ್ರಶ್ನೆ.

ಹಿಂದೆ ಶಶಧರನಿಗೂ ಇತರ ಅನೇಕ ಗಣ್ಯರಿಗೂ ಹೇಳಿದ್ದಂತೆಯೇ ಇಂದು ಬಂಕಿಮನಿಗೂ ಉತ್ತರಿಸಿದರು ಶ್ರೀರಾಮಕೃಷ್ಣರು:

"ಬೋಧನೆಯೆ? ಅದು ಕೇವಲ ಅಹಂಕಾರದ ಮಾತು. ಮನುಷ್ಯ ಒಂದು ಕ್ಷುದ್ರ ಜಂತು. ಉಪದೇಶ ಮಾಡುವುದಕ್ಕೆ ಅವನು ಯಾರು? ಭಗವಂತನೊಬ್ಬನೇ ಬೋಧಿಸಬಲ್ಲವನು. ಯಾರು ಸೂರ್ಯಚಂದ್ರರನ್ನು ಸೃಷ್ಟಿಸಿ ಜಗತ್ತು ಬೆಳಗುವಂತೆ ಮಾಡಿದ್ದಾನೋ ಆ ಭಗವಂತ ಮಾತ್ರ ಉಪದೇಶ ನೀಡಬಲ್ಲ. ಬೋಧನೆ ಎನ್ನುವು ದೇನು ಅಂಥ ಸಾಮಾನ್ಯ ವಿಷಯವೇ? ಭಗವಂತ ತನ್ನ ಸಾಕ್ಷಾತ್ಕಾರ ಕೊಟ್ಟು ಆದೇಶ ನೀಡಿದ ಹೊರತು ಯಾರೂ ಬೋಧನೆ ನೀಡುವಂತಿಲ್ಲ. ಆದರೆ ಆದೇಶವಿಲ್ಲದೆಯೂ ಬೇಕಾದರೆ ಗಂಟಲು ಕಿತ್ತುಕೊಳ್ಳಬಹುದು; ಯಾವನೂ ತಡೆಯುವವನಿಲ್ಲ. ಕೆಲವು ದಿನ ಅವನು ಹೇಳುವುದನ್ನೆಲ್ಲ ಜನ ಕೇಳಿಸಿಕೊಳ್ಳುತ್ತಾರೆ, ಆಮೇಲೆ ಎಲ್ಲವನ್ನೂ ಮರೆತುಬಿಡುತ್ತಾರೆ. ಎಷ್ಟೋ ಖಯಾಲಿಗಳಿರುವ ಹಾಗೆ ಜನಗಳಿಗೆ ಈ ಪ್ರವಚನ ಕೇಳುವುದೂ ಒಂದು ಖಯಾಲಿ ಅಷ್ಟೆ. ನೀನು ಮಾತನಾಡುತ್ತಿರುವವರೆಗೆ ಜನ ಹೇಳು ತ್ತಾರೆ, 'ಆಹ್! ಈತ ಏನು ಸೊಗಸಾಗಿ ಮಾತನಾಡುತ್ತಾನೆ!' ಅಂತ. ಮಾತನ್ನು ನಿಲ್ಲಿಸುವುದೇ ತಡ ಎಲ್ಲಾ ಗಾಳಿಯಲ್ಲಿ ತೂರಿಹೋಗುತ್ತದೆ."

ಈ ಮಾತಿಗೆ ಪೂರಕವಾಗಿ ಶ್ರೀರಾಮಕೃಷ್ಣರು ಅನೇಕ ರಂಜನೀಯ ಸಾಮತಿ ಗಳನ್ನು ಕೊಟ್ಟರು. ಎಲ್ಲರೂ ಗಮನವಿಟ್ಟು ಆಲಿಸುತ್ತಿದ್ದಾರೆ.

ಶ್ರೀರಾಮಕೃಷ್ಣರು (ಬಂಕಿಮನಿಗೆ): "ನೀನೊಬ್ಬ ದೊಡ್ಡ ಪಂಡಿತ, ಅನೇಕ ಪುಸ್ತಕ ಗಳನ್ನು ಬರೆದಿದ್ದೀ ಅಂತ ಕೇಳಿದ್ದೇನೆ. ಒಳ್ಳೇದು, ಮನುಷ್ಯನ ಕರ್ತವ್ಯವೇನು ಎನ್ನುವು ದರ ಬಗ್ಗೆ ನೀನೇನು ಹೇಳುತ್ತಿ? ಸಾವಿನ ಬಳಿಕ ಅವನನ್ನು ಹಿಂಬಾಲಿಸುವುದೇನು ಹೇಳು? ಅಂದಹಾಗೆ ನಿನಗೆ ಜನ್ಮಾಂತರದ ಬಗ್ಗೆ ವಿಶ್ವಾಸವಿದೆ ತಾನೆ?"

ಬಂಕಿಮನಿಗೆ ಜನ್ಮಾಂತರ-ಕರ್ಮಾಂತರಗಳಲ್ಲೆಲ್ಲ ಸ್ವಲ್ಪವೂ ನಂಬಿಕೆಯಿಲ್ಲ. ಆದ್ದ

ರಿಂದ ಕೀಟಲೆಯ ದನಿಯಲ್ಲೇ ಉತ್ತರಿಸಿದ: "ಜನ್ಮಾಂತರ! ಅದೆಂಥದಪ್ಪಾ?"

ಶ್ರೀರಾಮಕೃಷ್ಣರು: "ಆತ್ಮಜ್ಞಾನ ದೊರೆತ ಮೇಲೆ ಪುನರ್ಜನ್ಮವೆಂಬುದು ಇರುವುದಿಲ್ಲ. ಆದರೆ ಅದನ್ನು ಪಡೆದುಕೊಳ್ಳುವವರೆಗೆ ಮತ್ತೆ ಮತ್ತೆ ಜನ್ಮವೆತ್ತಿ ಬರಲೇಬೇಕಾಗುತ್ತದೆ."

ಹೀಗೆನ್ನುತ್ತ ಬತ್ತದ ಉಪಮೆ ಕೊಟ್ಟು ಹೇಳಿದರು:

"ಬೇಯಿಸಿದ ಬತ್ತವನ್ನು ಬಿತ್ತಿದರೆ ಅದು ಮೊಳೆಯುವುದಿಲ್ಲ. ಹಾಗೆಯೇ ಒಬ್ಬನು ಜ್ಞಾನಾಗ್ನಿಯಲ್ಲಿ ಬೆಂದುಹೋದನೆಂದರೆ ಆಮೇಲೆ ಅವನಿಂದ ಈ ಸೃಷ್ಟಿಗೆ ಸಂಬಂಧಿಸಿದ ಯಾವ ಕಾರ್ಯವೂ ನಡೆಯುವುದಿಲ್ಲ."

ಅದಕ್ಕೆ ಬಂಕಿಮನ ಕೊಂಕು ಮಾತು:

(ಮುಗುಳ್ನಗುತ್ತ) "ಮಹಾಶಯರೇ, ಜೊಂಡುಗಿಡದಿಂದ ಕೂಡ ಯಾವ ಕೆಲಸವೂ ಆಗುವುದಿಲ್ಲ."

ಶ್ರೀರಾಮಕೃಷ್ಣರು: "ಆದರೆ ಜ್ಞಾನಿಯನ್ನು ಜೊಂಡುಗಿಡ ಅಂತ ಕರೆಯಲಾದೀತೆ? ಭಗವದ್ದರ್ಶನ ಮಾಡಿದವನು ಅಮೃತಫಲವನ್ನೇ ಗಳಿಸಿರುತ್ತಾನೆ—ಸಾಮಾನ್ಯವಾದ ಸೋರೆಕಾಯಿಯನ್ನೋ ಕುಂಬಳಕಾಯಿಯನ್ನೋ ಅಲ್ಲ."

ಹೀಗೆಂದ ಬಳಿಕ ಅವನನ್ನು ಮೆಲ್ಲನೆ ಛೇಡಿಸುತ್ತಾರೆ:

"ನೋಡು, ಉಪಮೆ ಎಂಬುದು ಒಂದು ನಿರ್ದಿಷ್ಟ ಉದ್ದೇಶಕ್ಕಾಗಿ ಮಾತ್ರವೇ. ನೀನೊಬ್ಬ ಪಂಡಿತನಾಗಿದ್ದುಕೊಂಡು ಹೀಗೆ ಮಾತನಾಡುತ್ತೀಯಲ್ಲ? ಒಬ್ಬ ಮನುಷ್ಯನನ್ನು ಕುರಿತು 'ಅವನೊಬ್ಬ ಹುಲಿ' ಅಂತ ಹೇಳಿದರೆ ಅವನಿಗೆ ಉದ್ದನೆ ಬಾಲ ಇದೆ, ಗಡಿಗೆಯಂಥ ಮುಖ ಇದೆ ಅಂತ ಅರ್ಥವೆ?"

ಎಲ್ಲರೂ ಗಟ್ಟಿಯಾಗಿ ನಕ್ಕರು.

ಪುನರ್ಜನ್ಮದ ಕುರಿತಾಗಿ ಇನ್ನೂ ಸ್ವಲ್ಪ ಮಾತುಕತೆ ನಡೆದಮೇಲೆ ಶ್ರೀರಾಮಕೃಷ್ಣರು ತಮ್ಮ ಹಿಂದಿನ ಪ್ರಶ್ನೆಯನ್ನೇ ಮತ್ತೆ ಕೇಳಿದರು:

"ಒಳ್ಳೇದು, ನೀನೇನು ಹೇಳುತ್ತೀಯೆ—ಮನುಷ್ಯನ ಕರ್ತವ್ಯವೇನು?

ಬಂಕಿಮ ಮತ್ತೆ ತಮಾಷೆಯಾಗಿಯೇ ಉತ್ತರಿಸಿದ: (ಕಿರುನಗೆ ಬೀರುತ್ತ) "ನನ್ನನ್ನು ಕೇಳಿದರೆ ಊಟ, ನಿದ್ರೆ, ಮೈಥುನ—ಇವೇ ಕರ್ತವ್ಯಗಳು ಎನ್ನುತ್ತೇನೆ."

ಆದರೆ ಶ್ರೀರಾಮಕೃಷ್ಣರು ಇದನ್ನು ಹಾಸ್ಯವಾಗಿ ಪರಿಗಣಿಸದೆ ಖಾರವಾಗಿ ನುಡಿದರು: "ಛೀ! ನಾಚಿಕೆ ಹೇಸಿಕೆ ಎಂಥದೂ ಇಲ್ಲವೆ ನಿನಗೆ! ನೀನು ಹಗಲಿರುಳೂ ಏನು ಮಾಡುತ್ತಿರುತ್ತೀಯೋ ಅದೇ ನಿನ್ನ ಬಾಯಿಂದ ಬರುತ್ತದೆ. ನಾವು ಏನು ತಿನ್ನುತ್ತೇವೆಯೋ ಅದರದೇ ತೇಗು. ಮೂಲಂಗಿ ತಿಂದರೆ ಮೂಲಂಗಿಯದೇ ತೇಗು, ಎಳನೀರು ಕುಡಿದರೆ ಎಳನೀರ ವಾಸನೆಯದೇ ತೇಗು. ಸದಾಕಾಲವೂ ನೀನು ಕಾಮಕಾಂಚನದ ಮಧ್ಯದಲ್ಲೇ ಬಿದ್ದಿರುತ್ತೀಯ. ಅದಕ್ಕೇ ನಿನ್ನ ಬಾಯಿಂದ ಇಂಥ ಮಾತುಗಳು ಹೊರಬೀಳುತ್ತಿವೆ. ಭಗವಚ್ಚಿಂತನೆ ಮಾಡದೆ ಬರೀ ಪಾಂಡಿತ್ಯ ಗಳಿಸಿಕೊಂಡುಬಿಟ್ಟರೆ ಏನಾಯಿತು?...

"ರಣಹದ್ದು ಬಹಳ ಎತ್ತರಕ್ಕೇನೋ ಹಾರಿಹೋಗುತ್ತದೆ. ಆದರೆ ಅದರ ದೃಷ್ಟಿಯೆಲ್ಲ ಕೆಳಗೆ ಹೆಣದ ಗುಂಡಿಯ ಮೇಲೆಯೇ. ಪಂಡಿತ ಎನ್ನಿಸಿಕೊಂಡವನು ಬೇಕಾದಷ್ಟು ಪುಸ್ತಕಗಳನ್ನು, ಶಾಸ್ತ್ರಗಳನ್ನು ಓದಿರುತ್ತಾನೆ. ಆತ ಎಷ್ಟೋ ಶ್ಲೋಕಗಳನ್ನು ಎತ್ತಿ

ಹೇಳಬಹುದು; ಗ್ರಂಥಗಳನ್ನು ಬರೆದಿರಬಹುದು. ಆದರೆ ಅವನು ಸ್ತ್ರೀಲೋಲನಾಗಿದ್ದು, ಹೆಸರು ಕೀರ್ತಿ ಧನಕನಕಗಳೇ ಸಾರಸರ್ವಸ್ವ ಅಂತ ಭಾವಿಸುತ್ತಿದ್ದರೆ ಅವನೆಂಥ ಪಂಡಿತ ?...

"ಭಕ್ತನೊಬ್ಬನನ್ನು ಕಂಡು ಕೆಲವರು ಹೇಳಬಹುದು: 'ಇವರುಗಳು ಹಗಲೂ ರಾತ್ರಿ ದೇವರ ವಿಷಯ ಮಾತನಾಡುತ್ತಾರೆ, ಹುಚ್ಚರು ! ಆದರೆ ನಾವು ನೋಡಿ ಎಷ್ಟು ಬುದ್ಧಿವಂತರು ! ಹೇಗೆ ಸುಖವನ್ನು ಹೀರುತ್ತಿದ್ದೇವೆ !' ಅಂತ. ಕಾಗೆ ಕೂಡ ತಾನು ಬಹಳ ಬುದ್ಧಿಶಾಲಿ ಅಂತಲೇ ಭಾವಿಸುತ್ತದೆ. ಆದರೆ ಬೆಳಿಗ್ಗೆ ಎದ್ದೊಡನೆ ಅದು ಮಾಡುವ ಕೆಲಸವೆಂದರೆ ಪರರ ಹೇಸಿಗೆ ತಿನ್ನುವುದು. ನೋಡಿಲ್ಲವೆ, ಅದು ಎಂಥ ಬಿಂಕದಿಂದ ನಡೆದಾಡುತ್ತದೆ ಅಂತ ? ಹೂಂ, ಬುದ್ಧಿಶಾಲಿ ಹಕ್ಕಿಯೇ !"

ಶ್ರೀರಾಮಕೃಷ್ಣರು ತಮ್ಮ ವಾಕ್ಪ್ರಹಾರಗಳನ್ನು ನಿಲ್ಲಿಸಿದಾಗ ಶ್ಮಶಾನಮೌನ ಆವರಿಸಿತ್ತು.

ಬಂಕಿಮಚಂದ್ರ ಎಂಥ ಸುಪ್ರಸಿದ್ಧ ವ್ಯಕ್ತಿ, ಎಂಥ ಮೇಧಾವಿ ! ಆದರೆ ಶ್ರೀರಾಮ ಕೃಷ್ಣರಿಗೆ ಮಾತ್ರ ಅದಾವುದೂ ಲಕ್ಷ್ಯವಿಲ್ಲ. ಹಿಂದೆ ರಾಣಿ ರಾಸಮಣಿಗೇ ಕಪಾಳಮೋಕ್ಷ ಮಾಡಿದವರಲ್ಲವೆ ಅವರು ! ಬಹುಶಃ ಇಷ್ಟೊಂದು ಗಣ್ಯವ್ಯಕ್ತಿಗಳೆದುರಿಗೆ ಅವರು ನೀಡಿದ ವಾಗ್ದಂಡನೆಯೆಂಬುದು ಬಂಕಿಮನ ಪಾಲಿಗೆ ಆ ತಾಡನಕ್ಕಿಂತಲೂ ಕಠಿಣವಾಗ ಬಹುದಿತ್ತು. ಆದರೆ ಸರಳಹೃದಯದ ಶ್ರೀರಾಮಕೃಷ್ಣರ ಮಾತಿನಲ್ಲಿ ನಂಜಿದ್ದರೆ ತಾನೆ ? ಬಂಕಿಮ ಅವರ ಮಾತನ್ನು ಸಹಜವಾಗಿಯೇ ತೆಗೆದುಕೊಂಡು, ಬದಲು ಹೇಳುವ ಸಾಹಸಕ್ಕೆ ಹೋಗಲಿಲ್ಲ. ಬಹುಶಃ ಆ ಮಾತಿನಲ್ಲಿ ಅಂತಹ ಶಕ್ತಿ !

ಈಗ ಶ್ರೀರಾಮಕೃಷ್ಣರು ಮೃದುಸ್ವರದಲ್ಲಿ ಬಂಕಿಮನಿಗೆ ಹೇಳಿದರು:

"ನನ್ನ ಮಾತಿನಿಂದ ನೊಂದುಕೊಳ್ಳಬೇಡ."

ಬಂಕಿಮ: "ಮಹಾಶಯರೆ, ನಾನು ನಿಮ್ಮಿಂದ ಸಿಹಿಮಾತುಗಳನ್ನಷ್ಟೇ ಕೇಳಲು ಬರಲಿಲ್ಲ."

ಶ್ರೀರಾಮಕೃಷ್ಣರು "ನೋಡು, ಜಗತ್ತು ಎಂದರೆ ಕಾಮ, ಕಾಂಚನ ಇಷ್ಟೆ. ಇದಕ್ಕೇ ಮಾಯೆ ಎನ್ನುವುದು... ಮಕ್ಕಳಾದ ಮೇಲೆ ಗಂಡಹೆಂಡಿರು ಅಣ್ಣತಂಗಿಯರ ಹಾಗೆ ಜೀವಿಸಬೇಕು; ಭಗವದ್ವಿಷಯವಾಗಿಯೇ ಮಾತನಾಡಬೇಕು. ಪಶುಭಾವ ನಾಶವಾದ ಹೊರತು ಭಗವದಾನಂದವನ್ನು ಸವಿಯಲಾಗುವುದಿಲ್ಲ... ಹಾಗೆಯೇ, 'ಕಾಂಚನ'. ನಾನು ಗಂಗಾತಟದಲ್ಲಿ ಕುಳಿತು ಕೈಯಲ್ಲಿ ರೂಪಾಯನ್ನೂ ಹಿಡಿ ಮಣ್ಣನ್ನೂ ಹಿಡಿದು, 'ಹೊನ್ನೇ ಮಣ್ಣು, ಮಣ್ಣೇ ಹೊನ್ನು' ಎನ್ನುತ್ತ ಎರಡನ್ನೂ ನೀರಿನಲ್ಲಿ ಬಿಸಾಡಿಬಿಟ್ಟೆ."

ಬಂಕಿಮನಿಗೆ ಇದು ತೀರಾ ವಿಚಿತ್ರವಾಗಿ ತೋರಿತು. ಅವನ ಊಹೆಗೆ ಈ ಭಾವ ಎಟುಕಲಿಲ್ಲ. ಮತ್ತೆ ವಾದಕ್ಕೆ ತೊಡಗಿದ:

"ವ್ಹಾ ! ಹೊನ್ನು ಎಂದರೆ ಮಣ್ಣೆ ? ಚೆನ್ನಾಯಿತು ! ಮಹಾಶಯರೆ, ಕೈಯಲ್ಲಿ ನಾಲ್ಕು ಕಾಸು ಇದ್ದರೆ ಬಡಬಗ್ಗರಿಗೆ ದಾನ ಮಾಡಬಹುದು. ಹೊನ್ನು ಮಣ್ಣಿಗೆ ಸಮಾನ ಎಂದುಬಿಟ್ಟರೆ, ದಯೆ ತೋರುವುದಕ್ಕಾಗಲಿ ಪರೋಪಕಾರ ಮಾಡುವುದಕ್ಕಾಗಲಿ ಎಲ್ಲಿ ಸಾಧ್ಯ ?"

ಈ 'ದಯೆ' 'ಉಪಕಾರ' ಎಂಬ ಶಬ್ದ ಕೇಳಿದರೇ ಶ್ರೀರಾಮಕೃಷ್ಣರ ಕಿವಿಗೆ ಕರಕರೆ ! ನಾರಾಯಣಸ್ವರೂಪಿಗಳಾದ ನರರಿಗೆ ಉಪಕಾರ ಮಾಡಬಲ್ಲವನು ಯಾವನು ?—

ಎಂಬುದು ಅವರ ಭಾವ. ಮತ್ತೆ ಬಂಕಿಮನನ್ನು ಛೇಡಿಸಿದರು:

"ದಯೆ! ಪರೋಪಕಾರ! ಪರೋಪಕಾರ ಮಾಡುತ್ತೇನೆ ಅಂತ ಹೇಳಬೇಕಾದರೆ ಅದೆಷ್ಟು ಎದೆಗಾರಿಕೆ ಇರಬೇಕು! ಮನುಷ್ಯ ತಾನೊಬ್ಬ ಪರೋಪಕಾರಿ ಎಂಬ ಅಹಂಕಾರದಿಂದ ಎಷ್ಟೊಂದು ಬೀಗುತ್ತಿರುತ್ತಾನೆ, ಆದರೆ ಅವನು ನಿದ್ರಿಸುತ್ತಿರುವಾಗ ಅವನ ಬಾಯೊಳಗೆ ಯಾರಾದರೂ ಮೂತ್ರ ಮಾಡಿದರೂ ಅವನಿಗೆ ಗೊತ್ತಾಗುವುದಿಲ್ಲ. ಇಂಥ ಮಾನವ, ಪರೋಪಕಾರ ಮಾಡುವುದಂತೆ!"

ಹೀಗೆಂದ ಶ್ರೀರಾಮಕೃಷ್ಣರು ನಿಷ್ಕಾಮಕರ್ಮದ ಮಹತ್ವ-ಮಾರ್ಗಗಳನ್ನು ವಿವರವಾಗಿ ತಿಳಿಸಿಕೊಟ್ಟು, ಬಳಿಕ ನುಡಿದರು: "...ಈ ಕರ್ಮಯೋಗ ಭಗವಂತನನ್ನು ಪಡೆಯುವುದಕ್ಕೆ ಒಂದು ಮಾರ್ಗ. ಆದರೆ ಬಹಳ ಕಠಿಣವಾದ್ದು. ಕಲಿಯುಗಕ್ಕೆ ಹೇಳಿಸಿದ್ದಲ್ಲ. ದಯಾಪರನೂ ದಾನಿಯೂ ಆದವನು ಈ ಬಗೆಯ ಅನಾಸಕ್ತಿಯಿಂದ ಕರ್ಮ ಮಾಡಿದರೆ ತನಗೆ ತಾನೇ ಶ್ರೇಯಸ್ಸನ್ನು ತಂದುಕೊಳ್ಳುತ್ತಾನೆ... ಜೀವಿಗಳಿಗಾಗಿ ಈ ಲೋಕದಲ್ಲಿ ಸಕಲ ವಿಧದ ಅನುಕೂಲತೆಗಳನ್ನೂ ಮಾಡಿಟ್ಟಿರುವ ಭಗವಂತನೊಬ್ಬನೇ ಉಪಕಾರ ಮಾಡಲು ಶಕ್ತ.

"ಆದ್ದರಿಂದ ಮನುಷ್ಯನ ಕರ್ತವ್ಯವಿಷ್ಟೆ: ಆತನಲ್ಲಿ ಶರಣಾಗುವುದು ಮತ್ತು ವ್ಯಾಕುಲ ಹೃದಯದಿಂದ ಅವನ ದರ್ಶನಕ್ಕಾಗಿ ಪ್ರಾರ್ಥನೆ ಮಾಡುವುದು."

ಹಿಂದೆ ಶಂಭುಮಲ್ಲಿಕ(ಎರಡನೆಯ ರಸದ್ದಾರ) ತಮ್ಮೆದುರು ಇದೇ ರೀತಿಯಲ್ಲಿ ಲೋಕೋಪಕಾರ ಮಾಡುವ ಇಚ್ಛೆಯನ್ನು ವ್ಯಕ್ತಪಡಿಸಿದಾಗ ತಾವು ಅವನಿಗೆ ಹೇಳಿದ ಬುದ್ಧಿಮಾತನ್ನು ಪುನರುಚ್ಚರಿಸಿ, ಶ್ರೀರಾಮಕೃಷ್ಣರು ಹೇಳುತ್ತಾರೆ:

"ಯಾರು ಆಸ್ಪತ್ರೆ ಮುಂತಾದುವನ್ನು ಕಟ್ಟಿಸಿ ಅಷ್ಟರಿಂದಲೇ ಸಂತೋಷಿಸುತ್ತಾರೋ ಅವರು ಸಜ್ಜನರೇ, ಅನುಮಾನವಿಲ್ಲ. ಆದರೆ ಅವರದೇ ಒಂದು ಪ್ರತ್ಯೇಕ ಶ್ರೇಣಿ. ನಿಜವಾದ ಭಕ್ತನಿಗೆ ಮಾತ್ರ ದೇವರಲ್ಲದೆ ಮತ್ತೇನೂ ಬೇಡ. ತುಂಬ ಕೆಲಸ ಕಾರ್ಯ ಒದಗಿಬಂದರೆ ಅವನು, 'ಹೇ ಭಗವಂತ, ಕೃಪೆದೋರಿ ನನ್ನೀ ಕೆಲಸಕಾರ್ಯಗಳನ್ನು ಕಡಿಮೆ ಮಾಡಿಸು. ಸದಾ ಕಾಲವೂ ನಿನ್ನ ಪಾದಪದ್ಮಗಳಲ್ಲಿ ನೆಲಸಿರಬೇಕಾದ ನನ್ನ ಮನಸ್ಸು ಸುಮ್ಮನೆ ಅಲ್ಲಿ ಇಲ್ಲಿ ಅಲೆದು ಶಕ್ತಿಹ್ರಾಸವಾಗುತ್ತಿದೆ' ಅಂತ ವ್ಯಾಕುಲನಾಗಿ ಪ್ರಾರ್ಥಿಸಿಕೊಳ್ಳುತ್ತಾನೆ... ಈ ಜಗತ್ತೆಲ್ಲ ಅನಿತ್ಯ, ಎರಡು ದಿನದ್ದು; ಯಾರು ಇದರ ಕರ್ತನೋ ಅವನೇ ಸತ್ಯ, ನಿತ್ಯ."

ಬಳಿಕ, ವಿಜ್ಞಾನವನ್ನೋದಿ ಸೃಷ್ಟಿವೈಚಿತ್ರ್ಯವನ್ನು ಒಂದಿಷ್ಟು ಅರಿತುಕೊಂಡ ಹೊರತು ಭಗವಂತನನ್ನು ಅರ್ಥಮಾಡಿಕೊಳ್ಳಲು ಅಸಾಧ್ಯ ಎಂಬ ಕೆಲವು 'ಬುದ್ಧಿಜೀವಿ'ಗಳ ಅಭಿಪ್ರಾಯದ ಮಾತು ಬಂತು. ಶ್ರೀರಾಮಕೃಷ್ಣರು ಬಂಕಿಮನನ್ನು ಕೇಳಿದರು, "ನೀನೇನು ಹೇಳುತ್ತೀಯ ಈ ಬಗ್ಗೆ?" ಎಂದು. ಆತ ಆ ಅಭಿಪ್ರಾಯವನ್ನೇ ಸಮರ್ಥಿಸಿದಾಗ, ಅದಕ್ಕೊಪ್ಪದೆ ಶ್ರೀರಾಮಕೃಷ್ಣರೆಂದರು:

"ನಿಮ್ಮೆಲ್ಲರದೂ ಒಂದೇ ಕೂಗು! ಆದರೆ ಅದು ಹಾಗಲ್ಲ. ಮೊದಲು ಭಗವಂತ, ತರುವಾಯ ಆತನ ಸೃಷ್ಟಿ. ಆತನನ್ನು ಪಡೆದುಕೊಳ್ಳಬೇಕು, ಆಮೇಲೆ ಬೇಕೆನಿಸಿದರೆ ಉಳಿದುದನ್ನೆಲ್ಲ ಅರಿತುಕೊಳ್ಳಬಹುದು...

"ನಿನಗೆ ಬೇಕಾದ್ದು ಭಗವಂತನ ಸಾಕ್ಷಾತ್ಕಾರ. ಅದನ್ನು ಬಿಟ್ಟು ಈ ಜಗತ್ತು, ಸೃಷ್ಟಿ, ಸೈನ್ಸು ಇವುಗಳ ವಿಷಯವಾಗೆಲ್ಲ ಯಾಕೆ ತಲೆ ಚಚ್ಚಿಕೊಳ್ಳುತ್ತೀಯ? ನೀನು

ಬಂದಿರುವುದು ಮಾವಿನ ಹಣ್ಣು ತಿನ್ನುವುದಕ್ಕೆ, ತಿಂದು ಹೋಗು ! ಸುಮ್ಮನೆ ತೋಟದಲ್ಲಿ ಎಷ್ಟು ನೂರು ಮರಗಳಿವೆ, ಎಷ್ಟು ಸಾವಿರ ಕೊಂಬೆಗಳಿವೆ, ಎಷ್ಟು ಲಕ್ಷ ಎಷ್ಟು ಕೋಟಿ ಎಲೆಗಳಿವೆ ಇವುಗಳ ವೃತ್ತಾಂತ ನಿನಗೇಕೆ ?"

ಬಂಕಿಮ: "ಸರಿ, ಮಾವಿನ ಹಣ್ಣು ಎಲ್ಲಿ ಸಿಕ್ಕೀತು ?"

ಶ್ರೀರಾಮಕೃಷ್ಣರು: "ಹೃತ್ಪೂರ್ವಕವಾಗಿ ಆತನಲ್ಲಿ ಪ್ರಾರ್ಥಿಸಿಕೊ. ಆತ ಅದನ್ನು ಕೇಳಿಯೇ ಕೇಳುತ್ತಾನೆ. ಆಗ ಅವನು ನಿನಗೆ ಯಾರಾದರೊಬ್ಬ ಸಜ್ಜನನ ಸಂಗ ದೊರಕಿಸಿ ಕೊಡಬಹುದು; ಇಲ್ಲವೆ, 'ಹೀಗೆ ಹೀಗೆ ಮಾಡಿದರೆ ನಿನಗೆ ಭಗವಂತ ಸಿಗುತ್ತಾನೆ' ಎಂದು ಹೇಳುವಂಥವನೊಬ್ಬನು ನಿನಗೆ ಒದಗಿಬರಬಹುದು."

ಆದರೆ ಬಂಕಿಮನಿಗೆ ಮತ್ತೆ ಅಪನಂಬಿಕೆ. 'ಗುರು' ಎಂಬವನೊಬ್ಬ ಬೇಕೆಂಬುದನ್ನೇ ಒಪ್ಪಲಾರದವ ಆತ. ಆದ್ದರಿಂದ ಕುಚೇಷ್ಟೆ ಮಾಡಿದ:

"ಯಾರು ? ಗುರುವೆ ? ಅವನು ಒಳ್ಳೊಳ್ಳೆಯ ಹಣ್ಣುಗಳನ್ನೆಲ್ಲ ತಾನೇ ತಿಂದು, ಕೆಟ್ಟದ್ದನ್ನು ಮಾತ್ರ ನಮಗೆ ಕೊಡುತ್ತಾನೆ !" (ನಗು)

ಶ್ರೀರಾಮಕೃಷ್ಣರು: "ಅವನೇಕೆ ಹಾಗೆ ಮಾಡಿಯಾನು ! ತಾಯಿ ತನ್ನ ಮಕ್ಕಳ ಜೀರ್ಣಶಕ್ತಿಗೆ ಅನುಗುಣವಾಗಿ ಒಬ್ಬೊಬ್ಬನಿಗೆ ಒಂದೊಂದು ಅಡಿಗೆ ಮಾಡಿಹಾಕುತ್ತಾಳೆ. ಇದರ ಅರ್ಥ ಅವಳು ಒಬ್ಬನನ್ನು ಕಡಿಮೆ, ಇನ್ನೊಬ್ಬನನ್ನು ಹೆಚ್ಚು ಪ್ರೀತಿಸುತ್ತಾಳೆ ಎಂದೆ ?... ಗುರುವಾಕ್ಯದಲ್ಲಿ ಶ್ರದ್ಧೆಯಿಡಬೇಕು. ಗುರುವೇ ಸಚ್ಚಿದಾನಂದ. ಆತನ ಮಾತಿನಲ್ಲಿ ವಿಶ್ವಾಸವಿಟ್ಟರೆ ಭಗವಂತ ದೊರೆತುಬಿಡುತ್ತಾನೆ."

ಈ ಮಾತುಗಳನ್ನು ಅವರು ಇನ್ನಷ್ಟು ವಿವರಿಸಿ ಹೇಳಿದರು. ಅನಂತರ ಪ್ರಸಿದ್ಧ ಸಂಗೀತಗಾರ ತ್ರೈಲೋಕ್ಯನಾಥ ಸನ್ಯಾಲ ಹಾಡತೊಡಗಿದ. ಕೀರ್ತನೆಯನ್ನು ಸ್ವಲ್ಪ ಕೇಳುತ್ತಲೇ ಶ್ರೀರಾಮಕೃಷ್ಣರು ಭಗವದಾವೇಶದಿಂದ ಸಮಾಧಿಸ್ಥರಾಗಿ ನಿಂತುಬಿಟ್ಟರು. ಬಾಹ್ಯ ಜ್ಞಾನದ ಲಕ್ಷಣಗಳೊಂದೂ ಇರಲಿಲ್ಲ. ಭಕ್ತರೆಲ್ಲ ಅವರನ್ನು ಸುತ್ತುವರಿದು ನಿಂತರು. ಬಂಕಿಮಚಂದ್ರ ಜನರ ಮಧ್ಯೆ ತೂರಿಕೊಂಡು ಬಂದು ಹತ್ತಿರದಲ್ಲೇ ನಿಂತು ಅವರನ್ನು ನೆಟ್ಟ ದೃಷ್ಟಿಯಿಂದ ನೋಡಲಾರಂಭಿಸಿದ. ಅಂಥ ಸ್ಥಿತಿಯನ್ನು ಅವನೆಂದೂ ಕಂಡವನಲ್ಲ.

ಸ್ವಲ್ಪ ಹೊತ್ತಿನ ಮೇಲೆ ಶ್ರೀರಾಮಕೃಷ್ಣರಿಗೆ ಭಾಗಶಃ ಪ್ರಜ್ಞೆ ಮರಳಿತು. ಈಗ ಅವರು ಕೀರ್ತನೆಗೆ ತಕ್ಕಂತೆ ಪ್ರೇಮೋನ್ಮತ್ತತೆಯಿಂದ ನರ್ತಿಸಲಾರಂಭಿಸಿದರು. ಬಂಕಿಮನೇ ಮೊದಲಾದ ಸುಶಿಕ್ಷಿತ ಗಣ್ಯರು 'ಪ್ರೇಮಾನಂದವೆಂದರೆ, ಭಕ್ತಿಭಾವೋನ್ಮಾದವೆಂದರೆ ಇದೇ ಏನು !' ಎಂದು ಆಲೋಚಿಸುತ್ತ ಅತ್ಯಾಶ್ಚರ್ಯದಿಂದ ಆ ಅದ್ಭುತ ದೃಶ್ಯವನ್ನು ವೀಕ್ಷಿಸಿದರು.

ಕೀರ್ತನೆ ನಿಂತು, ಶ್ರೀರಾಮಕೃಷ್ಣರು ಶಾಂತರಾಗಿ ಕುಳಿತ ಮೇಲೆ ಬಂಕಿಮ ಕೇಳಿದ ಮೊದಲ ಪ್ರಶ್ನೆ ಇದು: "ಭಕ್ತಿ ಬೆಳೆಸಿಕೊಳ್ಳಲು ಮಾರ್ಗವೇನು ?"

ಶ್ರೀರಾಮಕೃಷ್ಣರು ಆದಾಗಲೇ ಅವನ ಮೇಲೆ ಎಂತಹ ಪ್ರಭಾವ ಬೀರಿದ್ದಾರೆ ಎಂಬುದಕ್ಕೆ ಇದೊಂದು ಕುರುಹು.

ಶ್ರೀರಾಮಕೃಷ್ಣರು: "ಮೊದಲು ವ್ಯಾಕುಲತೆ ಪಡಬೇಕು. ಮಗು ತನ್ನ ತಾಯಿಯನ್ನು ಕಾಣದಿದ್ದಾಗ ಪಡುವಂತಹ ಕಾತರತೆ ನಮ್ಮಲ್ಲುಂಟಾದರೆ ಭಗವಂತ ದೊರೆತು ಬಿಡುತ್ತಾನೆ.

"ಪೂರ್ವದಿಗಂತ ಹೊಂಬಣ್ಣ ತಾಳಿದರೆ, ಇನ್ನು ಸೂರ್ಯೋದಯಕ್ಕೆ ಹೆಚ್ಚು

ಹೊತ್ತಿಲ್ಲ ಅಂತ ಹೇಳಿಬಿಡಬಹುದು. ಹಾಗೆಯೇ ಒಬ್ಬನಲ್ಲಿ ಅತ್ಯಂತ ತೀವ್ರವಾದ ವ್ಯಾಕುಲತೆಯುಂಟಾದುದು ಕಂಡುಬಂದರೆ, ಅವನಿನ್ನು ಭಗವತ್ಸಾಕ್ಷಾತ್ಕಾರಕ್ಕೆ ಹೆಚ್ಚು ಕಾಯಬೇಕಿಲ್ಲ ಅಂತ ಗೊತ್ತಾಗುತ್ತದೆ...

"ನಿನಗೊಂದು ಮಾತು ಹೇಳುತ್ತೇನೆ ಕೇಳು. ಸುಮ್ಮನೆ ಮೇಲೆಮೇಲೆ ತೇಲಿದರೆ ಏನು ದೊರೆಯುತ್ತದೆ? ಸ್ವಲ್ಪ ಮುಳುಗು ಹಾಕು. ರತ್ನಗಳು ಬಹಳ ಆಳದಲ್ಲಿವೆ. ಒಳ್ಳೆಯ ಮಾಣಿಕ್ಯ ಬಹಳ ಭಾರವಾದ್ದು; ಅದು ಸಿಗುವುದು ತಳದಲ್ಲೇ. ಆದ್ದರಿಂದ ನಿಜವಾದ ರತ್ನ ಬೇಕಾದರೆ ಸಮುದ್ರದ ಆಳಕ್ಕೆ ಮುಳುಗಬೇಕು."

ಬಂಕಿಮ ಮತ್ತೆ ಬುದ್ಧಿವಂತಿಕೆಯ ಮಾತನಾಡಿದ:

"ಮಹಾಶಯರೇ, ನಾವೇನು ಮಾಡೋಣ? ಬೆನ್ನಿಗೆ ಬೆಂಡು ಬಿಗಿದಿದೆ; ಮುಳುಗಲು ಬಿಡಲೊಲ್ಲದು." (ಎಲ್ಲರೂ ನಗುತ್ತಾರೆ)

ಬಂಕಿಮ ಇಲ್ಲಿ ಪೂರ್ವಸಂಸ್ಕಾರಗಳ ಬೆಂಡಿನ ಬಗ್ಗೆ ಹೇಳುತ್ತಿದ್ದಾನೆ. ಅದಕ್ಕೆ ಶ್ರೀರಾಮಕೃಷ್ಣರ ಉತ್ತರ:

"ಆತನ ಸ್ಮರಣೆ ಮಾಡುತ್ತಿದ್ದರೆ ಸಾಕು, ಎಲ್ಲ ಪಾಪಗಳೂ ಭಸ್ಮವಾಗಿಬಿಡುತ್ತವೆ. ಆದರೆ ಮುಳುಗು ಹಾಕಲೇಬೇಕು; ಇಲ್ಲದಿದ್ದರೆ ರತ್ನ ಸಿಗುವಂತಿಲ್ಲ."

ಈಗ ಅವರು ತಮ್ಮ ಗಂಧರ್ವಕಂಠದಿಂದ ಅದೇ ಭಾವದ ಹಾಡೊಂದನ್ನು ಹಾಡತೊಡಗಿದರು:

*ಮುಳುಗು ಮುಳುಗು ಮನವೆ, ಹರಿಯೊಲವಿನ ಕಡಲಾಳಕೆ...*

ಅಲ್ಲಿ ನೆರೆದಿದ್ದವರೆಲ್ಲ ಮಂತ್ರಮುಗ್ಧರಾದವರಂತೆ ಆಲಿಸಿದರು.

ಬಂಕಿಮನ ಮನದಲ್ಲಿದ್ದಿರಬಹುದಾದ ಪ್ರಶ್ನೆಗೆ ಉತ್ತರವಾಗಿ ಶ್ರೀರಾಮಕೃಷ್ಣರು ಈಗ ಹೇಳತೊಡಗಿದರು:

"ಆದರೆ ಹಾಗೆ ಮುಳುಗಿಬಿಡಲು ಅನೇಕರು ಇಷ್ಟ ಪಡುವುದಿಲ್ಲ. 'ದೇವರು-ದೇವರು ಅಂತ ತಲೆ ಚಚ್ಚಿಕೊಂಡು ಕಡೆಗೆ ಹುಚ್ಚು ಹಿಡಿಸಿಕೊಳ್ಳೋಣವೇ' ಎನ್ನುತ್ತಾರೆ. ಭಗವದ್ಭಕ್ತಿಯಿಂದ ಮತ್ತರಾದವರನ್ನು ಕಂಡು 'ಇವರಿಗೆ ತಲೆ ಕೆಟ್ಟುಹೋಗಿದೆ' ಎನ್ನುತ್ತಾರೆ. ಆದರೆ ಸಚ್ಚಿದಾನಂದವೆಂಬುದು ಅಮೃತಸಾಗರ, ಅದರಲ್ಲಿ ಮುಳುಗಿದವರು ಸಾಯುವುದಿಲ್ಲ, ಬದಲಾಗಿ ಅಮರರಾಗುತ್ತಾರೆ ಎಂಬುದು ಅವರಿಗೆ ತಿಳಿಯದು... ಆದ್ದರಿಂದಲೇ ನಾನು ಹೇಳುವುದು, 'ಆಳಕ್ಕೆ ಮುಳುಗಿ' ಅಂತ."

ಅಂತೂ ಮಹಾ ಪಂಡಿತನಾದ ಬಂಕಿಮಚಂದ್ರ ಇಂದು ಶ್ರೀರಾಮಕೃಷ್ಣರಿಂದ ಬೇಕಾದಷ್ಟು ಪಾಠಗಳನ್ನು ಕಲಿತಂತಾಯಿತು. ಇದೀಗ ಅವನು ಅಲ್ಲಿಂದ ನಿರ್ಗಮಿಸಲು ಉದ್ಯುಕ್ತನಾಗಿದ್ದಾನೆ. ಆದರೆ ತನ್ನ ಕೀಟಲೆ ಮಾತುಗಳನ್ನು ಕೇಳಿ ಶ್ರೀರಾಮಕೃಷ್ಣರು ಎಂಥ ಅಭಿಪ್ರಾಯ ತಳೆದರೋ ಎಂಬ ಶಂಕೆ ಅವನ ಮನದಲ್ಲಿದ್ದಿರಬೇಕು. ಆದ್ದರಿಂದ ಅವರಿಗೆ ಪ್ರಣಾಮ ಸಲ್ಲಿಸಿ ಹೊರಡುವಾಗ ಹೀಗೆಂದ:

"ಮಹಾಶಯರೇ, ನೀವು ಭಾವಿಸಬಹುದಾದಷ್ಟು ಮೂರ್ಖನೇನಲ್ಲ ನಾನು. ನನ್ನದೊಂದು ಪ್ರಾರ್ಥನೆ—ಕೃಪೆ ಮಾಡಿ ನಮ್ಮ ಕುಟೀರಕ್ಕೊಮ್ಮೆ ಪಾದ ಬೆಳೆಸಬೇಕು..."

ಶ್ರೀರಾಮಕೃಷ್ಣರು: "ಬಹಳ ಒಳ್ಳೆಯದು. ಭಗವದಿಚ್ಛೆಯಿದ್ದರೆ ಬರೋಣ."

ಬಂಕಿಮ: "ಅಲ್ಲೂ ಭಗವದ್ಭಕ್ತರನ್ನು ನೋಡುವಿರಿ. ಅಲ್ಲೂ ದೇವರ ಪೂಜೆ ಪುರಸ್ಕಾರಕ್ಕೆ ವ್ಯವಸ್ಥೆಯಿದೆ. ನಾವೆಲ್ಲ ಸೇರಿ ಹರಿನಾಮ ಸ್ಮರಣೆ ಮಾಡುತ್ತೇವೆ."

ಶ್ರೀರಾಮಕೃಷ್ಣರು (ಮುಗುಳ್ನಗುತ್ತ): "ಓಹೋ! ಎಂಥ ಭಕ್ತರನ್ನು? 'ಗೋಪಾಲ ಗೋಪಾಲ! ಕೇಶವ ಕೇಶವ!' ಎನ್ನುತ್ತಿದ್ದರಲ್ಲ, ಅಂಥವರನ್ನೇನು?"

ಆ ಕಥೆ ಗೊತ್ತಿದ್ದವರೆಲ್ಲ ನಕ್ಕರು. ಆದರೆ ಒಬ್ಬ ಭಕ್ತ ಕೇಳಿದ: "ಮಹಾಶಯರೆ, ಅದೇನು ಕಥೆ, 'ಗೋಪಾಲ ಗೋಪಾಲ' ಎನ್ನುವವರದು?"

ಶ್ರೀರಾಮಕೃಷ್ಣರು: "ಹಾಗಾದರೆ ಹೇಳುತ್ತೇನೆ ಕೇಳು. ಒಂದು ದಿನ ಒಬ್ಬ ವ್ಯಕ್ತಿ ತನ್ನದೊಂದು ಬಂಗಾರದ ಒಡವೆಯನ್ನು ಮಾರಲು ಸ್ನೇಹಿತರೊಂದಿಗೆ ಅಕ್ಕಸಾಲಿಗನ ಅಂಗಡಿಗೆ ಹೋದ. ಅದರ ಯಜಮಾನ ಒಬ್ಬ ಮುದುಕ, ಪರಮ ವೈಷ್ಣವ. ಮೈಕೈ ಮೇಲೆಲ್ಲ ಮುದ್ರೆ ಒತ್ತಿಕೊಂಡಿದ್ದಾನೆ, ಜುಟ್ಟು ಬಿಟ್ಟುಕೊಂಡು ತುಲಸೀಮಾಲೆ ಧರಿಸಿದ್ದಾನೆ; ಗಂಭೀರ ಭಾವದಿಂದ ಹರಿನಾಮ ಸ್ಮರಣೆ ಮಾಡುತ್ತಿದ್ದಾನೆ. ಹಾಗೆಯೇ ಅವನ ಮೂರ್‍ನಾಲ್ಕು ಕೆಲಸಗಾರರೂ ಕೂಡ ತಿಲಕ-ಮಾಲೆಗಳನ್ನು ಧರಿಸಿ ಒಳಗೆ ಕೋಣೆಯಲ್ಲಿ ನಾನಾ ಆಭರಣಗಳನ್ನು ತಯಾರಿಸುತ್ತಿದ್ದಾರೆ. ಇವರ ಸಾತ್ವಿಕ ವೇಷ ಭೂಷಣಗಳನ್ನು ಕಂಡು ಆ ಗಿರಾಕಿಯೂ ಅವನ ಸ್ನೇಹಿತರೂ 'ಇವರಂತಹ ಧಾರ್ಮಿಕರು ಮೋಸ ಮಾಡಲಾರರು' ಎಂದು ನಿರ್ಧರಿಸಿದರು; ತಾವು ತಂದ ಆಭರಣವನ್ನು ಮುದುಕನ ಮುಂದಿಟ್ಟು, ಅದಕ್ಕೆ ಬೆಲೆ ಕಟ್ಟಲು ಹೇಳಿದರು. ಮುದುಕ ಅವರನ್ನು ಆದರದಿಂದ ಕುಳ್ಳಿರಿಸಿ ಮೊದಲು ಅವರಿಗೆಲ್ಲ ಗುಡುಗುಡಿ ತಂದುಕೊಡುವಂತೆ ಪರಿಚಾರಕನಿಗೆ ಹೇಳಿದ. ಈಗ ಆ ಒಡವೆಯನ್ನು ಒರೆಗಲ್ಲಿನ ಮೇಲೆ ತಿಕ್ಕಿ ನೋಡಿ, ಆ ದರ್ಜೆಯ ಚಿನ್ನಕ್ಕೆ ಇಂತಿಷ್ಟು ದರ ಎಂದು ತಿಳಿಸಿದ. ಬಳಿಕ ಗಿರಾಕಿಯ ಒಪ್ಪಿಗೆ ಪಡೆದು, ಅದನ್ನು ತೂಕ ಮಾಡುವ ಮೊದಲು ಕರಗಿಸಲು ಒಳಗಿದ್ದ ಕೆಲಸಗಾರನಿಗೆ ಕಳಿಸಿಕೊಟ್ಟ. ಆ ಕೆಲಸಗಾರ ಅದನ್ನು ಕರಗಿಸುತ್ತ, ಇದ್ದಕ್ಕಿದ್ದಂತೆ ಭಕ್ತಿಭಾವದಿಂದ "ಕೇಶವ! ಕೇಶವ!" ಎಂದು ಉದ್ಗಾರ ಮಾಡಿದ. ಒಡನೆಯೇ ಯಜಮಾನ "ಗೋಪಾಲ, ಗೋಪಾಲ!" ಅಂತ ಉದ್ಗರಿಸಿದ. ಒಳಗಿದ್ದ ಇನ್ನೊಬ್ಬ ಕೆಲಸಗಾರ ಆಗ "ಹರಿ ಹರೀ!" ಎಂದ. ಅಷ್ಟೊತ್ತಿಗೆ ಮತ್ತೊಬ್ಬ, ಗಿರಾಕಿಗಳಿಗೆ ಗುಡುಗುಡಿ ತಂದು ಕೊಟ್ಟು ಒಳಗೆ ಹೋದವನು, "ಹರ ಹರ ಹರ" ಎಂದು ಉದ್ಗರಿಸಿದ. ಇವರ ಭಕ್ತಿ, ಧರ್ಮಬುದ್ಧಿ, ನಿಷ್ಠೆ ಇವನ್ನೆಲ್ಲ ಕಣ್ಣಾರೆ ಕಂಡ ಗಿರಾಕಿಗಳು ಬಹಳ ಸಂತೋಷಪಟ್ಟು ನಿಶ್ಚಿಂತೆಯಿಂದ ಗುಡುಗುಡಿ ಸೇದತೊಡಗಿದರು.

"ಆದರೆ ಆ ಅಂಗಡಿಯವರೆಲ್ಲ ಹಾಗೆ ನಾಮೋಚ್ಚಾರಣೆ ಮಾಡುತ್ತಿದ್ದದ್ದಕ್ಕೆ ಇನ್ನೊಂದು ಗೂಢಾರ್ಥ ಇದೆ ಎನ್ನುವುದು ಅವರಿಗೆ ಗೊತ್ತಾಗಲಿಲ್ಲ ಪಾಪ! ಒಳಗಿದ್ದ ಕೆಲಸಗಾರ "ಕೇಶವ ಕೇಶವ" ಎಂದದ್ದು, "ಈ ಗಿರಾಕಿಗಳೆಲ್ಲ ಯಾರು, ಎಂಥವರು?" ಎಂಬರ್ಥದಲ್ಲಿ. (ಬಂಗಾಳಿಯಲ್ಲಿ 'ಕೇಶವ' ಎನ್ನುವುದನ್ನು 'ಕೇಶಬ್' ಎಂದು ಉಚ್ಚರಿಸುತ್ತಾರೆ. 'ಕೇಶಬ್' ಅಥವಾ 'ಕೇ–ಸಬ್' ಎಂದರೆ "ಯಾರಿವರೆಲ್ಲ?" ಎಂದು.) ಬಂದವರು ಬುದ್ಧಿವಂತರೋ ಅಥವಾ ಮಂಕರೋ ಎಂದು ಯಜಮಾನನಿಗೆ ಅವನ ಪ್ರಶ್ನೆ. ಯಜಮಾನ ಗಿರಾಕಿಗಳ ಜೊತೆ ಸ್ವಲ್ಪ ಮಾತನಾಡುವಷ್ಟರಿಂದಲೇ ನಿರ್ಧರಿಸಿದ—ಇವರೆಲ್ಲ ದನಕಾಯುವುದಕ್ಕೆ ಲಾಯಕ್ಕು ಅಂತ. ಆದ್ದರಿಂದ 'ಗೋ-ಪಾಲ, ಗೋ-ಪಾಲ' ಎನ್ನುವುದರ ಮೂಲಕ ಅದನ್ನು ತಿಳಿಸಿದ. ಮತ್ತೆ ಸಹಾಯಕನ ಪ್ರಶ್ನೆ—

'ಹರಿ ಹರೀ' ಎಂದರೆ 'ಅಪಹರಿಸಲೇ ?' ಎಂದು. ಅದಕ್ಕೆ ಮತ್ತೊಬ್ಬನ ಉತ್ತರ—'ಹರ ಹರ !' 'ಹ್ಞೂ, ಅಪಹರಿಸು, ಚಿಂತೆ ಬೇಡ !' ಎಂದು. ಇವನು ಹಾಗೆಂದ ಕೂಡಲೇ ಚಿನ್ನ ಕರಗಿಸುತ್ತಿದ್ದವನು ಬಹಳ ಚಾಲಾಕಿನಿಂದ ಅದರಲ್ಲಿ ಸ್ವಲ್ಪ ಭಾಗವನ್ನು ತನ್ನೆದುರಿಗಿದ್ದ ನೀರಿನ ಪಾತ್ರೆಗೆ ಸುರುವಿಕೊಂಡ. ಗಿರಾಕಿಗಳಿಗೆ ಇದು ತಿಳಿಯಲೇ ಇಲ್ಲ. ಉಳಿದುದನ್ನೇ ಅವರು ತೂಕವಾಡಿಸಿ, ಅದರ ಬೆಲೆಯನ್ನು ತೆಗೆದುಕೊಂಡು ತೃಪ್ತರಾಗಿ ಹೋದರು.''

ಶ್ರೀರಾಮಕೃಷ್ಣರು ಕತೆಯನ್ನು ಹೇಳಿ ಮುಗಿಸಿದಾಗ ಅಲ್ಲಿ ನಗುವಿನ ದೊಡ್ಡ ಅಲೆಯೆದ್ದಿತು.

ಈಗ ಬಂಕಿಮ ಶ್ರೀರಾಮಕೃಷ್ಣರಿಂದ ಬೀಳ್ಕೊಂಡು ಹೊರಟ. ಆದರೆ ಅನ್ಯಮನಸ್ಕನಾಗಿ, ಗಂಭೀರವಾಗಿ ಏನನ್ನೋ ಆಲೋಚಿಸುತ್ತಿದ್ದ. ಬಾಗಿಲ ಬಳಿಗೆ ಬಂದು ನೋಡಿಕೊಂಡಾಗ ತನ್ನ ಉತ್ತರೀಯವನ್ನು ಒಳಗೇ ಬಿಟ್ಟುಬಂದದ್ದು ಗೊತ್ತಾಯಿತು. ಆಗ ಯಾರೋ ಒಬ್ಬಾತ ಅದನ್ನು ಹುಡುಕಿ ತಂದುಕೊಟ್ಟ.

ಅನಂತರ, ನೆರೆದಿದ್ದ ಭಕ್ತರೆಲ್ಲ ಭೋಜನ ಕಾರ್ಯಕ್ರಮದಲ್ಲಿ ಪಾಲ್ಗೊಂಡರು.

ಅಂದು ಬಂಕಿಮ ಶ್ರೀರಾಮಕೃಷ್ಣರನ್ನು ತನ್ನ ಮನೆಗೆ ಆಮಂತ್ರಿಸಿದನಾದರೂ ಮತ್ತೆ ಅವನಿಂದ ಕರೆಯೇನೂ ಬರಲಿಲ್ಲ. ಆದ್ದರಿಂದ ಶ್ರೀರಾಮಕೃಷ್ಣರು ಅವನಲ್ಲಿಗೆ ಹೋಗಲಿಲ್ಲ. ಆದರೆ, ಅವನನ್ನು ಸಂಧಿಸಿ ವಿಚಾರ ವಿನಿಮಯ ಮಾಡಿಕೊಳ್ಳಲು, ತಮ್ಮ ಪರವಾಗಿ ನರೇಂದ್ರನೇ ಮೊದಲಾದ ಪ್ರತಿಭಾವಂತ ಶಿಷ್ಯರನ್ನು ಒಂದೆರಡು ಬಾರಿ ಅವನ ಮನೆಗೆ ಕಳಿಸಿಕೊಟ್ಟರು. ಮತ್ತು, ಇನ್ನೊಂದು ದಿನ ಸಂದರ್ಭ ಬಂದಾಗ ಬಂಕಿಮಚಂದ್ರನ ಹೆಸರಾಂತ ಕೃತಿಯಾದ 'ದೇವೀ ಚೌಧುರಾಣಿ' ಎಂಬ ಕಾದಂಬರಿಯ ಭಾಗಗಳನ್ನು ಮಹೇಂದ್ರನಾಥನಿಂದ ಅಲ್ಲಲ್ಲಿ ಓದಿಸಿ ಕೇಳಿ ತಮ್ಮ ಅನಿಸಿಕೆಗಳನ್ನು ವ್ಯಕ್ತಪಡಿಸಿದರು.

ಶ್ರೀರಾಮಕೃಷ್ಣರು ತಮ್ಮ ಸಾಧನಾದಿನಗಳಲ್ಲಿ ಸಾಧು ಜಟಾಧಾರಿಯ ನೆರವಿನಿಂದ 'ರಾಮಲಾಲ'(ಬಾಲರಾಮ)ನನ್ನು ಸಾಕ್ಷಾತ್ಕರಿಸಿಕೊಂಡು, ಆ ದಿವ್ಯ ಶಿಶುವಿನೊಂದಿಗೆ ಅತಿ ವಿಚಿತ್ರ ಲೀಲೆಗಳಲ್ಲಿ ಪಾಲ್ಗೊಂಡ ಅದ್ಭುತವನ್ನೆಲ್ಲ ಹಿಂದೆ ನೋಡಿದೆವು; ನೋಡಿ ಬೆರಗಾದೆವು. ತರುವಾಯ, ಆ ರಾಮಲಾಲವಿಗ್ರಹವನ್ನು ಶ್ರೀರಾಮಕೃಷ್ಣರಿಗೆ ಸಮರ್ಪಿಸಿದ ಜಟಾಧಾರಿ ಕೃತಕೃತ್ಯನಾಗಿ ಅವರಿಂದ ಬೀಳ್ಕೊಂಡುದನ್ನೂ ಕಂಡೆವು. ಅದೇ ರೀತಿಯಲ್ಲಿ ಬಾಲಕೃಷ್ಣನನ್ನು ಸಾಕ್ಷಾತ್ಕರಿಸಿಕೊಂಡು, ಆತನ ಮಾನುಷಲೀಲೆಗಳನ್ನು ಮನದಣಿಯೆ ಕಂಡು, ಅನಂತರ ದಕ್ಷಿಣೇಶ್ವರದ ದೇವಮಾನವನ ಸಂಪರ್ಕಕ್ಕೆ ಬರುವುದರೊಂದಿಗೆ ತನ್ನ ಸಾಧನಾಜೀವನದ ಉತ್ತುಂಗ ಶಿಖರವನ್ನು ಮುಟ್ಟಿದ ಮತ್ತೊಬ್ಬ ವ್ಯಕ್ತಿಯ ಪರಮಾಶ್ಚರ್ಯಕರ ವೃತ್ತಾಂತವನ್ನು ನಾವೀಗ ನೋಡಲಿದ್ದೇವೆ.

ಆ ಅದ್ಭುತ ವ್ಯಕ್ತಿಯೇ ಗೋಪಾಲೇರ್ ಮಾ—"ಗೋಪಾಲನ ತಾಯಿ".

ಅವಳ ನಿಜವಾದ ಹೆಸರು ಅಘೋರಮಣಿದೇವಿ ಎಂದು. ಅವಳೊಬ್ಬ ಬ್ರಾಹ್ಮಣಿ, ಬಾಲವಿಧವೆ. ವಯಸ್ಸು ಸುಮಾರು ಅರವತ್ತು. ದಕ್ಷಿಣೇಶ್ವರಕ್ಕೆ ಮೂರು ಮೈಲಿ ದೂರದ ಕಾಮಾರಹಾಟಿ ಎಂಬಲ್ಲಿ ಆಕೆಯ ವಾಸ. ವಿವಾಹದ ಅರ್ಥ ತಿಳಿಯುವಷ್ಟರಲ್ಲೇ ಗಂಡಿನನ್ನು ಕಳೆದುಕೊಂಡ ಬಾಲಕಿ, ತನ್ನ ತಾಯ್ತಂದೆಯರ ಆಶ್ರಯದಲ್ಲೇ ಬೆಳೆದುಬಂದಳು. ಅವಳು ದೃಢಮನಸ್ಕಳು, ಮತ್ತು ಆಧ್ಯಾತ್ಮಿಕತೆ ಅವಳಿಗೆ ರಕ್ತಗತವಾಗಿ ಬಂದಿತ್ತು. ಆದ್ದರಿಂದ ಅವಳಿಗೆ ವೈಧವ್ಯವೆಂಬುದು ಶಾಪವಾಗಿ ಪರಿಣಮಿಸಲಿಲ್ಲ; ಜೀವನವೊಂದು ಹೊರಲಾಗದ ಹೊರೆಯಾಗಲಿಲ್ಲ. ಅಂದಿನ ಕಾಲದ ಸಾಮಾನ್ಯ ಬ್ರಾಹ್ಮಣವಿಧವೆಯರಂತೆ ಆಕೆ ಪೂಜೆ ಪುರಸ್ಕಾರ ವ್ರತನಿಯಮಗಳಲ್ಲೇ ಹೆಚ್ಚಿನ ವೇಳೆಯನ್ನು ಕಳೆಯುತ್ತಿದ್ದಳು. ಕಟ್ಟುನಿಟ್ಟಿನ ಬ್ರಹ್ಮಚರ್ಯವನ್ನು ಪಾಲಿಸುತ್ತಿದ್ದಳು. ನೈಜ ವೈರಾಗ್ಯವೆಂಬುದು ಅವಳ ವ್ಯಕ್ತಿತ್ವದಲ್ಲಿ ಆಳವಾಗಿ ಬೇರುಬಿಟ್ಟಿತ್ತು. ಅಂದಿನ ಕಾಲಕ್ಕೆ ಸಾಮಾನ್ಯವಾದ ಅತಿ ಮಡಿವಂತಿಕೆಯೇ ಮೊದಲಾದ ದೋಷಗಳೂ ಅವಳಲ್ಲಿದ್ದುವಾದರೂ ಆಕೆ ಅತ್ಯಂತ ಪರಿಶುದ್ಧ ಪ್ರಾಮಾಣಿಕ ಬಾಳುವೆಯನ್ನು ನಡೆಸುತ್ತಿದ್ದಳು.

ಚಿಕ್ಕಂದಿನಲ್ಲೇ ಅಘೋರಮಣಿಗೆ ಅವಳ ಕುಲಗುರುಗಳಿಂದ ಬಾಲಗೋಪಾಲ ಮಂತ್ರದ ಉಪದೇಶ ದೊರಕಿತ್ತು. ಜಪಮಾಲೆ ಹಿಡಿದು ಇಷ್ಟಮಂತ್ರವನ್ನು ಜಪಿಸುತ್ತ, ಇಷ್ಟದೈವವನ್ನು ಧ್ಯಾನಿಸುತ್ತ ಕುಳಿತಿರುವುದನ್ನೇ ಆಕೆ ತನ್ನ ಏಕಮಾತ್ರ ಹವ್ಯಾಸವನ್ನಾಗಿ ಮಾಡಿಕೊಂಡಳು. ತನ್ನೆಲ್ಲ ಕೆಲಸಕಾರ್ಯಗಳೂ ತನ್ನ ಪ್ರಾಣಸಮಾನನಾದ ಮುದ್ದು ಕೃಷ್ಣನಿಗಾಗಿಯೇ—ಅವನ ಪ್ರೀತ್ಯರ್ಥವಾಗಿಯೇ. ಆಕೆ ಅಡಿಗೆ ಮಾಡುತ್ತಿದ್ದುದು ಕೃಷ್ಣನಿಗಾಗಿ; ಆಕೆ ಕೋಣೆಯನ್ನು ಶುಚಿಗೊಳಿಸಿದರೆ ಅದು ಕೃಷ್ಣನ ಕೋಣೆ ಎಂಬ ಭಾವನೆಯಿಂದ. ಅಷ್ಟೇಕೆ, ತನ್ನ ಉಚ್ಛ್ವಾಸ-ನಿಃಶ್ವಾಸಗಳೂ ಕೂಡ ಆತನಿಗೋಸುಗವೇ ಎಂಬ ಸ್ಥಿತಿಯನ್ನು ಅವಳು ತಲುಪಿದಳು.

ನಿಜಜೀವನದಲ್ಲಿ ಅಘೋರಮಣಿ ಸಂತಾನಭಾಗ್ಯವನ್ನು ಪಡೆದುಕೊಳ್ಳಲಿಲ್ಲ; ತನ್ನ ಹೊಟ್ಟೆಯಲ್ಲಿ ಹುಟ್ಟಿದ ಮಗುವೊಂದನ್ನು ಎತ್ತಿ ಮುದ್ದಾಡುವ ಅವಕಾಶ ಅವಳಿಗೆ

ಪ್ರಾಪ್ತವಾಗಲಿಲ್ಲ. ಆದರೂ ಕೂಡ, ಬಾಲಗೋಪಾಲನ ವಿಷಯದಲ್ಲಿ ಅತ್ಯಂತ ಸಹಜವಾಗಿ ವಾತ್ಸಲ್ಯಭಾವವನ್ನು ತಾಳಿ ಆತ ತನ್ನ ಸ್ವಂತ ಮಗನೇ ಎಂಬ ನಂಬಿಕೆಯಿಂದ ಅವನನ್ನು ಲಾಲಿಸಿ ಪಾಲಿಸಬಲ್ಲ ಅದ್ಭುತ ಅಪೂರ್ವ ಅವಸ್ಥೆ ಅವಳಿಗೊದಗಿತು. ಇಂತಹ ಉನ್ನತ ಸ್ಥಿತಿ ಅವಳಿಗೆ ಹೇಗೆ ಪ್ರಾಪ್ತವಾಯಿತು ಎಂಬುದನ್ನು ಮಾತ್ರ ಹೇಳಬಲ್ಲವರಾರೂ ಇರಲಿಲ್ಲ.

ಕಾಮಾರಹಾಟಿಯ ಗಂಗಾತೀರದಲ್ಲಿ ಶ್ರೀರಾಧಾಕೃಷ್ಣ ಸ್ವಾಮಿಯ ಭವ್ಯ ದೇವಾಲಯವೊಂದಿದೆ. ಇದನ್ನು ಕಟ್ಟಿಸಿದವನು ಗೋವಿಂದಚಂದ್ರ ದತ್ತ ಎಂಬೊಬ್ಬ ದೊಡ್ಡ ಶ್ರೀಮಂತ ಧರ್ಮಾತ್ಮ. ಇಲ್ಲಿ ದೇವರಿಗೆ ಪೂಜೆ ನೈವೇದ್ಯಾದಿಗಳೂ ಉತ್ಸವಗಳೂ ನಿರಂತರವಾಗಿ ವೈಭವದಿಂದ ನಡೆದುಕೊಂಡುಬರುವಂತೆ ಅವನು ವ್ಯವಸ್ಥೆ ಮಾಡಿದ್ದ. ಭಕ್ತರಿಗೂ ಬಡಬಗ್ಗರಿಗೂ ಪ್ರತಿದಿನ ಅನ್ನಸಂತರ್ಪಣೆ ನಡೆಯುತ್ತಿತ್ತು. ಅಲ್ಲದೆ ಸತ್ಪಾತ್ರರಿಗೆ ಧಾರಾಳವಾಗಿ ದಾನಧರ್ಮ ದೊರೆಯುತ್ತಿತ್ತು. ದೇವಾಲಯದ ನಿರ್ಮಾಣವಾದ ಕೆಲವರ್ಷಗಳಲ್ಲೇ ಗೋವಿಂದಚಂದ್ರ ದತ್ತ ಕಾಲವಶನಾದ. ತರುವಾಯ, ಸಾಧ್ವಿಯಾದ ಆತನ ಪತ್ನಿಯೇ ದೇವಾಲಯದ ಒಡತಿಯಾಗಿ, ಎಲ್ಲ ಸತ್ಕಾರ್ಯಗಳ ಹೊಣೆಹೊತ್ತಳು. ಅವಳೂ ಪತಿಯಂತೆಯೇ ಅತ್ಯಂತ ಭಕ್ತಿಮತಿ. ಅವಳೀಗ ತನ್ನ ಹೊಣೆಗಾರಿಕೆಗೆ ಯೋಗ್ಯವಾದ ರೀತಿಯಲ್ಲಿ ಸಾಧನಾಮಯ ಜೀವನ ನಡೆಸಲಾರಂಭಿಸಿದಳು. ದಿನದ ಹೆಚ್ಚಿನ ಸಮಯ ಜಪಧ್ಯಾನಗಳಲ್ಲಿ ಕಳೆಯುತ್ತಿತ್ತು. ಮೂರು ಹೊತ್ತು ಗಂಗಾಸ್ನಾನ ಮಾಡುತ್ತಿದ್ದಳು. ಒಪ್ಪೊತ್ತು ಮಾತ್ರ ಊಟ. ಬರಿನೆಲದ ಮೇಲೆ ಶಯನ. ಆದರೆ ಇಷ್ಟಾದರೂ ಅವಳಿಗೆ ಏಕಚಿತ್ತದಿಂದ ಭಗವಂತನ ಸ್ಮರಣೆಯಲ್ಲೇ ಮುಳುಗಿಹೋಗಲು ಸಾಧ್ಯವಿರಲಿಲ್ಲ. ಏಕೆಂದರೆ ಅವಳಿಗೆ ಇಬ್ಬರು ಮದುವೆಯಾದ ಹೆಣ್ಣುಮಕ್ಕಳಿದ್ದರು. ಆ ಮಕ್ಕಳ ಮತ್ತು ಅಳಿಯಂದಿರ ಇಷ್ಟಾನಿಷ್ಟಗಳನ್ನು ಆಕೆ ಸ್ವಲ್ಪ ಅನುಸರಿಸಬೇಕಾಗಿತ್ತು. ಅಲ್ಲದೆ ದೇವಸ್ಥಾನದ ಆಸ್ತಿ-ವ್ಯವಹಾರಗಳ ನಿರ್ವಹಣೆಯ ಜವಾಬ್ದಾರಿ ಬೇರೆ. ಹೀಗಾಗಿ ಆಕೆ, ಲೌಕಿಕ ಆಧ್ಯಾತ್ಮಿಕಗಳೆರಡನ್ನೂ ತೂಗಿಸಿಕೊಂಡು ಬರುತ್ತಿದ್ದಳು.

ಈ ರಾಧಾಕೃಷ್ಣ ದೇವಾಲಯದಲ್ಲಿ ಅಘೋರಮಣಿದೇವಿಯ ಅಣ್ಣನಾದ ನೀಲಮಾಧವ ಬ್ಯಾನರ್ಜಿ ಅರ್ಚಕನಾಗಿದ್ದ. ಆದ್ದರಿಂದ ಅವಳು ಆಗಾಗ ಅಲ್ಲಿಗೆ ಭೇಟಿ ಕೊಡುತ್ತಿದ್ದಳು. ಅವಳಿಗೂ ದೇವಾಲಯದ ಒಡತಿಗೂ ಪರಿಚಯ ಏರ್ಪಟ್ಟಿತು. ಇಬ್ಬರದೂ ಸಮಾನ ಮನೋಧರ್ಮ, ಸಮಾನ ಅಭಿರುಚಿಗಳು. ಸಹಜವಾಗಿಯೇ ಆ ಪರಿಚಯ ಗಾಢ ಸ್ನೇಹಕ್ಕೆ ತಿರುಗಿತು. ಒಡತಿಗೆ ಒಬ್ಬ ಒಳ್ಳೆಯ ಸಂಗಾತಿ ದೊರೆತಂತಾದರೆ ಅಘೋರಮಣಿಗಂತೂ ಒಡತಿಯ ಸಹವಾಸ ಒಂದು ವರವಾಗಿ ಪರಿಣಮಿಸಿತೆನ್ನಬೇಕು.

ಈಗ ಅಘೋರಮಣಿ, ರಾಧಾಕೃಷ್ಣ ದೇವಾಲಯದ ಸೇವಾಕಾರ್ಯಗಳಲ್ಲಿ ಬಹಳಷ್ಟು ಸಮಯವನ್ನು ವಿನಿಯೋಗಿಸಲಾರಂಭಿಸಿದಳು. ಕ್ರಮೇಣ ಅವಳಿಗೆ ಮನೆಗಿಂತಲೂ ಇಲ್ಲಿನ ದೇವಸಾನ್ನಿಧ್ಯವೇ ಹೆಚ್ಚು ಪ್ರಿಯವಾಗತೊಡಗಿತು. ಗಂಗಾತೀರದ ಈ ದೇವಾಲಯದಲ್ಲೇ ವಾಸವಾಗಿದ್ದುಕೊಂಡು, ಭಗವತ್ಸೇವೆಯಲ್ಲೇ ಜೀವನವನ್ನು ಸವೆಸಿ ಮುಗಿಸಬೇಕು ಎಂಬ ತೀವ್ರ ಹಂಬಲ ಅವಳೊಳಗೆ ಹುಟ್ಟಿಕೊಂಡಿತು. ಅವಳು ತನ್ನೀ ಅಭಿಲಾಷೆಯನ್ನು ಒಡತಿಯ ಮುಂದೆ ತೋಡಿಕೊಂಡಳು. ಒಡತಿ ಅದನ್ನು ಕೂಡಲೇ

ಅನುಮೋದಿಸಿ, ದೇವಾಲಯದ ತೋಟದಲ್ಲಿದ್ದ ಒಂದು ಕೊಠಡಿಯನ್ನು ಅವಳಿಗಾಗಿ ಬಿಡಿಸಿಕೊಟ್ಟಳು. ಅಘೋರಮಣಿ ಅತ್ಯಂತ ಸಂತೋಷದಿಂದ ಅಲ್ಲಿ ಏಕಾಕಿಯಾಗಿ ವಾಸಿಸಲಾರಂಭಿಸಿದಳು. ಆಗಾಗ ತನ್ನ ತವರುಮನೆಗೆ ಹೋಗಿಬರುತ್ತಿದ್ದಳು.

ಅದೊಂದು ಸಾಮಾನ್ಯವಾದ ಪುಟ್ಟ ಕೊಠಡಿ—ಬಹುಶಃ ಸೇವಕರ ಉಪಯೋಗಕ್ಕಾಗಿ ಕಟ್ಟಿಸಿದುದು. ಕೋಣೆಗೆ ಕೆಲವೇ ಹೆಜ್ಜೆ ದೂರದಲ್ಲಿ ಭಾಗೀರಥೀ ಮಂದಗಮನೆಯಾಗಿ ಹರಿಯುತ್ತಿದ್ದಾಳೆ. ಸನಿಹದಲ್ಲೇ ಸ್ನಾನಘಟ್ಟ. ಆ ಕೋಣೆಗೆ ಎರಡು ಬಾಗಿಲುಗಳಿದ್ದುವು. ದಕ್ಷಿಣ ದಿಕ್ಕಿಗೆ ಮೂರು ಕಿಟಕಿಗಳಿದ್ದು, ಅವುಗಳ ಮೂಲಕ ನದಿಯ ದರ್ಶನ ದೊರಕುತ್ತಿತ್ತು. ಪತಿತಪಾವನೆಯಾದ ಗಂಗೆಯ ಸಾಮೀಪ್ಯ ದೊರಕಿರುವುದೇ ಅಘೋರಮಣಿಗೆ ಬಲು ಹಿಗ್ಗಿನ ಸಂಗತಿ. ಕೋಣೆಯ ನೆಲಕ್ಕೆ ಕಲ್ಲು ಚಪ್ಪಡಿ ಹಾಸಿತ್ತು. ಅದೇ ಅವಳ ಪಾಲಿನ ಹಾಸಿಗೆ. ಯಾರಾದರೂ ಅತಿಥಿಗಳು ಬಂದರೆ ಹಾಸಲೆಂದು ಒಂದು ಚಾಪೆಯಿತ್ತು. ಛಾವಣಿಗೆ ಕಟ್ಟಿದ್ದ ಹಗ್ಗಗಳಿಂದ ಮಡಕೆಯೊಂದು ತೂಗಾಡುತ್ತಿತ್ತು. ಅದರಲ್ಲೊಂದಿಷ್ಟು ಪುರಿ, ಕಲ್ಲುಸಕ್ಕರೆ. ಇದು ಕೂಡ ಅತಿಥಿಸೇವೆಗೆ ಮೀಸಲು. ಇಷ್ಟೇ ಆಕೆಯ ಸೊತ್ತು. ಕೋಣೆ ಸದಾ ಶುಭ್ರವಾಗಿ, ಅಚ್ಚುಕಟ್ಟಾಗಿ ಇರುತ್ತಿತ್ತು. ಪ್ರತಿದಿನವೂ ಅವಳು ನೆಲವನ್ನು ತೊಳೆದಿಡುತ್ತಿದ್ದಳು.

ಶ್ರೀರಾಮಕೃಷ್ಣರನ್ನು ಭೇಟಿಯಾಗುವುದಕ್ಕೆ ಮೊದಲು ಸುಮಾರು ಮುವ್ವತ್ತು ಸಂವತ್ಸರಗಳಿಂದಲೂ ಅಘೋರಮಣಿ ದೇವಿ ಈ ಕೊಠಡಿಯಲ್ಲಿ ಒಂದೇ ರೀತಿಯ, ಏರಿಳಿತಗಳಿಲ್ಲದ ಬಾಳುವೆಯನ್ನು ನಡೆಸಿಕೊಂಡು ಬಂದಿದ್ದಳು. ಮತ್ತು ತರುವಾಯ ತನ್ನ ಜೀವಮಾನದ ಇನ್ನುಳಿದ ಇಪ್ಪತ್ತು ಸಂವತ್ಸರಗಳನ್ನೂ ಅಲ್ಲಿಯೇ ಕಳೆದಳು. ಹೀಗೆ ಏಕಾಕಿಯಾಗಿ, ಕಾರ್ಪಣ್ಯದ ಜೀವನ ನಡೆಸುವುದರಲ್ಲೇ ಅವಳಿಗೆ ತೃಪ್ತಿ-ಸಂತೋಷ. ಕಾರಣ, ಆಕೆ ಸ್ವಾತಂತ್ರ್ಯಪ್ರಿಯೆ. ಅವಳದೇ ಆದ ಆಭರಣಗಳನ್ನು ಮಾರಿ ಬಂದ ಸುಮಾರು ಐನೂರು ರೂಪಾಯಿಗಳಷ್ಟು ಹಣ ಅವಳ ವಶದಲ್ಲಿತ್ತು. ಅದನ್ನು ಸರ್ಕಾರೀ ಖಜಾನೆಯಲ್ಲಿಟ್ಟು, ಅದರಿಂದ ಪ್ರತಿತಿಂಗಳೂ ಬರುತ್ತಿದ್ದ ನಾಲ್ಕೋ ಐದೋ ರೂಪಾಯಿಯ ಬಡ್ಡಿ ಹಣದಲ್ಲಿ ಅವಳು ಜೀವನ ನಡೆಸುತ್ತಿದ್ದಳು. ಆದರೆ ಎಷ್ಟೋ ಸಲ ಒಂದು ಹೊತ್ತಿನ ತುತ್ತಿಗೂ ಈ ಹಣ ಸಾಲುತ್ತಿರಲಿಲ್ಲ. ಕೆಲವೊಮ್ಮೆ ಅವಳು ತಾನೇ ತಕಲಿಯಿಂದ ನೂಲು ತೆಗೆದು ಜನಿವಾರಗಳನ್ನು ಹೊಸೆದು ಮಾರಿ ಎರಡು ಕಾಸು ಸಂಪಾದಿಸುತ್ತಿದ್ದಳು. ಇನ್ನೂ ತೀರಾ ವಿಧಿಯಿಲ್ಲದಾದಾಗ ಖಜಾನೆಯಲ್ಲಿಟ್ಟ ಅಸಲಿನಿಂದಲೇ ಸ್ವಲ್ಪ ಹಣವನ್ನು ತೆಗೆದುಕೊಳ್ಳಬೇಕಾಗಿ ಬರುತ್ತಿತ್ತು. ಒಂದೊಂದು ಸಲ ದೇವಾಲಯದ ಒಡತಿ ಅವಳಿಗೂ ಅವಳ ಅಣ್ಣನಿಗೂ ಏನಾದರೂ ಸ್ವಲ್ಪ ನೆರವು ನೀಡುವುದಿತ್ತು.

ಅಘೋರಮಣಿ ದೃಢಕಾಯಳಾದ ಸ್ವಾಭಿಮಾನೀ ಮಹಿಳೆ. ಯಾವುದಕ್ಕೂ ಇನ್ನೊಬ್ಬರ ಮುಂದೆ ಕೈಯೊಡ್ಡುವವಳಲ್ಲ. ಯಾರಾದರೂ ಅನಾದರದ ಮಾತನಾಡಿದರೆ ಸಹಿಸುತ್ತಿರಲಿಲ್ಲ. ಅವಳದು ಬಿಚ್ಚು ಮನಸ್ಸು, ನೇರಮಾತು. ಯಾರೇ ಆಗಲಿ ಅನ್ಯಾಯ ಮಾಡಿದ್ದನ್ನು ಕಂಡಾಗ ಅವರ ಎದುರೆದುರಿಗೇ ಅದನ್ನು ಹೇಳಿಬಿಡುತ್ತಿದ್ದಳು. ಆದ್ದರಿಂದ ಹೆಚ್ಚು ಜನ ಅವಳ ಸಹವಾಸ ಮಾಡುತ್ತಿರಲಿಲ್ಲ. ಇದರಿಂದ ಅವಳಿಗೆ ಒಳ್ಳೆಯದೇ ಆಯಿತೆನ್ನಬೇಕು. ತನ್ನಷ್ಟಕ್ಕೆ ತಾನು ಯಾರ ಹಂಗಿಲ್ಲದೆ ಭಗವಚ್ಚಿಂತನೆ, ಜಪ-ಧ್ಯಾನಗಳಲ್ಲಿ ಮುಳುಗಿರಲು ಅನುಕೂಲವಾಯಿತು.

ಬಾಲ್ಯದಿಂದಲೇ ಅವಳು ಬಾಲಗೋಪಾಲನನ್ನು ವಾತ್ಸಲ್ಯಭಾವದಿಂದ ಕಾಣುತ್ತ ಸಾಧನೆಯಲ್ಲಿ ತೊಡಗಿದ್ದಳು. ವರ್ಷಗಳು ಉರುಳಿದಂತೆ ಗೋಪಾಲನನ್ನು ಸಾಕ್ಷಾತ್ಕರಿಸಿಕೊಳ್ಳಬೇಕೆಂಬ ಅವಳೆದೆಯ ಹಂಬಲ ಇನ್ನಷ್ಟು ಮತ್ತಷ್ಟು ತೀವ್ರವಾಗುತ್ತ ಬಂದಿತೇ ಹೊರತು ಕಡಿಮೆಯಾಗಲಿಲ್ಲ. ಎಂಥ ಕಷ್ಟ-ಸಂಕಟವೂ ಅವಳ ನಿಯಮಬದ್ಧ ಸಾಧನೆಗೆ ಭಂಗ ತರದಾಯಿತು. ಸಾಧನೆಯ ಪ್ರಾರಂಭಾವಸ್ಥೆಯಲ್ಲಿ ಅವಳು ಎಲ್ಲರಂತೆ ಯಾಂತ್ರಿಕವಾಗಿ, ಪ್ರಯತ್ನಪೂರ್ವಕವಾಗಿ ಜಪ ಮಾಡುತ್ತಿದ್ದಳು. ಆದರೆ ಬರಬರುತ್ತ ಮಂತ್ರ ಜಪವೇ ಅವಳ ಉಸಿರಾಯಿತು. ರಾತ್ರಿ ಎರಡು ಗಂಟೆಗೇ ಎದ್ದು ಶೌಚಾದಿಗಳನ್ನು ಮುಗಿಸಿಕೊಂಡು ಕುಳಿತಳೆಂದರೆ ಎಂಟೊಂಬತ್ತು ಗಂಟೆಯವರೆಗೂ ಅವಿರತವಾಗಿ ಸಾಗುತ್ತಿತ್ತು ಜಪ. ಬಳಿಕ, ನದಿಯಲ್ಲಿ ಮಿಂದು, ದೇವಸ್ಥಾನಕ್ಕೆ ಹೋಗಿ ರಾಧಾಕೃಷ್ಣಸ್ವಾಮಿಯ ಪೂಜಾದಿಗಳಿಗೆ ಸಂಬಂಧಿಸಿದಂತೆ ತನ್ನಿಂದಾದ ಸೇವೆ ಸಲ್ಲಿಸುತ್ತಿದ್ದಳು. ದೇವರಿಗೆ ನೈವೇದ್ಯವಾದ ಮೇಲೆ ಹಿಂದಿರುಗಿ ಬಂದು ಅಡಿಗೆ ಮಾಡಿಕೊಂಡು ಉಣ್ಣುತ್ತಿದ್ದಳು. ಬಳಿಕ ಸ್ವಲ್ಪ ವಿಶ್ರಾಂತಿ. ಮತ್ತೆ ಜಪ ಮಾಡಲಾರಂಭ. ಸಂಜೆ ಮಂಗಳಾರತಿ ನೋಡಿಕೊಂಡು ಬಂದು ಪುನಃ ರಾತ್ರಿ ಬಹಳ ಹೊತ್ತಿನವರೆಗೆ ಜಪನಿರತಳಾಗುತ್ತಿದ್ದಳು. ಅನಂತರ ಒಂದು ಲೋಟ ಹಾಲು ಕುಡಿದು ಕೆಲವೇ ತಾಸುಗಳ ಕಾಲ ನಿದ್ರಿಸುತ್ತಿದ್ದಳು.

ಈ ರೀತಿಯಲ್ಲಿ ಆ ಬ್ರಾಹ್ಮಣಿ ಗಂಟೆಗಟ್ಟಲೆ, ದಿನಗಟ್ಟಲೆ, ಕೆಲವೊಮ್ಮೆ ಹಗಲಿರುಳುಗಳ ಪರಿವೆಯೇ ಇಲ್ಲದೆ ಭಾವತತ್ಪರಳಾಗಿ ನಾಮಜಪದಲ್ಲಿ ಲೀನಳಾಗಿರುತ್ತಿದ್ದಳು. ಅವಳ ಪಾಲಿಗೆ ಅದಕ್ಕಿಂತ ಶ್ರೇಷ್ಠವಾದ, ಆನಂದದಾಯಕವಾದ ಕಾರ್ಯ ಬೇರಾವುದೂ ಇರಲಿಲ್ಲ. ಅಡಿಗೆ ಮಾಡುವಾಗಲೂ ಸಹ, ಬಲಗೈಯಲ್ಲಿ ಜಪಸರವನ್ನು ಹಿಡಿದು ಜಪ ಮಾಡುತ್ತ, ಎಡಗೈಯಿಂದಲೇ ಕೆಲಸಗಳನ್ನೆಲ್ಲ ಮಾಡಿ ಪೂರೈಸುತ್ತಿದ್ದಳಂತೆ ! ಹೀಗೆ ಸಾಧನೆ ಮಾಡಿದ್ದರ ಫಲವಾಗಿ, ಕ್ರಮೇಣ ಅವಳೆಂತಹ ಸ್ಥಿತಿಯನ್ನು ತಲುಪಿದಳೆಂದರೆ, ತನ್ನ ಭಾವಪ್ರಪಂಚದಲ್ಲಿ ಸದಾ ಬಾಲಗೋಪಾಲನೊಂದಿಗೆ ವಿಹರಿಸತೊಡಗಿದಳು; ಅವನನ್ನು ಮುದ್ದಿಸಿ ರಮಿಸುತ್ತಿದ್ದಳು; ಅವನಿಗೆ ಸ್ನಾನ ಮಾಡಿಸಿ ಉಣಿಸುತ್ತಿದ್ದಳು. ಅವಳ ದೇಹ ಮನ ಪ್ರಾಣಗಳೆಲ್ಲವೂ ಗೋಪಾಲಮಯವೇ ಆಗಿಬಿಟ್ಟಿದ್ದುವು.

ಹೀಗೆ ಅಘೋರಮಣಿ ಧನ್ಯ ಬಾಳುವೆಯನ್ನು ನಡೆಸುತ್ತಿದ್ದಾಳೆ. ದೀರ್ಘಕಾಲ ಏಕಭಾವದಿಂದ, ಅವಿಚಲ ಶ್ರದ್ಧೆಯಿಂದ ತಪಗೈದ ಆ ಜೀವ ಪರಿಪಕ್ವವಾಗಿದೆ. ಇದೀಗ ತಗ್ಗಿನಿವಿಲ್ಲದಂತೆಯೇ ಅವಳು ತನ್ನ ಆಧ್ಯಾತ್ಮಿಕ ಜೀವನದ ಪರಮೋನ್ನತ ಸ್ಥಾನವನ್ನೇರಲು ಸಿದ್ಧಳಾಗಿದ್ದಾಳೆ—ಶ್ರೀರಾಮದರ್ಶನದೊಂದಿಗೆ ಜನ್ಮಸಾರ್ಥಕ್ಯ ಹೊಂದಿದ ಮಹಾತಪಸ್ವಿನಿ ಶಬರಿಯಂತೆ.

ಅದೊಂದು ದಿನ ಆಕೆ ಬಹಳ ಕಷ್ಟಪಟ್ಟು ತನ್ನ ಗೋಪಾಲನಿಗಾಗಿ ಅಡಿಗೆ ಮಾಡಿದ್ದಾಳೆ. 'ಕಷ್ಟಪಟ್ಟು' ಎಂದದ್ದೇಕೆಂದರೆ, ಅವತ್ತು ಸೌದೆಯೆಲ್ಲ ಒದ್ದೊದ್ದೆಯಾಗಿಬಿಟ್ಟಿತ್ತು. ಸಾಲದ್ದಕ್ಕೆ ಗಾಳಿ ಬೇರೆ ಬಲು ಜೋರು. ಹೊಗೆ ಮುಖಕ್ಕೇ ಬಡಿಯುತ್ತಿತ್ತು. ಅಂತೂ ಇಂತೂ ಅಡಿಗೆ ಆಯಿತು; ಇನ್ನೇನು ಅದನ್ನು ನೈವೇದ್ಯಕ್ಕಾಗಿ ಎಲೆಯ ಮೇಲೆ ಬಡಿಸಬೇಕು, ಅಷ್ಟರಲ್ಲಿ ಗಾಳಿ ಬೀಸಿ ಆ ಎಲೆಯನ್ನು ಹಾರಿಸಿಕೊಂಡು ಹೋಗಿಬಿಟ್ಟಿತು ! ಆಗ ಮುದುಕಿಗೆ ಸ್ವಲ್ಪ ಸಿಟ್ಟೇ ಬಂದಿತು. "ಛೆ ! ಊಟ ಮಾಡಲಿಕ್ಕೆ ಅದೆಷ್ಟು ರಂಪ ಮಾಡುತ್ತಿದ್ದೀಯೋ ಇವತ್ತು ?" ಎಂದು ಗೋಪಾಲನನ್ನು ಗಟ್ಟಿಯಾಗಿ ಬೈಯತೊಡಗಿದಳು.

ಆ ಹೊತ್ತಿಗೆ, ಅದೆಲ್ಲಿಂದಲೋ ಏನೋ, ಒಬ್ಬ ಹುಡುಗ ಕಾಣಿಸಿಕೊಂಡು, ಆ ಎಲೆಯನ್ನೆತ್ತಿಕೊಂಡು ಬಂದ. ಮತ್ತು ಅದನ್ನು ಬಿಡಿಸಿ, ಆಕೆ ಅದರ ಮೇಲೆ ಅಡಿಗೆಯನ್ನು ಬಡಿಸುವವರೆಗೂ ಹಿಡಿದುಕೊಂಡಿದ್ದು ಬಳಿಕ ಬಂದಂತೆಯೇ ಹೊರಟು ಮಾಯವಾಗಿಬಿಟ್ಟ. ಬ್ರಾಹ್ಮಣಿ ಅವನತ್ತ ಗಮನ ಕೊಡದೆ, ಅಗೋಚರನಾದ ತನ್ನ ಇಷ್ಟದೇವನಿಗೆ ನೈವೇದ್ಯ ಮಾಡತೊಡಗಿದಳು. ಆಗ ಅವಳಿಗೆ ಆ ಹುಡುಗನ ನೆನಪಾಯಿತು. ಯಾರವನು? ಎಲ್ಲಿಗೆ ಹೋದ?... ಥಟ್ಟನೆ ಹೊಳೆಯಿತು—ಬಾಲಕ ರೂಪದಲ್ಲಿ ಬಂದವನು ತನ್ನ ಗೋಪಾಲನಲ್ಲವೆ? ತನ್ನ ಪ್ರಾಣಪ್ರಿಯ ಗೋಪಾಲನಲ್ಲವೆ! ಅವಳೊಳಗೆ ವಿರಹಶೋಕ ಜ್ವಾಲಾಮುಖಿಯಂತೆ ಸಿಡಿಯಿತು. ಅಯ್ಯೋ! ಭಗವಂತನು ನನ್ನ ಬಳಿಗೇ ಬಂದರೂ ಗುರುತಿಸದೆ ಹೋದೆನಲ್ಲಾ! ಮತ್ತೆ ಆ ಭಾಗ್ಯ ಲಭಿಸೀತೆ?... ಬ್ರಾಹ್ಮಣಿ ಕಂಬನಿಗರೆಯುತ್ತ ಒಂದೇ ಸಮನೆ ಗೋಳಾಡತೊಡಗಿದಳು. ಅದನ್ನು ಕಂಡು ಜನ 'ಮುದುಕಿಗೆ ಹುಚ್ಚು ಹಿಡಿದುಬಿಟ್ಟಿದೆ' ಎಂದು ಮಾತಾಡಿಕೊಂಡರು.

ಈ ವೇಳೆಗೆ, ಅಘೋರಮಣಿಯ ಹಾಗೂ ಒಡತಿಯ ಕಿವಿಗಳಿಗೂ 'ದಕ್ಷಿಣೇಶ್ವರದ ದೇವಮಾನವ'ನ ವಿಚಾರ ಬಿದ್ದಿತ್ತು. ಆತನನ್ನೊಮ್ಮೆ ದರ್ಶನ ಮಾಡಿಕೊಂಡು ಬರ ಬೇಕೆಂಬ ಆಶಯ ಅವರಲ್ಲುಂಟಾಗಿತ್ತು. ಈಗ ಅಘೋರಮಣಿಯ ದುಃಖವನ್ನು ಕಂಡು ಒಡತಿಯೂ ಇನ್ನು ಕೆಲವು ಸ್ನೇಹಿತೆಯರೂ ಆಕೆಯನ್ನು ಸಮಾಧಾನಪಡಿಸುವ ಉದ್ದೇಶದಿಂದ, ಶ್ರೀರಾಮಕೃಷ್ಣರನ್ನು ನೋಡಲು ಹೋಗುವ ಪ್ರಸ್ತಾಪವೆತ್ತಿದರು. ಅದಕ್ಕೆ ಅವಳು ಕೂಡಲೇ ಸಮ್ಮತಿಸಿದಳು.

ಅದು ೧೮೮೪ ರ ನವೆಂಬರ್ ಅಥವಾ ಡಿಸೆಂಬರ್ ತಿಂಗಳು. ಅಘೋರಮಣಿ, ದೇವಾಲಯದ ಒಡತಿ, ಮತ್ತು ಆಕೆಯ ಸಂಬಂಧಿಕಳಾದ ಒಬ್ಬಳು ಹೆಂಗಸು ಈ ಮೂವರೂ ಕಾಮಾರಹಾಟಿಯಿಂದ ದೋಣಿಯಲ್ಲಿ ಕುಳಿತು ಹೊರಟು ದಕ್ಷಿಣೇಶ್ವರದ ಘಟ್ಟದಲ್ಲಿ ಬಂದಿಳಿದರು. ಅವರು ಬರುವುದು ತಮಗೆ ತಿಳಿದೇ ಇತ್ತೋ ಎಂಬಂತೆ ಶ್ರೀರಾಮಕೃಷ್ಣರು ಅವರನ್ನು ತಮ್ಮ ಕೋಣೆಯ ಬಾಗಿಲಲ್ಲೇ ಎದುರ್ಗೊಂಡು ತುಂಬ ವಿಶ್ವಾಸದಿಂದ ಸ್ವಾಗತಿಸಿದರು. ಭಗವತ್ಸಂಬಂಧವಾಗಿ ಮಾತನಾಡುತ್ತ ನಾನಾ ವಿಷಯ ಗಳಲ್ಲಿ ಬೋಧನೆ ನೀಡಿ ಆ ಸ್ತ್ರೀಯರ ಹೃದಯಕ್ಕೆ ತಂಪನ್ನೆರೆದರು. ಭಕ್ತಿಯ ಮಹಿಮೆ ಯನ್ನು ಕೊಂಡಾಡಿ, ಜೀವನದಲ್ಲಿ ಗಳಿಸಬೇಕಾದ ವಸ್ತು ಅದೊಂದೇ ಎಂದು ತಿಳಿಸಿ ಕೊಟ್ಟರು. ಭಾವಭರಿತರಾಗಿ ತಮ್ಮ ಜೇನುಕಂಠದಿಂದ ಕೀರ್ತನೆಗಳನ್ನು ಹಾಡಿದರು. ಆ ಮಾತುಗಳನ್ನೂ ಹಾಡುಗಳನ್ನೂ ಕೇಳಿದ ಸ್ತ್ರೀಯರು ಸಂಪೂರ್ಣ ಮನಸೋತರು. "ನಮ್ಮ ಕಾಮಾರಹಾಟಿಯ ದೇವಾಲಯಕ್ಕೆ ಒಮ್ಮೆ ದಯಮಾಡಿಸಿ ನಮ್ಮನ್ನು ಸಂತೋಷಗೊಳಿಸಬೇಕು" ಎಂದು ಒಡತಿ ವಿನಂತಿಸಿಕೊಂಡಳು. ಶ್ರೀರಾಮಕೃಷ್ಣರು ಅದಕ್ಕೆ ಸಂತೋಷದಿಂದ ಸಮ್ಮತಿಸಿ, "ಅನುಕೂಲವಾದಾಗ ಬರುತ್ತೇನೆ" ಎಂದರು.

ಮೊದಲ ಸಂದರ್ಶನದಲ್ಲೇ ಶ್ರೀರಾಮಕೃಷ್ಣರು ಈ ಮಹಿಳೆಯರ ಸ್ವಭಾವ-ಅಂತಸ್ಸತ್ವಗಳನ್ನು ಸ್ಪಷ್ಟವಾಗಿ ಕಂಡುಕೊಂಡರು. ಮತ್ತೊಂದು ದಿನ ಅಘೋರಮಣಿಯ ಹಾಗೂ ಒಡತಿಯ ಕುರಿತಾಗಿ ಮಾತು ಬಂದಾಗ ಶ್ರೀರಾಮಕೃಷ್ಣರು, "ಆಹ್! ಅವರ ಕಣ್ಣುಗಳ ಮತ್ತು ಮುಖದ ಭಾವ ಅದೆಷ್ಟು ಮೋಹಕವಾಗಿದೆ! ಅವರು ಭಗವ ತ್ಪ್ರೇಮದ ಪ್ರವಾಹದಲ್ಲಿ ತೇಲಿಹೋಗುತ್ತಿದ್ದಾರೋ ಎಂಬಂತೆ ತೋರುತ್ತದೆ. ಕಣ್ಣುಗಳು ಅತಿಶಯವಾದ ಪ್ರೇಮಾಭಕ್ತಿಯಿಂದ ಭರಿತವಾಗಿವೆ. ಅವರ ಹಣೆಯ ಮೇಲಿನ ತಿಲಕ ಕೂಡ ಅದೆಷ್ಟು ಶೋಭಾಯಮಾನವಾಗಿದೆ! ಅವರ ಚಲನವಲನದಲ್ಲೂ ಉಡಿಗೆ ತೊಡಿಗೆಗಳಲ್ಲೂ ಭಕ್ತಿಯೇ ಹೊರಸೂಸುತ್ತಿದೆ!" ಎಂದು ಬಾಯ್ತುಂಬ ಕೊಂಡಾಡು ತ್ತಾರೆ.

ಇತ್ತ ಈ ಹೆಂಗಳೆಯರ ಮೇಲೆ, ಅದರಲ್ಲೂ ಅಘೋರಮಣಿಯ ಮೇಲೆ ಶ್ರೀರಾಮಕೃಷ್ಣರು ಬೀರಿದ್ದ ಪ್ರಭಾವವಂತೂ ಅಗಾಧ. ಆದರೆ ಸ್ವತಃ ಅವಳಿಗೇ ಅದರ ಅರಿವಾಗಿರಲಿಲ್ಲ. ಬಹುಶಃ ಅವಳಿಗೆ ಅವರೊಬ್ಬ ಸತ್ಪುರುಷನಂತೆಯೋ ಇಲ್ಲವೆ ಒಬ್ಬ ಸಾಮಾನ್ಯ ಸಂತನಂತೆಯೋ ತೋರಿದ್ದರೇ ಹೊರತು ಅದಕ್ಕಿಂತ ಹೆಚ್ಚೇನೂ ಇಲ್ಲ.

ಆದರೂ ಅವರ ಕುರಿತಾಗಿ ಹೃದಯದಲ್ಲಿ ಏನೋ ಒಂದು ಅನಿರ್ವಚನೀಯ ಆಕರ್ಷಣೆ! ಒಡತಿಯೂ ಕೂಡ ಇಂಥದೇ ಆಕರ್ಷಣೆಗೆ ಒಳಗಾಗಿದ್ದಳಾದರೂ ಅವಳಿಗೆ ಅನೇಕ ನಿರ್ಬಂಧಗಳಿದ್ದುವಾದ್ದರಿಂದ ಮತ್ತೆ ದಕ್ಷಿಣೇಶ್ವರಕ್ಕೆ ಹೋಗಲು ಸಾಧ್ಯವಾಗಲಿಲ್ಲ. ಅಘೋರಮಣಿಗೆ ಇಂಥ ನಿರ್ಬಂಧಗಳೇನೂ ಇರಲಿಲ್ಲ. ಆದ್ದರಿಂದ 'ಇನ್ನೊಮ್ಮೆ ಅವರನ್ನು ನೋಡಲು ಹೋಗಬೇಕು' ಎಂದು ಆಲೋಚಿಸುತ್ತಿದ್ದಳು.

ಒಂದು ದಿನ ಆಕೆ ಎಂದಿನಂತೆ ಜಪನಿರತಳಾಗಿ ಕುಳಿತಿದ್ದಾಳೆ; ಇದ್ದಕ್ಕಿದ್ದಂತೆ ಅವಳ ಮನಸ್ಸಿನಲ್ಲಿ ಶ್ರೀರಾಮಕೃಷ್ಣರ ದರ್ಶನ ಮಾಡಬೇಕೆಂಬ ತೀವ್ರ ಹಂಬಲವುದಿಸಿತು. ಅದನ್ನು ಹತ್ತಿಕ್ಕುವ ಪ್ರಯತ್ನ ವಿಫಲವಾದಾಗ ಎದ್ದು ಹೊರಟೇಬಿಟ್ಟಳು! ಸಾಧುವನ್ನು ನೋಡಲು ಬರಿಗೈಯಲ್ಲಿ ಹೋಗಬಾರದು ಎನ್ನುವುದು ಅವಳಿಗೆ ಗೊತ್ತು. ಪಾಪ, ಬಡವಿಗೆ ದುಡ್ಡೆಲ್ಲಿಂದ ಬರಬೇಕು? ಆದರೂ ಒಂದರ್ಧಕಾಸು ಕೊಟ್ಟು ಅಂಗಡಿಯಿಂದ ತೀರಾ ಸಾಮಾನ್ಯ ದರ್ಜೆಯ 'ಸಂದೇಶ' ಮಿಠಾಯಿಯನ್ನು ಕೊಂಡುಕೊಂಡಳು. ಕಾಣಿಕೆಯನ್ನೇನೋ ತಂದಳು; ಆದರೆ ಆಮೇಲೆ ಅವಳಿಗನ್ನಿಸಿತು—'ಇಂಥ ಕೆಟ್ಟ ಪದಾರ್ಥವನ್ನು ಅವರಿಗೆ ಕೊಡುವುದೆ? ನಾಚಿಕೆಗೇಡು!' ಎಂದು. ಆದ್ದರಿಂದ ಅದನ್ನು ಮುಚ್ಚಿ ಮರೆಯಲ್ಲಿಟ್ಟುಕೊಂಡಿದ್ದಳು. ಆದರೆ, ಅದೇನಾಶ್ಚರ್ಯ! ಅವಳನ್ನು ನೋಡುತ್ತಿದ್ದಂತೆಯೇ ಶ್ರೀರಾಮಕೃಷ್ಣರು ಉತ್ಸಾಹದಿಂದ, "ಆಹ್! ಬಂದೆಯಾ? ಎಲ್ಲಿ, ನನಗಾಗಿ ಏನು ತಂದಿದ್ದೀ ತೆಗಿ ನೋಡೋಣ!" ಎನ್ನುತ್ತ ಹತ್ತಿರಕ್ಕೇ ಬಂದುಬಿಟ್ಟರು. ಮುದುಕಿಯ ಎದೆ ಡವಡವಿಸತೊಡಗಿತು. ಬಾಯಿಂದ ಮಾತೇ ಹೊರಡಲಿಲ್ಲ. 'ಅಯ್ಯಯ್ಯೋ, ಈ ಹಾಳು ತಿಂಡಿಯನ್ನು ಹೇಗೆ ಕೊಡಲಪ್ಪಾ? ಇವರಿಗೆ ಜನರು ಎಂತೆಂಥ ಒಳ್ಳೆಯ ಪದಾರ್ಥಗಳನ್ನೆಲ್ಲ ತಂದುಕೊಡುತ್ತಾರೆ. ಇವರೋ, ನಾನು ಬರುತ್ತಿದ್ದ ಹಾಗೆಯೇ, "ಏನು ತಂದೆ?" ಅಂತಲೇ ಕೇಳುತ್ತಿದ್ದಾರಲ್ಲ, ಏನು ಮಾಡಲಿ?' ಎಂದುಕೊಳ್ಳುತ್ತ ಹಿಂದೇಟು ಹಾಕುತ್ತಲೇ ಮಿಠಾಯಿಯನ್ನು ತೆಗೆದು ಅವರ ಕೈಯಲ್ಲಿಟ್ಟಳು. ಅದನ್ನು ನೋಡಿ ಶ್ರೀರಾಮಕೃಷ್ಣರು ಮಗುವಿನ ಹಾಗೆ ಹಿಗ್ಗುತ್ತ ಬಾಯಿಚಪ್ಪರಿಸಿಕೊಂಡು ತಿಂದರು. ಅಲ್ಲದೆ ಮತ್ತೆ ಹೇಳಿದರು: "ಅಮ್ಮಾ ನೀನೇಕೆ ಕಾಸು ಕೊಟ್ಟು ಇವನ್ನೆಲ್ಲ ತರುವುದು? ಇದರ ಬದಲಾಗಿ ನೀನೇ ಕಾಯುಂಡೆಗಳನ್ನು ಮಾಡಿಟ್ಟುಕೊಂಡು, ಬರುವಾಗ ಒಂದೆರಡನ್ನು ತಂದರಾಯಿತು. ಅಥವಾ ಹೀಗೆ ಮಾಡು—ಕೀರೆಸೊಪ್ಪು, ಬದನೆಕಾಯಿ, ಆಲೂಗಡ್ಡೆ, ನುಗ್ಗೆಕಾಯಿ ಇಂಥದೇನ್ನಾದರೂ ಹಾಕಿ ಪಲ್ಯವೋ ಬಜ್ಜಿಯೋ ಏನು ಸಾಧ್ಯವೋ ಅದನ್ನು ಮಾಡಿಕೊಂಡು ತಾ. ಇಂಥದೇ ಆಗಬೇಕೆಂದೇನಿಲ್ಲ. ಯಾವುದಾದರೂ ಸರಿಯೆ. ನನಗೆ ನಿನ್ನ ಕೈಯಡುಗೆ ತಿನ್ನಬೇಕು ಅಂತ ತೀವ್ರವಾದ ಇಚ್ಛೆಯುಂಟಾಗಿದೆ. ಮುಂದಿನ ಸಲ ಬರುವಾಗ ತರುತ್ತೀ ತಾನೆ? ಮರೆಯಬೇಡ!"

ಶ್ರೀರಾಮಕೃಷ್ಣರ ಬೇಡಿಕೆಯನ್ನು ಕೇಳಿ ಮುದುಕಿ ತಬ್ಬಿಬ್ಬಾದಳು. ಅಲ್ಲಿಂದ ಹೊರಡುತ್ತಿದ್ದಂತೆಯೇ ಅವಳು ಆಲೋಚಿಸಿದಳು: 'ಇದೊಳ್ಳೇ ಸಾಧುವನ್ನು ನೋಡಲು ಬಂದಂತಾಯಿತಲ್ಲ ನಾನು! ಧರ್ಮಕರ್ಮಗಳ ಮಾತೇ ಇಲ್ಲ. ಬರೀ ತಿನ್ನುವ ಮಾತೇ. ತಿಂಡಿ-ಊಟ, ಊಟ-ತಿಂಡಿ! ನನ್ನಂಥ ಬಡಪಾಯಿ ಹೆಂಗಸು ಇವರಿಗೆ ಅವನ್ನೆಲ್ಲ ಎಲ್ಲಿಂದ ತಂದೊದಗಿಸುವುದು? ಛಿ, ಹಾಳಾಗಲಿ, ಇನ್ನ್ಯಾವತ್ತೂ ಇಲ್ಲಿಗೆ ಬರುವುದಿಲ್ಲ!' ಹೀಗೆಲ್ಲ ಭಾವಿಸುತ್ತ ಅವಳು ಕಾಳೀಮಂದಿರೋದ್ಯಾನದ ಹೆಬ್ಬಾಗಿಲನ್ನು ದಾಟಿದ್ದಾಳೆ; ಅಷ್ಟರಲ್ಲಿ ಇದ್ದಕ್ಕಿದ್ದಂತೆ ಶ್ರೀರಾಮಕೃಷ್ಣರ ಆಕರ್ಷಣೆ ಅವಳನ್ನು ಪುನಃ

ಹಿಂದಕ್ಕೆ ಜಗ್ಗಿತು ! ಕಾಲು ಮುಂದಕ್ಕೆ ಸಾಗದಾಯಿತು ! ವಾಪಸು ಹೋಗಿ ಮತ್ತೊಮ್ಮೆ ಅವರನ್ನು ನೋಡೋಣವೇ ಎಂಬಷ್ಟು ಕಾತರವುಂಟಾಯಿತು. ಕಡೆಗೆ ಅವಳು ಅತ್ಯಂತ ಪ್ರಯತ್ನಪೂರ್ವಕವಾಗಿ ಮನಸ್ಸನ್ನು ಸಮಾಧಾನಪಡಿಸಿಕೊಳ್ಳುತ್ತ ಕಾಲೆಳೆದುಕೊಂಡು ಮನೆ ಸೇರಿದಳು.

ಇದಾದ ಕೆಲದಿನಗಳಲ್ಲೇ ಆಕೆ ಶ್ರೀರಾಮಕೃಷ್ಣರು ತಿನ್ನಬಯಸಿದ ಪಲ್ಯವೊಂದನ್ನು ಮಾಡಿಕೊಂಡು ಮೂರು ಮೈಲಿ ದೂರ ನಡೆದುಬಂದಳು. ಹಿಂದಿನಂತೆಯೇ ಶ್ರೀರಾಮ ಕೃಷ್ಣರು ಆಕೆ ಬಂದೊಡನೆ ಅವಳು ತಂದದ್ದನ್ನು ಕೇಳಿ ತೆಗೆದುಕೊಂಡು ತಿನ್ನುತ್ತ "ಆಹ್ ! ದಿವ್ಯವಾಗಿದೆ, ಅಮೃತಸಮಾನವಾಗಿದೆ" ಎಂದು ಕೊಂಡಾಡಿದರು. ಅವರು ಆನಂದಿಸಿದ ಪರಿಯನ್ನು ಕಂಡು ಮುದುಕಿ ಕಣ್ಣೀರು ಸುರಿಸಿದಳು. ತಾನು ಬಡವಿ ಯಲ್ಲವೆ ? ತನ್ನ ಮೇಲಿನ ಅನುಕಂಪೆಯಿಂದ ಅವರು ಆ ಸಾಮಾನ್ಯ ತಿನಿಸನ್ನು ಅಷ್ಟೊಂದು ಹೊಗಳುತ್ತಿದ್ದಾರೆ ಎಂದು ಭಾವಿಸಿದಳು. ಆದರೆ ಶ್ರೀರಾಮಕೃಷ್ಣರು ಆನಂದಿಸಿದ್ದು ಅವಳ ಪಲ್ಯದ ರುಚಿಯನ್ನಲ್ಲ, ಅವಳ ನಿಷ್ಕಲ್ಮಶ ಭಕ್ತಿಯ ಸವಿಯನ್ನು !

ಆ ತರುವಾಯ ಮುಂದಿನ ನಾಲ್ಕಾರು ತಿಂಗಳವರೆಗೆ ಅಘೋರಮಣಿ ಪದೇ ಪದೇ ದಕ್ಷಿಣೇಶ್ವರಕ್ಕೆ ಹೋಗಿಬರುತ್ತಿದ್ದಳು. ತಾನು ಮಾಡಿದ ಅಡಿಗೆಯಲ್ಲಿ, ಚೆನ್ನಾಗಿದೆ ಎನ್ನಿಸಿದ್ದನ್ನು ಪಾತ್ರೆಗೆ ಹಾಕಿಕೊಂಡು ತರುತ್ತಿದ್ದಳು. ಅವಳು ಬಂದರೆ ಸಾಕು, ಶ್ರೀರಾಮ ಕೃಷ್ಣರು ಮಗುವಿನಂತಾಗಿಬಿಡುತ್ತಿದ್ದರು. ಮತ್ತು ಅವಳು ತಂದ ಪದಾರ್ಥವನ್ನು ಆಸ್ವಾ ದಿಸಿ, 'ಮುಂದಿನ ಸಲ ಬರುವಾಗ ಇಂಥದನ್ನು ಅಡಿಗೆ ಮಾಡಿ ತಾ' ಎಂದು ಯಾವು ದಾದರೊಂದು ಸೊಪ್ಪು-ತರಕಾರಿಯ ಹೆಸರು ಹೇಳುತ್ತಿದ್ದರು. ಇನ್ನು ಕೆಲವೊಮ್ಮೆ ಅವರ ಕೋರಿಕೆಯಂತೆ ಆಕೆ ನಹಬತ್‌ಖಾನೆಯಲ್ಲೇ ಯಾವುದಾದರೂ ವ್ಯಂಜನಗಳನ್ನು ತಯಾರಿಸಿ ಅವರಿಗೆ ಉಣಬಡಿಸುತ್ತಿದ್ದಳು. ಅಂತೂ ಹೀಗೆ, ಅಘೋರಮಣಿಗೆ ಕೇಳಿ ಬರುತ್ತಿದ್ದುದು ಕೇವಲ 'ಇದನ್ನು ತಾ, ಅದನ್ನು ತಾ' 'ಇದನ್ನು ತಿನ್ನಬೇಕು, ಅದನ್ನು ತಿನ್ನಬೇಕು' ಎಂಬೀ ತೆರದ ಮಾತುಗಳೇ ! ಅವಳಿಗಂತೂ ಒಮ್ಮೊಮ್ಮೆ ತೀರಾ ರೋಸಿ ಹೋಗಿ, "ಓ ಗೋಪಾಲ, ನಿನ್ನನ್ನು ಇಷ್ಟು ದಿನ ಸ್ಮರಣೆ ಮಾಡಿದ್ದಕ್ಕೆ ಇದೇ ಏನು ನೀನು ಕೊಟ್ಟ ಫಲ ? ಕೊನೆಗೂ ಇದೆಂಥ ಸಾಧುವನ್ನು ಗಂಟುಹಾಕಿದೆಯಪ್ಪಾ ನನಗೆ ? ಒಳ್ಳೇ ತಿಂಡಿಪೋತ ಸಾಧು ! ಹೀಗಾದರೆ ನಾನಿಲ್ಲಿಗೆ ಬರಲಾರೆ ನೋಡು" ಎಂದು ತನ್ನ ಇಷ್ಟದೇವತೆಯ ಮುಂದೆ ದೂರಿಡುತ್ತಿದ್ದಳು. ಆದರೆ ಶ್ರೀರಾಮಕೃಷ್ಣರಿಂದ ದೂರ ವಾದೊಡನೆಯೇ, 'ಮತ್ತೆ ಯಾವಾಗ ಅಲ್ಲಿಗೆ ಹೋದೇನು, ಯಾವ ಕ್ಷಣಕ್ಕೆ ಅವರನ್ನು ಕಂಡೇನು' ಎಂಬ ಅತೀವ ಕಾತರ ! ಹೀಗೆ ಆಕೆ ಶ್ರೀರಾಮಕೃಷ್ಣರೊಡನೆ ಮಾನಸಿಕ ವಾಗಿಯೇ ಒಂದು ಅಪೂರ್ವ ಸರಸ ಸಂಬಂಧ ಬೆಳೆಸಿಕೊಂಡಳು.

ಈ ಮಧ್ಯೆ ಶ್ರೀರಾಮಕೃಷ್ಣರು ಒಮ್ಮೆ ಕಾಮಾರಹಾಟಿಯ ದೇವಸ್ಥಾನಕ್ಕೆ ಭೇಟಿ ಯಿತ್ತರು. ಅಲ್ಲಿನ ಪೂಜಾದಿಗಳನ್ನು ವೀಕ್ಷಿಸಿ ಅತ್ಯಾನಂದಿತರಾದರು. ಶ್ರೀರಾಧಾಕೃಷ್ಣ ನೆದುರು ಕೆಲವು ಕೀರ್ತನೆಗಳನ್ನು ಹಾಡಿದರು; ಹಾಡುತ್ತ ಹಾಡುತ್ತ ಭಾವಸಮಾಧಿ ಗೇರಿದರು. ಆ ಮಧುರ ಗಾಯನವನ್ನಾಲಿಸುತ್ತ, ಅವರ ಭಾವಾವಸ್ಥೆಯನ್ನು ವೀಕ್ಷಿಸುತ್ತ ಒಡತಿಯೂ ಅವಳ ಪರಿವಾರದವರೂ ರೋಮಾಂಚಿತರಾದರು. ಬಳಿಕ ಶ್ರೀರಾಮ ಕೃಷ್ಣರು ಪ್ರಸಾದ ಸ್ವೀಕರಿಸಿ ದಕ್ಷಿಣೇಶ್ವರಕ್ಕೆ ಮರಳಿದರು.

ಅಘೋರಮಣಿ ದೇವಿ ಶ್ರೀರಾಮಕೃಷ್ಣರ ಬಳಿಗೆ ಬರಲಾರಂಭಿಸಿ ನಾಲ್ಕೈದು

ತಿಂಗಳಾಗಿರಬಹುದು. ಈ ಅವಧಿಯಲ್ಲಿ ಅವರ ಮೇಲಿನ ಆಕೆಯ ಭಕ್ತಿ-ವಾತ್ಸಲ್ಯ ದಿನೇ ದಿನೇ ಹೆಚ್ಚುತ್ತಿದೆ. ಅವಳೊಳಗೆ ಒಂದು ಹೊಸ ಚೈತನ್ಯದ ಸಂಚಾರವಾದಂತಿದೆ. ಆದರೆ ಅವರ ನಿಜಸ್ವರೂಪವೇನು, ಅವರೊಡನೆ ತನ್ನ ಬಾಂಧವ್ಯವೆಂಥದು ಎಂಬುದರ ಸ್ಪಷ್ಟ ಕಲ್ಪನೆ ಅವಳಿಗಿನ್ನೂ ಆಗಿಲ್ಲ.

೧೮೮೪ರ ವಸಂತಕಾಲ. ಅದೊಂದು ದಿನ ಅಘೋರಮಣಿ ಎಂದಿನಂತೆ ನಸುಕಿನಲ್ಲೆದ್ದು ಜಪಮಾಲೆ ಹಿಡಿದು ಕುಳಿತಿದ್ದಾಳೆ. ಇಂತಿಷ್ಟು ಜಪ ಮಾಡಿದ ಮೇಲೆ ಅದರ ಫಲವನ್ನು ಇಷ್ಟದೇವತೆಗೆ ಅರ್ಪಿಸುವುದು ಅವಳ ಕ್ರಮ. ಅದಕ್ಕೆ ಮುನ್ನ ಸ್ವಲ್ಪ ಹೊತ್ತು ಪ್ರಾಣಾಯಾಮಕ್ಕೆ ತೊಡಗಿದ್ದಾಳೆ. ಆಗ ಅವಳ ಕಣ್ಣೆದುರಿಗೆ ಅತಿ ವಿಚಿತ್ರ ಹಾಗೂ ಅದ್ಭುತ ದೃಶ್ಯವೊಂದು ಮೂಡಿ ನಿಂತಿತು. ಅದನ್ನು ಅವಳ ಮಾತಿನಿಂದಲೇ ತಿಳಿಯೋಣ: "ಇದ್ದಕ್ಕಿದ್ದಂತೆ ಶ್ರೀರಾಮಕೃಷ್ಣರು ಬಂದುಬಿಟ್ಟಿದ್ದಾರೆ! ನನ್ನ ಎಡಗಡೆ ಸನಿಹದಲ್ಲೇ ಕುಳಿತಿದ್ದಾರೆ! ಇದೇನು ಭ್ರಮೆಯೋ ಎಂದುಕೊಂಡರೆ ಇಲ್ಲ, ಜೀವಂತವಾಗಿ ಸ್ಪಷ್ಟರೂಪದಲ್ಲಿ ಕಾಣಿಸುತ್ತಿದ್ದಾರೆ; ಬಲಗೈ ಸ್ವಲ್ಪ ಮೇಲೆತ್ತಿಕೊಂಡಿದೆ; ಏನನ್ನೋ ಹಿಡಿದುಕೊಂಡಂತಿದೆ! ನಾನು ಅವರನ್ನು ದಕ್ಷಿಣೇಶ್ವರದಲ್ಲಿ ಹಲವಾರು ಬಾರಿ ಕಂಡಿರುವಂತೆಯೇ ಇದ್ದಾರೆ!

"ನಾನು ತಬ್ಬಿಬ್ಬಾದೆ. ಇದೇನಿದು! ಈ ಹೊತ್ತಿನಲ್ಲಿ ಇವರು ಇಲ್ಲಿಗೆ ಎಲ್ಲಿಂದ ಬಂದರು? ಹೇಗೆ ಬಂದರು? ಎಂದು ಆಲೋಚಿಸಿದೆ. ಏನೂ ತೋಚಲಿಲ್ಲ. ಮತ್ತೆ ನೋಡುತ್ತೇನೆ—ಶ್ರೀರಾಮಕೃಷ್ಣರು ನಸುನಗುತ್ತಿದ್ದಾರೆ! ನಾನು ಸ್ವಲ್ಪ ಧೈರ್ಯ ತಂದುಕೊಂಡು, ಇದು ನಿಜವೋ ಸುಳ್ಳೋ ಎಂದು ಪರೀಕ್ಷಿಸಲು ನನ್ನ ಎಡಗೈಯಿಂದ ಆ ಮೂರ್ತಿಯ ಎಡಗೈಯನ್ನು ಹಿಡಿದುಕೊಂಡೆ. ಅಷ್ಟರಲ್ಲಿ ಆ ರೂಪ ಅದೆಲ್ಲಿಯೋ ಮಾಯವಾಯಿತು; ಅದರೊಳಗಿನಿಂದ ಸುಮಾರು ಹತ್ತು ತಿಂಗಳ ದಿವ್ಯ ಬಾಲಗೋಪಾಲ ಪ್ರತ್ಯಕ್ಷನಾದ! ಅಂಬೆಗಾಲಿಕ್ಕುತ್ತ ಮುಂದೆ ಬಂದು, ತಲೆಯೆತ್ತಿ, ಬಿರಿದ ಕಂಗಳಿಂದ ನನ್ನನ್ನು ದಿಟ್ಟಿಸಿದ. ಆಹಾ, ಅದೆಂಥ ರೂಪ, ಅದೆಂಥ ನೋಟ! ಹಾಗೆಯೇ ನೋಡುತ್ತ ತನ್ನ ಬಲಗೈಯನ್ನು ಮೇಲೆತ್ತಿ ಅಮೃತ ಸೂಸುವ ದನಿಯಲ್ಲಿ, 'ಅಮ್ಮಾ ಬೆಣ್ಣೆ ಕೊಡಮ್ಮ' ಅಂತ ಕೇಳಿದ. ಆ ಕಂದನನ್ನು ನೋಡುತ್ತಿದ್ದಂತೆಯೇ ನನಗೆ ಬಾಹ್ಯ ಪ್ರಜ್ಞೆ ತಪ್ಪಿಹೋಗುವಂತಾಯಿತು. ಆನಂದೋದ್ರೇಕದಿಂದ ಕಿಟಾರನೆ ಕಿರುಚಿಬಿಟ್ಟೆ. ಕಣ್ಣೀರು ಧಾರೆಯಾಗಿ ಹರಿಯಿತು. ಸದ್ಯ! ಸನಿಹದಲ್ಲಿ ಯಾರೂ ಇರಲಿಲ್ಲ. ಇದ್ದಿದ್ದರೆ, ಏನೋ ಅನಾಹುತವಾಗಿದೆ ಎಂದು ಎಲ್ಲರೂ ಖಂಡಿತ ಓಡಿಬರುತ್ತಿದ್ದರು. ಅಳುತ್ತಳುತ್ತಲೇ ನಾನು ಆ ದೇವಶಿಶುವಿಗೆ ಹೇಳಿದೆ, 'ಕಂದಾ, ನಾನೊಬ್ಬ ಬಡ ಹೆಂಗಸು. ನಿನಗೆ ಬೆಣ್ಣೆ ಹಾಲುಕೆನೆಯನ್ನೆಲ್ಲ ಎಲ್ಲಿಂದ ತರಲಪ್ಪಾ?' ಆದರೆ ಗೋಪಾಲ ಬಿಡಬೇಕಲ್ಲ! 'ಊಽ... ಏನಾದರೂ ಕೊಡೂಽ' ಅಂತ ಹಟ ಮಾಡಿದ. ನಾನಿನ್ನೇನು ಮಾಡಲಿ? ಕಣ್ಣೀರು ಸುರಿಸುತ್ತಲೇ ಮೇಲೆದ್ದೆ. ತೂಗುಹಾಕಿದ್ದ ಮಡಕೆಯಿಂದ, ಒಣಗಿಹೋಗಿದ್ದ ಒಂದು ತೆಂಗಿನುಂಡೆಯನ್ನು ತೆಗೆದು ಅವನ ಪುಟ್ಟ ಕೈಗಿಟ್ಟು, 'ಅಪ್ಪಾ, ಗೋಪಾಲಾ! ಇಕೊ. ಆದರೆ ನಿನಗೆ ಈ ಹಾಳು ತಿನಿಸನ್ನು ಕೊಟ್ಟಿದ್ದೇನೆ ಅಂತ ನನಗೂ ಇಂಥ ಫಲವನ್ನೇ ಕೊಟ್ಟುಬಿಡಬೇಡ!' ಅಂತ ಹೇಳಿದೆ.

"ಇದೆಲ್ಲ ಸರಿಯೆ, ಈಗ ನಾನು ಜಪ ಮಾಡುವುದು ಬೇಡವೆ? ಆದರೆ ಇನ್ನೆಲ್ಲಿಯ ಜಪ! ಗೋಪಾಲ ದುಡುದುಡನೆ ಬಂದು ನನ್ನ ಮಡಿಲೇರಿ ಕುಳಿತುಬಿಟ್ಟ.

ಜಪಮಾಲೆಯನ್ನು ಕೈಯಿಂದ ಕಿತ್ತುಕೊಂಡ. ನನ್ನ ಹೆಗಲೇರಿದ, ಮತ್ತೆ ಇಳಿದ; ಕೋಣೆಯ ತುಂಬೆಲ್ಲ ಅಂಬೆಗಾಲಿಕ್ಕುತ್ತ ಸುತ್ತಾಡಿದ. ಹೀಗೆ ಒಂದು ನಿಮಿಷವೂ ನಿಲ್ಲದೆ ಸಾಗಿತ್ತು ಅವನ ತುಂಟಾಟ. ಸ್ವಲ್ಪ ಬೆಳಕು ಹರಿಯುವುದನ್ನೇ ಕಾದಿದ್ದು ಅವನನ್ನೆತ್ತಿ ಎದೆಗವಚಿಕೊಂಡು ಹುಚ್ಚಿಯಂತೆ ಓಡಿದೆ ದಕ್ಷಿಣೇಶ್ವರಕ್ಕೆ. ಅವನ ಕೆಂಪಾದ ಪುಟ್ಟಪುಟ್ಟ ಪಾದಗಳು ನನ್ನದೆಯ ಮೇಲೆ ತೂಗಾಡುತ್ತಿದ್ದುದನ್ನು ದಾರಿಯುದ್ದಕ್ಕೂ ಸ್ಪಷ್ಟವಾಗಿ ನೋಡುತ್ತಿದ್ದೆ."

ತನ್ನ ಜೀವಮಾನದ ಇಷ್ಟಾರ್ಥವನ್ನು ಹೀಗೆ ಹಠಾತ್ತಾಗಿ ಸಿದ್ಧಿಸಿಕೊಂಡ ಅಘೋರ ಮಣಿಗೆ ಆನಂದಾತಿಶಯದಿಂದ ಹುಚ್ಚೇ ಹಿಡಿದಂತಾದುದರಲ್ಲಿ ಆಶ್ಚರ್ಯವೇನು? ತನ್ನ 'ಮಗು'ವನ್ನೆತ್ತಿಕೊಂಡು ಸುಮಾರು ಮೂರು ಮೈಲಿ ದೂರವನ್ನು ಹೆಚ್ಚುಕಡಿಮೆ ಓಡುತ್ತಲೇ ಕ್ರಮಿಸಿದಳು. ಅವಳು ದಕ್ಷಿಣೇಶ್ವರಕ್ಕೆ ಬಂದಾಗ ಅಲ್ಲಿ ನಡೆದ ಅತ್ಯಪೂರ್ವ ಘಟನೆಗೆ ಸಾಕ್ಷಿಯಾಗಿದ್ದ ಇನ್ನೊಬ್ಬ ಭಕ್ತೆ ಗೋಲಾಪ್ ಮಾ ಅದನ್ನು ಬಣ್ಣಿಸುತ್ತಾಳೆ: "ಬೆಳಿಗ್ಗೆ ಏಳು-ಏಳೂವರೆ ಗಂಟೆಯ ಸಮಯ. ನಾನು ಠಾಕೂರರ ಕೋಣೆಯನ್ನು ಗುಡಿಸಿ ಸ್ವಚ್ಛ ಮಾಡುತ್ತಿದ್ದೆ. ಆಗ ಹೊರಗಡೆ ಯಾರೋ 'ಗೋಪಾಲಾ, ಗೋಪಾಲಾ!' ಎಂದು ಕೂಗುತ್ತಾ ಬರುತ್ತಿರುವ ಶಬ್ದ ಕೇಳಿಸಿತು. ಕಂಠಸ್ವರ ಪರಿಚಿತವಾದ್ದೇ. ಕ್ರಮೇಣ ಆ ಶಬ್ದ ಇನ್ನಷ್ಟು ಹತ್ತಿರಕ್ಕೆ ಬಂತು. ನೋಡುತ್ತೇನೆ—ಗೋಪಾಲೇರ್ ಮಾ! ಒಳ್ಳೇ ಹುಚ್ಚಿಯ ಹಾಗೆ ದಾಪುಗಾಲು ಹಾಕಿಕೊಂಡು ಬರುತ್ತಿದ್ದಾಳೆ; ದೃಷ್ಟಿ ಊರ್ಧ್ವಮುಖ ವಾಗಿದೆ. ಉಟ್ಟ ಸೀರೆಯ ಅಂಚು ನೆಲಗುಡಿಸುತ್ತಿದೆ! ಅವಳಿಗೆ ಮಾತ್ರ ಅದಾವುದರ ಕಡೆಗೂ ಗಮನವೇ ಇಲ್ಲ. ಅವಳ ಆ ಅವಸ್ಥೆಯನ್ನು ಕಂಡು ನಾನು ಸ್ತಂಭಿತಳಾಗಿಬಿಟ್ಟೆ."

ಆಗ ಅದಕ್ಕಿಂತ ಆಶ್ಚರ್ಯಕರವಾದ ಮತ್ತೊಂದು ಘಟನೆ ನಡೆಯಿತು. ವಾತ್ಸಲ್ಯ ಭಾವದಿಂದ ಭರಿತಳಾಗಿದ್ದ ಅಘೋರಮಣಿಯನ್ನು ಕಂಡಕೂಡಲೇ ಶ್ರೀರಾಮಕೃಷ್ಣರಿಗೆ ಆಕೆಯ ಮನಸ್ಥಿತಿಯ ಅರಿವಾಯಿತು; ಮತ್ತು ಕ್ಷಣಮಾತ್ರದಲ್ಲಿ ಅವರೊಳಗೆ ಶಿಶು ಭಾವದ ಉದ್ದೀಪನವಾಯಿತು. ಭಾವಸಾಮ್ರಾಜ್ಯದ ಚಕ್ರವರ್ತಿಯಲ್ಲವೆ ಅವರು? ಅವರು ಗೋಪಾಲಭಾವ ತಳೆದರೆಂದರೆ ಗೋಪಾಲನೇ ಆದರೆಂದರ್ಥ. ಆ ಶರೀರ ಮಾತ್ರ ಅದೇ 'ರಾಮಕೃಷ್ಣಶರೀರ'; ಆದರೆ ನೋಡುವವರ ಕಣ್ಣಿಗೆ, ಅದರೊಳಗಿನ ನಿಜವ್ಯಕ್ತಿಯನ್ನು ಗುರುತಿಸುವಲ್ಲಿ ಆ ಬಾಹ್ಯರೂಪವೆಂದೂ ಅಡಚಣೆಯಾಗಿ ನಿಲ್ಲುತ್ತಿರ ಲಿಲ್ಲ ಎಂಬುದಕ್ಕೆ ಆದಾಗಲೇ ಸಾಕಷ್ಟು ದೃಷ್ಟಾಂತಗಳನ್ನು ನೋಡಿದ್ದೇವೆ. ಅದೇನೇ ಇರಲಿ; ಶಿಶುಭಾವೋದ್ದೀಪ್ತರಾದ ಶ್ರೀರಾಮಕೃಷ್ಣರು ಅರ್ಧಬಾಹ್ಯಪ್ರಜ್ಞೆಯ ಸ್ಥಿತಿಯಲ್ಲಿ, ಕುಳಿತಲ್ಲಿಂದ ಮೇಲೆದ್ದು, ವಿಸ್ಮಯಭರಿತಳಾಗಿದ್ದ ಗೋಲಾಪ್ ಮಾಳ ಬೆನ್ನ ಮೇಲೆ ಕುಳಿತರು! ಮತ್ತು ಮರುಘಳಿಗೆಯೇ ಅಲ್ಲಿಂದಲೂ ಎದ್ದು ಅಘೋರಮಣಿಯ ಮಡಿ ಲಲ್ಲಿ ಕುಳಿತರು. ಮುಂದಾದ ವಿಸ್ಮಯವನ್ನು ಮತ್ತೆ ಗೋಲಾಪ್ ಮಾ ಬಣ್ಣಿಸುತ್ತಾಳೆ:

"ಶ್ರೀರಾಮಕೃಷ್ಣರು ಬಾಲಭಾವವನ್ನು ತಾಳಿ ತನ್ನ ತೊಡೆಯ ಮೇಲೆ ಕುಳಿತಾಗ ಆಕೆ ಆನಂದಾಶ್ರುವನ್ನು ಕರೆಯುತ್ತ ತಾನು ತಂದಿದ್ದ ಹಾಲುಕೆನೆ, ಬೆಣ್ಣೆ, ಇಂಗಿಸಿದ ಹಾಲು ಇವನ್ನೆಲ್ಲ ಅವರಿಗೆ ಕೈಯಾರೆ ತಿನ್ನಿಸತೊಡಗಿದಳು. ಅವರೂ ಪುಟ್ಟ ಹಸುಳೆ ಯಂತೆ ಅವನ್ನು ಸಂತಸದಿಂದ ಸ್ವೀಕರಿಸಿದರು. ಆ ದೃಶ್ಯವನ್ನು ಕಂಡು ನಾನು ಆಶ್ಚರ್ಯಾಘಾತಗೊಂಡು ಮರವಡಿಸಿಹೋದೆ. ಠಾಕೂರರು ಭಾವಸ್ಥಿತಿಯಲ್ಲಿದ್ದಾಗ ಸ್ತ್ರೀಯರನ್ನು ಮುಟ್ಟಿದ್ದನ್ನು ನಾನೆಂದೂ ಕಂಡಿರಲಿಲ್ಲ. ಬಹಳ ಹಿಂದೆ, ಕೆಲವೊಮ್ಮೆ

ಭೈರವಿ ಬ್ರಾಹ್ಮಣಿ ಯಶೋದಾಭಾವದಿಂದ ಆವೇಶಗೊಂಡಾಗ ಅವರು ಆಕೆಯ ಮಡಿಲೇರಿ ಕುಳಿತುಕೊಳ್ಳುತ್ತಿದ್ದರು ಎಂಬ ವಿಷಯವನ್ನು ನಾನು ಕೇಳಿ ತಿಳಿದಿದ್ದೆನಷ್ಟೆ. ಅಂಥದೊಂದು ದೃಶ್ಯವನ್ನು ಕಣ್ಣಾರೆ ಕಂಡೇನೆಂದು ನಾನೆಂದೂ ಎಣಿಸಿರಲಿಲ್ಲ. ಗೋಪಾಲೇರ್ ಮಾಳ ಆ ಅವಸ್ಥೆಯನ್ನೂ ಶ್ರೀರಾಮಕೃಷ್ಣರ ಆ ಭಾವವನ್ನೂ ಕಂಡು ನನಗೆ ನಿಜಕ್ಕೂ ಮೈಯೆಲ್ಲ ಜೋಮು ಹಿಡಿದಂತಾಗಿಬಿಟ್ಟಿತು.

"ಸ್ವಲ್ಪ ಹೊತ್ತಿನಲ್ಲೇ ಶ್ರೀರಾಮಕೃಷ್ಣರ ಭಾವವಿಳಿಯಿತು. ಅವರು ಮತ್ತೆ ಸಹಜ ಸ್ಥಿತಿಯಲ್ಲಿ ತಮ್ಮ ಮಂಚದ ಮೇಲೆ ಕುಳಿತುಕೊಂಡರು. ಆದರೆ ಗೋಪಾಲೇರ್ ಮಾಳ ಭಾವ ಮಾತ್ರ ಇಳಿಯಲೇ ಒಲ್ಲದು! ಜೀವಂತ ಗೋಪಾಲನನ್ನು ನಿರಂತರವಾಗಿ ಕಣ್ಣಾರೆ ಕಾಣುತ್ತ ಆಕೆಯ ಆನಂದಕ್ಕೆ ಮಿತಿಯೇ ಇಲ್ಲದಂತಾಗಿತ್ತು. 'ಬ್ರಹ್ಮ ಕುಣಿಯುತ್ತಾನೆ, ವಿಷ್ಣು ಕುಣಿಯುತ್ತಾನೆ' ಎಂದೆಲ್ಲ ಗಟ್ಟಿಯಾಗಿ ಹಾಡುತ್ತ ಹುಚ್ಚಿಯ ಹಾಗೆ ಕೋಣೆಯಲ್ಲೆಲ್ಲ ಕುಣಿದಳು. ಅದನ್ನು ಕಂಡು ಠಾಕೂರರು, 'ನೋಡು ನೋಡು, ಅವಳು ಆನಂದೋನ್ಮತ್ತಳಾಗಿಬಿಟ್ಟಿದ್ದಾಳೆ! ಅವಳ ಮನಸ್ಸೀಗ ಗೋಪಾಲಲೋಕದಲ್ಲಿ ವಿಹರಿಸುತ್ತಿದೆ' ಎಂದರು."

ಹೌದು, ಅವಳ ಮನಸ್ಸು ಅಷ್ಟು ಸುಲಭವಾಗಿ ಸಹಜಸ್ಥಿತಿಗೆ ಮರಳಲು ಸಾಧ್ಯವೂ ಇರಲಿಲ್ಲ. ಏಕೆಂದರೆ ಬಾಲಗೋಪಾಲನನ್ನು ತನ್ನ ಭಾವಲೋಕದಲ್ಲಿ ಅವಳಿನ್ನೂ ಕಾಣುತ್ತಿದ್ದಾಳೆ! ಆತ ಜೀವಂತರೂಪದಿಂದ ಲೀಲೆಯಾಡುತ್ತಿರುವುದನ್ನು ತನ್ನ ಭಾವದೃಷ್ಟಿಯಿಂದ ಸ್ಪಷ್ಟವಾಗಿ ನೋಡುತ್ತಿದ್ದಾಳೆ! ಆ ಅನುಭವದ ಉತ್ಕಟತೆಯನ್ನು ತಾಳಲಾರದೆ ಆಕೆ ಶ್ರೀರಾಮಕೃಷ್ಣರನ್ನುದ್ದೇಶಿಸಿ ಗಟ್ಟಿಯಾಗಿ ಉದ್ಗಾರವೆತ್ತುತ್ತಾಳೆ: "ಇಕೊ ಇಲ್ಲಿ ನೋಡು! ಗೋಪಾಲ ನಮ್ಮ ನಡುವೆಯೇ ಆಟವಾಡುತ್ತಿದ್ದಾನೆ. ಇಲ್ಲಿ! ನನ್ನ ತೊಡೆಯ ಮೇಲೆ ಕುಳಿತಿದ್ದಾನೆ. ಹ್ಞಾ, ನೋಡು, ಅವನು ನಿನ್ನೊಳಗೆ ಪ್ರವೇಶಿಸಿದ! ಮತ್ತೆ ಹೊರಗೆ ಬಂದ! ಬಾಪ್ಪಾ, ಬಾ ಮಗೂ, ಈ ನಿನ್ನ ದೀನ ತಾಯಿಯ ಮಡಿಲಿಗೆ ಬಾರೋ!..."

ಚಪಲಚರಣನಾದ ಗೋಪಾಲ ಒಂದು ಕ್ಷಣವೂ ಕುಳಿತಲ್ಲಿ ಕುಳಿತಿರದೆ ಅತ್ತಿಂದಿತ್ತ ಕುಪ್ಪಳಿಸುತ್ತಾನೆ. ಈಗ ಇಲ್ಲಿದ್ದರೆ ಇನ್ನೊಂದು ಘಳಿಗೆಗೆ, ಅಗೋ ಅಲ್ಲಿ! ಒಮ್ಮೆ ಬಾಲರೂಪದಲ್ಲಿ ನಲಿದರೆ ಮತ್ತೊಮ್ಮೆ ರಾಮಕೃಷ್ಣರೂಪದಲ್ಲಿ ಲೀನನಾಗುತ್ತಾನೆ! ಈ ಲೀಲೆಯನ್ನೆಲ್ಲ ನೋಡುತ್ತ ವೃದ್ಧೆ ಅಘೋರಮಣಿಯ ಎದೆಯಲ್ಲಿ ಭಾವಸಾಗರದ ಅಲೆಗಳು ಭೋರ್ಗರೆದು ಬಡಿಯುತ್ತಿವೆ. ಆನಂದ! ಧನ್ಯತೆ! ಅವಳೀಗ ಅವಳಾಗಿಲ್ಲ.

ಅವಳ ಭಾವೋತ್ಕಟತೆಯನ್ನು ಕಂಡ ಶ್ರೀರಾಮಕೃಷ್ಣರು ನಸುನಕ್ಕರು. ಹೆತ್ತಮ್ಮನೊಂದಿಗೆ ಮಗು ವರ್ತಿಸುವಂತೆ, ಆಕೆಯ ಮೈದಡವಿದರು; ಕೋಣೆಯಲ್ಲಿದ್ದ ಸವಿತಿನಿಸುಗಳನ್ನು ತಂದು ತಾವೇ ಅವಳ ಬಾಯಿಗಿಟ್ಟು ತಿನ್ನಿಸುತ್ತ ಅವಳನ್ನು ಸಾಂತ್ವನಗೊಳಿಸುವ ಪ್ರಯತ್ನ ಮಾಡಿದರು. ಅವುಗಳನ್ನು ತಿನ್ನುತ್ತ ವೃದ್ಧ ಬ್ರಾಹ್ಮಣಿ ಭಾವದ ಮತ್ತಿನಲ್ಲಿ ನುಡಿದಳು: "ಅಪ್ಪಾ, ಗೋಪಾಲಾ! ನಿನ್ನ ಈ ಬಡ ತಾಯಿ ಇಷ್ಟುದಿನ ನಡೆಸಿದ ಸಂಕಷ್ಟದ ಜೀವನವನ್ನು ಕಂಡು ಮರುಗಿ ಈಗ ಅವಳಿಗೆ ಇಷ್ಟೆಲ್ಲ ಉಪಚಾರ ಮಾಡುತ್ತಿದ್ದೀಯಾ?"

ಅಂದಿನಿಂದ ಅವಳು 'ಗೋಪಾಲೇರ್ ಮಾ'—'ಗೋಪಾಲನ ತಾಯಿ'ಯೇ ಆದಳು. ಶ್ರೀರಾಮಕೃಷ್ಣರೂ ಅವಳನ್ನು ಆ ಹೆಸರಿನಿಂದಲೇ ಕರೆದರು. ಅದಕ್ಕೆ ಮುನ್ನ

ಜನರು ಅವಳನ್ನು 'ಕಾಮಾರಹಾಟಿಯ ಬ್ರಾಹ್ಮಣಿ' ಎನ್ನುತ್ತಿದ್ದರು. ಇಲ್ಲಿಂದಾಚೆಗೆ ಅವಳಿಗೆ ಗೋಪಾಲೇರ್ ಮಾ ಎಂಬ ಹೆಸರೇ ನಿಂತಿತು.

ಶ್ರೀರಾಮಕೃಷ್ಣರು ಅಂದು ಸಂಜೆಯವರೆಗೂ ಅವಳನ್ನು ತಮ್ಮಲ್ಲಿಯೇ ಉಳಿಸಿಕೊಂಡು ಉಪಚರಿಸಿ, ಶಾಂತಗೊಳಿಸಿ ಬೀಳ್ಕೊಟ್ಟರು. ಅವಳು ಅಲ್ಲಿಂದ ಹೊರಟಳೋ ಇಲ್ಲವೋ, ಮತ್ತೆ ಪ್ರತ್ಯಕ್ಷ ಬಾಲಗೋಪಾಲ! ಆತ ಅವಳ ಸೊಂಟವನ್ನೇರಿ ಜೊತೆಯಲ್ಲೇ ಹೊರಟ. ಮನೆಗೆ ಮರಳಿದ ಗೋಪಾಲೇರ್ ಮಾ ಎಂದಿನಂತೆ, ಅಭ್ಯಾಸಬಲದಿಂದ ಜಪಕ್ಕೆ ಕುಳಿತುಕೊಳ್ಳುತ್ತಾಳೆ. ಆದರೆ, ಅಯ್ಯೋ ಹುಚ್ಚಿ, ಇನ್ನೆಂಥ ಜಪ? ಇಷ್ಟದೇವತೆಯೇ ಎದುರಿಗಿರುವಾಗ! ಕಣ್ಣೆದುರಿಗೇ ಇರುವವನನ್ನು ಕಣ್ಮುಚ್ಚಿ ಭಾವಿಸುವುದೆ?

ಈಗ ಆ ಬಾಲಕ ಮತ್ತೆ ಅವಳೊಂದಿಗೆ ನಾನಾ ರೀತಿಯ ತುಂಟಾಟಗಳನ್ನಾಡತೊಡಗಿದ. ರಾತ್ರಿಯಾಯಿತು. ಗೋಪಾಲೇರ್ ಮಾ ಒಂದು ಚಾಪೆ ಹಾಸಿ ಅವನನ್ನು ಮಲಗಿಸಿ ತಾನೂ ಮಲಗಿಕೊಂಡಳು. ಪಾಪ, ಆ ಹಸುಕಂದನಿಗೆ ತಲೆಗೊಂದು ದಿಂಬು ಕೂಡ ಇಲ್ಲ. ಬ್ರಾಹ್ಮಣಿಗಾದರೆ ಎಂಥದೂ ಬೇಕಾಗಿಲ್ಲ; ಹಾಗೆಯೇ ಮಲಗಿ ಅಭ್ಯಾಸವಾಗಿಹೋಗಿದೆ. ಆದರೆ ಗೋಪಾಲ ಸುಮ್ಮನಿರಬೇಕಲ್ಲ! 'ಊ್ಞ, ನಂಗೆ ನಿದ್ದೆ ಬರಲ್ಲ, ದಿಂಬು ಬೇಕೂS' ಎಂದು ತಕರಾರು ಮಾಡಿದ. ಆಗ ಅವಳು ತನ್ನ ಎಡತೋಳನ್ನೇ ಅವನ ಪುಟ್ಟ ತಲೆಗೆ ಆಸರೆಯನ್ನಾಗಿಸಿ, ಏನೇನೋ ಹೇಳಿ ಸಮಾಧಾನಗೊಳಿಸತೊಡಗಿದಳು—'ಮಗೂ, ಇವತ್ತು ಹೀಗೆಯೇ ಮಲಗಿಕೊ. ನಾಳೆ ಬೆಳಗಾಗುತ್ತಲೇ ಕಲ್ಕತ್ತಕ್ಕೆ ಹೋಗಿ, ನಮ್ಮ ಒಡತಿಯ ಮಗಳಿಗೆ ಹೇಳಿ, ಹತ್ತಿಯನ್ನು ಚೆನ್ನಾಗಿ ಹಿಂಜಿಸಿ, ಒಳ್ಳೇ ಮೃದುವಾದ ದಿಂಬು ಮಾಡಿಸಿ ತರುತ್ತೇನೆ, ಏನು?' ಎಂದೆಲ್ಲ ಹೇಳಿದ ಮೇಲೆ ಆತ ನಿದ್ದೆ ಹೋದ.

ಅಂತೂ ರಾತ್ರಿ ಕಳೆಯಿತು. ಎಂದಿನಂತೆ ನಸುಕಾಗುವುದಕ್ಕೆ ಮೊದಲೇ ಗೋಪಾಲೇರ್ ಮಾ ಎದ್ದಳು. ತನ್ನೀ ಕಂದ ಎದ್ದು "ಹಸಿವೂ" ಎಂದು ಅತ್ತರೆ ಕೊಡುವುದೇನನ್ನು? ಆದ್ದರಿಂದ ಬೇಗನೆ ಅಡಿಗೆ ಮಾಡಲೆಂದು ಕಟ್ಟಿಗೆಯನ್ನು ಆಯ್ದು ತರಲು ಹೊರಟಳು. ಬಾಲಗೋಪಾಲ ತಾನೂ ಎದ್ದು ನಡೆದ ಜೊತೆಗೆ! ತನ್ನ ಪುಟ್ಟಪುಟ್ಟ ಕೈಗಳಿಂದ ಪುಟ್ಟಪುಟ್ಟ ಪುರಲೆಗಳನ್ನು ಸೇರಿಸಿದ. ಅಷ್ಟೇ ಅಲ್ಲ, ಅದನ್ನು ತಾನೇ ಹೊತ್ತು ತಂದು ಅಡಿಗೆಮನೆಗೆ ಹಾಕಿದ. 'ತಾಯಿ' ಅಡಿಗೆಯಲ್ಲಿ ನಿರತಳಾದಾಗ, ತಾನೂ ಸನಿಹಕ್ಕೆ ಬಂದು ಕುಳಿತ. ಸುಮ್ಮನೆ ಕುಳಿತನೆ? ಇಲ್ಲ ಇಲ್ಲ! ಎಡೆಬಿಡದೆ ಅದೇನೇನೋ ಮಾತನಾಡಿದ; ಗೋಳುಹೊಯ್ದುಕೊಂಡ. ಗೋಪಾಲೇರ್ ಮಾ "ಸುಮ್ಮನಿರು ಮಗೂ" ಎಂದು ಒಳ್ಳೆ ಮಾತಿನಲ್ಲಿ ಹೇಳಿದಳು. ಕೇಳದಿದ್ದಾಗ ಹುಸಿಗೋಪ ನಟಿಸಿ ಜೋರು ಮಾಡಿದಳು. ಅದಕ್ಕೂ ಬೆದರದಿದ್ದಾಗ... ಮತ್ತೆ ಒಳ್ಳೆಯ ಮಾತಿನಲ್ಲೇ ಹೇಳಿದಳು!

ಹೀಗೆ ಗೋಪಾಲೇರ್ ಮಾ—ಒಂದು ಘಳಿಗೆಯಲ್ಲ, ಒಂದು ದಿನವಲ್ಲ—ಎರಡು ತಿಂಗಳ ಸುದೀರ್ಘಕಾಲ ತನ್ನೀ 'ಮಗು'ವನ್ನು ತನ್ನ ಭಾವದ ಕಂಗಳಿಂದ ಮತ್ತೆಮತ್ತೆ ಕಂಡಳು; ಅವನೊಡನೆ ಭಾವಪ್ರಪಂಚದಲ್ಲಿ ನಲಿದಾಡಿ ದಿವ್ಯಾನಂದವನ್ನು ಸೂರೆಗೊಂಡಳು.

ಶ್ರೀರಾಮಕೃಷ್ಣರೂ ತನ್ನ ಬಾಲಗೋಪಾಲನೂ ಬೇರೆಬೇರೆಯಲ್ಲ ಎಂಬುದರ ಸಾಕ್ಷಾತ್ಕಾರವಾದ ಕೆಲಕಾಲದ ಮೇಲೆ ಒಮ್ಮೆ ಬ್ರಾಹ್ಮಣಿ ದಕ್ಷಿಣೇಶ್ವರಕ್ಕೆ ಬಂದಳು. ಶ್ರೀರಾಮಕೃಷ್ಣರ ದರ್ಶನ ಪಡೆದು, ಶಾರದಾದೇವಿಯವರಿದ್ದ ನಹಬತ್‌ಖಾನೆಗೆ ಹೋಗಿ ಜಪ ಮಾಡಲು ಕುಳಿತಳು. ಅವಳು ಜಪವನ್ನು ಮುಗಿಸಿ ಏಳುವ ಹೊತ್ತಿಗೆ ಪಂಚವಟಿಯ ಕಡೆಯಿಂದ ಅಲ್ಲಿಗೆ ಬಂದ ಶ್ರೀರಾಮಕೃಷ್ಣರು ಅವಳಿಗೆಂದರು:

"ಅದೇಕೆ ಈಗಲೂ ಅಷ್ಟೊಂದು ಜಪ ಮಾಡುತ್ತೀಯ? ನಿನಗೆ ದೊರೆಯ ಬೇಕಾದ ಫಲ ದೊರಕಿಬಿಟ್ಟಿದೆಯಲ್ಲ."

ಗೋಪಾಲೇರ್ ಮಾ (ಆಶ್ಚರ್ಯದಿಂದ): "ಏನು! ನಾನಿನ್ನು ಜಪ ಮಾಡುವುದೇ ಬೇಡವೆ? ನನಗೆ ಎಲ್ಲವೂ ಪ್ರಾಪ್ತವಾಗಿದೆ ಎನ್ನುತ್ತೀಯಾ?"

ಶ್ರೀರಾಮಕೃಷ್ಣರು: "ಹೌದು, ನಿನಗೆಲ್ಲವೂ ಪ್ರಾಪ್ತವಾಗಿದೆ."

ಅವಳಿಗೆ ನಂಬಿಕೆಯುಂಟಾಗಲಿಲ್ಲ. ಮತ್ತೆರಡು ಬಾರಿ ಅದೇ ಪ್ರಶ್ನೆಯನ್ನೇ ಹಾಕಿದಳು. ಆಗ ಶ್ರೀರಾಮಕೃಷ್ಣರು ಅವಳಿಗೆ ಸ್ಪಷ್ಟವಾಗಿ ಈ ರೀತಿ ನುಡಿದರು:

"ಹೌದು, ನೀನು ನಿನಗಾಗಿ ಜಪ ಮಾಡುವುದನ್ನೆಲ್ಲ ಮುಗಿಸಿದ್ದೀಯ. ಆದರೆ, (ತಮ್ಮನ್ನು ತೋರಿಸಿಕೊಳ್ಳುತ್ತ) ಇದರ ಮಂಗಳಕ್ಕಾಗಿ ಬೇಕಾದರೆ ನೀನು ಜಪಧ್ಯಾನಗಳನ್ನು ಮುಂದುವರಿಸಿಕೊಂಡು ಹೋಗಬಹುದು."

ಗೋಪಾಲೇರ್ ಮಾ: "ಹೌದೆ! ಹಾಗಾದರೆ ಇನ್ನು ಮೇಲೆ ನಾನು ಮಾಡುವುದೆಲ್ಲವೂ ನಿನಗಾಗಿ, ನಿನಗಾಗಿ, ನಿನಗಾಗಿ."

ಹೀಗೆಂದ ಬ್ರಾಹ್ಮಣಿ, ತನಗೆ ಸಾಕ್ಷಾತ್ಕಾರ ಮಾಡಿಸಿಕೊಟ್ಟ ಆ ಪವಿತ್ರ ಜಪಮಾಲೆಯನ್ನೂ ಅದರ ಚೀಲವನ್ನೂ 'ಕೃಷ್ಣಾರ್ಪಣ'ವೆನ್ನುತ್ತ ಗಂಗೆಯಲ್ಲಿ ವಿಸರ್ಜಿಸಿಬಿಟ್ಟಳು.

ಇಲ್ಲಿ ಶ್ರೀರಾಮಕೃಷ್ಣರು 'ಇದರ ಮಂಗಳಕ್ಕಾಗಿ ಬೇಕಾದರೆ ಜಪ ಮಾಡು' ಎಂದದ್ದು ನಮಗೆ ಬಹಳ ಆಶ್ಚರ್ಯಕರವಾಗಿ ತೋರಬಹುದು. ಏಕೆಂದರೆ ಅವರನ್ನೊಬ್ಬ ಸಾಧಕ ಎಂಬ ದೃಷ್ಟಿಯಿಂದ ನೋಡಿದರೆ, ಆಧ್ಯಾತ್ಮಿಕ ಪ್ರಪಂಚದ ಪ್ರತಿಯೊಂದು ಮುಖ್ಯಪಥವನ್ನೂ ಅನುಸರಿಸಿ, ಸಾಧನೆ ಮಾಡಿ, ಜಗತ್ತು ಕಂಡರಿಯದಂತಹ ಪರಿಪೂರ್ಣತೆಯನ್ನು ಕಂಡುಕೊಂಡವರು ಅವರು. ಅವರನ್ನು ಒಬ್ಬ ಮಾನವಮಾತ್ರನೆಂಬಂತೆ ನೋಡಿದರೂ, ಪರಮ ನಿಃಸ್ವಾರ್ಥತೆಯ ಸ್ಥಿತಿಯನ್ನು ತಲುಪಿದ್ದವರು ಅವರು. ಸಾಧಕಶ್ರೇಷ್ಠರಿಂದ ಅವತಾರಪುರುಷನೆಂದು ಪರಿಗಣಿಸಲ್ಪಟ್ಟವರು. ಇನ್ನು ಗೋಪಾಲೇರ್ ಮಾಳ ಪಾಲಿಗಂತೂ ಅವರು ಇಷ್ಟದೇವತಾಸ್ವರೂಪಿ! ಹೀಗಿರುವಾಗ ಶ್ರೀರಾಮಕೃಷ್ಣರಿಗೆ ಇನ್ನಾವ ಮಂಗಳವಾಗಲಿ, ಶ್ರೇಯಸ್ಸಾಗಲಿ ಆಗಬೇಕಾದ್ದಿದೆ? ಅವಳಾದರೂ ಅದನ್ನು ಹೇಗೆ ಸಾಧಿಸಬಲ್ಲಳು?

ಇದಕ್ಕೆ ಉತ್ತರವಿಷ್ಟೆ: ಶ್ರೀರಾಮಕೃಷ್ಣರ ಅವತರಣವೆಂಬುದು ಜಗದ್ಧಿತಕ್ಕಾಗಿ. ಅವರ ಪ್ರತಿಯೊಂದು ಕೃತಿಯೂ ಸಮಸ್ತ ಮಾನವತೆಯ ಶ್ರೇಯಸ್ಸಿಗಾಗಿ. ಇದು ನಮಗೆ ಈಗಾಗಲೇ ಮನವರಿಕೆಯಾಗಿದೆ. ಆದ್ದರಿಂದ ಅವರನ್ನು ಗೋಪಾಲೇರ್ ಮಾ

ತನ್ನ ಸ್ವಂತ ಮಗುವೆಂಬಂತೆ ಕಾಣಲಿ, ಅಥವಾ ಭಗವತ್ಸ್ವರೂಪಿಯಾಗಿ ಕಾಣಲಿ, 'ತನ್ನ ಗೋಪಾಲನ ಶ್ರೇಯಸ್ಸಿಗಾಗಿ' ಎಂದು ಅವಳು ಜಪತಪಗಳನ್ನು ಮಾಡಿದರೆ, ಅದು ಲೋಕಕಲ್ಯಾಣಾರ್ಥವಾಗಿ ಸಂದ ಪ್ರಾರ್ಥನೆಯೇ ಆಗುತ್ತದೆ. ಸಿದ್ಧಿಯನ್ನು, ಎಂದರೆ ಜೀವನದ ಪರಮೋದ್ದೇಶವನ್ನು, ಈಡೇರಿಸಿಕೊಂಡವರು ತರುವಾಯ ಹೀಗೆ ಲೋಕ ಹಿತ ಸಾಧನೆಯಲ್ಲಿ ತೊಡಗುವುದು ಸಹಜವೇ ಆಗಿದೆ. ಶ್ರೀರಾಮಕೃಷ್ಣರು ಅದನ್ನು ಮತ್ತೆಮತ್ತೆ ಹೇಳಿದ್ದಾರೆ.

ಮುಂದೆ ಗೋಪಾಲೇರ್ ಮಾ ಹೇಳಿಕೊಳ್ಳುತ್ತಾಳೆ:

"ಜಪಮಾಲೆಯನ್ನು ವಿಸರ್ಜಿಸಿಬಿಟ್ಟಮೇಲೆ ನಾನು ಗೋಪಾಲನಿಗಾಗಿ ಎಂದು (ಶ್ರೀರಾಮಕೃಷ್ಣರಿಗಾಗಿ) ಕೈಬೆರಳುಗಳಿಂದಲೇ ಜಪ ಮಾಡಲಾರಂಭಿಸಿದೆ. ಆದರೆ ಬಹಳ ಕಾಲದ ಮೇಲೆ ಇನ್ನೊಂದು ಜಪಮಾಲೆಯನ್ನು ಕೊಂಡುಕೊಂಡೆ. ಏಕೆಂದರೆ ದಿನದ ಇಪ್ಪತ್ತನಾಲ್ಕು ಗಂಟೆಯೂ ಮತ್ತಿನ್ನೇನು ಮಾಡುವುದು ? ಆದ್ದರಿಂದಲೇ ಗೋಪಾಲನ ಮಂಗಳಕ್ಕಾಗಿ ಜಪ ಮಾಡುತ್ತಿದ್ದೇನೆ."

ಜಪ ಧ್ಯಾನ ಪ್ರಾರ್ಥನೆಗಳು ಹೇಗೆ ಆಕೆಯ ಮೂಳೆಮಜ್ಜೆಗಳಲ್ಲಿ ಸೇರಿ ಹೋಗಿದ್ದುವು ಎಂಬುದಕ್ಕೆ ಇದಕ್ಕಿಂತ ಉತ್ತಮ ದೃಷ್ಟಾಂತ ಬೇಕೆ ?

ಗೋಪಾಲನ ಪ್ರಥಮ ದರ್ಶನವಾದ ಬಳಿಕ ಸುಮಾರು ಎರಡು ತಿಂಗಳ ಕಾಲ ಆತನ ಸತತಸಾನ್ನಿಧ್ಯದ ಉತ್ಕಟಾನುಭವವಾದ ಮೇಲೆ, ಬ್ರಾಹ್ಮಣಿಯ ಆ ದಿವ್ಯಭಾವದ ತೀವ್ರತೆ ಕ್ರಮೇಣ ತಾನಾಗಿಯೇ ಕುಗ್ಗಿತು; ಭಾವಲೋಕದಿಂದ ಅವಳು ಇಂದ್ರಿಯ ಲೋಕಕ್ಕೆ ಇಳಿದುಬಂದಳು. ದರ್ಶನಗಳಾಗುವುದು ವಿರಳವಾಯಿತು. ಆದರೆ ಅವನನ್ನು ಕಾಣಲೇಬೇಕು ಎಂಬ ವ್ಯಾಕುಲತೆ ಅವಳಲ್ಲುಂಟಾದರೆ ಆತ ತಕ್ಷಣವೇ ಪ್ರತ್ಯಕ್ಷನಾಗು ತ್ತಿದ್ದ. ಇಲ್ಲವೆ, ಯಾವುದಾದರೊಂದು ವಿಷಯದಲ್ಲಿ ಅವಳಿಗೆ ಮಾರ್ಗದರ್ಶನದ ಅಗತ್ಯವುಂಟಾದರೆ ಅವನು ತಾನಾಗಿಯೇ ಅವಳೆದುರು ಕಾಣಿಸಿಕೊಂಡು, 'ಹಾಗೆ ಮಾಡಬೇಡ', 'ಹೀಗೆ ಮಾಡು' ಎಂದು ಮಾತಿನಿಂದಲೋ ಸಂಜ್ಞೆಯಿಂದಲೋ ಅಥವಾ ಅದನ್ನು ತಾನೇ ಮಾಡಿಯೋ ತೋರಿಸಿಕೊಡುತ್ತಿದ್ದ. ಶ್ರೀರಾಮಕೃಷ್ಣರ ಶರೀರವನ್ನು ಮತ್ತೆಮತ್ತೆ ಪ್ರವೇಶಿಸಿ ಹೊರಬರುತ್ತ ತಾನೂ ಅವರೂ ಬೇರೆಯಲ್ಲ ಎಂಬುದನ್ನು ಮನದಟ್ಟು ಮಾಡಿಸಿದ. ತಾನು ಊಟ ಮಾಡುವಾಗ ಮತ್ತು ಮಲಗುವಾಗ ತನಗೇನು ಬೇಕೋ ಅದನ್ನು ಕೇಳಿ ತೆಗೆದುಕೊಳ್ಳುತ್ತ, ತನ್ನ ಸೇವೆಯನ್ನು ಹೇಗೆ ಮಾಡಬೇಕು ಎಂಬುದನ್ನು ಆ ದಿವ್ಯ ಬಾಲಕ ತೋರಿಸಿಕೊಟ್ಟ. ಅಷ್ಟೇ ಅಲ್ಲ, ಶ್ರೀರಾಮಕೃಷ್ಣರ ಪ್ರಮುಖ ಭಕ್ತರೊಂದಿಗೆ ನಿಕಟವಾಗಿ ಬೆರೆಯುತ್ತ, ಮತ್ತು ಇನ್ನೂ ಅನೇಕ ವಿಧವಾಗಿ, ಆ ಭಕ್ತರೂ ಶ್ರೀರಾಮಕೃಷ್ಣರೂ ಒಂದೇ ಎಂದೂ, ಭಕ್ತರೂ ಭಗವಂತನೂ ಒಂದೇ ಎಂದೂ ಅವಳಿಗೆ ತಿಳಿಯಪಡಿಸಿದ.

ಶ್ರೀರಾಮಕೃಷ್ಣರೇ ತನ್ನ ಇಷ್ಟದೇವತೆ ಎಂಬ ನಂಬಿಕೆ ದೃಢವಾದ ಮೇಲೆ, ಗೋಪಾಲೇರ್ ಮಾಗೆ ಅಷ್ಟಾಗಿ ಗೋಪಾಲನ ದರ್ಶನವಾಗುತ್ತಿರಲಿಲ್ಲ. ಬದಲಾಗಿ ಆಕೆ ಆಗಾಗ ಶ್ರೀರಾಮಕೃಷ್ಣರನ್ನೇ ಕಾಣತೊಡಗಿದಳು. ಮತ್ತು ಅವರ ಮುಖಾಂತರವೇ ಬಾಲಗೋಪಾಲರೂಪಿಯಾದ ಭಗವಂತನಿಂದ ಅವಳಿಗೆ ಬೇಕಾದ ಮಾರ್ಗದರ್ಶನ ದೊರೆಯುತ್ತಿತ್ತು. ಆದರೆ ತನಗೆ ಗೋಪಾಲನ ದರ್ಶನಲಾಭ ತೀರಾ ವಿರಳವಾದಾಗ ಗೋಪಾಲೇರ್ ಮಾ ಕಂಗೆಟ್ಟಳು; ಸಂಕಟಪಟ್ಟು ಗೋಳಾಡಿದಳು. ಶ್ರೀರಾಮಕೃಷ್ಣರ

ಬಳಿಗೋಡಿ, "ಗೋಪಾಲಾ ! ಯಾಕೆ ಹೀಗೆ ಮಾಡಿಬಿಟ್ಟೆ ? ನಾನು ಮಾಡಿದ ಅಪರಾಧ ವೇನು ? ನಾನು ನಿನ್ನನ್ನು ಹಿಂದಿನಂತೆ ಗೋಪಾಲರೂಪದಲ್ಲಿ ಕಾಣಲು ಸಾಧ್ಯವಾಗು ತ್ತಿಲ್ಲವಲ್ಲ ಯಾಕೆ ?" ಎಂದು ಅಳುತ್ತ ಮೊರೆಯಿಟ್ಟಳು. ಆಗ ಅವರು, "ನೋಡು, ನಿನ್ನ ಅವಸ್ಥೆ ಮಿತಿಮೀರಿಹೋಗಿತ್ತು. ಹಾಗೆ ಎಡೆಬಿಡದೆ ನಿತ್ಯವೂ ದರ್ಶನಗಳಾದರೆ ಕಲಿಯುಗದಲ್ಲಿ ಶರೀರ ಉಳಿಯುವುದಿಲ್ಲ. ಇಪ್ಪತ್ತೊಂದು ದಿನಗಳವರೆಗೆ ಮಾತ್ರ ಬದುಕಿದ್ದು, ಅನಂತರ ಅದು ತರಗೆಲೆಯ ಹಾಗೆ ಬಿದ್ದುಹೋಗುತ್ತದೆ. ಆದ್ದರಿಂದಲೇ ನಿನಗೆ ಹಾಗೆ ದರ್ಶನಗಳಾಗುವುದು ನಿಂತುಹೋದದ್ದು. ಅದು ನಿನ್ನ ಒಳಿತಿಗಾಗಿಯೇ" ಎಂದು ಹೇಳಿ ಸಮಾಧಾನಪಡಿಸಿದರು. ಆಗ ಗೋಪಾಲೇರ್ ಮಾಗೆ ಗೊತ್ತಾಯಿತು, ಅಷ್ಟೊಂದು ದೀರ್ಘಕಾಲ ತನಗೆ ಆ ಆನಂದಾನುಭವ ದೊರೆತದ್ದೂ ತನ್ನ ಶರೀರ ಉಳಿದುಕೊಂಡದ್ದೂ ಶ್ರೀರಾಮಕೃಷ್ಣರ ಕೃಪಾವಿಶೇಷದಿಂದಲೇ ಮತ್ತು ಅವರ ಇಚ್ಛಾನು ಸಾರವೇ ಎಂದು.

ನಿಜಕ್ಕೂ ಆ ಎರಡು ತಿಂಗಳ ಕಾಲ ಅವಳು ಹೇಗೆ ಭಾವಲೋಕದಲ್ಲಿ ಕರಗಿಯೇ ಹೋಗಿದ್ದಳೆಂದರೆ, ಈ ಐಹಿಕ ಪ್ರಪಂಚದ ಮಟ್ಟಿಗೆ ಅವಳು ಜೀವಿಸಿಯೇ ಇರಲಿಲ್ಲ ಎನ್ನಬಹುದು. ಶ್ರೀರಾಮಕೃಷ್ಣರ ಸಾಧನಾಕಾಲವನ್ನು ನೆನಪಿಸಿಕೊಡುವಷ್ಟು ಉತ್ಕಟ ವಾದ ಭಾವ ಅದು. ದೈನಂದಿನದ ಅಡಿಗೆ ಕೆಲಸ, ನೈವೇದ್ಯ, ಜಪಧ್ಯಾನ, ಸ್ನಾನ-ಊಟ ಮಾಡುವುದು ಇಂತಹ ಕೆಲಸಗಳನ್ನೆಲ್ಲ ಅವಳ ಶರೀರವೇ ತನ್ನಷ್ಟಕ್ಕೆ ಅಭ್ಯಾಸಬಲದಿಂದ ಹೇಗೋ ಮಾಡಿ ಮುಗಿಸುತ್ತಿತ್ತು ಅಷ್ಟೆ ! ಇಂಥ ಸ್ಥಿತಿಯಲ್ಲಿ ಅದು ಅಷ್ಟೊಂದು ದಿನ ಉಳಿದುಕೊಂಡದ್ದೇ ಆಶ್ಚರ್ಯ. ಎರಡು ತಿಂಗಳಾದ ಮೇಲೆ ಅವಳ ಭಾವಾವೇಶ ವೇನೋ ಇಳಿಯಿತು. ಆದರೆ ಮೊದಲಿನಂತೆ ಗೋಪಾಲನ ದರ್ಶನವಾಗದಿದ್ದಾಗ ಮತ್ತೊಮ್ಮೆ ಅವಳೊಳಗೆ ಅತಿಶಯವಾದ ವ್ಯಾಕುಲತೆ ಉದಿಸಿತು. ಅವಳ ಶರೀರಪ್ರಕೃತಿ ವಾಯುಪ್ರಧಾನವಾದದ್ದು. ಇದರ ಪರಿಣಾಮವಾಗಿ ಎಷ್ಟೋ ವರ್ಷಗಳಿಂದಲೂ ಅವ ಳಿಗೆ ಎದೆ ಜೋರಾಗಿ ಬಡಿದುಕೊಳ್ಳುವುದು, ಏನೋ ಒಂದು ಬಗೆಯ ಚಿತ್ತಕ್ಷೋಭೆ, ಮುಂತಾದ ತೊಂದರೆಗಳಿದ್ದುವು. ಈಗ ಉದಿಸಿದ ತೀವ್ರ ವ್ಯಾಕುಲತೆಯ ದೆಸೆಯಿಂದ ವಾಯುಪ್ರಕೋಪ ಮತ್ತೂ ಹೆಚ್ಚಿ ಎದೆಯಲ್ಲಿ ಅಸಹನೀಯ ವೇದನೆಯಾಗತೊಡ ಗಿತು. ಅವಳು ಶ್ರೀರಾಮಕೃಷ್ಣರ ಬಳಿಗೆ ಬಂದು, "ವಾಯು ವೃದ್ಧಿಯಾಗಿ ನನ್ನೆದೆಯನ್ನು ಗರಗಸದಿಂದ ಸೀಳಿದಂತಾಗುತ್ತದೆ" ಎಂದು ತನ್ನ ಕಷ್ಟವನ್ನು ತೋಡಿಕೊಂಡಳು. ಆಗ ಅವರು, "ಅದು ನಿನ್ನ ಅತಿಶಯ ಹರಿಪ್ರೇಮದಿಂದಾಗಿ ಹುಟ್ಟಿದ ವಾಯು. ಅದಿಲ್ಲ ದಿದ್ದರೆ ನಿನ್ನ ಜೀವಕ್ಕೆ ಆಧಾರವೇನಿದೆ ? ಅದು ಇರುವುದೇ ಒಳ್ಳೆಯದು. ತುಂಬ ಕಷ್ಟ ವಾದಾಗ ಏನನ್ನಾದರೂ ಸ್ವಲ್ಪ ಹೊಟ್ಟೆಗೆ ಹಾಕಿಕೊ, ನೋವು ಉಪಶಮನವಾಗುತ್ತದೆ" ಎಂದು ಅವಳನ್ನು ಸಾಂತ್ವನಗೊಳಿಸಿದರು.

ಹಿಂದೆ ನಿರಂತರ ನಿರ್ವಿಕಲ್ಪ ನಿಮಗ್ನರಾಗಿದ್ದ ಶ್ರೀರಾಮಕೃಷ್ಣರ ಮನಸ್ಸನ್ನು ಬಾಹ್ಯಜಗತ್ತಿಗೆ ಎಳೆದು ತರಲು ಹೇಗೆ ಆಮಶಂಕೆಯಿಂದ ಉಂಟಾದ ಹೊಟ್ಟೆನೋವು ಸಹಾಯಕವಾಯಿತೋ ಹಾಗೆಯೇ ಬ್ರಾಹ್ಮಣಿಯ ಮನಸ್ಸು ಇಂದ್ರಿಯ ಪ್ರಪಂಚಕ್ಕೆ ಇಳಿದು ಬರಲು ಅವಳ ಈ ಎದೆನೋವು ನೆರವಾಯಿತು.

ಶ್ರೀರಾಮಕೃಷ್ಣರ ಸಂಪರ್ಕಕ್ಕೆ ಬಂದ ಈ ಕೆಲವು ತಿಂಗಳ ಅವಧಿಯಲ್ಲಿ ಗೋಪಾ ಲೇರ್ ಮಾಳ ವ್ಯಕ್ತಿತ್ವ-ಮನಸ್ಥಿತಿಗಳಲ್ಲಿ ದೊಡ್ಡ ಪರಿವರ್ತನೆಯುಂಟಾಗಿಬಿಟ್ಟಿತ್ತು.

ಅವಳು ಆಧ್ಯಾತ್ಮಿಕವಾಗಿ ಉನ್ನತಿಗೇರಿದಂತೆಲ್ಲ, ಲೌಕಿಕ ವಿಷಯಗಳ–ವ್ಯಕ್ತಿಗಳ ಕುರಿತಂತೆ ಅವಳ ದೃಷ್ಟಿಕೋನ ಬಹಳಷ್ಟು ಬದಲಾಯಿತು; ಹೆಚ್ಚು ಉದಾರವಾಯಿತು. ಆಹಾರಾದಿಗಳ ವಿಷಯದಲ್ಲಿ ಅವಳು ಇಟ್ಟುಕೊಂಡಿದ್ದ ಕಟ್ಟುಪಾಡುಗಳೆಲ್ಲ ಸಡಿಲಗೊಂಡು ಕಳಚಿಯೇ ಹೋದುವು; ಅವಳಲ್ಲುಂಟಾದ ಪರಿವರ್ತನೆ ಎಷ್ಟು ಪರಿಪೂರ್ಣ ಎಂಬುದಕ್ಕೆ ಕೆಲವು ದೃಷ್ಟಾಂತಗಳನ್ನು ನೋಡಬೇಕು.

ಉಚ್ಚಜಾತಿಯ ಜನರಲ್ಲಿ ಮಡಿವಂತಿಕೆ ವಿಪರೀತವಾಗಿದ್ದ ಕಾಲ ಅದು. ಅದರಲ್ಲೂ ಬಾಲವಿಧವೆಯರಾದವರ ಬಗ್ಗೆ ಬಂಗಾಳಿಯಲ್ಲಿ ಒಂದು ನಾಣ್ಣುಡಿಯೇ ಇತ್ತು—'ಉಪ್ಪನ್ನು ಕೂಡ ತೊಳೆದು ತಿನ್ನುವವರು ಅವರು' ಎಂದು. ಅಘೋರಮಣಿಯೂ ಇದಕ್ಕೆ ಹೊರತಾಗಿರಲಿಲ್ಲ. ಅವಳು ದಕ್ಷಿಣೇಶ್ವರಕ್ಕೆ ಬರಲಾರಂಭಿಸಿದಾಗಲೂ ಅದೇ ಬಗೆಯ ಮಡಿವಂತಿಕೆಯನ್ನಿಟ್ಟುಕೊಂಡಿದ್ದಳು. ಮೊದಲಿನಿಂದಲೂ ಅವಳೊಂದಿಗೆ ಶ್ರೀರಾಮಕೃಷ್ಣರೇನೋ ಅವಳ ಸ್ವಂತ ಮಗುವಿನಂತೆ ನಿಸ್ಸಂಕೋಚದಿಂದ ವರ್ತಿಸುತ್ತಿದ್ದರು. ಆದರೆ ಅವಳು ಅದಕ್ಕೆ ತಕ್ಕಂತೆ ಪ್ರತಿಸ್ಪಂದಿಸಿದುದು ಸ್ವಲ್ಪ ತಡವಾಗಿಯೇ.

ತಮಗಾಗಿ ಏನಾದರೊಂದು ವ್ಯಂಜನವನ್ನು ತಯಾರಿಸಿ ಬಡಿಸುವಂತೆ ಶ್ರೀರಾಮಕೃಷ್ಣರು ಕೇಳಿಕೊಂಡಾಗ ಗೋಪಾಲೇರ್ ಮಾ ನಹಬತ್ ಖಾನೆಗೆ ಹೋಗಿ, ಅದರ ತಯಾರಿಕೆಯಲ್ಲಿ ತೊಡಗುತ್ತಿದ್ದಳು. ಆದರೆ ಅವಳು ಪಾತ್ರೆಯನ್ನು ಒಲೆಯ ಮೇಲಿಡುವುದಕ್ಕೆ ಮುನ್ನ ಶಾರದಾದೇವಿಯವರು ಆ ಒಲೆಯನ್ನು ಸೆಗಣಿ-ಗಂಗಾಜಲಗಳಿಂದ ಮೂರುಸಲ ತೊಳೆದುಕೊಡಬೇಕಾಗಿತ್ತು! ಒಂದು ದಿನ ಅವಳು ಶ್ರೀರಾಮಕೃಷ್ಣರಿಗೆ ಅನ್ನ ಬಡಿಸುತ್ತಿದ್ದಾಗ ಆಕಸ್ಮಾತ್ತಾಗಿ ಸೌಟಿಗೆ ಅವರ ಕೈ ತಗಲಿಬಿಟ್ಟಿತು. ಸರಿ, ಗೋಪಾಲೇರ್ ಮಾ ಉಳಿದ ಅನ್ನವನ್ನು ತಾನು ತಿನ್ನಲಿಲ್ಲ, ಮಾತ್ರವಲ್ಲ, ಆ ಸೌಟನ್ನು ಗಂಗಾನದಿಗೆ ಎಸೆದುಬಿಟ್ಟಳು!

ಆದರೆ ಶ್ರೀರಾಮಕೃಷ್ಣರಲ್ಲಿ ತನ್ನ ಬಾಲಗೋಪಾಲನನ್ನು ಕಂಡಂದಿನಿಂದ ಅವಳು ಹಳೆಯ ಅಘೋರಮಣಿಯಾಗಿ ಉಳಿಯಲಿಲ್ಲ—ಅಥವಾ ಉಳಿಯಲು ಸಾಧ್ಯವಾಗಲಿಲ್ಲ. ಗೋಪಾಲನೇ ಮನುಷ್ಯರೂಪದಲ್ಲಿ ಶ್ರೀರಾಮಕೃಷ್ಣನಾಗಿ ಲೀಲೆಯಾಡುತ್ತಿದ್ದಾನೆ ಎಂಬ ತಿಳಿವಳಿಕೆಯುಂಟಾದಮೇಲೆ, ಅವರಿಗೆ ಅಡಿಗೆ ಮಾಡಿ ತಾನೇ ತಿನ್ನಿಸುವುದಕ್ಕಾಗಲಿ, ಅವರ ಪ್ರಸಾದವನ್ನು ತಾನು ತೆಗೆದುಕೊಳ್ಳುವುದಕ್ಕಾಗಲಿ ಅವಳಿಗೆ ಸಂಕೋಚವಾಗಲಿಲ್ಲ. ಅಷ್ಟೇ ಅಲ್ಲ, ಸಕಲ ನರನಾರಿಯರಲ್ಲೂ ನೆಲಸಿರುವುದು ತನ್ನ ಪ್ರಾಣಪ್ರಿಯನಾದ ಗೋಪಾಲನೇ ಎಂಬ ನಂಬಿಕೆ ಅವಳಲ್ಲಿ ದೃಢವಾಗುತ್ತ ಬಂತು. ಮುಂದೊಮ್ಮೆ ಒಂದು ಅದ್ಭುತ ದರ್ಶನದ ಮೂಲಕ ಆ ಪರಮ ಸತ್ಯದ ನೇರ ಸಾಕ್ಷಾತ್ಕಾರ ಅವಳಿಗಾಯಿತು.*

---

*ಶ್ರೀರಾಮಕೃಷ್ಣರ ನಿರ್ಯಾಣಾನಂತರ ಅವಳೊಮ್ಮೆ ಜಗನ್ನಾಥನ ರಥೋತ್ಸವವನ್ನು ನೋಡಲು ಮಾಹೇಶ ಎಂಬಲ್ಲಿಗೆ ಹೋಗಿದ್ದಳು. ಆಗ ಅವಳಿಗೆ ಇದ್ದಕ್ಕಿದ್ದಂತೆ, ಸಕಲ ಜೀವಿಗಳಲ್ಲೂ ತನ್ನ ಗೋಪಾಲನೇ ಇರುವಂತೆ ಕಾಣತೊಡಗಿತು! ರಥದಲ್ಲಿ ಕುಳಿತ ಶ್ರೀಜಗನ್ನಾಥ, ಅಲ್ಲಿ ನೆರೆದ ಅಸಂಖ್ಯಾತ ಸ್ತ್ರೀಪುರುಷರುಎಲ್ಲರೂ ಗೋಪಾಲಮಯವಾಗಿ ತೋರಿದರು. ಅವನೇ ಈ ಎಲ್ಲ ರೂಪಗಳನ್ನೂ ಧರಿಸಿರುವವನು ಎನ್ನುವುದು ಆಗ ಸ್ಪಷ್ಟಗೋಚರವಾಯಿತು. ಹೀಗೆ ಭಗವಂತನ ವಿಶ್ವರೂಪದರ್ಶನವನ್ನು ಪಡೆದ ಬ್ರಾಹ್ಮಣಿ ಆನಂದಾತಿಶಯದಿಂದ ಉನ್ಮತ್ತಳಾದಳು. ನಕ್ಕು ಕುಣಿದಾಡುತ್ತ ಅಲ್ಲೊಂದು ದೊಡ್ಡ ಕೋಲಾಹಲವನ್ನೇ ಎಬ್ಬಿಸಿಬಿಟ್ಟಳು!

ಜಾತಿಮತ ಭೇದವಿಲ್ಲದೆ ಸಮಸ್ತ ಮಾನವರನ್ನೂ ತನ್ನ ಸ್ವಂತ ಮಕ್ಕಳೆಂಬಂತೆ ಕಾಣುವ ಪ್ರೇಮಮಯಿ ಮಾತೆಯಾದಳು ಗೋಪಾಲೇರ್ ಮಾ. ಕಾಲಾಂತರದಲ್ಲಿ ಸ್ವಾಮಿ ವಿವೇಕಾನಂದರ ಪಾಶ್ಚಾತ್ಯ ಶಿಷ್ಯೆಯರು ಅವಳ ದರ್ಶನಕ್ಕಾಗಿ ಬರುತ್ತಾರೆ. ಆ ದಿನಗಳಲ್ಲಿ ಸಾಮಾನ್ಯ ಹಿಂದೂ ಮಹಿಳೆಯೊಬ್ಬಳು—ಇನ್ನು ಬ್ರಾಹ್ಮಣ ವಿಧವೆಯ ವಿಷಯವನ್ನಂತೂ ಹೇಳಬೇಕಾಗಿಯೇ ಇಲ್ಲ—ಆ 'ಮ್ಲೇಚ್ಛ'ರನ್ನು ತನ್ನ ಮನೆಗೆ ಸೇರಿಸುವುದಿರಲಿ, ಅವರ ಜೊತೆಯಲ್ಲಿ ಮಾತನಾಡುವುದೂ ಅಸಂಭವನೀಯ ವಾಗಿತ್ತು. ಅಂತಹದರಲ್ಲಿ, ವೃದ್ಧೆ ಗೋಪಾಲೇರ್ ಮಾ ಅವರನ್ನೆಲ್ಲ ಪರಮ ವಾತ್ಸಲ್ಯ ದಿಂದ ಬರಮಾಡಿಕೊಂಡು ತಿನಿಸುಗಳನ್ನಿತ್ತು ಉಪಚರಿಸುತ್ತಾಳೆ; ಅವರ ಪ್ರೀತಿವಿಶ್ವಾಸ ಗಳಿಗೆ ಮಾರುಹೋಗಿ ಅವರನ್ನು ಗಲ್ಲಹಿಡಿದು ಮುತ್ತಿಕ್ಕುತ್ತಾಳೆ! ಅಷ್ಟೇ ಅಲ್ಲ, ತನ್ನ ಕೊನೆಗಾಲದಲ್ಲಿ ಅವಳು ವಿವೇಕಾನಂದರ ಪ್ರಮುಖ ಶಿಷ್ಯೆಯಾದ ಸೋದರಿ ನಿವೇದಿತೆಯ (ಮಾರ್ಗರೆಟ್ ನೋಬೆಲ್) ಜೊತೆಯಲ್ಲಿ ಒಂದೇ ಮನೆಯಲ್ಲಿ ವಾಸಿ ಸುತ್ತ, ಅವಳಿಗೆ ತನ್ನ ಸೇವಾವಕಾಶ ಕೊಡುತ್ತಾಳೆ!

ಈ ಔದಾರ್ಯ, ಹೃದಯವೈಶಾಲ್ಯಗಳೇ ಅವಳಿಗಾದ ದರ್ಶನ-ಸಾಕ್ಷಾತ್ಕಾರಗಳ ಸತ್ಯತೆಗೆ ನಿಚ್ಚಳ ಪುರಾವೆ.

ಶ್ರೀರಾಮಕೃಷ್ಣರನ್ನು ಗೋಪಾಲನೊಂದಿಗೆ ಅವಿನಾಭಾವದಿಂದ ಕಾಣಲು ಸಮರ್ಥಳಾದ ಮೇಲೆ ಗೋಪಾಲೇರ್ ಮಾ ಮತ್ತೆಮತ್ತೆ ಆಗಾಗ ದಕ್ಷಿಣೇಶ್ವರಕ್ಕೆ ಬರಲಾರಂಭಿಸಿದಳು. ಶ್ರೀರಾಮಕೃಷ್ಣರ ಭಕ್ತವೃಂದದಲ್ಲಿ ಅವಳಿಗೆ ಅತಿ ವಿಶಿಷ್ಟ ಸ್ಥಾನ. ಅವರಿಬ್ಬರದು ತಾಯಿಮಕ್ಕಳ ಸಂಬಂಧ; ಅದಕ್ಕನುಗುಣವಾದ ಸಹಜ ವರ್ತನೆ. ಇತರರು ಎದುರಿಗಿದ್ದಾಗಲೂ ಅವರ ಪರಸ್ಪರ ವ್ಯವಹಾರದಲ್ಲಿ ಯಾವ ವ್ಯತ್ಯಾಸವೂ ಇರುತ್ತಿರಲಿಲ್ಲ. ಆದರೆ ನೋಡುಗರಿಗೆ ಮಾತ್ರ ಅವರ ನಡವಳಿಕೆಯೆಂದೂ ವಿಪರೀತ ವಾಗಿ ತೋರುತ್ತಿರಲಿಲ್ಲ. ಅಲ್ಲದೆ ಶ್ರೀರಾಮಕೃಷ್ಣರೊಂದಿಗೆ ಆ ಬಗೆಯ ಸಲಿಗೆಯಿಂದಿದ್ದರೂ, ಗೋಪಾಲೇರ್ ಮಾ ಅವರನ್ನು ಗುರುಸ್ಥಾನದಲ್ಲಿರಿಸಿ ಪೂಜ್ಯದೃಷ್ಟಿಯಿಂದ ನೋಡುತ್ತಿದ್ದಳು. ಶ್ರೀರಾಮಕೃಷ್ಣರೂ ಕೂಡ ಅಗತ್ಯ ಬಿದ್ದಾಗ ತಕ್ಕ ಸಲಹೆ ಕೊಟ್ಟು ಅವಳನ್ನು ತಿದ್ದಲು ಹಿಂಜರಿಯುತ್ತಿರಲಿಲ್ಲ.

ಶ್ರೀರಾಮಕೃಷ್ಣರ ಬಳಿಗೆ ಬರುತ್ತಿದ್ದ ಶ್ರೀಮಂತ ಭಕ್ತರನೇಕರು ಅವರಿಗೆ ಬಾದಾಮಿ, ಒಣದ್ರಾಕ್ಷಿ, ಗೋಡಂಬಿ ಮೊದಲಾದ ಶ್ರೀಮಂತಕಾಣಿಕೆಗಳನ್ನು ಅರ್ಪಿಸುತ್ತಿದ್ದರು ಎಂಬುದನ್ನು ನಾವು ಓದಿ ಬಲ್ಲೆವು. ಆ ಕಾಣಿಕೆಗಳು ಸ್ವಾರ್ಥಪ್ರೇರಿತವಾಗಿದ್ದು ಅವುಗಳನ್ನು ಜೀರ್ಣಿಸಿಕೊಳ್ಳಬಲ್ಲ ಶಕ್ತಿಯಿರುವುದು ನರೇಂದ್ರನೊಬ್ಬನಿಗೇ ಎನ್ನುವುದು ಶ್ರೀರಾಮಕೃಷ್ಣರ ಅಭಿಮತ. ಅವರ ಪರಿಗಣನೆಯಲ್ಲಿ ಇಂಥದೇ ಸಾಮರ್ಥ್ಯವುಳ್ಳ ಮತ್ತೊಬ್ಬ ವ್ಯಕ್ತಿಯೆಂದರೆ ಗೋಪಾಲೇರ್ ಮಾ.

ಅವಳು ದಕ್ಷಿಣೇಶ್ವರಕ್ಕೆ ಬಂದಾಗಲೆಲ್ಲ ಶ್ರೀರಾಮಕೃಷ್ಣರು ಅವಳಿಗೆ ತಮ್ಮ ಕೈಯಾರೆ ಏನಾದರೂ ತಿಂಡಿತಿನಿಸುಗಳನ್ನು ತಿನ್ನಿಸುತ್ತಿದ್ದರು. ಅವರ ಆ ನಡವಳಿಕೆ ಅವಳಿಗೂ ಸ್ವಲ್ಪ ಆಶ್ಚರ್ಯಕರವಾಗಿ ತೋರಿರಬೇಕು. ಒಂದು ದಿನ ಅವಳು ಕೇಳಿದಳು: "ಗೋಪಾಲಾ, ನನಗೆ ತಿನ್ನಿಸುವುದರಲ್ಲಿ ನಿನಗೇಕೆ ಅಷ್ಟೊಂದು ಪ್ರೀತಿ ?"

ಶ್ರೀರಾಮಕೃಷ್ಣರು: "ಹಿಂದೆ ನೀನು ನನಗೆಷ್ಟೋ ತಿನ್ನಿಸಿದ್ದೀಯೆ."

ಗೋಪಾಲೇರ್ ಮಾ: "ಹಿಂದೆ ? ಯಾವಾಗ ?"

ಶ್ರೀರಾಮಕೃಷ್ಣರು: "ಜನ್ಮಾಂತರದಲ್ಲಿ."

ಏನಾಶ್ಚರ್ಯ ! ಗೋಪಾಲೇರ್ ಮಾಳ ಭಕ್ತಿಸಾಧನೆ ಕೇವಲ ಈ ಜನ್ಮದಲ್ಲಿ ನಡೆದದ್ದಲ್ಲ ಹಾಗಾದರೆ ? ಅದು ಹಲವು ಜನ್ಮಗಳಿಂದ ಹರಿದು ಬಂದದ್ದು ? ಜನ್ಮಾಂತರಗಳಿಂದಲೂ ಅವಳು ನೀಡಿದ್ದ ನೈವೇದ್ಯವನ್ನು ನೆನಪಿಟ್ಟುಕೊಂಡ ಭಗವಂತ ಇಂದು ಈ ಜನ್ಮದಲ್ಲಿ ಅದರ ಫಲವನ್ನು ತನ್ನ ಅಮೃತಹಸ್ತದಿಂದಲೇ ತಿನ್ನಿಸುತ್ತಿದ್ದಾನೆ ! ಆಹಾ, ಹಾಗಾದರೆ ಈ ಪೂಜೆ ಅಲಂಕಾರ ನೈವೇದ್ಯಾದಿಗಳೆಲ್ಲ ಕೇವಲ ಭಾವನಾತ್ಮಕವಲ್ಲವೆಂದಾಯಿತು ! ಅವುಗಳನ್ನು ಭಗವಂತ ಸ್ವೀಕರಿಸುವುದು ಸತ್ಯವೆಂದಾಯಿತು !...

ಆ ದಿನವಿಡೀ ದಕ್ಷಿಣೇಶ್ವರದಲ್ಲೇ ಇದ್ದ ಗೋಪಾಲೇರ್ ಮಾ ಸಾಯಂಕಾಲ ಕಾಮಾರಹಾಟಿಗೆ ಹಿಂದಿರುಗಲು ಅನುವಾದಳು. ಆಗ ಶ್ರೀರಾಮಕೃಷ್ಣರು, ಮಾರ್ವಾಡಿ ಭಕ್ತರು ಕೊಟ್ಟಿದ್ದ ಕಲ್ಲುಸಕ್ಕರೆಯನ್ನೆಲ್ಲ ಅವಳಿಗೆ ಕೊಟ್ಟು, ತೆಗೆದುಕೊಂಡುಹೋಗಲು

ಹೇಳಿದರು.

ಗೋಪಾಲೇರ್ ಮಾ: "ಇಷ್ಟೊಂದು ಕಲ್ಲುಸಕ್ಕರೆ ನನಗೇಕೆ ಕೊಡುತ್ತಿ?"

ಶ್ರೀರಾಮಕೃಷ್ಣರು (ಪ್ರೀತಿಯಿಂದ ಆಕೆಯ ಗಲ್ಲ ಹಿಡಿದು): "ಹಿಂದೆ ನೀನು ಬೆಲ್ಲವಾಗಿದ್ದೆ, ಆಮೇಲೆ ಸಕ್ಕರೆಯಾದೆ, ಈಗ ಕಲ್ಲುಸಕ್ಕರೆಯಾಗಿದ್ದೀಯೆ! ನೀನೀಗ ಕಲ್ಲುಸಕ್ಕರೆಯೇ ಆಗಿರುವುದರಿಂದ, ಅದನ್ನೇ ತಿನ್ನುತ್ತ ಸಂತೋಷ ಪಡು."

ಬೇರೇನೂ ಉಪಾಯಗಾಣದೆ ಮುದುಕಿ ಅದನ್ನು ತೆಗೆದುಕೊಂಡಳು. ಇಲ್ಲದಿದ್ದರೆ 'ಗೋಪಾಲ' ಬಿಡಬೇಕಲ್ಲ!

ಪುರೀಕ್ಷೇತ್ರದಲ್ಲಿ ರಥೋತ್ಸವ ನಡೆಯುವ ಸಮಯದಲ್ಲೇ ಇತ್ತ ಕಲ್ಕತ್ತದಲ್ಲಿ ಬಲರಾಮ ಬೋಸನ ಮನೆಯಲ್ಲೂ ವರ್ಷೇವರ್ಷೇ ಸಣ್ಣ ಪ್ರಮಾಣದಲ್ಲಿ ಜಗನ್ನಾಥನ ರಥಯಾತ್ರೆಯೊಂದನ್ನು ಆಚರಿಸಲಾಗುತ್ತಿತ್ತು ಎಂಬ ವಿಷಯವನ್ನು ಹಿಂದೆ ನೋಡಿದ್ದೇವಷ್ಟೆ. ೧೮೮೫ನೇ ವರ್ಷದ ಆ ಸಂದರ್ಭದಲ್ಲಿ ಶ್ರೀರಾಮಕೃಷ್ಣರು ತಮ್ಮ ಸಾನ್ನಿಧ್ಯದಿಂದ ಭಕ್ತರನ್ನೆಲ್ಲ ಹರ್ಷಗೊಳಿಸಿದ ಸನ್ನಿವೇಶವನ್ನು 'ಶ್ರೀರಾಮಕೃಷ್ಣ ಲೀಲಾಪ್ರಸಂಗ'ದಲ್ಲಿ ಸ್ವಾಮಿ ಶಾರದಾನಂದರು ಬಣ್ಣಿಸಿದ್ದಾರೆ.

ಆ ದಿನ ಶ್ರೀರಾಮಕೃಷ್ಣರು ಬೆಳಗ್ಗೆ ಮುಂಚಿತವಾಗಿಯೇ ಬಲರಾಮನ ಮನೆಗೆ ಆಗಮಿಸಿದ್ದಾರೆ. ಸ್ತ್ರೀ-ಪುರುಷ ಭಕ್ತಸಮೂಹ ಮನೆಯ ಒಳಹೊರಗೆಲ್ಲ ನೆರೆದುಬಿಟ್ಟಿದೆ. ಉಪಾಹಾರಕ್ಕೆ ಏರ್ಪಾಡಾಯಿತು. ಶ್ರೀರಾಮಕೃಷ್ಣರು ಉಪಾಹಾರ ಸ್ವೀಕರಿಸುತ್ತ ಮನೆಮಂದಿಯೊಡನೆ ಸರಸಸಂಭಾಷಣೆಯಲ್ಲಿ ತೊಡಗಿದ್ದಾರೆ. ಎಲ್ಲರೂ ಅಂದು ನಡೆಯಲಿರುವ ಆನಂದೋತ್ಸವದ ನಿರೀಕ್ಷೆಯಲ್ಲಿ ಉಲ್ಲಸಿತರಾಗಿದ್ದಾರೆ.

ಗೋಪಾಲೇರ್ ಮಾಗೆ ಗೋಪಾಲರೂಪೀ ಭಗವಂತನ ಸಾಕ್ಷಾತ್ಕಾರವಾಗಿ ಕೆಲ ತಿಂಗಳು ಕಳೆದಿವೆಯಷ್ಟೆ. ಭಕ್ತವರ್ಗಕ್ಕೆ ಅವಳ ಪರಿಚಯವಿನ್ನೂ ಅಷ್ಟಾಗಿ ಆಗಿಲ್ಲ; ಆದ್ದರಿಂದ ಅವಳು ಆ ಉತ್ಸವಕ್ಕೆ ಬಂದಿಲ್ಲ. ಅದನ್ನು ಮನಗಂಡ ಶ್ರೀರಾಮಕೃಷ್ಣರು, ಅವಳ ವಿಷಯವನ್ನು ಬಣ್ಣಿಸುತ್ತ ನುಡಿದರು:

"ಕಾಮಾರಹಾಟಿಯಿಂದ ಬರುತ್ತಾಳಲ್ಲ ಬ್ರಾಹ್ಮಣಿ, ಅವಳಿಗೆ ಗೋಪಾಲಭಾವಾವೇಶದಿಂದ ಎಷ್ಟೋ ದರ್ಶನಗಳಾಗಿವೆ. ಬಾಲಗೋಪಾಲ ಅವಳ ಸನಿಹಕ್ಕೇ ಬಂದು ಕೈಚಾಚಿ, 'ತಿಂಡಿ ಕೊಡು' ಅಂತ ಕಾಡುತ್ತಾನಂತೆ! ಆ ದಿನ ಹಾಗೇ ಎಷ್ಟೋ ದರ್ಶನಗಳನ್ನು ಕಂಡು, ಭಾವ-ಪ್ರೇಮಗಳಿಂದ ಉನ್ಮತ್ತಳಾಗಿ ದಕ್ಷಿಣೇಶ್ವರಕ್ಕೆ ಬಂದಳು. ಸ್ವಲ್ಪ ತಿಂಡಿ ತಿನ್ನಿಸಿ ಉಪಚರಿಸಿದ ಮೇಲೆ ಮೆಲ್ಲನೆ ಶಾಂತಳಾದಳು. ಆ ರಾತ್ರಿ ಅಲ್ಲೇ ಇರುವುದಕ್ಕೆ ಹೇಳಿದೆ. ಆದರೆ ಆಕೆ ನಿಲ್ಲಲಿಲ್ಲ. ಹೋಗುವಾಗಲೂ ಅದೇ ಉನ್ಮತ್ತಾವಸ್ಥೆ! ಅವಳ ಮೈಮೇಲಿನ ಬಟ್ಟೆ ಸಡಿಲಗೊಂಡು ನೆಲದಮೇಲೆ ಎಳೆದಾಡುತ್ತಿದ್ದರೂ ಅವಳಿಗೆ ಮಾತ್ರ ಅದರ ಪ್ರಜ್ಞೆಯೇ ಇರಲಿಲ್ಲ. ನಾನು ಬಟ್ಟೆಯನ್ನು ಸರಿಪಡಿಸಿ ಅವಳ ಎದೆಯನ್ನೂ ತಲೆಯನ್ನೂ ನೇವರಿಸಿದೆ!.. ನಿಜಕ್ಕೂ ಅವಳ ಭಕ್ತಿ-ಶ್ರದ್ಧೆ ಅನುಪಮವಾದದ್ದು. ಒಳ್ಳೇ ಲಕ್ಷಣವಂತಳು. ಅವಳಿಗೂ ಇವತ್ತು ಇಲ್ಲಿಗೆ ಬರುವಂತೆ ಹೇಳಿಕಳಿಸಿ."

ಅವರು ಹಾಗೆಂದೊಡನೆಯೇ ಬಲರಾಮ ಅವಳನ್ನು ಕರೆತರಲು ಯಾರನ್ನೋ ಕಳಿಸಿದ. ಹೇಗಿದ್ದರೂ ಇನ್ನೂ ಬೇಕಾದಷ್ಟು ಸಮಯವಿತ್ತು. ಅಂದೂ ಅದರ ಮಾರುದಿನವೂ ಶ್ರೀರಾಮಕೃಷ್ಣರು ಅಲ್ಲೇ ಉಳಿದುಕೊಳ್ಳಲಿದ್ದರು.

ಎಲ್ಲರಿಗೂ ಮಧ್ಯಾಹ್ನದ ಭೋಜನವಾಯಿತು. ಸ್ವಲ್ಪ ವಿಶ್ರಮಿಸಿಕೊಂಡ ಬಳಿಕ ಶ್ರೀರಾಮಕೃಷ್ಣರು ಈಗ ಭಕ್ತರೊಡನೆ ಭಗವತ್ಸಲ್ಲಾಪ ನಡೆಸುತ್ತ ಕುಳಿತಿದ್ದಾರೆ; ಸಂಜೆಯಾಗುತ್ತ ಬಂದಿದೆ. ಇದ್ದಕ್ಕಿದ್ದಂತೆ ಶ್ರೀರಾಮಕೃಷ್ಣರಿಗೆ ಭಾವಾವೇಶವುಂಟಾಯಿತು; ತದ್ವತ್ ಬಾಲಗೋಪಾಲನಂತಾಗಿಬಿಟ್ಟರು! ವಿಗ್ರಹಗಳಲ್ಲಿ ರೂಪಿಸಿರುವಂತೆ, ತಮ್ಮೆರಡು ಮೊಣಕಾಲುಗಳನ್ನೂ ಒಂದು ಕೈಯನ್ನೂ ನೆಲಕ್ಕೂರಿ, ಮತ್ತೊಂದು ಕೈಯನ್ನು ಮೇಲಕ್ಕೆತ್ತಿದ್ದಾರೆ; ಮುಖದಲ್ಲಿ ಮುಗ್ಧಶಿಶುವಿನ ಮೋಹಕ ಮುಗುಳ್ನಗು. ಯಾರನ್ನೋ ನೆಟ್ಟ ದೃಷ್ಟಿಯಿಂದ ನೋಡುತ್ತ, ಏನನ್ನೋ ಕೇಳುತ್ತಿರುವಂತಿದೆ. ಆದರೆ ಕಣ್ಣುಗಳು ಮಾತ್ರ ಯಾವ ವಸ್ತುವಿನೆಡೆಗೂ ಗಮನವಿಲ್ಲದಂತೆ ಅರ್ಧನಿಮೀಲಿತವಾಗಿವೆ. ಅವರ ಈ ವಿಚಿತ್ರ ಭಾವವನ್ನು ಕಂಡು ಎಲ್ಲರೂ ಆಶ್ಚರ್ಯಚಕಿತರಾಗಿದ್ದಾರೆ. ಹೀಗೆ ಹಠಾತ್ತಾಗಿ ಅವರಲ್ಲಿ ಆ ಭಾವದ ಸ್ಫುರಣೆಯುಂಟಾದದ್ದು ಹೇಗೆ? ಯಾರ ಊಹೆಗೂ ನಿಲುಕದಾಗಿದೆ!

ಆದರೆ ಕೆಲನಿಮಿಷಗಳಲ್ಲೇ ಅದಕ್ಕೆ ಉತ್ತರ ಸಿಕ್ಕಿಬಿಟ್ಟಿತು—ಗೋಪಾಲೇರ್ ಮಾಳನ್ನು ಹೊತ್ತ ಗಾಡಿ ಬಂದು ಮನೆಬಾಗಿಲಲ್ಲಿ ನಿಂತಿತು; ಮೆಟ್ಟಿಲು ಹತ್ತಿ ಬಂದ ಅವಳು ಶ್ರೀರಾಮಕೃಷ್ಣರನ್ನು ತನ್ನ ಇಷ್ಟದೇವತೆಯ ರೂಪದಲ್ಲಿ ಕಂಡಳು!

ಎಂದರೆ, ಗೋಪಾಲೇರ್ ಮಾಳ ಭಕ್ತಿಯ ಪ್ರಭಾವದಿಂದಲೇ ಶ್ರೀರಾಮಕೃಷ್ಣರಲ್ಲಿ ಹೀಗೆ ಇದ್ದಕ್ಕಿದ್ದಂತೆ ಗೋಪಾಲಭಾವದ ಸ್ಫುರಣೆಯಾಗಿದೆ! ಇದನ್ನರಿತ ಭಕ್ತರ ಆನಂದಾಶ್ಚರ್ಯಗಳಿಗೆ ಪಾರವೇ ಇಲ್ಲ. ಅವರೆಲ್ಲ 'ಆಹಾ! ಎಂಥ ಭಕ್ತಿ' ಎಂದು ಬ್ರಾಹ್ಮಣಿಯ ಭಾಗ್ಯವನ್ನು ಕೊಂಡಾಡುತ್ತ ಆಕೆಗೆ ನಮಸ್ಕರಿಸಿದರು.

ಆದರೆ ಅವಳಿಗೆ ಮಾತ್ರ ಶ್ರೀರಾಮಕೃಷ್ಣರ ಭಾವ ಹಿಡಿಸಲಿಲ್ಲ. "ಗೋಪಾಲ! ನೀನೀ ರೀತಿ ಮರವಡಿಸಿ ಕುಳಿತಿರುವುದು ನನಗೆ ಇಷ್ಟವಾಗುವುದಿಲ್ಲ. ನನ್ನ ಗೋಪಾಲ ನಗಬೇಕು, ಆಟವಾಡಬೇಕು. ಇದೇನು, ಶುದ್ಧ ಕಟ್ಟಿಗೆಯಂತಾಗಿದ್ದಾನೆ! ಇಂತಹ ಗೋಪಾಲ ನನಗೆ ಬೇಕಾಗಿಲ್ಲ" ಎಂದು ಆಕ್ಷೇಪಿಸಿದಳು.

ಕ್ರಮೇಣ ಶ್ರೀರಾಮಕೃಷ್ಣರು ಸಹಜಸ್ಥಿತಿಗೆ ಮರಳಿ, ಹಿಂದಿನಂತೆ ಎಲ್ಲರೊಡನೆ ಆಧ್ಯಾತ್ಮಿಕ ಸಂಭಾಷಣೆಗಳಲ್ಲಿ ತೊಡಗಿದರು.

ರಥೋತ್ಸವದ ಈ ಸಂದರ್ಭದಲ್ಲಿ ಶ್ರೀರಾಮಕೃಷ್ಣರು ಪೂರ್ತಿ ಎರಡು ದಿನ ಬಲರಾಮನ ಮನೆಯಲ್ಲೇ ಉಳಿದುಕೊಂಡು, ಭಕ್ತರನ್ನೆಲ್ಲ ಆನಂದದ ಕಡಲಲ್ಲಿ ಮುಳುಗಿಸಿದರು. ಗೋಪಾಲೇರ್ ಮಾ ಕೂಡ ಆ ಎರಡು ದಿನ ಅಲ್ಲೇ ಇದ್ದಳು. ಮೂರನೆಯ ದಿನ ಶ್ರೀರಾಮಕೃಷ್ಣರು ದಕ್ಷಿಣೇಶ್ವರಕ್ಕೆ ಹೊರಡಲನುವಾದರು. ಗೋಪಾಲೇರ್ ಮಾ, ಗೊಲಾಪ್ ಮಾ ಮತ್ತು ಶ್ರೀರಾಮಕೃಷ್ಣರ ಸೇವೆಗಾಗಿ ಅವರೊಂದಿಗೆ ಬಂದಿದ್ದ ಒಂದಿಬ್ಬರು ತರುಣಶಿಷ್ಯರೂ ಜೊತೆಗೆ ಹೊರಟರು. ಆಗ ನಡೆದ ಒಂದು ಘಟನೆ ಗೋಪಾಲೇರ್ ಮಾ ಹಾಗೂ ಶ್ರೀರಾಮಕೃಷ್ಣರ ನಡುವಣ ಸಂಬಂಧದ ಮತ್ತೊಂದು ಮುಖವನ್ನು ತೋರಿಸುವಂತಿದೆ.

ಶ್ರೀರಾಮಕೃಷ್ಣರು ದೋಣಿ ಹತ್ತಿದರು. ಅವರನ್ನು ಹಿಂಬಾಲಿಸಿ ಇತರರೂ ಹತ್ತಿದರು. ಬಲರಾಮನ ಕುಟುಂಬವರ್ಗದ ಕೆಲವರು ಬ್ರಾಹ್ಮಣಿಯ ಮೇಲಿನ ಭಕ್ತಿಯಿಂದ ಸೀರೆ-ಬಟ್ಟೆಗಳು, ಸೌಟು ಚಿಮ್ಮಟ ಮುಂತಾದ ಅಡಿಗೆ ಪರಿಕರಗಳು—ಇವುಗಳನ್ನೆಲ್ಲ ಅವಳಿಗೆ ಉಡುಗೊರೆಯಾಗಿ ಕೊಟ್ಟು, ಅವುಗಳನ್ನು ಒಂದು ಚೀಲದಲ್ಲಿ ತುಂಬಿ

ದೋಣಿಯಲ್ಲಿ ತಂದಿಟ್ಟರು. ದೋಣಿ ಹೊರಟಿತು.

ತುಸು ಹೊತ್ತಿನ ಮೇಲೆ, ಆ ಮೂಟೆ ಶ್ರೀರಾಮಕೃಷ್ಣರ ಕಣ್ಣಿಗೆ ಬಿತ್ತು. "ಏನದು ?" ಎಂದು ವಿಚಾರಿಸಿದರು. ಅದು ಗೋಪಾಲೇರ್ ಮಾಗೆ ಭಕ್ತರು ಉಡುಗೊರೆಯಾಗಿ ಕೊಟ್ಟ ಪದಾರ್ಥಗಳ ಮೂಟೆ ಎಂದು ತಿಳಿದೊಡನೆ ಅವರ ಮುಖಭಾವ ಗಂಭೀರವಾಯಿತು. ಅವರು ಅವಳಿಗೇನೂ ಹೇಳಲಿಲ್ಲ; ಬದಲಾಗಿ ಅಲ್ಲೇ ಇದ್ದ ಗೊಲಾಪ್ ಮಾಳನ್ನುದ್ದೇಶಿಸಿ ತ್ಯಾಗದ ಮಹಿಮೆಯನ್ನು ಬಣ್ಣಿಸತೊಡಗಿದರು— "ತ್ಯಾಗಿಯಾದವನು ಮಾತ್ರವೇ ಭಗವಂತನನ್ನು ಸಾಕ್ಷಾತ್ಕರಿಸಿಕೊಳ್ಳಬಲ್ಲ. ಇತರರಲ್ಲಿಗೆ ಹೋದಾಗ ಅವರ ಆತಿಥ್ಯವನ್ನು ಸ್ವೀಕರಿಸಿದರೂ ಅವರಿಂದ ಯಾವ ದಾನದಕ್ಷಿಣೆಗಳನ್ನೂ ಪಡೆಯದೆ ಬರುವುದೇ ಯುಕ್ತವಾದದ್ದು. ಭಗವಂತ ಮೆಚ್ಚುವುದು, ಒಲಿಯುವುದು ಅಂಥವನನ್ನು ಮಾತ್ರ" ಎಂಬಿತ್ಯಾದಿಯಾಗಿ ಹೇಳಿದರು. ಗೋಪಾಲೇರ್ ಮಾಳೊಂದಿಗೆ ಒಂದು ಮಾತನ್ನೂ ಆಡಲಿಲ್ಲ. ಮತ್ತೆಮತ್ತೆ ಆ ಮೂಟೆಯನ್ನೇ ದುರುಗುಟ್ಟಿ ನೋಡಿದರು.

ಅಷ್ಟೇ ಸಾಕಾಯಿತು ಅವಳಿಗೆ. ಪಶ್ಚಾತ್ತಾಪದ ದುಃಖ ಒತ್ತರಿಸಿ ಬಂತು. ಆ ಮೂಟೆಯನ್ನೆತ್ತಿ ಗಂಗೆಯಲ್ಲಿ ಬಿಸುಟುಬಿಡಲೇ ಎಂಬಷ್ಟು ಜುಗುಪ್ಸೆ ಮೂಡಿತು. ಹೇಗೋ ಮಾಡಿ ತನ್ನನ್ನು ತಾನು ತಡೆದುಕೊಂಡಳು. ದೋಣಿ ದಕ್ಷಿಣೇಶ್ವರವನ್ನು ತಲುಪುತ್ತಲೇ ಓಡಿದಳು—ನೇರವಾಗಿ ಶಾರದಾದೇವಿಯವರ ಬಳಿಗೆ. ಆರ್ತಳಾಗಿ ಮೊರೆಯಿಟ್ಟಳು, "ಸೊಸೆಯಮ್ಮಾ, ಈ ಸಾಮಾನುಗಳ ಮೂಟೆಯನ್ನು ಕಂಡು ಗೋಪಾಲ ಮುನಿಸಿಕೊಂಡಿದ್ದಾನೆ. ಈಗೇನು ಮಾಡಲಿ ನಾನು ? ಇವನ್ನೆಲ್ಲ ಇಲ್ಲೇ ಯಾರಿಗಾದರೂ ಹಂಚಿಬಿಡುತ್ತೇನೆ, ಏನೆನ್ನುವೆ ?"

ಶಾರದಾದೇವಿಯವರು ನಿಮಿಷಾರ್ಧದಲ್ಲಿ ಪರಿಸ್ಥಿತಿಯನ್ನರಿತರು. ದುಃಖಿತಳಾದ ಮುದುಕಿಯನ್ನು ಕಂಡು ಅವರೆದೆ ಮರುಗಿತು. ಕರುಣೆದುಂಬಿದ ದನಿಯಲ್ಲಿ ಸಾಂತ್ವನ ಮಾಡಿದರು: "ಅವರು ಏನೇ ಹೇಳಲಿ, ನಿಮಗೆ ಕೊಡುವವರು ಬೇರೆ ಯಾರಿದ್ದಾರೆ ? ನಿಮಗೆ ಅಗತ್ಯವಿರುವುದರಿಂದ ತಾನೆ ನೀವು ಅವನ್ನು ಸ್ವೀಕರಿಸಿದ್ದು ? ನೀವು ಅವನ್ನು ಯಾರಿಗೂ ಕೊಡಬೇಕಾದ್ದಿಲ್ಲ."

ಗೋಪಾಲೇರ್ ಮಾ ಸ್ವಲ್ಪ ಶಾಂತಳಾದಳು. ಆದರೂ ತಾನು ಮಾಡಿದ್ದು ತಪ್ಪು ಎಂದು ಗೊತ್ತಾಗಿತ್ತು. ಆದ್ದರಿಂದ ಆ ಮೂಟೆಯಿಂದ ಒಂದು ಸೀರೆಯನ್ನೂ ಕೆಲವು ಸಾಮಾನುಗಳನ್ನೂ ತೆಗೆದು ಕೆಲವರಿಗೆ ಹಂಚಿಬಿಟ್ಟಳು. ಬಳಿಕ ಎಂದಿನಂತೆ ಶ್ರೀರಾಮಕೃಷ್ಣರಿಗಾಗಿ ಒಂದೆರಡು ಪಲ್ಯಗಳನ್ನು ತಯಾರಿಸಿದಳು. ಶ್ರೀರಾಮಕೃಷ್ಣರು ಊಟಕ್ಕೆ ಕುಳಿತರು; ಬ್ರಾಹ್ಮಣಿ ಭಯ ಪಡುತ್ತಪಡುತ್ತಲೇ ಊಟ ಬಡಿಸಿದಳು. ಅವಳು ಪಶ್ಚಾತ್ತಾಪದಿಂದ ಬೆಂದದ್ದನ್ನು ಕಂಡ ಶ್ರೀರಾಮಕೃಷ್ಣರು ಮತ್ತೆ ಆ ವಿಷಯವೆತ್ತದೆ, ಎಂದಿನಂತೆ ನಗುನಗುತ್ತ ಮಾತನಾಡಿಸಿದರು. ಹಗುರ ಹೃದಯದಿಂದ ಬ್ರಾಹ್ಮಣಿ ಆ ಸಂಜೆ ಕಾಮಾರಹಾಟಿಗೆ ಹಿಂದಿರುಗಿದಳು.

ಬಹುದಿನಗಳಿಂದಲೂ ಆಕೆಯ ಮನಸ್ಸಿನಲ್ಲಿ ಒಂದು ಹಂಬಲವಿತ್ತು—ಒಮ್ಮೆ ಶ್ರೀರಾಮಕೃಷ್ಣರನ್ನು ತನ್ನ ಮನೆಗೆ ಆಹ್ವಾನಿಸಿ ರುಚಿಕಟ್ಟಾದ ಅಡಿಗೆ ಮಾಡಿ, ಅವರಿಗೆ ತನ್ನ ಮನಸ್ತೃಪ್ತಿಯಾಗುವಂತೆ ಉಣಬಡಿಸಬೇಕು ಎಂದು. ಅವಳ ಆಮಂತ್ರಣಕ್ಕೊಪ್ಪಿ ಒಂದು ದಿನ ಶ್ರೀರಾಮಕೃಷ್ಣರು ರಾಖಾಲನನ್ನು ಕರೆದುಕೊಂಡು ಕಾಮಾರಹಾಟಿಗೆ

ಹೋದರು. ಸಮಯ ಬೆಳಗ್ಗೆ ಹತ್ತು ಗಂಟೆ. ಶ್ರೀರಾಮಕೃಷ್ಣರನ್ನು ಕಂಡೊಡನೆ ಗೋಪಾಲೇರ್ ಮಾ ಸಂತಸದಿಂದ ಹಿಗ್ಗಿಹೋದಳು. ಅವರನ್ನು ಅತ್ಯಾದರದಿಂದ ಸ್ವಾಗತಿಸಿ ಬೇಗಬೇಗನೆ ಬಿಸಿಬಿಸಿಯಾಗಿ ಸ್ವಲ್ಪ ತಿಂಡಿ ಮಾಡಿಕೊಟ್ಟು ಉಪಚರಿಸಿದಳು. ಬಳಿಕ ಅವರನ್ನು ದೇವಾಲಯದ ಮೊಖ್ತೇಸರರ ದಿವಾನಖಾನೆಯಲ್ಲಿ ಕುಳ್ಳಿರಿಸಿ, ತಾನು ಇತ್ತ ಬಂದು ಅಡಿಗೆ ಕೆಲಸಕ್ಕೆ ಟೊಂಕ ಕಟ್ಟಿ ನಿಂತಳು. ಅವತ್ತಿಗೋಸ್ಕರ ಅವಳು ಉತ್ತಮವಾದ ಪದಾರ್ಥಗಳನ್ನೆಲ್ಲ ಭಿಕ್ಷೆ ಬೇಡಿ ಸಂಗ್ರಹಿಸಿಟ್ಟಿದ್ದಳು. ಅಡಿಗೆ ತಯಾರಾಯಿತು. ಗೋಪಾಲೇರ್ ಮಾ ತನ್ನ ಪ್ರೀತಿಯ 'ಗೋಪಾಲ'ನಿಗೆ ವೈವಿಧ್ಯಮಯ ವ್ಯಂಜನಗಳಿಂದ ಕೂಡಿದ ಊಟ ಬಡಿಸಿ ಅವನನ್ನು ಸಂತುಷ್ಟಿಗೊಳಿಸಿದಳು, ತಾನೂ ಸಂತೃಪ್ತಳಾದಳು. ಅಲ್ಲದೆ, ಜೊತೆಗೆ ಬಂದಿದ್ದ ರಾಖಾಲ ತನ್ನ ಪ್ರಿಯ 'ಗೋಪಾಲ'ನ ಮಾನಸಪುತ್ರನಲ್ಲವೆ ! ಅವನಿಗೂ ಅತ್ಯಂತ ವಾತ್ಸಲ್ಯದಿಂದ ಬಡಿಸಿ ಆನಂದಿಸಿದಳು.

ಅನಂತರ, ಮೊಖ್ತೇಸರರಿಗೆ ಸೇರಿದ ಮಹಡಿಯ ಮೇಲಿನ ಒಂದು ಕೋಣೆಯಲ್ಲಿ ಅವರ ವಿಶ್ರಾಂತಿಗೆ ಏರ್ಪಾಡು ಮಾಡಿದಳು. ಹಾಸಿಗೆ ಹಾಸಿ ಅದರ ಮೇಲೆ ಶುಭ್ರವಾದ ಬಟ್ಟೆ ಹಾಸಿದಳು. ಶ್ರೀರಾಮಕೃಷ್ಣರು ಮಲಗಿದರು; ರಾಖಾಲನೂ ಅವರ ಬದಿಯಲ್ಲೇ ಮಲಗಿ ನಿದ್ರಿಸಿದ. ಶ್ರೀರಾಮಕೃಷ್ಣರ ನಿದ್ರೆ ಯಾವಾಗಲೂ ಬಹಳ ಕಡಿಮೆ. ಆದ್ದರಿಂದ ಅವರು ಸುಮ್ಮನೆ ಒರಗಿಕೊಂಡಿದ್ದರು. ಆಗ ಅಲ್ಲೊಂದು ಬೀಭತ್ಸವಾದ ಘಟನೆ ನಡೆಯಿತು. ಅದನ್ನು ಶ್ರೀರಾಮಕೃಷ್ಣರೇ ಹೀಗೆ ತಿಳಿಸುತ್ತಾರೆ:

"ಮಲಗಿದ ಸ್ವಲ್ಪ ಹೊತ್ತಿಗೆಲ್ಲ ಏನೋ ಒಂದು ದುರ್ಗಂಧ ಬಂದು ಬಡಿಯಿತು. ನೋಡುತ್ತೇನೆ—ಕೋಣೆಯ ಮೂಲೆಯಲ್ಲಿ ಎರಡು ಆಕೃತಿಗಳು ನಿಂತಿವೆ ! ಕಾಮುಕರ ಮುಖಾಕೃತಿ; ಕರುಳು ಹೊಟ್ಟೆಯಿಂದ ಹೊರಬಿದ್ದು ಜೋಲಾಡುತ್ತಿದೆ; ಅವುಗಳ ಮುಖ, ಕೈಕಾಲು ಇವೆಲ್ಲ ಮೆಡಿಕಲ್ ಕಾಲೇಜಿನಲ್ಲಿ ಜೋಡಿಸಿಟ್ಟಿರುವ ಮನುಷ್ಯನ ಮೂಳೆಗಳಂತೆಯೇ ಇವೆ ! ಅವು ದೈನ್ಯದಿಂದ ನನ್ನನ್ನು, 'ನೀವೇಕೆ ಇಲ್ಲಿಗೆ ಬಂದಿದ್ದೀರಿ ? ದಯವಿಟ್ಟು ಇಲ್ಲಿಂದ ಹೊರಟುಹೋಗಿ. ನಿಮ್ಮ ದರ್ಶನದಿಂದ ನಮಗೆ ಬಹಳ ಕಷ್ಟವಾಗುತ್ತಿದೆ. ಬೇಗ ಹೊರಟು ಹೋಗಿ' ಎಂದು ಬೇಡಿಕೊಂಡುವು. ಅವಕ್ಕೆ ಕಷ್ಟವಾಗುವುದನ್ನು ಕಂಡು ನಾನು ಎಲಡಿಕೆಚೀಲವನ್ನೂ ಚೌಕವನ್ನೂ ಹಿಡಿದುಕೊಂಡು ಹೊರಡಲು ಎದ್ದೆ. ಆಗ ರಾಖಾಲನೂ ಎಚ್ಚರಗೊಂಡು, 'ಎಲ್ಲಿಗೆ ಹೊರಟಿರಿ ?' ಎಂದ. ನಾನವನಿಗೆ, 'ಆಮೇಲೆ ಹೇಳುತ್ತೇನೆ, ಬಾ' ಎಂದಷ್ಟೇ ಹೇಳಿ ಹೊರಟು ದೋಣಿ ಹತ್ತಿ ಕುಳಿತೆ. ಆಮೇಲೆ ಅವನಿಗೆ ಆ ವಿಷಯವನ್ನು ತಿಳಿಸಿದೆ. ದೇವಸ್ಥಾನದ ತೋಟದ ಪಕ್ಕದಲ್ಲೇ ಬಟ್ಟೆ ಗಿರಣಿಯಿದೆ. ಆ ಗಿರಣಿಯ ಸಾಹೇಬರು ಉಂಡು ಬಿಸಾಡಿದ ಮೂಳೆಗಳನ್ನು ಮೂಸುತ್ತ (ಹಾಗೆ ಮೂಸುವುದೇ ಅವುಗಳ ಊಟ) ಆ ಪ್ರೇತಗಳು ಆ ಕೋಣೆಯಲ್ಲೇ ವಾಸವಾಗಿದ್ದುವು. ಆದರೆ ಮುದುಕಿ ಆ ಮನೆಯಲ್ಲಿ ಒಬ್ಬಳೇ ವಾಸಿಸುತ್ತಾಳೆ. ಈ ವಿಷಯ ಗೊತ್ತಾದರೆ ದಿಗಿಲು ಬೀಳುತ್ತಾಳೆ ಅಂತ ನಾನಿದನ್ನು ಅವಳಿಗೆ ಹೇಳಲೇ ಇಲ್ಲ."

ತನಗೆ ಗೋಪಾಲನ ದರ್ಶನವಾಗತೊಡಗಿದ ಮೇಲೆ, ಸರಳಹೃದಯದ ಗೋಪಾಲೇರ್ ಮಾ ಆ ವಿವರಗಳನ್ನೆಲ್ಲ ಆಗಾಗ ಶ್ರೀರಾಮಕೃಷ್ಣರ ಮುಂದೆ ಹೇಳುತ್ತಿದ್ದಳು. ಹೀಗೇ ಬಹಳ ದಿನ ನಡೆಯಿತು. ಆದರೆ ಒಂದು ದಿನ ಶ್ರೀರಾಮಕೃಷ್ಣರು ಅವಳಿಗೆ, "ದರ್ಶನಗಳ ವಿಷಯವನ್ನು ಯಾರಿಗೂ ಹೇಳಕೂಡದು. ಹೇಳಿದರೆ ಇನ್ನು

ಅಂಥ ಅನುಭವವಾಗಲಾರದು" ಎಂದು ತಿಳಿಸಿದರು. ಅವಳಿಗೆ ಆಶ್ಚರ್ಯವಾಯಿತು. "ಅದೇಕೆ? ಅವೆಲ್ಲ ನಿನ್ನದೇ ದರ್ಶನಗಳಲ್ಲವೆ? ನಿನಗೂ ಹೇಳಬಾರದೆ?" ಎಂದಳು. "ಇಲ್ಲಿಯ ದರ್ಶನಗಳೇ ಆದರೂ ನನಗೂ ಹೇಳಬಾರದು" ಎಂದರು ಶ್ರೀರಾಮ ಕೃಷ್ಣರು. "ಹಾಗೋ, ಸರಿ" ಎನ್ನುತ್ತ ಆಕೆ ಅಷ್ಟಕ್ಕೆ ಸುಮ್ಮನಾದಳು. ಆಕೆಗೆ ಅವರ ಮಾತಿನಲ್ಲಿ ಅಂಥಾ ವಿಶ್ವಾಸ.

ಒಂದು ದಿನ ಗೋಪಾಲೇರ್ ಮಾ ದಕ್ಷಿಣೇಶ್ವರಕ್ಕೆ ಬಂದಿದ್ದಾಗಲೇ ತರುಣ ನರೇಂದ್ರನಾಥನೂ ಬಂದಿದ್ದ. ಅವನಿಗೆ ಆಗಿನ್ನೂ ಬ್ರಾಹ್ಮಸಮಾಜದ ನಿರಾಕಾರ ವಾದ ದಲ್ಲಿ ಹೆಚ್ಚು ಒಲವು. ಮೂರ್ತಿಪೂಜೆಯೆಂದರೆ ತಿರಸ್ಕಾರ. ಆದರೆ, ಮೂರ್ತಿ ಪೂಜೆ ಯಿಂದ ಪ್ರಾರಂಭಿಸುವವರೂ ಕೂಡ ಕ್ರಮೇಣ ಮುಂದುವರಿದು, ಕಾಲಾಂತರದಲ್ಲಿ ನಿರಾಕಾರನಾದ ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಳ್ಳಬಹುದು ಎಂಬುದರಲ್ಲಿ ಅವನಿಗೆ ನಂಬಿಕೆ ಹುಟ್ಟಿತ್ತು—ಶ್ರೀರಾಮಕೃಷ್ಣರ ಬೋಧನೆಯ ಪ್ರಭಾವ! ಶ್ರೀರಾಮಕೃಷ್ಣರು ನೋಡಿದರು—ಒಂದೆಡೆ, ಸಕಲಸದ್ಗುಣಸಂಪನ್ನನಾದ, ಮೇಧಾವಿಯಾದ, ವಿಚಾರ ವಾದಿಯಾದ, ಅದ್ವೈತಪ್ರಿಯನಾದ ಸಿಡಿಲ ಕಿಡಿ ನರೇಂದ್ರ; ಇನ್ನೊಂದೆಡೆ, ದೀನಳೂ, ಅವಿದ್ಯಾವಂತಳೂ, ಮುಗ್ಧ ಸರಳ ಭಕ್ತಿವಂತಳೂ ಆದ ಮುದುಕಿ ಗೋಪಾಲೇರ್ ಮಾ. ಈಗ ಇವರಿಬ್ಬರ ನಡುವೆ ಮಾತುಕತೆ ನಡೆದರೆ ಎಷ್ಟು ಸೊಗಸು! ಶ್ರೀರಾಮ ಕೃಷ್ಣರು ರಸಾಸ್ವಾದಕರು. ಅವರು ಗೋಪಾಲೇರ್ ಮಾಗೆ, "ಎಲ್ಲಿ, ನಿನಗಾದ ದರ್ಶನ ಗಳು, ಗೋಪಾಲ ನಿನ್ನೊಡನೆ ನಡೆಸುವ ಲೀಲಾವಿಲಾಸ ಈ ವಿಷಯಗಳನ್ನೆಲ್ಲ ನರೇಂದ್ರ ನಿಗೆ ವಿವರಿಸು" ಎಂದರು. ಬ್ರಾಹ್ಮಣಿ ಗಲಿಬಿಲಿಗೀಡಾದಳು. "ಗೋಪಾಲ, ಹೇಳಿದರೆ ದೋಷವಿಲ್ಲವೆ?" ಎಂದು ಆತಂಕಪಟ್ಟು ಕೇಳಿದಳು. "ಏನೂ ದೋಷವಿಲ್ಲ, ನಿಶ್ಶಂಕೆ ಯಿಂದ ಹೇಳು." "ನಿಜ್ಜೆ" ಎಂದ ಆಕೆ ತನ್ನ ಹೃದಯನಾಥನ ವಿಷಯವಾಗಿ ಹೇಳಲು ಬಾಯ್ದೆರೆದಳು. ಒಡನೆಯೇ ಭಾವವುಕ್ಕಿತು; ಗಂಟಲು ಬಿಗಿದು ಬಂತು; ಕಪೋಲದ ಮೇಲೆ ಕಣ್ಣೀರಿನ ಮಣಿಗಳು ಉದುರಿದುವು! ಬಲವಂತದಿಂದ ತನ್ನನ್ನು ನಿಯಂತ್ರಿಸಿಕೊಳ್ಳುತ್ತ ಮುದುಕಿ, ಗೋಪಾಲ ತನ್ನೆದೆಯ ಮೇಲೆ ಹತ್ತಿ ಹೆಗಲ ಮೇಲೆ ತಲೆಯಿಟ್ಟು ಕಾಮಾರಹಾಟಿಯಿಂದ ದಕ್ಷಿಣೇಶ್ವರದವರೆಗೂ ಬಂದದ್ದು, ಆತನ ಸ್ವಚ್ಛ ವಾದ ಕೆಂಪು ಪಾದಗಳು ತನ್ನೆದೆಯ ಮೇಲೆ ಜೋಲಾಡುತ್ತಿದ್ದುದು, ತಾನು ಅವನ್ನು ಸ್ಪಷ್ಟವಾಗಿ ಕಂಡುದು, ಅವನು ಮತ್ತೆಮತ್ತೆ ಶ್ರೀರಾಮಕೃಷ್ಣರ ಶರೀರವನ್ನು ಪ್ರವೇಶಿ ಸುತ್ತ ಪುನಃ ಹೊರಗೆ ಬರುತ್ತ ತನ್ನ ಮಡಿಲೇರಿದ್ದು, ಮಲಗುವಾಗ ತಲೆಗೆ ದಿಂಬಿಲ್ಲದ್ದಕ್ಕೆ ತಕರಾರು ಮಾಡಿದ್ದು, ಅಡಿಗೆಗಾಗಿ ಸೌದೆ ಕೂಡಿಸಿದ್ದು, ತಿಂಡಿ ಬೇಕೆಂದು ತಂಟೆ ಹೂಡಿದ್ದು—ಇವೆಲ್ಲವನ್ನೂ ವಿಸ್ತಾರವಾಗಿ ಹೇಳಿದಳು. ಹೇಳುತ್ತ ಹೇಳುತ್ತ ಭಾವಪರ ವಶಳಾಗಿ ಗೋಪಾಲರೂಪೀ ಪರಮಾತ್ಮನನ್ನು ಪುನಃ ದರ್ಶನ ಮಾಡಿದಳು!

ಅವಳ ಮಾತುಗಳನ್ನಾಲಿಸುತ್ತ, ಅವಳ ದಿವ್ಯಭಾವಾವಸ್ಥೆಯನ್ನು ಕಾಣುತ್ತ ತರುಣ ನರೇಂದ್ರ ಸಂಪೂರ್ಣ ಕರಗಿಹೋದ. ಆಕೆಯ ಅನುಭವಗಳ ಸತ್ಯತೆ ಅವನಿಗೆ ಸೂರ್ಯಸ್ಪಷ್ಟವಾಗಿ ಗೋಚರಿಸಿತು. ಅದು ಅವನೊಳಗಿನ ಪ್ರೇಮಭಕ್ತಿಗಳ ಗುಪ್ತ ಚಿಲುಮೆಯನ್ನು ಚಿಮ್ಮಿಸಿತು. ಕಂಗಳಿಂದ ಅಪ್ರಯತ್ನವಾಗಿ ಕಂಬನಿ ಹರಿಯಿತು. ಬಾಹ್ಯ ನೋಟಕ್ಕೆ ನರೇಂದ್ರ ಕಠೋರ ವಿಚಾರವಾದಿ, ಜ್ಞಾನಮಾರ್ಗಾವಲಂಬಿ. ಆದರೆ ಆತನ ಅಂತರ್ಯದಲ್ಲಿ ತುಂಬಿದ ಮೃದುಮಧುರ ಭಕ್ತಿನವನೀತಕ್ಕೆ ಅದೊಂದು ಹೊರಕವಚ

ವಷ್ಟೆ! ಮುದುಕಿ ತನ್ನ ಅನುಭವಗಳನ್ನು ಬಣ್ಣಿಸುತ್ತ ಮತ್ತೆಮತ್ತೆ ದೈನ್ಯದಿಂದ ಕೇಳಿದಳು:

"ಅಪ್ಪಾ, ನೀನು ಪಂಡಿತ, ಬುದ್ಧಿವಂತ. ನಾನಾದರೋ ಗೊಡ್ಡು ಮುದುಕಿ, ಒಂದೂ ತಿಳಿಯದವಳು. ನನಗೇನೋ ಇಂಥ ಅನುಭವಗಳೆಲ್ಲ ಆದುವು. ಮಗೂ, ಅವೆಲ್ಲ ಸತ್ಯವೋ ಅಥವಾ ಕೇವಲ ಭ್ರಾಂತಿಯೋ ಅಂತ ನೀನೇ ಹೇಳಪ್ಪ."

ಅವಳ ಮಾತಿಗೆ ನರೇಂದ್ರ ನಿಶ್ಶಂಕೆಯಿಂದ ದೃಢಸ್ವರದಲ್ಲಿ ಉತ್ತರಿಸಿದ:

"ತಾಯಿ! ನೀವು ಕಂಡದ್ದೆಲ್ಲವೂ ಸತ್ಯ, ಸಂಶಯವೇ ಇಲ್ಲ!"

# ಉಲ್ಲಾಸಮಯ ಉತ್ಸವ 

೧೮೮೫ನೇ ಶಕವರ್ಷದ ಆಗಮನವಾಗಿದೆ. ಫೆಬ್ರವರಿ ೨೨ರಂದು ಶ್ರೀರಾಮಕೃಷ್ಣರ ಜನ್ಮದಿನೋತ್ಸವವನ್ನು ಭಕ್ತರು ಸಂಭ್ರಮದಿಂದ ಆಚರಿಸಿದರು. ಈಗ ಅವರ ಐಹಿಕ ಜೀವನದ ಐವತ್ತನೇ ಸಂವತ್ಸರದ ಆರಂಭ.

ಆ ವರ್ಷದ ಬೇಸಿಗೆಯಲ್ಲಿ ಬಿಸಿಲಿನ ತಾಪದಿಂದ ಶ್ರೀರಾಮಕೃಷ್ಣರು ಬಹಳ ಕಷ್ಟಪಟ್ಟರು. ಅದನ್ನು ಕಂಡ ಭಕ್ತರು ನೀರಿಗೆ ಅಥವಾ ಇತರ ಪಾನೀಯಗಳಿಗೆ ಮಂಜುಗಡ್ಡೆ ಸೇರಿಸಿ ಕುಡಿಯುವುದರಿಂದ ಸ್ವಲ್ಪ ಪರಿಹಾರ ಸಿಕ್ಕೀತೆಂದು ಸಲಹೆ ಮಾಡಿದರು. ಮತ್ತು ಕಲ್ಕತ್ತದಿಂದ ಬರುವಾಗಲೆಲ್ಲ ಬರ್ಫವನ್ನು ತರಲಾರಂಭಿಸಿದರು. ಶ್ರೀರಾಮಕೃಷ್ಣರು ಅದನ್ನು ಪಾನಕದೊಂದಿಗೆ ಕುಡಿಯುತ್ತ ಬಾಲಕನಂತೆ ಮುಗ್ಧ ಸಂತಸವನ್ನನುಭವಿಸಿದರು. ಹೀಗೆ ತಾಪವೇನೋ ಸ್ವಲ್ಪ ಪರಿಹಾರವಾಯಿತು. ಆದರೆ ಒಂದೆರಡು ತಿಂಗಳು ಕಳೆಯುವಷ್ಟರಲ್ಲಿ ಹೊಸದೊಂದು ತೊಂದರೆ ತಲೆಯೆತ್ತಿತು. ಬಹಳವಾಗಿ ಮಂಜುನೀರು ಕುಡಿದದ್ದರ ಪರಿಣಾಮವಾಗಿಯೋ ಏನೋ ಗಂಟಲಿನಲ್ಲಿ ನೋವು ಕಾಣಿಸಿಕೊಂಡಿತು.

ಕೆಲದಿನಗಳಲ್ಲೇ ಈ ನೋವು ಬಿಟ್ಟುಹೋಗಬಹುದು ಎಂದು ಎಲ್ಲರೂ ಎಣಿಸಿದ್ದರು. ಆದರೆ ಒಂದು ತಿಂಗಳೇ ಕಳೆದರೂ ನೋವು ಕಡಿಮೆಯಾಗಲಿಲ್ಲ. ಅಷ್ಟೇ ಅಲ್ಲ, ಕ್ರಮೇಣ ಅದು ಹೊಸ ರೂಪ ತಾಳಿತು. ಹೆಚ್ಚಾಗಿ ಮಾತನಾಡಿದರೆ ಅಥವಾ ಸಮಾಧಿಸ್ಥರಾದರೆ ದೇಹದ ಊರ್ಧ್ವ ಭಾಗದಲ್ಲಿ ರಕ್ತಸಂಚಾರ ತೀವ್ರಗೊಳ್ಳುತ್ತಿದ್ದುದರಿಂದ ನೋವು ಬಹಳ ಹೆಚ್ಚಾಗತೊಡಗಿತು. ಮಂಜುನೀರಿನ ಥಂಡಿಯಿಂದಾಗಿ ಗಂಟಲು ಸ್ವಲ್ಪ ಊದಿಕೊಂಡಿರಬೇಕು ಎಂದು ಊಹಿಸಿ ಕೆಲವರು, ಆಯುರ್ವೇದ ಔಷಧಿಯನ್ನು ಲೇಪಿಸಿಕೊಳ್ಳುವಂತೆ ಸೂಚಿಸಿದರು. ಅದನ್ನೂ ಎಷ್ಟೋ ದಿನ ನಡೆಸಿದ್ದಾಯಿತು. ಆದರೆ ಸ್ವಲ್ಪವೂ ಪ್ರಯೋಜನ ಕಾಣಲಿಲ್ಲ. ಆಗ, ಗಂಟಲರೋಗತಜ್ಞನಾದ ಡಾಕ್ಟರ್ ರಾಖಾಲ್ ಎಂಬವನನ್ನು ಕರೆಸಿದರು. ಈತ ಬಂದು ಪರೀಕ್ಷಿಸಿ ನೋಡಿ ಗಂಟಲ ಒಳಗೂ ಹೊರಗೂ ಹಚ್ಚಲು ಒಂದು ಔಷಧವನ್ನು ಕೊಟ್ಟು, ಅದನ್ನು ಬಳಸುವ ರೀತಿಯನ್ನೂ ತೋರಿಸಿಕೊಟ್ಟ. ಮತ್ತು ಕೆಲವು ದಿನಗಳ ಕಾಲ ಶ್ರೀರಾಮಕೃಷ್ಣರು ಹೆಚ್ಚಾಗಿ ಮಾತನಾಡದಂತೆ ಹಾಗೂ ಸಾಧ್ಯವಾದಷ್ಟೂ ಸಮಾಧಿಸ್ಥಿತಿಗೇರದಂತೆ ನೋಡಿಕೊಳ್ಳಬೇಕು ಎಂದು ಭಕ್ತರಿಗೆಲ್ಲ ಹೇಳಿಹೋದ. ಅಂತೆಯೇ ಭಕ್ತರು ಈ ವಿಷಯದಲ್ಲಿ ಎಚ್ಚರ ವಹಿಸಬೇಕೆಂದು ತಮ್ಮೊಳಗೆ ತೀರ್ಮಾನಿಸಿಕೊಂಡರು. ಶ್ರೀರಾಮಕೃಷ್ಣರೂ ಕೂಡ ಡಾಕ್ಟರ ಮಾತನ್ನು ಮೀರದಂತೆ ಪ್ರಯತ್ನಿಸುವುದಾಗಿ ಒಪ್ಪಿದರು.

ಈ ದಿನಗಳಲ್ಲೇ ಶ್ರೀರಾಮಕೃಷ್ಣರ ಭಕ್ತವೃಂದದ ಪಾಲಿಗೆ ಚಿರಸ್ಮರಣೀಯವಾದ ಒಂದು ಪ್ರಸಂಗ ನಡೆಯಿತು. ಜ್ಯೇಷ್ಠ ಮಾಸದ ಶುಕ್ಲ ಚತುರ್ಥಿ ಸಮೀಪಿಸುತ್ತಿದೆ. ಅಂದು ಕಲ್ಕತ್ತದ ಉತ್ತರಕ್ಕಿರುವ ಪಾನಿಹಾಟಿಯಲ್ಲಿ ಪ್ರಸಿದ್ಧವಾದ ಅವಲಕ್ಕಿ ಉತ್ಸವ.*

*ಈ ಉತ್ಸವದ ಹಿನ್ನಲೆಯ ವಿವರಗಳಿಗೆ ನೋಡಿ: ಅನುಬಂಧ ೧.

ಪ್ರತಿವರ್ಷ ನಡೆಯುವ ಈ ವೈಷ್ಣವಜಾತ್ರೆಯಲ್ಲಿ ಸಾವಿರಾರು ಜನ ಸೇರುತ್ತಾರೆ. ಶ್ರೀರಾಮಕೃಷ್ಣರು ಅನೇಕ ವರ್ಷಗಳಿಂದಲೂ ಬಹು ಉತ್ಸಾಹದಿಂದ ಇದರಲ್ಲಿ ಪಾಲ್ಗೊಳ್ಳುತ್ತಿದ್ದರೆಂಬುದನ್ನು ನಾವು ಬಲ್ಲೆವು. ಆದರೆ ಈಚಿನ ಕೆಲವರ್ಷಗಳಲ್ಲಿ ಅಲ್ಲಿಗೆ ತಪ್ಪದೆ ಹೋಗಲು ಅವರಿಗೆ ಸಾಧ್ಯವಾಗಿರಲಿಲ್ಲ. ತಮ್ಮ ಸುಶಿಕ್ಷಿತ ತರುಣಶಿಷ್ಯರು ಆ ಹರಿನಾಮ ಸಂಕೀರ್ತನೆಯ ಸಂಭ್ರಮವನ್ನು ಒಮ್ಮೆ ವೀಕ್ಷಿಸಬೇಕು ಎಂದು ಇಚ್ಛೆಪಟ್ಟು ಅವರು ಈ ವರ್ಷ ಶಿಷ್ಯರನ್ನೆಲ್ಲ ಆಹ್ವಾನಿಸಿದರು. (ಈ ಘಟನೆಗೆ ಸಂಬಂಧಿಸಿದ ಅನೇಕ ವಿವರಗಳು ಓದುಗರಿಗೆ ಆದಾಗಲೇ ತಿಳಿದಿದೆ: ಸಂಪುಟ ೩, ಪುಟ ೧೪೨.)

ಶ್ರೀರಾಮಕೃಷ್ಣರು ಪಾನಿಹಾಟಿಗೆ ಹೋಗುವ ಪ್ರಸ್ತಾಪ ಮಾಡಿದಾಗ ಎಲ್ಲರಿಗಿಂತ ಹೆಚ್ಚು ಉತ್ಸಾಹ ತೋರಿ ಸಂಭ್ರಮಿಸಿದವರೆಂದರೆ ರಾಮಚಂದ್ರ ದತ್ತನೇ ಮೊದಲಾದ ವೈಷ್ಣವಭಕ್ತರು. ಮಿಕ್ಕವರಿಗೂ—ಮುಖ್ಯವಾಗಿ ತರುಣಶಿಷ್ಯರಿಗೆ—ಹೋಗಲು ಮನಸ್ಸಿರಲಿಲ್ಲವೆಂದಲ್ಲ, ಆದರೆ ಶ್ರೀರಾಮಕೃಷ್ಣರ ಆರೋಗ್ಯಸ್ಥಿತಿಯನ್ನು ಜ್ಞಾಪಿಸಿಕೊಂಡು ಅವರುಗಳು ಸ್ವಲ್ಪ ಹಿಂಜರಿದರು. ಜಾತ್ರೆಯಲ್ಲಿ ನಾಮಸಂಕೀರ್ತನೆ ನಡೆಯುತ್ತಲೇ ಇರುತ್ತದೆ. ಶ್ರೀರಾಮಕೃಷ್ಣರು ಅದರಲ್ಲಿ ಪಾಲ್ಗೊಳ್ಳದಿದ್ದಾರೆಯೆ ? ಆಮೇಲೆ ಸಮಾಧಿಸ್ಥರಾಗದಿರಲು ಅವರಿಗೆ ಸಾಧ್ಯವೆ ?—ಹೀಗೆ ಆಲೋಚಿಸಿ ಹಿಂದೇಟು ಹಾಕಿದರು. ಆದರೆ ಶ್ರೀರಾಮಕೃಷ್ಣರು ಈ ವಾದವನ್ನು ಬೆಂಬಲಿಸಲಿಲ್ಲ. "ಅಷ್ಟೇನೂ ತೊಂದರೆಯಾಗಲಾರದುಽ... ಇಲ್ಲೇ ಸ್ವಲ್ಪ ಊಟ ಮಾಡಿಕೊಂಡು ಹೊರಟು, ಮಧ್ಯಾಹ್ನ ಒಂದೆರಡು ಗಂಟೆ ಇದ್ದು ಬಂದರಾಯಿತು, ಅಷ್ಟೆ. ಆದರಿಂದೇನೂ ಬಾಧಕವಿಲ್ಲ ಬಿಡಿ. ಮತ್ತೆಮತ್ತೆ ಭಾವಸಮಾಧಿಯುಂಟಾದರೆ ಮಾತ್ರ ಗಂಟಲ ನೋವು ಹೆಚ್ಚಾಗುತ್ತದೆ ನಿಜ. ಆ ವಿಷಯದಲ್ಲಿ ಸ್ವಲ್ಪ ಜಾಗರೂಕತೆಯಿಂದಿದ್ದುಬಿಟ್ಟರೆ ಸರಿ" ಎಂದು ತಾವೇ ಸಮಜಾಯಿಷಿ ಹೇಳಿದರು. ಅವರು ಹಾಗೆಂದ ಮೇಲೆ ಮತ್ತೆ ಯಾರೂ ಆಕ್ಷೇಪವೆತ್ತಲಿಲ್ಲ.

ಆ ದಿನ ಸುಮಾರು ಇಪ್ಪತ್ತೈದು ಜನ ಭಕ್ತರು ಕಲ್ಕತ್ತದಿಂದ ಎರಡು ದೋಣಿಗಳನ್ನು ಬಾಡಿಗೆಗೆ ತೆಗೆದುಕೊಂಡು ದಕ್ಷಿಣೇಶ್ವರಕ್ಕೆ ಬಂದರು. ಇನ್ನು ಕೆಲವರು ಕಾಲ್ನಡಿಗೆಯಲ್ಲೇ ಬಂದುಸೇರಿದರು. ಶ್ರೀರಾಮಕೃಷ್ಣರಿಗಾಗಿ ಇನ್ನೊಂದು ದೋಣಿ ಸಿದ್ಧವಾಗಿತ್ತು. ಭಕ್ತವೃಂದದಲ್ಲಿ ಕೆಲವು ಸ್ತ್ರೀಯರೂ ಇದ್ದರು. ಇವರು ಶಾರದಾದೇವಿಯವರೊಂದಿಗೆ ಸೇರಿಕೊಂಡು ಎಲ್ಲ ಭಕ್ತರಿಗೂ ಅಡಿಗೆ ಮಾಡಿ ಬಡಿಸಿದರು. ಹತ್ತು ಗಂಟೆಯೊಳಗಾಗಿ ಎಲ್ಲರೂ ಊಟ ಮಾಡಿ ಹುರುಪಿನಿಂದ ಹೊರಟುನಿಂತರು.

ಶ್ರೀರಾಮಕೃಷ್ಣರೊಂದಿಗೆ ಇಷ್ಟೊಂದು ಜನ ಒಟ್ಟಾಗಿ ಆ ಆನಂದಮೇಳಕ್ಕೆ ಹೊರಟಿದ್ದನ್ನು ಕಂಡಾಗ ಶಾರದಾದೇವಿಯವರಿಗೆ ಸಹಜವಾಗಿಯೇ ತಾವೂ ಅವರೊಂದಿಗೆ ಸೇರಿಕೊಳ್ಳುವ ಹಂಬಲವುಂಟಾಯಿತು. ಭಕ್ತೆಯೊಬ್ಬಳ ಮೂಲಕ ಅದನ್ನರಿತ ಶ್ರೀರಾಮಕೃಷ್ಣರು 'ಅವಳಿಗಿಷ್ಟವಿದ್ದರೆ ಬರಲಿ' ಎಂದು ಹೇಳಿಕಳಿಸಿದರು. ಪತಿಯ ಮಾತಿನ ಇಂಗಿತವನ್ನರಿತ ಸೂಕ್ಷ್ಮಮತಿ ಶಾರದಾದೇವಿಯವರು ಒಡನೆಯೇ, ತಾವು ಹೋಗುವುದಿಲ್ಲವೆಂದು ತೀರ್ಮಾನಿಸಿಬಿಟ್ಟರು. ಉತ್ಸವದಿಂದ ಹಿಂದಿರುಗಿದ ಮೇಲೆ ಶ್ರೀರಾಮಕೃಷ್ಣರು ಸತಿಯ ಭಾವಗ್ರಹಣಸಾಮರ್ಥ್ಯವನ್ನು ಹೇಗೆ ಶ್ಲಾಘಿಸಿದರೆಂಬುದನ್ನು ವಾಚಕರು ಮರೆತಿರಲಾರರು. (ವಿವರಗಳು ಮೂರನೇ ಸಂಪುಟದಲ್ಲಿ.)

ಇತ್ತ ಭಕ್ತರಿಗೆ ಶ್ರೀರಾಮಕೃಷ್ಣರ ಆರೋಗ್ಯದ್ದೇ ಚಿಂತೆ. ದೋಣಿಯಲ್ಲಿ ಬರುವಾಗಲೇ ನರೇಂದ್ರ, ಬಲರಾಮ, ಗಿರೀಶ, ಮಾಸ್ಟರ್ ಮೊದಲಾದವರೆಲ್ಲ "ನೀವು

ದಯವಿಟ್ಟು ಜಾತ್ರೆಯಲ್ಲಿ ಕೀರ್ತನೆಯ ತಂಡಗಳ ಜೊತೆ ಸೇರಿಕೊಂಡು ಹಾಡಬಾರದು. ಹಾಗೆ ಮಾಡಿದರೆ ನೀವು ಭಾವಾವಿಷ್ಟರಾಗುವುದು ಖಂಡಿತ. ಆದರಿಂದ ನಿಮ್ಮ ಗಂಟಲ ಬಾಧೆ ಹೆಚ್ಚಾಗಿಬಿಡುತ್ತದೆ" ಎಂದು ಶ್ರೀರಾಮಕೃಷ್ಣರನ್ನು ವಿನಂತಿಸಿಕೊಂಡರು. ಪಾನಿ ಹಾಟಿಯನ್ನು ತಲುಪಿದ ಮೇಲೆ ಮತ್ತೊಮ್ಮೆ ಆ ವಿಷಯವನ್ನು ಜ್ಞಾಪಿಸಿದರು.

ದೋಣಿಯಿಂದಿಳಿಯುತ್ತಿದ್ದಂತೆಯೇ, ಅಲ್ಲೇ ನದೀತೀರದಲ್ಲಿ ಒಂದು ಪುರಾತನ ಅಶ್ವತ್ಥವೃಕ್ಷ; ಅದರ ಸುತ್ತಮುತ್ತಲೂ ನೂರಾರು ಜನ ಸೇರಿದ್ದರು. ಭಕ್ತರು ಸಣ್ಣಪುಟ್ಟ ಗುಂಪುಗಳಲ್ಲಿ ಸಂಕೀರ್ತನ-ನರ್ತನಗಳಲ್ಲಿ ತೊಡಗಿದ್ದರು. ಶ್ರೀರಾಮಕೃಷ್ಣರೊಂದಿಗೆ ಬಂದ ಭಕ್ತರು ಇದನ್ನೆಲ್ಲ ನೋಡಿದರು. ಆದರೆ ಶ್ರೀರಾಮಕೃಷ್ಣರ ಭಾವ-ನರ್ತನಗಳನ್ನು ನೋಡಿದ್ದವರಿಗೆ ಇವೆಲ್ಲ ನಿರ್ಜೀವವಾಗಿ, ನಿಸ್ಸತ್ವವಾಗಿ ತೋರಿದುವು.

ಪಾನಿಹಾಟಿಯಲ್ಲಿ ಯಾತ್ರಾರ್ಥಿಗಳು ನೋಡಬೇಕಾದ ಸ್ಥಳಗಳು ಎರಡು— ರಾಧಾಕಾಂತ ದೇವಾಲಯ ಮತ್ತು ಶ್ರೀಚೈತನ್ಯದೇವನ ಅಂತರಂಗಭಕ್ತನಾಗಿದ್ದ ರಾಘವ ಪಂಡಿತ ಎಂಬಾತನ ಮನೆ. ಈ ರಾಧಾಕಾಂತ ದೇವಾಲಯವು ಮಣಿಸೇನ ಎಂಬಾತನ ಪೂರ್ವಜರು ಕಟ್ಟಿಸಿದ್ದು. ಮಣಿಸೇನನ ಮನೆಗೆ ಹೊಂದಿಕೊಂಡಂತೆಯೇ ದೇವಸ್ಥಾನ. ಇವನಿಗೆ ಶ್ರೀರಾಮಕೃಷ್ಣರ ಪರಿಚಯವಿತ್ತು. ಶ್ರೀರಾಮಕೃಷ್ಣರು ಪಾನಿಹಾಟಿಯನ್ನು ತಲುಪಿದೊಡನೆ ತಮ್ಮ ಭಕ್ತರೊಂದಿಗೆ ನೇರವಾಗಿ ಮಣಿಸೇನನ ಮನೆಗೆ ಬಂದರು. ಅವರನ್ನು ಕಂಡು ಮನೆಯವರೆಲ್ಲ ಬಹಳ ಸಂತೋಷದಿಂದ ಪ್ರಣಾಮಪೂರ್ವಕವಾಗಿ ಸ್ವಾಗತಿಸಿ, ಎಲ್ಲರನ್ನೂ ದಿವಾನಖಾನೆಯಲ್ಲಿ ಕುಳ್ಳಿರಿಸಿದರು. ಒಂದು ಹತ್ತು ನಿಮಿಷ ವಿಶ್ರಮಿಸಿಕೊಂಡು ಶ್ರೀರಾಮಕೃಷ್ಣರು ದೇವರ ದರ್ಶನ ಮಾಡಲು ಎದ್ದರು. ದಿವಾನ ಖಾನೆಯಿಂದ ದೇವಾಲಯಕ್ಕೆ ನೇರ ಪ್ರವೇಶ. ರಾಧಾಕೃಷ್ಣರ ಸುಂದರ ಯುಗಳಮೂರ್ತಿ ಗಳನ್ನು ಕಂಡು ಎಲ್ಲರೂ ಮೋಹಿತರಾದರು. ಶ್ರೀರಾಮಕೃಷ್ಣರು ಆ ಮೂರ್ತಿಗಳನ್ನು ಸ್ವಲ್ಪ ಹೊತ್ತು ಎವೆಯಿಕ್ಕದೆ ನೋಡಿ, ಅರ್ಧಭಾವಾವಸ್ಥೆಯಲ್ಲಿ ನಮಸ್ಕಾರ ಮಾಡಿದರು.

ಆ ವೇಳೆಗೆ ದೇಗುಲದ ಹೆಬ್ಬಾಗಿಲ ಮೂಲಕ ಒಂದು ಕೀರ್ತನೆಯ ತಂಡ ಒಳ ಪ್ರವೇಶಿಸಿ ಹಾಡಲಾರಂಭಿಸಿತು. (ಎಲ್ಲ ತಂಡಗಳೂ ಇಲ್ಲಿಗೆ ಬಂದು ಸ್ವಲ್ಪ ಹೊತ್ತು ಹಾಡಿ ಆಮೇಲೆ ಗಂಗಾತೀರಕ್ಕೆ ಹೋಗುವುದು ವಾಡಿಕೆಯಾಗಿತ್ತು.) ಶ್ರೀರಾಮಕೃಷ್ಣರು ಕೀರ್ತನೆಯನ್ನು ಆಲಿಸುತ್ತ ಒಂದು ಬದಿಯಲ್ಲಿ ಸುಮ್ಮನೆ ನಿಂತರು. ಆಗ ವೈಷ್ಣವ ಗೋಸ್ವಾಮಿಯಂತಿದ್ದ ಯಾವನೋ ಒಬ್ಬ ಮಧ್ಯವಯಸ್ಕ ಅಲ್ಲಿಗೆ ಬಂದ. ಒಳ್ಳೇ ಎತ್ತರದ ಭರ್ಜರಿ ಆಳು; ಸ್ಥೂಲಕಾಯ; ಬೆಳ್ಳಗಿದ್ದಾನೆ. ಮೈಕೈ ಮೇಲೆಲ್ಲ ಶಂಖಚಕ್ರಗಳ ಮುದ್ರೆಯಿದೆ. ಕೈಯಲ್ಲಿ ಜಪಮಾಲೆ; ಅದನ್ನು ಮುಚ್ಚುವ ಒಂದು ಚೀಲ. ಬೆರಳುಗಳು ನಿರಂತರವಾಗಿ ಮಣಿಗಳನ್ನೆಣಿಸುತ್ತಿವೆ. ಒಳ್ಳೇ ಗರಿಮುರಿ ಪಂಚೆ-ಉತ್ತರೀಯಗಳನ್ನು ಠಾಕುಠೀಕಾಗಿ ಉಟ್ಟಿದ್ದಾನೆ. ಸೊಂಟದಲ್ಲಿ ಸ್ವಲ್ಪ ದುಡ್ಡು ಸಿಕ್ಕಿಸಿಕೊಂಡಿರುವುದು ಕಾಣ ಬರುತ್ತಿದೆ. ಎಲ್ಲರ ಗಮನ ಸೆಳೆಯುವಂತಹ ಆಕಾರ, ಗಾತ್ರ, ಹಾವಭಾವ. ಅವನನ್ನು ಕಂಡ ಭಕ್ತರು, 'ನಾಲ್ಕು ಕಾಸು ಸಂಪಾದನೆ ಮಾಡಲು ಈ ಗೋಸಾಯಿ ಚೆನ್ನಾಗಿ ಸಿಂಗರಿಸಿಕೊಂಡು ಹೊರಟಿದ್ದಾನೆ' ಎಂದು ಊಹಿಸಿದರು. ಆದರೆ ಆ ವ್ಯಕ್ತಿ ಸುಮ್ಮನೆ ನಿಲ್ಲಲಿಲ್ಲ. ಒಳಗೆ ಬಂದವನೇ ಕೀರ್ತನೆಯ ತಂಡದೊಂದಿಗೆ ಸೇರಿಕೊಂಡು ಭಾವಾ ವೇಶವನ್ನು ನಟಿಸುತ್ತ, ಹುಂಕಾರ ಮಾಡುತ್ತ ಹಾರಿ ಕುಣಿಯತೊಡಗಿದ!

ಶ್ರೀರಾಮಕೃಷ್ಣರಿಗೆ ಈ ಗೋಸಾಯಿಯ ಹಾವಭಾವಗಳನ್ನು ಕಂಡು ನಗು ಬಂದಿತು. ನಸುನಗುತ್ತ ತಗ್ಗು ದನಿಯಲ್ಲಿ ಬಳಿಯಲ್ಲಿದ್ದವರಿಗೆ, "ನೋಡಿ ನೋಡಿ, ನಾಟಕವನ್ನು!" ಎಂದರು. ಅದನ್ನು ಕೇಳಿ ಎಲ್ಲರ ಮುಖದಲ್ಲೂ ನಗುವಿನ ರೇಖೆ ಮೂಡಿತು. 'ಸದ್ಯ! ಠಾಕೂರರಿನ್ನು ಭಾವಾವಿಷ್ಟರಾಗದೆ ತಮ್ಮನ್ನು ತಾವು ನಿಯಂತ್ರಿಸಿ ಕೊಳ್ಳುತ್ತಾರೆಂದು ಕಾಣುತ್ತದೆ' ಎಂದು ಭಾವಿಸುತ್ತ ಸಮಾಧಾನ ತಂದುಕೊಂಡರು. ಆದರೆ ಕಣ್ರೆಪ್ಪೆ ಬಡಿಯುವಷ್ಟರಲ್ಲೇ, ಏನಾಗುತ್ತಿದೆ ಎಂದು ಯಾರಾದರೂ ಊಹಿಸು ವಷ್ಟರಲ್ಲೇ, ಶ್ರೀರಾಮಕೃಷ್ಣರ ಭಾವ ಬದಲಾಗಿಹೋಯಿತು; ಇದ್ದಕ್ಕಿದ್ದಹಾಗೆ ನಿಂತ ಲ್ಲಿಂದ ಮುನ್ನುಗ್ಗಿ ಕೀರ್ತನ ಮಂಡಳಿಯ ಮಧ್ಯಕ್ಕೆ ಬಂದು ಸೇರಿಬಿಟ್ಟರು; ಮರು ಕ್ಷಣವೇ ಭಾವಾವೇಶದಿಂದ ಬಾಹ್ಯಜ್ಞಾನಶೂನ್ಯರಾಗಿ ನಿಂತರು!

ಅರೆಘಳಿಗೆ ತಬ್ಬಿಬ್ಬಾದ ಭಕ್ತರು ಕೂಡಲೇ ಎಚ್ಚರಗೊಂಡು ಮುಂದೆ ಬಂದು ಶ್ರೀರಾಮಕೃಷ್ಣರನ್ನು ಆವರಿಸಿಕೊಂಡು ನಿಂತರು. ಕೆಲಕ್ಷಣಗಳಲ್ಲಿ ಶ್ರೀರಾಮಕೃಷ್ಣರಿಗೆ ಅರ್ಧಬಾಹ್ಯಾವಸ್ಥೆ ಮರಳಿತು; ಅದೇ ಅವಸ್ಥೆಯಲ್ಲಿ ಹಾಡಿನೊಂದಿಗೆ ಸಿಂಹ ಗಾಂಭೀರ್ಯದಿಂದ, ಮಯೂರಲಾಲಿತ್ಯದಿಂದ ನರ್ತನ ಮಾಡತೊಡಗಿದರು. ಅವರ ನರ್ತನವನ್ನು ವೀಕ್ಷಿಸಿ ಅಭೂತಪೂರ್ವ ಅನುಭವವನ್ನು ಪಡೆದ ಸ್ವಾಮಿ ಶಾರದಾ ನಂದರು ಅದನ್ನು ಬಣ್ಣಿಸುತ್ತ 'ಶ್ರೀರಾಮಕೃಷ್ಣ ಲೀಲಾಪ್ರಸಂಗ'ದಲ್ಲಿ ಹೀಗೆನ್ನುತ್ತಾರೆ:

"ಅವರು ಭಾವಾವೇಶದಿಂದ ನರ್ತನಗೈಯುತ್ತ ಹಾಡಿನ ತಾಳಕ್ಕೆ ಸರಿಯಾಗಿ ಒಮ್ಮೆ ಹಿಂದಕ್ಕೆ, ಒಮ್ಮೆ ಮುಂದಕ್ಕೆ, ತೀವ್ರಗತಿಯಿಂದ ಚಲಿಸುತ್ತಿರುವಾಗ ಆನಂದ ಸಾಗರದಲ್ಲಿ ಈಜಾಡುತ್ತಿರುವ ಮೀನೋ ಎಂಬಂತೆ ತೋರುತ್ತಿದ್ದರು! ಅವರ ಒಂದೊಂದು ಅಂಗದ ಚಲನೆಯೂ ಆ ಆನಂದವನ್ನು ಸ್ಫುಟವಾಗಿ ಪ್ರತಿಬಿಂಬಿಸುತ್ತಿತ್ತು. ಸೌಂದರ್ಯ-ಮಾಧುರ್ಯಗಳು ಸಾಮರಸ್ಯದಿಂದ ಜೊತೆಗೂಡಿಕೊಂಡು ಅತ್ಯಂತ ಸಹಜವೂ ಅಮಿತವೂ ಆದ ಆನಂದ ಅಲ್ಲಿ ಹೊಮ್ಮುತ್ತಿತ್ತು. ಆದರೆ ಅದನ್ನು ಯಾವ ರೀತಿಯಲ್ಲೂ ಬಣ್ಣಿಸಲಶಕ್ಯ. ಎಷ್ಟೋ ಜನ ಸ್ತ್ರೀಪುರುಷರ ಅಭಿನಯಪೂರ್ಣವಾದ ಮನಮೋಹಕ ನೃತ್ಯಗಳನ್ನು ನಾವು ಬೇಕೆಂಬಷ್ಟು ನೋಡಿದ್ದೇವೆ. ಆದರೆ ಶ್ರೀರಾಮ ಕೃಷ್ಣರು ದಿವ್ಯಭಾವಾವೇಶದಿಂದ ಮೈಮರೆತು ತಾಂಡವನೃತ್ಯವಾಡುತ್ತಿದ್ದಾಗ ಅವರ ಶರೀರದಲ್ಲಿ ಯಾವ ಬಗೆಯ ಮಧುರ ಸೌಂದರ್ಯ ವಿಕಸನಗೊಳ್ಳುತ್ತಿತ್ತೋ ಅದರಲ್ಲಿ ಒಂದು ಚಟಾಕಿನಷ್ಟು ಅಂಶವನ್ನೂ ಇತರ ಸ್ತ್ರೀಪುರುಷರ ನೃತ್ಯಗಳಲ್ಲಿ ನಾವು ಕಾಣಲಿಲ್ಲ. ಶ್ರೀರಾಮಕೃಷ್ಣರು ಪ್ರಬಲವಾದ ಭಾವೋಲ್ಲಾಸದಿಂದ ತುಂಬಿ ತುಳುಕುತ್ತ, ಹಿಂದಕ್ಕೂ ಮುಂದಕ್ಕೂ ತೂರಾಡುತ್ತ ತೀವ್ರಗತಿಯಲ್ಲಿ ಚಲಿಸುವ ಅದ್ಭುತವನ್ನು ನೋಡಬೇಕು! ಅದನ್ನು ನೋಡುತ್ತ ನಮ್ಮೊಳಗೆ ಭ್ರಮೆ ಹುಟ್ಟುತ್ತಿತ್ತು—ಆನಂದಸಾಗರದಲ್ಲಿ ಪರ್ವ ತೋಪಮವಾದ ಅಲೆಗಳೆದ್ದು ತಮಗೆದುರಾದ ಸಕಲ ವಸ್ತುಗಳನ್ನೂ ಕೊಚ್ಚಿಕೊಂಡು ಪ್ರಚಂಡ ವೇಗದಲ್ಲಿ ಮುನ್ನುಗ್ಗುತ್ತಿವೆಯೋ, ಮತ್ತು ಮರುಕ್ಷಣದಲ್ಲೇ ಸಾಗರದಲ್ಲಿ ಲೀನವಾಗಿ ಕಣ್ಮರೆಯಾಗುತ್ತಿವೆಯೋ—ಎಂಬಂತೆ! ಅತ್ಯಂತ ನೈಜವೂ ಸಹಜವೂ ಆದ ಭಾವದ ಅಭಿವ್ಯಕ್ತಿಯನ್ನು ಕಂಡು ಕೀರ್ತನಕಾರರೆಲ್ಲ ಮೊದಲಿಗಿಂತ ನೂರು ಪಾಲು ಹೆಚ್ಚಿನ ಉತ್ಸಾಹದಿಂದ ಕೀರ್ತನೆಯನ್ನು ಹಾಡತೊಡಗಿದರು...

"ಭಾವಾವಿಷ್ಟರಾದ ಶ್ರೀರಾಮಕೃಷ್ಣರ ದೇಹದಲ್ಲಿ ಆ ದಿನ ನೋಡಿದಂಥ ದಿವ್ಯೋಜ್ವಲವಾದ ಸೌಂದರ್ಯವನ್ನು ನಾವು ಇನ್ನೆಂದೂ ನೋಡಿದ ನೆನಪಿಲ್ಲ. ದೇವ

ಶರೀರದ ಆ ಅಪೂರ್ವ ಸೌಂದರ್ಯವನ್ನು ಸರಿಯಾದ ರೀತಿಯಲ್ಲಿ ಬಣ್ಣಿಸುವುದು ಮಾನವಶಕ್ತಿಗೆ ಅಸಾಧ್ಯವೆಂದೇ ಹೇಳಬೇಕು. ಭಾವಾವೇಶದಿಂದಾಗಿ ಒಬ್ಬ ವ್ಯಕ್ತಿಯ ಶರೀರದಲ್ಲಿ, ಕಣ್ರೆಪ್ಪೆ ಬಡಿಯುವಷ್ಟರಲ್ಲೇ ಅಂತಹ ಪರಿವರ್ತನೆಯುಂಟಾಗಲು ಸಾಧ್ಯ ಎಂದು ನಾವೆಂದೂ ಊಹಿಸಿರಲಿಲ್ಲ. ಆ ದಿವಸ ಅವರ ದೇಹ ಎಂದಿಗಿಂತ ಸ್ವಲ್ಪ ಹೆಚ್ಚು ಎತ್ತರವಾಗಿ ತೋರುತ್ತಿತ್ತು. ಮತ್ತು ಕನಸಿನಲ್ಲಿ ಕಾಣಬರುವ ವ್ಯಕ್ತಿಯಂತೆ ಅತ್ಯಂತ ಹಗುರವಾಗಿ ಕಾಣಬರುತ್ತಿತ್ತು! ನಸುಗಪ್ಪಿನ ಅವರ ಮೈಬಣ್ಣ ಅಂದು ಉಜ್ವಲ ಗೌರ ವರ್ಣಕ್ಕೆ ತಿರುಗಿತ್ತು! ಅವರ ಮುಖಮಂಡಲದಿಂದ ಅಪೂರ್ವ ಜ್ಯೋತಿಯೊಂದು ಹೊಮ್ಮಿ ನಾಲ್ದೆಸೆಗಳನ್ನೂ ಬೆಳಗುತ್ತಿತ್ತು! ಮಹಿಮೆ, ಕರುಣೆ, ಕಾಂತಿ, ಆನಂದಗಳಿಂದ ಭರಿತವಾದ ಆ ಮುಖದಲ್ಲಿ ಕಂಗೊಳಿಸುತ್ತಿದ್ದ ಅನುಪಮವಾದ ಮಂದಹಾಸವನ್ನು ಕಂಡು ಜನರೆಲ್ಲ ಮಂತ್ರಮುಗ್ಧರಾಗಿದ್ದರು; ಮತ್ತು ತಾತ್ಕಾಲಿಕವಾಗಿ ಇತರ ವಿಷಯ ಗಳನ್ನೆಲ್ಲ ಮರೆತೇಬಿಟ್ಟಿದ್ದರು. ಅವರುಟ್ಟಿದ್ದ ರೇಷ್ಮೆಯ ಕಾಷಾಯವಸ್ತ್ರದ ಬಣ್ಣ ಅವರ ಉಜ್ವಲ ಮೈಕಾಂತಿಯೊಂದಿಗೆ ಬೆರೆತುಕೊಂಡು ಅವರು ಬೆಂಕಿಯ ಜ್ವಾಲೆಯಿಂದ ಆವೃತರಾಗಿದ್ದಾರೋ ಎಂಬ ಭ್ರಮೆಯನ್ನುಂಟುಮಾಡುತ್ತಿತ್ತು!...''

ಸುಮಾರು ಅರ್ಧ ಗಂಟೆಯ ಕಾಲ ಶ್ರೀರಾಮಕೃಷ್ಣರು ಕೀರ್ತನಮಂಡಳಿ ಯೊಂದಿಗೆ ಹಾಡಿ ನರ್ತಿಸಿದರು. ಬಳಿಕ ಅವರು ಸ್ವಲ್ಪ ಸಾಮಾನ್ಯ ಸ್ಥಿತಿಗೆ ಮರಳಿದ್ದನ್ನು ಕಂಡ ಭಕ್ತರು, ಅವರನ್ನು ಅಲ್ಲಿಂದ ಕರೆದೊಯ್ಯುವ ಪ್ರಯತ್ನ ಮಾಡಿದರು. ಈಗ ರಾಘವಪಂಡಿತನ ಮನೆಯನ್ನು ಸಂದರ್ಶಿಸುವುದೆಂದು ತೀರ್ಮಾನವಾಯಿತು. ಆ ಮನೆಯಲ್ಲಿ, ರಾಘವಪಂಡಿತನೇ ಪೂಜಿಸುತ್ತಿದ್ದ ಮೂರ್ತಿಗಳನ್ನೂ ಸಾಲಿಗ್ರಾಮಶಿಲೆ ಯನ್ನೂ ನೋಡಬಹುದಾಗಿದೆ. ಮಣಿಸೇನನ ಮನೆಯಿಂದ ಅಲ್ಲಿಗೆ ಒಂದು ಮೈಲಿಗಿಂತ ಸ್ವಲ್ಪ ಹೆಚ್ಚು ದೂರ.

ಶ್ರೀರಾಮಕೃಷ್ಣರು ಭಕ್ತರೊಂದಿಗೆ ಹೊರಟದ್ದನ್ನು ಕಂಡ ಕೀರ್ತನ ಮಂಡಳಿ ಯವರು ತಾವೂ ಅವರನ್ನು ಹಿಂಬಾಲಿಸಿ ಅತ್ಯುತ್ಸಾಹದಿಂದ ಕೀರ್ತನೆ ಮಾಡುತ್ತ ನಡೆ ದರು. ಸರಿ, ಮತ್ತಿನ್ನೇನು! ನಾಲ್ಕು ಹೆಜ್ಜೆ ನಡೆಯುತ್ತಲೇ ಶ್ರೀರಾಮಕೃಷ್ಣರು ಭಾವಾ ವೇಶಕ್ಕೊಳಗಾಗಿ ಸ್ಥಿರವಾಗಿ ನಿಂತುಬಿಟ್ಟರು. ಅವರೊಡನೆ ಎಲ್ಲರೂ ನಿಂತರು. ಅರ್ಧ ಬಾಹ್ಯಾವಸ್ಥೆಗೆ ಇಳಿದು ಬಂದಾಗ ಅವರನ್ನು ಭಕ್ತರು ಮುಂದುವರಿಯುವಂತೆ ಕೇಳಿ ಕೊಂಡರು. ಶ್ರೀರಾಮಕೃಷ್ಣರು ಮತ್ತೆರಡು ಹೆಜ್ಜೆ ಮುಂದಿಟ್ಟರು; ಪುನಃ ಭಾವಾವಿಷ್ಟ ರಾದರು. ಪದೇಪದೇ ಹೀಗಾಗುತ್ತ, ಭಕ್ತವೃಂದ ಬಹಳ ನಿಧಾನವಾಗಿ ಮುಂದುವರಿ ಯಿತು. ಆಗಾಗ ತುಂತುರು ಮಳೆ ಬೇರೆ ಬೀಳುತ್ತಿತ್ತು. ರಸ್ತೆಯಲ್ಲೆಲ್ಲ ಕೆಸರು. ಆದರೆ ಇದಾವುದೂ ಶ್ರೀರಾಮಕೃಷ್ಣರ ಭಾವಾವೇಶಕ್ಕೆ ತೊಡಕಾಗಲಿಲ್ಲ; ಭಕ್ತರ, ಕೀರ್ತನಕಾರರ ಉತ್ಸಾಹವನ್ನು ಕುಗ್ಗಿಸಲಿಲ್ಲ.

ಅಷ್ಟೇ ಅಲ್ಲ; ಮೆರವಣಿಗೆ ಮಣಿಸೇನನ ಮನೆಯಿಂದ ಹೊರಟು ಮುಖ್ಯರಸ್ತೆಗೆ ತಲುಪುತ್ತಿದ್ದಂತೆಯೇ ಶ್ರೀರಾಮಕೃಷ್ಣರ ದಿವ್ಯೋಜ್ವಲ ಸೌಂದರ್ಯ, ಮನೋಹರ ನೃತ್ಯ ಮತ್ತು ಅವರು ಬಾರಿಬಾರಿಗೂ ಅನುಭವಿಸುತ್ತಿದ್ದ ಭಾವಾವೇಶಗಳನ್ನು ನೋಡುತ್ತ ಕೀರ್ತನ ಮಂಡಳಿಯ ಹುಮ್ಮಸ್ಸಿಗೆ ಮತ್ತಷ್ಟು ಕಾವೇರಿತು. ಅವರೀಗ ಒಂದು ಬಂಗಾಳೀ ಹಾಡನ್ನು ಹಾಡಲಾರಂಭಿಸಿದರು. ಹಾಡಿನ ಭಾವಾರ್ಥ ಹೀಗಿತ್ತು:

''ಗಂಗಾ ತೀರದಲ್ಲಿ ನಿಂತು 'ಹರೀ' ಎಂದು ಕೂಗುತ್ತಿರುವವನು ಯಾರಪ್ಪಾ ?

ಓಹೋ, ಪ್ರೇಮದಾತನಾದ ನಿತಾಯಿಯೇ (ನಿತ್ಯಾನಂದನೇ) ಇರಬೇಕು! 'ಜಯ ರಾಧೇ' ಎಂದು ಕೂಗುತ್ತಿರುವವರು ಯಾರಪ್ಪಾ? ಪ್ರೇಮದಾತನಾದ ನಿತ್ಯಾನಂದನು ಬರುತ್ತಿರುವಂತಿದೆ! ಅವನಿಲ್ಲದಿದ್ದರೆ ನಮ್ಮ ಹೃದಯಕ್ಕೆ ಶಾಂತಿ ಹೇಗೆ ಲಭಿಸೀತು? ಇಗೋ, ಪ್ರೇಮದಾತನಾದ ನಮ್ಮ ನಿತ್ಯಾನಂದನಿಲ್ಲಿದ್ದಾನೆ!"

ಹಾಡಿನ ಕೊನೆಯ ಚರಣಕ್ಕೆ ಬಂದಾಗ ಕೀರ್ತನಕಾರರೆಲ್ಲ ಸಮಯಸ್ಫೂರ್ತಿಯಿಂದ ಶ್ರೀರಾಮಕೃಷ್ಣರ ಕಡೆಗೆ ಬೆರಳು ಮಾಡಿ, "ಇಗೋ, ಇಲ್ಲಿದ್ದಾನೆ ನಮ್ಮ ಪ್ರೇಮದಾತ!" ಎಂದು ಹಾಡುತ್ತ ಮಹದಾನಂದದಿಂದ ನರ್ತನ ಮಾಡತೊಡಗಿದರು. ಆ ಉತ್ಸಾಹದ ಗಾಯನ-ನರ್ತನ ಜಾತ್ರೆಗೆ ಬಂದಿದ್ದ ಜನರನ್ನೆಲ್ಲ ಆಕರ್ಷಿಸಿತು. ಜನ ತಂಡ ತಂಡವಾಗಿ ಬಂದು ಸೇರಿಬಿಟ್ಟರು. ಕೆಲವರು ತಾವೂ ಆ ಆನಂದ ಮೇಳದಲ್ಲಿ ಕೂಡಿಕೊಂಡು ಕೀರ್ತನ ಮಾಡತೊಡಗಿದರು; ಇನ್ನು ಕೆಲವರು ಅಂತರ್ಯದಲ್ಲಿ ಅನಿರ್ವಚನೀಯವಾದ ದಿವ್ಯಭಾವವನ್ನು ಅನುಭವಿಸುತ್ತ, ಸುಮ್ಮನೆ ತೆರೆದ ಕಣ್ಣಿಂದ ಶ್ರೀರಾಮಕೃಷ್ಣರನ್ನೇ ದಿಟ್ಟಿಸುತ್ತ ಅವರ ಜೊತೆಯಲ್ಲೇ ನಡೆಯತೊಡಗಿದರು. ಹೀಗೆ ಜನಸಮೂಹದಲ್ಲಿ ಉತ್ಸಾಹ ಎಲ್ಲೆಲ್ಲೂ ಸಾಂಕ್ರಾಮಿಕವಾಗಿ ಹಬ್ಬಿತು. ಇನ್ನೂ ಕೆಲವು ಕೀರ್ತನ ತಂಡಗಳು ಬಂದು ಇವರನ್ನು ಕೂಡಿಕೊಂಡುವು. ಭಾವಾವಿಷ್ಟರಾದ ಶ್ರೀರಾಮಕೃಷ್ಣರನ್ನು ಸುತ್ತುವರಿದ ಒಂದು ದೊಡ್ಡ ಜನಸಂದಣಿ, ಮೆಲ್ಲಮೆಲ್ಲನೆ ರಾಘವಪಂಡಿತನ ಕುಟೀರದೆಡೆಗೆ ಸಾಗಿತು.

ಈ ಮೆರವಣಿಗೆಯಲ್ಲಿದ್ದ ಕೆಲವು ಭಕ್ತೆಯರು ತಾವು ಶ್ರೀಚೈತನ್ಯನಿಗೂ ನಿತ್ಯಾನಂದನಿಗೂ ನೈವೇದ್ಯ ಮಾಡಿದ್ದ ತಿಂಡಿತಿನಿಸುಗಳನ್ನು ತರುತ್ತಿದ್ದರು. ಅವುಗಳನ್ನು ಶ್ರೀರಾಮಕೃಷ್ಣರಿಗೆ ಕೊಡಬೇಕೆನ್ನುವುದು ಅವರ ಉದ್ದೇಶ. ಹೀಗೆ ಬರುತ್ತಿರುವಾಗ ದಾರಿಯಲ್ಲಿ ಇದ್ದಕ್ಕಿದ್ದಂತೆ ಎಲ್ಲಿಂದಲೋ ಒಬ್ಬ ವಿಕೃತರೂಪದ ಕಳ್ಳ ಬಾಬಾಜಿ ಪ್ರತ್ಯಕ್ಷನಾದ; ಭಾವೋನ್ಮತ್ತನಾದವನಂತೆ ನಟಿಸುತ್ತ ಒಬ್ಬಳು ಭಕ್ತೆಯ ಕೈಯಿಂದ ನೈವೇದ್ಯವನ್ನು ಕಿತ್ತುಕೊಂಡು ಕೈಯಾರೆ ಒಂದು ತುತ್ತನ್ನು ಶ್ರೀರಾಮಕೃಷ್ಣರ ಬಾಯಿಗಿಟ್ಟುಬಿಟ್ಟ. ಆ ಸಮಯದಲ್ಲಿ ಅವರು ಭಾವಾವೇಶದಿಂದ ಸ್ಥಿರವಾಗಿ ನಿಂತಿದ್ದರು. ಬಾಬಾಜಿಯ ಸ್ಪರ್ಶವಾಗುತ್ತಲೇ ಅವರ ಸರ್ವಾಂಗವೂ ನಡುಗಿತು; ಭಾವಭಂಗವಾಯಿತು. ಆತ ತಮ್ಮ ಬಾಯೊಳಗಿಟ್ಟ ತಿನಿಸನ್ನು ಥೂ ಥೂ ಎಂದು ಉಗುಳಿ ನೀರಿನಿಂದ ಬಾಯಿ ತೊಳೆದುಕೊಂಡರು. ಅವನೊಬ್ಬ ಅಯೋಗ್ಯ ಎಂದು ಜನರಿಗೆಲ್ಲ ಕೂಡಲೇ ತಿಳಿದು ಹೋಯಿತು. ಎಲ್ಲರೂ ತನ್ನನ್ನೇ ದುರುದುರು ನೋಡುತ್ತಿದ್ದಾರೆ ಎನ್ನುವುದು ಗೊತ್ತಾದಾಗ ಆತ ಮೆಲ್ಲನೆ ಅಲ್ಲಿಂದ ಪರಾರಿಯಾದ. ಬಳಿಕ ಶ್ರೀರಾಮಕೃಷ್ಣರು ಇನ್ನೊಬ್ಬ ಭಕ್ತನಿಂದ ಪ್ರಸಾದವನ್ನು ಸ್ವೀಕರಿಸಿ ಉಳಿದುದನ್ನು ಭಕ್ತರಿಗೆ ಹಂಚಿಕೊಟ್ಟರು.

ಹೀಗೆ ಸುಮಾರು ಮೂರು ತಾಸುಗಳ ಕಾಲ ನಡೆದು ರಾಘವ ಪಂಡಿತನ ಕುಟೀರವನ್ನು ಸೇರಿದರು. ಅಲ್ಲಿ ಶ್ರೀರಾಮಕೃಷ್ಣರು ಸಾಲಿಗ್ರಾಮಶಿಲೆ ಹಾಗೂ ರಾಧಾಕೃಷ್ಣ ವಿಗ್ರಹಗಳ ದರ್ಶನ-ಸ್ಪರ್ಶಗಳನ್ನು ಮಾಡಿ ಸ್ವಲ್ಪ ವಿಶ್ರಾಂತಿ ಪಡೆಯುವಷ್ಟರಲ್ಲಿ ಮತ್ತೆ ಅರ್ಧ ತಾಸಾಯಿತು. ಜೊತೆಯಲ್ಲಿ ಬಂದಿದ್ದ ಜನಸಮೂಹ ಮೆಲ್ಲನೆ ಕರಗಿತು. ಈಗ ಭಕ್ತರೆಲ್ಲ ಶ್ರೀರಾಮಕೃಷ್ಣರನ್ನು ಕರೆದುಕೊಂಡು ದೋಣಿ ಹತ್ತಿದರು. ಅಲ್ಲಿ ಮತ್ತೊಂದು ವಿಶೇಷ ಘಟನೆ ನಡೆಯಿತು:

ಅಂದು ಪಾನಿಹಾಟಿ ಜಾತ್ರೆಗೆ ನವಚೈತನ್ಯ ಮಿತ್ರ ಎಂಬೊಬ್ಬ ಇಳಿವಯಸ್ಸಿನಾದ

ವ್ಯಕ್ತಿ ಬಂದಿದ್ದ. ಈತ ಶ್ರೀರಾಮಕೃಷ್ಣರ ಭಕ್ತನೇ. ಶ್ರೀರಾಮಕೃಷ್ಣರು ಉತ್ಸವಕ್ಕೆ ಬಂದಿದ್ದಾರೆಂಬ ಸುದ್ದಿ ಕೇಳಿ ಅವರನ್ನು ಹುಡುಕುತ್ತ ಸುತ್ತಾಡುತ್ತಿದ್ದ. ಈಗ ಇನ್ನೇನು ದೋಣಿ ಬಿಡಬೇಕು, ಅಷ್ಟರಲ್ಲಿ ಅವರನ್ನು ದೋಣಿಯಲ್ಲಿ ಕಂಡು ಅವನು ಹುಚ್ಚನಂತೆ ಓಡಿ ಬಂದ; ಅವರ ಪಾದತಲದಲ್ಲಿ ಬಿದ್ದು "ಠಾಕೂರ್ ! ಕೃಪೆದೋರಿ !" ಎನ್ನುತ್ತ ಬಿಕ್ಕಿಬಿಕ್ಕಿ ಅಳಲಾರಂಭಿಸಿದ ! ಅವನ ಆ ವ್ಯಾಕುಲತೆಯನ್ನೂ ಭಕ್ತಿಯನ್ನೂ ಕಂಡು ಅತ್ಯಂತ ಪ್ರಸನ್ನರಾದ ಶ್ರೀರಾಮಕೃಷ್ಣರು ಭಾವಾವಿಷ್ಟರಾಗಿ ಅವನನ್ನು ಸ್ಪರ್ಶಿಸಿದರು. ಆ ಮಾಂತ್ರಿಕ ಸ್ಪರ್ಶದಿಂದ ಅವನಿಗೆ ಅದಾವ ದಿವ್ಯದರ್ಶನವಾಯಿತೋ ! ಅದೆಂಥ ಅದ್ಭುತ ಅನುಭವ ದೊರಕಿತೋ ! ಹೇಳಬಲ್ಲವರಿಲ್ಲ. ಆದರೆ ಇದ್ದಕ್ಕಿದ್ದಂತೆ ಅವನ ಭಾವ ಬದಲಾಗಿಹೋಯಿತು. ವ್ಯಾಕುಲನಾಗಿ ಕಂಬನಿಗರೆಯುತ್ತಿದ್ದವನು ಹಠಾತ್ತನೆ ಹರ್ಷಾತಿಶಯದಿಂದ ನಾವೆಯಲ್ಲೇ ತಾಂಡವನೃತ್ಯವಾಡುತ್ತ, ಶ್ರೀರಾಮಕೃಷ್ಣರನ್ನು ಬಗೆ ಬಗೆಯಿಂದ ಸ್ತುತಿಸುತ್ತ, ಪುನಃಪುನಃ ಸಾಷ್ಟಾಂಗ ಪ್ರಣಾಮ ಮಾಡತೊಡಗಿದ. ಭಕ್ತರು, ದೋಣಿಯವರು ಎಲ್ಲರೂ ವಿಸ್ಮಯದಿಂದ ಅವನನ್ನೇ ನೋಡುತ್ತ ಕುಳಿತುಬಿಟ್ಟರು. ಹೀಗೇ ಸ್ವಲ್ಪ ಹೊತ್ತಾಯಿತು. ಬಳಿಕ ಶ್ರೀರಾಮಕೃಷ್ಣರು ಅವನ ಬೆನ್ನು ನೇವರಿಸಿ ಸಂತೈಸುತ್ತ ನಾನಾ ಉಪದೇಶಗಳನ್ನಿತ್ತು ಬೀಳ್ಕೊಟ್ಟರು. ನವಚೈತನ್ಯ ಹಿಂದೆ ಎಷ್ಟೋ ಸಲ ಶ್ರೀರಾಮಕೃಷ್ಣರನ್ನು ಕಂಡಿದ್ದನಾದರೂ ಅವರ ಕೃಪೆಯನ್ನು ಗಳಿಸಿರಲಿಲ್ಲ. ಈ ದಿನ ಹೀಗೆ ಅವರ ವಿಶೇಷ ಕೃಪೆಯನ್ನು ಗಳಿಸಿ ಕೃತಾರ್ಥನಾದ.*

ನವಚೈತನ್ಯನು ನಿರ್ಗಮಿಸಿದ ಮೇಲೆ ದೋಣಿ ಹೊರಟಿತು. ರಾತ್ರಿ ಎಂಟೂ ವರೆಯ ಹೊತ್ತಿಗೆ ಅದು ದಕ್ಷಿಣೇಶ್ವರವನ್ನು ಮುಟ್ಟಿತು. ಉಳಿದ ಭಕ್ತರು ಕಲ್ಕತ್ತ ಸೇರಿ ದಾಗ ಹತ್ತು ಗಂಟೆ.

---

*ಇದಾದ ಮೇಲೆ ಅವನು ಸಂಸಾರಭಾರವನ್ನು ಮಗನಿಗೊಪ್ಪಿಸಿ ತಾನು ವಾನಪ್ರಸ್ಥನಂತೆ ಜೀವಿಸತೊಡ ಗಿದ. ತನ್ನ ಗ್ರಾಮದಲ್ಲೇ ಗಂಗಾತೀರದಲ್ಲೊಂದು ಪರ್ಣಕುಟೀರದಲ್ಲಿ ವಾಸಿಸುತ್ತ, ಸಾಧನ ಭಜನೆಗಳಲ್ಲೂ ಶ್ರೀರಾಮಕೃಷ್ಣರ ನಾಮಗುಣಕೀರ್ತನೆಯಲ್ಲೂ ಉಳಿದ ಆಯುಸ್ಸನ್ನು ಕಳೆದ. ಕೀರ್ತನೆ ಮಾಡುತ್ತ ಮಾಡುತ್ತ ಭಾವಪರವಶನಾಗುತ್ತಿದ್ದ. ಸದಾ ಭಕ್ತಿ-ಆನಂದಭರಿತನಾದ ಆತನನ್ನು ಕಂಡು ಎಷ್ಟೋ ಜನ ಆದರಿಸುತ್ತಿದ್ದರು. ಹೀಗೆ ಶ್ರೀರಾಮಕೃಷ್ಣರ ಕೃಪೆಯಿಂದ ನವಚೈತನ್ಯ ತನ್ನ ಉತ್ತರಜೀವನದಲ್ಲಿ ಅನೇಕರೊಳಗೆ ಭಗವದ್ಭಕ್ತಿಯನ್ನು ಪ್ರಚೋದಿಸಲು ಸಮರ್ಥನಾದ.

ಪಾನಿಹಾಟಿಯ ಜಾತ್ರೆಯ ನೆಪದಲ್ಲಿ ನೂರಾರು ಜನ ಶ್ರೀರಾಮಕೃಷ್ಣರ ಭಾವ ವೈಭವವನ್ನು ಕಂಡು ಮೋಡಿಗೊಳಗಾದರು, ಆ ಕೀರ್ತನ-ನರ್ತನಾನಂದಗಳನ್ನು ಸವಿದು ತಣಿದರು. ಅವರೆಲ್ಲರ ಪಾಲಿಗೆ ಅದೊಂದು ಅವಿಸ್ಮರಣೀಯ ದಿನವಾಗಿ ಪರಿಣಮಿಸಿತು. ಸ್ವತಃ ಶ್ರೀರಾಮಕೃಷ್ಣರೂ ಅಂದು ಬಹುವಾಗಿ ಆನಂದಿಸಿದರು ಎನ್ನುವುದೂ ನಿಜವೇ. ಆದರೆ ಆ ಒಂದು ದಿನದಲ್ಲಿ ಅವರ ದೇಹಸ್ಥಿತಿಯ ಮೇಲಾಗಿದ್ದ ದುಷ್ಪರಿಣಾಮ ಅಪಾರ. ಅಂತೂ ನರೇಂದ್ರಾದಿ ಶಿಷ್ಯರ ಶಂಕೆ ನಿಜವಾಗಿಯೇ ಪರಿಣಮಿಸಿತ್ತು; ಯಾವುದನ್ನು ತಪ್ಪಿಸಲು ಅವರೆಲ್ಲ ಪ್ರಯತ್ನಿಸಿದ್ದರೋ ಅದು ನಡೆದೇಹೋಗಿತ್ತು. ಹಾಗೆ ಒಂದೇ ಸಮನೆ ಹಾಡಿ ಕುಣಿದದ್ದರಿಂದ ಆಗಿದ್ದ ದೇಹಶ್ರಮ ಒಂದು ಕಡೆಯಾದರೆ ಗಂಟಲ ನೋವು ಹೆಚ್ಚಿದ್ದರಿಂದ ಉಂಟಾದ ತೊಂದರೆ ಇನ್ನೊಂದು ಕಡೆ. ಜೊತೆಗೆ ಆ ದಿನ ಆಗಾಗ ಮಳೆಯಲ್ಲಿ ನೆನೆದದ್ದು ಬೇರೆ. ಡಾಕ್ಟರು ಬಂದು ಪರೀಕ್ಷೆ ಮಾಡಿದರು. ಶ್ರೀರಾಮಕೃಷ್ಣರ ಆರೋಗ್ಯ ಹದಗೆಟ್ಟಿದ್ದನ್ನು ಕಂಡು ಬೇಸರಿಸಿ, ಅದಕ್ಕೆ ಅವಕಾಶವಾಗುವಂತೆ ಮಾಡಿದ ಭಕ್ತರಿಗೆ ಚೆನ್ನಾಗಿ ಛೀಮಾರಿ ಹಾಕಿದರು. "ಇನ್ನೊಮ್ಮೆ ಹೀಗಾದರೆ ರೋಗ ಕೈಮೀರುತ್ತದೆ, ಅಷ್ಟೆ" ಎಂದು ಹೆದರಿಸಿದರು. ಮತ್ತು ಸಾಧ್ಯವಾದಷ್ಟೂ ಯಾರೊಡನೆಯೂ ಮಾತಾಡಲೇಬಾರದೆಂದು ಶ್ರೀರಾಮಕೃಷ್ಣರಿಗೆ ಹೇಳಿಹೋದರು.

ಬಾಲಸ್ವಭಾವದ ಶ್ರೀರಾಮಕೃಷ್ಣರು, ಈ ಕೋಟಲೆಗಳಿಗೆಲ್ಲ ರಾಮಚಂದ್ರ ಮೊದಲಾದ ಕೆಲವು ಭಕ್ತರೇ ಕಾರಣ ಎಂದು ಆರೋಪಿಸಿದರು. "ಅವರೆಲ್ಲ ಸ್ವಲ್ಪ ಬಲವಂತ ಮಾಡಿ 'ನೀವು ಹೋಗಬಾರದು' ಅಂತ ಹೇಳಿದ್ದರೆ ನಾನೇನು ಹೋಗುತ್ತಿದ್ದೆನೆ?" ಎಂದರು. ಉತ್ಸವವಾದ ಎರಡು ಮೂರು ದಿನಗಳ ಬಳಿಕ ಒಬ್ಬ ತರುಣಭಕ್ತ ಅವರ ದರ್ಶನಕ್ಕಾಗಿ ಬಂದ. ನೋಡುತ್ತಾನೆ—ಶ್ರೀರಾಮಕೃಷ್ಣರು ಗಂಟಲಿಗೆ ಔಷಧಿ ಲೇಪಿಸಿಕೊಂಡು ಗುಮ್ಮೆಂದು ಕುಳಿತಿದ್ದಾರೆ; ಪುಟ್ಟ ಹುಡುಗನೊಬ್ಬನನ್ನು ತಂಟೆ ಮಾಡಿದ್ದಕ್ಕಾಗಿ ಶಿಕ್ಷಿಸಲು ಒಂದು ಕಡೆ ಕಟ್ಟಿಹಾಕಿಬಿಟ್ಟರೆ ಹೇಗೋ ಹಾಗೆ ಕುಳಿತಿದ್ದಾರೆ. ಒರಳುಕಲ್ಲಿಗೆ ಕಟ್ಟಿಸಿಕೊಂಡ ಬಾಲಕೃಷ್ಣನಂಥ ಮುಗ್ಧ ಮುನಿಸು ಅವರ ಮುಖದಲ್ಲಿ! ಈತ ಅವರಿಗೆ ಪ್ರಣಾಮ ಮಾಡಿ ಕೇಳಿದ:

"ಸ್ವಾಮಿ, ಏನಾಯಿತು?"

ಶ್ರೀರಾಮಕೃಷ್ಣರು ತಗ್ಗು ಸ್ವರದಲ್ಲಿ ಉತ್ತರಿಸಿದರು: "ಇಗೋ ನೋಡು, ಇದರ (ಗಂಟಲ) ನೋವು ಹೆಚ್ಚಾಗಿದೆ. ಜಾಸ್ತಿ ಮಾತಾಡಬಾರದು ಅಂತ ಹೇಳಿಬಿಟ್ಟಿದ್ದಾರೆ ಡಾಕ್ಟರು."

ಭಕ್ತ: "ಓ, ಹೌದು. ಮೊನ್ನೆ ದಿನ ನೀವು ಪಾನಿಹಾಟಿಯ ಜಾತ್ರೆಗೆ ಹೋಗಿದ್ದಿರಿ ಅಂತ ಕೇಳಿದೆ. ಅದಕ್ಕೇ ನೋವು ಹೆಚ್ಚಾಗಿರಬೇಕು."

ಶ್ರೀರಾಮಕೃಷ್ಣರು (ಬಾಲಕನಂತೆ ನಸುಮುನಿಸಿನಿಂದ): "ಹೌದು ಮತ್ತೆ! ಮೇಲೆ ನೀರು, ಕೆಳಗೆ ನೀರು; ಆಕಾಶದಲ್ಲಿ ಮಳೆ, ದಾರಿಯಲ್ಲಿ ಕೆಸರು! ಅಂಥಾ ಜಾಗಕ್ಕೆ ರಾಮ (ರಾಮಚಂದ್ರ ದತ್ರ) ನನ್ನನ್ನು ಕರೆದುಕೊಂಡು ಹೋಗಿ ದಿನವೆಲ್ಲ ಕುಣಿದಾಡಿಸಿ

ತಂದ. ಅವನು ಡಾಕ್ಟರ್‌ಪರೀಕ್ಷೆ ಪಾಸು ಮಾಡಿದವನು.* ಆತ 'ನೀವು ಹೋಗಲೇ ಬಾರದು' ಅಂತ ತಡೆದಿದ್ದರೆ ನಾನೇನು ಹೋಗುತ್ತಿದ್ದೆನೆ ?"

ಭಕ್ತ: "ನಿಜ ಸ್ವಾಮಿ. ರಾಮ ಮಾಡಿದ್ದು ಬಹಳ ಅನ್ಯಾಯವಾಯಿತು. ಹೋಗಲಿ, ಆಗುವುದು ಆಗಿಹೋಯಿತು. ಇನ್ನು ಮೇಲೆ ಕೆಲವು ದಿನ ಎಚ್ಚರಿಕೆ ಯಿಂದಿದ್ದು ವಿಶ್ರಾಂತಿ ಪಡೆದರೆ ಕಾಯಿಲೆ ವಾಸಿಯಾಗಿಬಿಡುತ್ತದೆ."

ಶ್ರೀರಾಮಕೃಷ್ಣರು (ಆನಂದಿತರಾಗಿ): "ಹ್ಞಾ, ಸರಿ ಸರಿ ! ಆದರೆ ಹೀಗಾಗಿದೆಯಲ್ಲ ಅಂತ ನಾನು ಪೂರ್ತಿ ಬಾಯಿಮುಚ್ಚಿಕೊಂಡು ಇದ್ದುಬಿಡುವುದಕ್ಕಾಗುತ್ತದೆಯೆ ? ಈಗ ನೀನು ಬಹಳ ದೂರದಿಂದ ಬಂದಿದ್ದೀಯೆ, ನಿನ್ನ ಜೊತೆ ನಾನೇನೂ ಮಾತಾಡದೆ ಇದ್ದು ಬಿಟ್ಟರೆ ಸರಿಯಾದೀತೆ ?"

ಭಕ್ತ: "ಅಯ್ಯೋ ! ಅದೇನೂ ಪರವಾಗಿಲ್ಲ. ನಿಮ್ಮನ್ನು ಕಂಡರೇ ಸಾಕು, ನಮಗೆ ಆನಂದ. ಇನ್ನು ನೀವ್ಯಾಕೆ ಮಾತಾಡಬೇಕು ? ನೀವು ಮಾತಾಡಬೇಕಾಗಿಯೇ ಇಲ್ಲ. ನಿಮ್ಮ ಆರೋಗ್ಯ ಸರಿಯಾಗಿಬಿಟ್ಟರೆ ಆಮೇಲೆ ನಾವೆಲ್ಲ ನಿಮ್ಮ ಮಾತುಗಳನ್ನು ಬೇಕೆಂಬಷ್ಟು ಕೇಳಬಹುದು."

ಆದರೆ ಶ್ರೀರಾಮಕೃಷ್ಣರು ಅವನ ವಿಶ್ವಾಸದ ಆಗ್ರಹವನ್ನು ತಳ್ಳಿಹಾಕಿ, ವೈದ್ಯರ ಆಕ್ಷೇಪಣೆಯನ್ನೂ ತಮ್ಮ ಕಷ್ಟವನ್ನೂ ಮರೆತು, ಎಂದಿನಂತೆಯೇ ಪ್ರೀತಿಯಿಂದ ಮಾತ ನಾಡಿಸಿ, ಬೋಧನೆಗಳನ್ನಿತ್ತು ಕಳಿಸಿಕೊಟ್ಟರು.

ದಿನಗಳು ಉರುಳುತ್ತಿವೆ. ಶ್ರೀರಾಮಕೃಷ್ಣರಿಗೆ ಗಂಟಲ ಬಾಧೆ ಪ್ರಾರಂಭವಾಗಿ ಸುಮಾರು ಮೂರು ತಿಂಗಳಾಗಿಹೋಗಿವೆ. ನಾಲ್ಕೈದು ವಾರಗಳಿಂದಲೂ ಒಳ್ಳೆಯ ಡಾಕ್ಟರಿಂದ ಚಿಕಿತ್ಸೆ ನಡೆಯುತ್ತಿದ್ದರೂ ಇನ್ನೂ ಯಾವುದೇ ಸುಧಾರಣೆ ಕಂಡುಬರುತ್ತಿಲ್ಲ. ಇತರ ದಿನಗಳಲ್ಲಿ ನೋವು ಸ್ವಲ್ಪ ಕಡಿಮೆಯಾದಂತಿದ್ದರೂ ಏಕಾದಶಿ ಹುಣ್ಣಿಮೆ ಅಮಾವಾಸ್ಯೆ ಮೊದಲಾದ ವಿಶೇಷ ದಿನಗಳಲ್ಲಿ ಅದು ಹೆಚ್ಚಾಗಿಬಿಡುತ್ತಿತ್ತು. ಆಗ, ಅನ್ನ-ವ್ಯಂಜನಗಳಾಗಲಿ, ಗಟ್ಟಿಯಾದ ತಿಂಡಿ ತಿನಿಸುಗಳಾಗಲಿ ಗಂಟಲೊಳಗೆ ಇಳಿಯು ತ್ತಿರಲಿಲ್ಲ. ಆದ್ದರಿಂದ ಕೇವಲ ಹಾಲನ್ನು ಇಲ್ಲವೆ ರವೆಗಂಜಿಯನ್ನಷ್ಟೇ ತಿಂದು ಆ ದಿನ ಗಳನ್ನು ಕಳೆಯುತ್ತಿದ್ದರು.

ಚಿಕಿತ್ಸೆಗೆ ಬಗ್ಗದೆ ಗಂಟಲ ನೋವು ಹೆಚ್ಚುತ್ತಲೇ ಇರುವುದನ್ನು ಕಂಡ ಡಾಕ್ಟರರು ಮತ್ತೆಮತ್ತೆ ಪರೀಕ್ಷೆ ಮಾಡಿ ಅದು Clergyman's sore–throat (ಧರ್ಮೋಪದೇಶಕರ ಗಂಟಲಹುಣ್ಣು) ಎಂಬ ರೋಗವೆಂದು ಗುರುತಿಸಿದರು. ಎಂದರೆ, ಹಗಲಿರುಳೂ ಜನ ರೊಂದಿಗೆ ಸಂಭಾಷಿಸುತ್ತ, ಬೋಧನೆ ನೀಡುತ್ತ, ಕಂಠಕ್ಕೆ ಅತಿಯಾದ ಶ್ರಮ ಕೊಟ್ಟಿದ್ದ ರಿಂದ ಅವರಿಗೆ ಈ ರೋಗವುಂಟಾಗಿದೆ ಎಂದು ಡಾಕ್ಟರರು ಅಭಿಪ್ರಾಯಪಟ್ಟು, ಔಷಧ-ಪಥ್ಯಾದಿಗಳ ವಿಷಯದಲ್ಲಿ ನಿರ್ದಿಷ್ಟ ಸೂಚನೆಗಳನ್ನಿತ್ತರು. ಶ್ರೀರಾಮಕೃಷ್ಣರು ಡಾಕ್ಟರ ಸೂಚನೆಗಳೆಲ್ಲವನ್ನೂ ಪಾಲಿಸುತ್ತ ಬಂದರು—ಎರಡನ್ನು ಮಾತ್ರ ಬಿಟ್ಟು ! ಒಂದು, ಸಮಾಧಿಸ್ಥಿತಿಗೇರುವ ವಿಷಯದಲ್ಲಿ; ಮತ್ತೊಂದು, ಜನರೊಂದಿಗೆ ಮಾತ ನಾಡುವ ವಿಷಯದಲ್ಲಿ. ಯಾವುದಾದರೂ ಭಗವತ್ಪ್ರಸಂಗ ಒದಗಿಬಂದರೆ, ಭಾವ

---

*ರಾಮಚಂದ್ರ ದತ್ತ ವೈದ್ಯದಲ್ಲಿ ಪದವಿ ಪಡೆದಿದ್ದರೂ ವೈದ್ಯವೃತ್ತಿಯನ್ನು ನಡೆಸುತ್ತಿರಲಿಲ್ಲ. ಆತ ಮೆಡಿಕಲ್ ಕಾಲೇಜಿನಲ್ಲಿ ರಸಾಯನ ಶಾಸ್ತ್ರಜ್ಞ (Chemist)ನಾಗಿದ್ದ.

ಪ್ರಚೋದನಗೊಳಿಸುವ ಮಾತೋ ಹಾಡೋ ಕಿವಿಗೆ ಬಿದ್ದರೆ, ತಮ್ಮ ಮನಸ್ಸನ್ನು ಸಮಾಧಿಸ್ಥಿತಿಗೇರದಂತೆ ತಡೆದುಕೊಳ್ಳಲು ಅವರಿಗೆ ಸಾಧ್ಯವೇ ಆಗುತ್ತಿರಲಿಲ್ಲ. ಹಾಗೆಯೇ, ಸಂಸಾರಪಾಶದಲ್ಲಿ ಸಿಲುಕಿಕೊಂಡ ಜನರು ಜ್ಞಾನ ಭಕ್ತಿ ಶಾಂತಿಗಳನ್ನರಸಿ ಬಂದಾಗ ಕೃಪಾವಶರಾಗಿ ಎಂದಿನಂತೆಯೇ ಅವರನ್ನೆಲ್ಲ ಪ್ರೀತಿಯಿಂದ ಬರಮಾಡಿಕೊಂಡು ತಮ್ಮ ಅಮೃತವಾಣಿಯನ್ನು ನಿರ್ವಂಚನೆಯಿಂದ ಧಾರೆಯೆರೆಯತೊಡಗುತ್ತಿದ್ದರು.

ಹೋಗಲಿ, ಅವರ ದರ್ಶನಾರ್ಥಿಗಳ ಸಂಖ್ಯೆಗಾದರೂ ಮಿತಿಯಿದೆಯೆ? ಇಲ್ಲ! ಹಿಂದಿನ ಭಕ್ತರಲ್ಲದೆ ಪ್ರತಿದಿನವೂ ಸುಮಾರು ಐದಾರು ಜನರಾದರೂ ಹೊಸಬರು ಬರುತ್ತಿದ್ದರು. ಹಿಂದೆ ೧೮೭೫ರಲ್ಲಿ ಕೇಶವಚಂದ್ರ ಸೇನ ಅವರ ಸಂಪರ್ಕಕ್ಕೆ ಬಂದಾಗ ಪ್ರಾರಂಭವಾದದ್ದು ಈ ಭಕ್ತರ ಪ್ರವಾಹ. ಅದು ಇಂದಿನವರೆಗೂ ಅವ್ಯಾಹತವಾಗಿ ಸಾಗುತ್ತಲೇ ಇತ್ತು. ಆಧ್ಯಾತ್ಮಿಕತೃಷೆಯಿಂದ ಧಾವಿಸುತ್ತಿದ್ದ ಈ ಜನರಿಗೆ ಸಾಂತ್ವನವೀಯಬೇಕೆಂಬ ಉತ್ಕಟ ಕರುಣೆಯ ದೆಸೆಯಿಂದಾಗಿ ಶ್ರೀರಾಮಕೃಷ್ಣರಿಗೆ ಈ ಹನ್ನೊಂದು ವರ್ಷಗಳಿಂದಲೂ ನಿಯತವಾದ ಸ್ನಾನ ಊಟ ವಿಶ್ರಾಂತಿಗಳಿಗೆ ಅಡ್ಡಿಯಾಗುತ್ತಲೇ ಇತ್ತು. ಅಲ್ಲದೆ ಭಾವಮುಖದಲ್ಲಿ ನೆಲಸಿದ್ದು, ಸದಾ ಭಾವಮಯರಾಗಿಯೇ ಇರುತ್ತಿದ್ದ ಅವರಿಗೆ ನಿದ್ರೆ ಅಗತ್ಯಕ್ಕಿಂತಲೂ ಕಡಿಮೆಯಾಗಿಬಿಟ್ಟಿತ್ತು. ರಾತ್ರಿ ಯಾವಾಗಲಾದರೂ ಅವರೊಂದಿಗೆ ಮಲಗುತ್ತಿದ್ದ ಶಿಷ್ಯರು ಅವರ ವರ್ತನೆಯನ್ನು ಕಂಡು ಆಶ್ಚರ್ಯಗೊಳ್ಳುತ್ತಿದ್ದರು. ಅವರು ಸುಮಾರು ಹನ್ನೊಂದು ಗಂಟೆಗೆ ಮಲಗಿದರೆ, ಮತ್ತೆ ಸ್ವಲ್ಪ ಹೊತ್ತಿಗೆಲ್ಲ ಎದ್ದು ಭಾವಾವೇಶದಿಂದ ಅತ್ತಿತ್ತ ಅಲೆದಾಡುವುದನ್ನು ಶಿಷ್ಯರು ನೋಡುತ್ತಿದ್ದರು. ಕೆಲವೊಮ್ಮೆ ಬಾಗಿಲು ತೆರೆದುಕೊಂಡು ಹೊರಗೆ ಹೋಗುತ್ತಿದ್ದರು; ಇನ್ನು ಕೆಲವೊಮ್ಮೆ ಹಾಸಿಗೆಯ ಮೇಲೆ ನಿಶ್ಚಲರಾಗಿ ಮಲಗಿದ್ದರೂ ಪೂರ್ತಿ ಎಚ್ಚರವಾಗಿರುತ್ತಿದ್ದರು. ಹೀಗೆ ರಾತ್ರಿ ಮೂರ್ನಾಲ್ಕು ಬಾರಿ ಹಾಸಿಗೆ ಬಿಟ್ಟೇಳುತ್ತಿದ್ದರೂ, ಮುಂಜಾನೆ ನಾಲ್ಕು ಗಂಟೆ ಹೊಡೆಯುತ್ತಲೇ ಎದ್ದು, ಅರುಣೋದಯವಾಗುವುದನ್ನೇ ನಿರೀಕ್ಷಿಸುತ್ತ ಭಗವಂತನ ನಾಮಸ್ಮರಣೆ-ಕೀರ್ತನೆಗಳಲ್ಲಿ ತೊಡಗುತ್ತಿದ್ದರು. ಒಂದೆಡೆ, ದಿನವೆಲ್ಲ ಮಾತುಕತೆ ನಡೆಸಿದ ಪರಿಶ್ರಮ; ಇನ್ನೊಂದೆಡೆ ರಾತ್ರಿ ಅಗತ್ಯವಾದ ನಿದ್ರೆಗೂ ಅವಕಾಶವಿಲ್ಲದೆ ಉಂಟಾದ ಆಯಾಸ—ಇವೆರಡರ ಪರಿಣಾಮವಾಗಿ ನಡುವಯಸ್ಸಿನಲ್ಲೇ ಶರೀರ ಸೊರಗುತ್ತ ಬಂದುದರಲ್ಲೇನು ಆಶ್ಚರ್ಯ?

ಸುಮಾರು ೧೮೮೪ರ ಅಂತ್ಯದ ವೇಳೆಗೆ ಶ್ರೀರಾಮಕೃಷ್ಣರ ಅಭೂತಪೂರ್ವ ಭಾವ ಭಕ್ತಿ-ಸಮಾಧಿ, ಅಮೃತೋಪಮ ವಾಣಿ ಇವುಗಳ ವಿಷಯ ಕಲ್ಕತ್ತದ ಜನರಲ್ಲಿ ಬಾಯಿಂದ ಬಾಯಿಗೆ ಹರಡಿಬಿಟ್ಟಿತ್ತು. ಅವರನ್ನು ಕಣ್ಣಾರೆ ಕಾಣಬೇಕೆಂಬ ತವಕದಿಂದ ಜನ ನಿತ್ಯವೂ ತಂಡತಂಡವಾಗಿ ಬರುತ್ತಿದ್ದರು. ಒಮ್ಮೆ ಬಂದು ದರ್ಶನ ಪಡೆದವರಲ್ಲಿ ಅನೇಕರು ಮೋಹಿತರಾಗಿ ಮತ್ತೆಮತ್ತೆ ಬರುತ್ತಿದ್ದರು. ಆದರೆ ೧೮೮೫ರ ಜುಲೈಯಲ್ಲಿ ಶ್ರೀರಾಮಕೃಷ್ಣರ ಗಂಟಲ ಬೇನೆ ಪ್ರಾರಂಭವಾಗುವ ವೇಳೆಗೆ. ಹಾಗೆ ಒಟ್ಟು ಎಷ್ಟು ಜನ ಬರಲಾರಂಭಿಸಿದ್ದರು ಎಂಬುದರ ಕಲ್ಪನೆ ಯಾರಿಗೂ ಇರಲಿಲ್ಲ. ಏಕೆಂದರೆ ಆ ಜನರೆಲ್ಲರೂ ಒಂದೇ ಸ್ಥಳದಲ್ಲಿ ಒಟ್ಟುಗೂಡುವ ಅವಕಾಶ ಒದಗಿಬಂದಿರಲಿಲ್ಲ. ನಿಜಕ್ಕೂ ಹಾಗಾಗದಿದ್ದುದೇ ಒಂದು ರೀತಿಯಲ್ಲಿ ಒಳ್ಳೆಯದಾಯಿತು ಎನ್ನಬೇಕು. ಏಕೆಂದರೆ, "ಯಾವಾಗ ಬಹುಸಂಖ್ಯೆಯ ಜನರು ಇದನ್ನು (ತಮ್ಮನ್ನು) ದೇವರೆಂಬಂತೆ ಕಂಡು

ಭಕ್ತಿ-ಶ್ರದ್ಧೆ ತೋರಲಾರಂಭಿಸುತ್ತಾರೋ ಆಗ ಈ ಶರೀರ ಮತ್ತೆ ಹೆಚ್ಚು ದಿನ ಬಾಳುವುದಿಲ್ಲ" ಎಂದು ಶ್ರೀರಾಮಕೃಷ್ಣರು ತಮ್ಮ ಅಂತರಂಗ ಭಕ್ತರೆದುರು ಅನೇಕ ಬಾರಿ ಹೇಳಿದ್ದರು. ಆದ್ದರಿಂದ ಭಕ್ತಸಮೂಹದ ಗಾತ್ರ ಆದಾಗಲೇ ಆದೆಷ್ಟು ದೊಡ್ಡದಾಗಿ ಬಿಟ್ಟಿದೆ ಎಂಬುದು ಒಂದು ವೇಳೆ ತಿಳಿದುಬಂದಿದ್ದರೆ, ಆ ಅಂತರಂಗ ಭಕ್ತರೆಲ್ಲ ಕಳವಳಕ್ಕೀಡಾಗುತ್ತಿದ್ದುದು ಖಂಡಿತ.

ತಮ್ಮ ದೇಹ ದುರ್ಬಲವಾಗುತ್ತಿರುವುದರ ಕುರಿತಾಗಿ ಶ್ರೀರಾಮಕೃಷ್ಣರು ಎಷ್ಟೋ ಸೂಚನೆಗಳನ್ನು ಕೊಟ್ಟಿದ್ದರು. ಅವರು ಕೆಲವೊಮ್ಮೆ ಭಾವಸ್ಥಿತಿಯಲ್ಲಿ ಜಗಜ್ಜನನಿಯೊಂದಿಗೆ ಆಡುತ್ತಿದ್ದ ಪ್ರೇಮಕಲಹದಲ್ಲೂ ಆ ಸೂಚನೆಯನ್ನು ಕಾಣಬಹುದಾಗಿತ್ತು. ಉದಾಹರಣೆಗೆ, ಜನಸಂದಣಿ ದಿನೇ ದಿನೇ ಹೆಚ್ಚುತ್ತಿರುವುದನ್ನು ಕಂಡು ಒಮ್ಮೆ ಅವರು ಆಕೆಯನ್ನು ಕುರಿತು, "ನೀನೇಕೆ ಇಷ್ಟೊಂದು ಜನರನ್ನು ಕಳಿಸುತ್ತಿರುವುದು ಇಲ್ಲಿಗೆ? ದೊಡ್ಡ ಸಂತೆಯನ್ನೇ ಕೂಡಿಸಿಬಿಟ್ಟಿದ್ದೀಯಲ್ಲ? ಸ್ನಾನ ಊಟ ಮಾಡುವುದಕ್ಕೂ ಪುರುಸೊತ್ತು ಸಿಗುತ್ತಿಲ್ಲ! ಮೊದಲೇ ಇದೊಂದು (ತಮ್ಮ ಶರೀರ) ಒಡಕಲು ಡೋಲು. ಇನ್ನು, ಹಗಲೂ ರಾತ್ರಿ ಬಡಿದರೆ ಇದು ಮತ್ತಿನ್ನೆಷ್ಟು ದಿನ ಬಾಳೀತು!" ಎಂದು ಮುನಿಸುಗೊಂಡು ಹೇಳುವುದನ್ನು ಒಬ್ಬ ಭಕ್ತ ಕಂಡಿದ್ದ. ಇನ್ನೊಂದು ದಿನ ಕೆಲವು ಭಕ್ತರನ್ನುದ್ದೇಶಿಸಿ ಅವರೆನ್ನುತ್ತಾರೆ: "ಇವತ್ತು ತಾಯಿಯನ್ನು ಕೇಳಿಕೊಂಡೆ—'ವಿಜಯ, ಕೇದಾರ, ಗಿರೀಶ, ರಾಮ, ಮಾಸ್ಟರ್ ಮುಂತಾದ ಭಕ್ತರಿಗೆ ಸ್ವಲ್ಪ ಶಕ್ತಿ ಕೊಡು; ಹೊಸದಾಗಿ ಬರುವವರು ಮೊದಲು ಅವರಿಂದ ಸ್ವಲ್ಪ ಶಿಕ್ಷಣ ಪಡೆದುಕೊಂಡು ಬರಲಿ' ಅಂತ."

ತಮ್ಮ ದೇಹಾವಸಾನದ ಸಮಯವನ್ನು ಕುರಿತೂ ಶ್ರೀರಾಮಕೃಷ್ಣರು ಕೆಲವು ಸೂಚನೆಗಳನ್ನಿತ್ತಿದ್ದರು. ಆದರೆ ಶಿಷ್ಯರು ಯಾರೂ ಅದನ್ನು ಗ್ರಹಿಸುವ ಮನಸ್ಥಿತಿಯಲ್ಲೇ ಇರಲಿಲ್ಲ. ಗಂಟಲ ಬೇನೆ ಶುರುವಾಗುವುದಕ್ಕೆ ನಾಲ್ಕೈದು ವರ್ಷ ಮೊದಲೇ, ತಾವಿನ್ನೂ ಆರೋಗ್ಯದಿಂದಿದ್ದಾಗಲೇ, ಅವರು ತಮ್ಮ ಅವತಾರಸಮಾಪ್ತಿಗೆ ಸಂಬಂಧಿಸಿದಂತೆ ಶಾರದಾದೇವಿಯವರಿಗೆ ಮೂರು ಸ್ಪಷ್ಟವಾದ ಮುನ್ಸೂಚನೆಗಳನ್ನು ತಿಳಿಸಿದ್ದರು:

"ಯಾವಾಗ ನಾನು ಕಂಡಕಂಡವರ ಕೈಯಿಂದ ಊಟ ಮಾಡುತ್ತೇನೋ, ಕಲ್ಕತ್ತದಲ್ಲೇ ರಾತ್ರಿಯನ್ನು ಕಳೆಯುತ್ತೇನೋ, ಮತ್ತು ನನ್ನ ಪಾಲಿನ ಆಹಾರದಲ್ಲಿ ಒಂದು ಪಾಲನ್ನು ಬೇರೆ ಯಾರಿಗಾದರೂ ಕೊಟ್ಟು ಉಳಿದುದನ್ನು ತಿನ್ನುತ್ತೇನೋ, ಆಗ ತಿಳಿದುಕೊ, ನನ್ನ ದೇಹತ್ಯಾಗಕ್ಕೆ ಇನ್ನು ಹೆಚ್ಚು ತಡವಿಲ್ಲ ಅಂತ" ಎಂದು. ಶ್ರೀರಾಮಕೃಷ್ಣರು ಇದುವರೆಗೂ—ಎಂದರೆ ಸುಮಾರು ತಮ್ಮ ನಲವತ್ತೊಂಬತ್ತನೇ ವಯಸ್ಸಿನವರೆಗೂ ಈ ಮೂರೂ ವಿಷಯಗಳಲ್ಲಿ ನಿಯಮಪಾಲನೆ ಮಾಡಿಕೊಂಡು ಬಂದಿದ್ದರು: ಯಾರೆಂದರವರು ಮಾಡಿದ-ನೀಡಿದ ತಿನಿಸುಗಳನ್ನು ತಿನ್ನುತ್ತಿರಲಿಲ್ಲ. ಕಲ್ಕತ್ತಕ್ಕೆ ಹೋಗಿದ್ದರೆ, ರಾತ್ರಿ ಯಾರ ಮನೆಯಲ್ಲೂ ಉಳಿದುಕೊಳ್ಳುತ್ತಿರಲಿಲ್ಲ. ಎಷ್ಟೇ ಹೊತ್ತಾದರೂ ಸರಿಯೆ, ದಕ್ಷಿಣೇಶ್ವರಕ್ಕೆ ವಾಪಸು ಬಂದುಬಿಡುತ್ತಿದ್ದರು. ಮತ್ತು ಅವರು ತಿನ್ನುವ ಆಹಾರದಿಂದ ಒಂದು ಸ್ವಲ್ಪವನ್ನು ಯಾರಾದರೂ ಮೊದಲೇ ಸೇವಿಸಿದ್ದರೆ ಅವರಿಗೆ ಅದನ್ನು ತಿನ್ನಲು ಸಾಧ್ಯವೇ ಇರಲಿಲ್ಲ.

ಆದರೆ ಈಚೀಚೆಗೆ ಆ ಮೂರೂ ನಿಯಮಗಳನ್ನು ಅವರು ತಾವಾಗಿಯೇ ಉಲ್ಲಂಘಿಸಿಬಿಟ್ಟಿದ್ದರು. ಕಲ್ಕತ್ತದ ನಾನಾ ಭಕ್ತರ ಮನೆಗಳಲ್ಲಿ, ಅನ್ನವೊಂದನ್ನು ಬಿಟ್ಟು

ಉಳಿದ ತಿಂಡಿ ತಿನಿಸುಗಳನ್ನೆಲ್ಲ ನಿರ್ಭಿಡೆಯಿಂದ ಸ್ವೀಕರಿಸುತ್ತಿದ್ದರು. ಕೆಲವೊಮ್ಮೆ ಬಲರಾಮನ ಮನೆಗೆ ಹೋಗಿದ್ದವರು ಇದ್ದಕ್ಕಿದ್ದಂತೆ ರಾತ್ರಿಗಳನ್ನು ಅಲ್ಲೇ ಕಳೆಯತೊಡಗಿದ್ದರು. ಈಚೆಗೊಮ್ಮೆ ನರೇಂದ್ರನಿಗೆ ತುಂಬ ಅಜೀರ್ಣವಾಗಿ, ಅವನು ಆಹಾರದಲ್ಲಿ ಕಟ್ಟುನಿಟ್ಟಾದ ಪಥ್ಯ ಮಾಡಬೇಕಾಗಿ ಬಂದಿತ್ತು. ತಾನು ದಕ್ಷಿಣೇಶ್ವರಕ್ಕೆ ಹೋದರೆ ಅಲ್ಲಿ ತನಗೆ ಪಥ್ಯದಡಿಗೆ ಮಾಡಿಹಾಕುವ ತೊಂದರೆಯೇಳುತ್ತದೆಯೆಂಬ ಶಂಕೆಯಿಂದ ಅವನು ಎಷ್ಟೋ ದಿನ ಬಂದಿರಲೇ ಇಲ್ಲ. ಅವನನ್ನು ನೋಡದೆ ಕಾತರರಾದ ಶ್ರೀರಾಮಕೃಷ್ಣರು ಒಂದು ದಿನ ಬೆಳಗ್ಗೆ ತಾವೇ ಕಲ್ಕತ್ತಕ್ಕೆ ಹೋಗಿ ಅವನನ್ನು ತಮ್ಮೊಡನೆ ಕರೆತಂದರು. ಮತ್ತು ತಮಗಾಗಿ ತಯಾರಾಗಿದ್ದ ಅನ್ನ-ಸಾರಿನಲ್ಲಿ ಸ್ವಲ್ಪ ಭಾಗವನ್ನು ಅವನಿಗೆ ಉಣಿಸಿ, ಅನಂತರ ಅದೇ ಅಡಿಗೆಯನ್ನು ತಾವು ಉಣ್ಣಲು ಸಿದ್ಧರಾದರು. ಇದನ್ನು ಕಂಡು ಶಾರದಾದೇವಿಯವರು ಗಾಬರಿಗೊಂಡು, "ಇದೇಕೆ ! ನಿಮಗಾಗಿ ಬೇರೆ ಅಡಿಗೆ ಮಾಡುತ್ತೇನೆ" ಎಂದರು. ಆದರೆ ಶ್ರೀರಾಮಕೃಷ್ಣರು, "ಅದೇನೂ ಬೇಡ. ನರೇಂದ್ರನಿಗೆ ಅಗ್ರಭಾಗ ಕೊಟ್ಟದ್ದರಿಂದ ನನ್ನ ಮನಸ್ಸಿನಲ್ಲಿ ಯಾವುದೇ ಬಗೆಯ ಕರಕರೆ-ಶಂಕೆ ಉಂಟಾಗಿಲ್ಲ. ಆದ್ದರಿಂದ ದೋಷವೇನೂ ಆದಂತಾಗಲಿಲ್ಲ ಬಿಡು. ನಾನು ಇದನ್ನೇ ತಿನ್ನುತ್ತೇನೆ" ಎಂದುತ್ತರಿಸಿ ಅದನ್ನೇ ತಿಂದುಬಿಟ್ಟರು. ಶಾರದಾದೇವಿಯವರು ಪತಿಯ ಮಾತಿಗೇನೂ ಬದಲು ನುಡಿಯಲಿಲ್ಲ. ಆದರೆ ಹಿಂದೆ ಶ್ರೀರಾಮಕೃಷ್ಣರೇ ಆಡಿದ್ದ ಭವಿಷ್ಯವಾಣಿ ನೆನಪಿಗೆ ಬಂದು ಅವರ ಮನಸ್ಸನ್ನು ಯಾವುದೋ ವಿಷಣ್ಣತೆ ಆವರಿಸಿತು.

ತಮ್ಮ ಜೀವಿತಾವಧಿಯ ಅಂತ್ಯಭಾಗದಲ್ಲಿ ತಾವು ಕೇವಲ ಪಾಯಸಾನ್ನದ (ರವೆ ಮೊದಲಾದುವುಗಳ ಸಿಹಿಗಂಜಿ) ಮೇಲೆ ಜೀವಿಸಬೇಕಾಗುತ್ತದೆ ಎಂಬ ಸಂಗತಿ ಶ್ರೀರಾಮಕೃಷ್ಣರಿಗೆ ಬಹಳ ಹಿಂದೆಯೇ ತಿಳಿದುಬಂದಿತ್ತು. ಈಚೆಗೆ, ಎಂದರೆ ರೋಗ ಕಾಣಿಸಿಕೊಳ್ಳುವ ಸ್ವಲ್ಪ ಮೊದಲು, ಒಂದು ದಿನ ಶಾರದಾದೇವಿಯವರು ತಮಗಾಗಿ ಊಟ ತಂದಾಗ ಭಾವಾವಸ್ಥೆಯಲ್ಲಿದ್ದ ಶ್ರೀರಾಮಕೃಷ್ಣರು ಹಠಾತ್ತನೆ, "ಇನ್ನು ಮುಂದೆ ನಾನು ಬೇರೇನೂ ತಿನ್ನಲಾರೆ, ಗಂಜಿಯನ್ನು ಮಾತ್ರ ತಿನ್ನಬಹುದು" ಎಂದು ಉದ್ಗರಿಸಿದರು. ಶಾರದಾದೇವಿಯವರು ಬೆಚ್ಚಿಬಿದ್ದರು. ಇವರು ಹೀಗೇಕೆ ಹೇಳಿದರೆಂದು ತಿಳಿಯದೆ ಆಶ್ಚರ್ಯವಾಯಿತು. ಆದರೆ ಪತಿದೇವನ ಶ್ರೀಮುಖದಿಂದ ಹೊರಬಿದ್ದ ಮಾತು ಎಂದಿಗೂ ಸುಳ್ಳಾಗದು ಎಂದು ತಿಳಿದದ್ದರಿಂದ ಕೂಡಲೇ ಕೇಳಿದರು, "ಅದೇಕೆ ! ಅನ್ನ-ಸಾರು ಅಡಿಗೆ ಮಾಡುತ್ತೇನೆ. ಗಂಜಿಯೆಲ್ಲ ಏಕೆ ?" ಆದರೆ ಶ್ರೀರಾಮಕೃಷ್ಣರು ಭಾವಾವಸ್ಥೆಯಲ್ಲೇ, "ಇಲ್ಲ, ಗಂಜಿ ಮಾತ್ರ" ಎಂದು ಮತ್ತೆ ನುಡಿದರು. ಕೆಲವೇ ದಿನಗಳಲ್ಲಿ ಅವರ ಗಂಟಲಲ್ಲಿ ಹುಣ್ಣಾದ್ದರಿಂದ ಹಾಗೆಯೇ ಮಾಡಬೇಕಾಯಿತು.

ಸುಮಾರು ಇದೇ ಸಮಯದಲ್ಲಿ ಒಂದು ದಿನ ಗೋಪಾಲೇರ್ ಮಾ ದಕ್ಷಿಣೇಶ್ವರದಲ್ಲಿ ಶ್ರೀರಾಮಕೃಷ್ಣರಿಗಾಗಿ ಅಡಿಗೆ ಮಾಡಿದ್ದಳು. ಶ್ರೀರಾಮಕೃಷ್ಣರು ಊಟಕ್ಕೆ ಕುಳಿತರು. ಅದೇಕೋ ಅಂದು ಅನ್ನ ಸರಿಯಾಗಿ ಬೇಯದೆ ಗಟ್ಟಿಗಟ್ಟಿಯಾಗಿತ್ತು. ಅವಳು ಕೈಯಾರೆ ತಯಾರಿಸಿದ ಅಡಿಗೆ ಅಥವಾ ತಿಂಡಿತೀರ್ಥಗಳೆಂದರೆ ಅವರಿಗೆ ಅದೆಷ್ಟು ಪ್ರಿಯವೆಂಬುದನ್ನು ನಾವು ಬಲ್ಲೆವು. ಆದರೆ ಆ ದಿನ ಮಾತ್ರ ಶ್ರೀರಾಮಕೃಷ್ಣರು ಅಸಮಾಧಾನಗೊಂಡು, "ಇಂಥ ಅನ್ನವನ್ನು ನನ್ನಿಂದ ತಿನ್ನಲಾದೀತೆ ? ಇನ್ನೆಂದಿಗೂ ನಾನು ಅವಳ ಕೈಯಿಂದ ಅನ್ನ ತಿನ್ನಲಾರೆ" ಎಂದುಬಿಟ್ಟರು. ಅದನ್ನು ಕೇಳಿಸಿಕೊಂಡವರು, ಮುಂದೆ ಹೀಗೆ ಮಾಡದಂತೆ ಆಕೆಗೆ ಎಚ್ಚರಿಕೆ ಕೊಡುವುದಕ್ಕಾಗಿ ಶ್ರೀರಾಮಕೃಷ್ಣರು ಹೀಗೆ ಆಕ್ಷೇಪಿ

ಸುತ್ತಿದ್ದಾರೆ ಅಷ್ಟೆ ಎಂದು ಭಾವಿಸಿದರು. 'ಗೋಪಾಲೇರ್ ಮಾಳ ಬಗ್ಗೆ ಠಾಕೂರರ ಪ್ರೀತ್ಯಾದರಕ್ಕೆ ಅಳವಿದೆಯೆ? ಅಂಥವಳ ಕೈಯಿಂದ ಅವರಿನ್ನು ಅನ್ನ ತಿನ್ನುವುದಿಲ್ಲ ಎಂದರೆ ಎಲ್ಲಾದರೂ ಸಾಧ್ಯವೆ! ಇನ್ನು ಸ್ವಲ್ಪ ಹೊತ್ತಿನಲ್ಲೇ ಅವರು ಆಕೆಯನ್ನು ಕ್ಷಮಿಸಿ, ಆ ವಿಷಯವನ್ನೇ ಬಿಟ್ಟುಬಿಡುತ್ತಾರೆ'—ಇದು ಭಕ್ತರೆಲ್ಲರ ಭಾವನೆಯಾಗಿತ್ತು. ಆದರೆ ಯಾರೂ ಮುಂಗಾಣದ ರೀತಿಯಲ್ಲಿ ಶ್ರೀರಾಮಕೃಷ್ಣರು ಕಾಯಿಲೆಗೆ ಈಡಾದರು. ಗಟ್ಟಿಪದಾರ್ಥಗಳನ್ನು ನುಂಗಲು ಅಸಾಧ್ಯವಾಯಿತು. ಅಂತೂ ಅವರು ಮತ್ತೆ ಗೋಪಾಲೇರ್ ಮಾಳ ಕೈಯಿನ ಅನ್ನವನ್ನು ತಿನ್ನುವ ಸಂದರ್ಭ ಒದಗಿಬರಲೇ ಇಲ್ಲ! ಶ್ರೀರಾಮಕೃಷ್ಣರ ಸತ್ಯನಿಷ್ಠುರತೆಯನ್ನು ಭಕ್ತರು ಈಗ ಮತ್ತೊಮ್ಮೆ ಮನಗಾಣುವಂತಾಯಿತು.

ಮತ್ತೂ ಕೆಲವು ವಾರಗಳು ಕಳೆದುವು. ಯಾವ ಚಿಕಿತ್ಸೆಗೂ ಬಗ್ಗದೆ ಗಂಟಲ ನೋವು ಹೆಚ್ಚುತ್ತಲೇ ಬಂದಾಗ ಭಕ್ತರ ಆತಂಕವೂ ಹೆಚ್ಚಿತು. ಮಹೇಂದ್ರಲಾಲ ಸರ್ಕಾರ್, ಭಗವಾನ್ ರುದ್ರ, ಮತ್ತು ರಾಖಾಲರಂತಹ ಪ್ರಸಿದ್ಧ ಡಾಕ್ಟರುಗಳನ್ನು ಕರೆಸಿ ಪರೀಕ್ಷೆ ಮಾಡಿಸಿದರು. ಮತ್ತು ತಮ್ಮತಮ್ಮೊಳಗೇ ಸಮಾಲೋಚನೆ ನಡೆಸಿದರು. ಇನ್ನು ಮುಂದಕ್ಕೆ ಶ್ರೀರಾಮಕೃಷ್ಣರ ಚಿಕಿತ್ಸೆಗೆ ಯಾವ ಡಾಕ್ಟರನ್ನು ಕರೆಸುವುದು ಲೇಸು? ಅವರ ಶುಶ್ರೂಷೆ ಮಾಡುವವರು ಯಾರು? ಈ ಪ್ರಶ್ನೆಗಳೆಲ್ಲ ಎದ್ದುವು. ಆದರೆ ಮುಂದಿನ ದಾರಿಯೇನೆಂಬುದು ಸ್ಪಷ್ಟವಾಗಲಿಲ್ಲ.

ಈ ದಿನಗಳಲ್ಲೊಮ್ಮೆ ಬಾಗ್‌ಬಜಾರಿನ ಭಕ್ತೆಯೊಬ್ಬಳು ಅನೇಕ ಭಕ್ತರನ್ನು ತನ್ನ ಮನೆಗೆ ರಾತ್ರಿಯ ಭೋಜನಕ್ಕೆ ಆಹ್ವಾನಿಸಿದ್ದಳು. ಶ್ರೀರಾಮಕೃಷ್ಣರನ್ನೂ ಕರೆಸಬೇಕು ಎಂದು ಆಕೆ ಎಷ್ಟೋ ಆಸೆ ಪಟ್ಟಿದ್ದಳು; ಆದರೆ ಅವರ ಆರೋಗ್ಯ ತುಂಬ ಹದಗೆಟ್ಟಿದ್ದರಿಂದ ಗತ್ಯಂತರವಿಲ್ಲದೆ ಸುಮ್ಮನಾಗಿದ್ದಳು. ಆದರೂ ಅವಳ ಮನಸ್ಸಿನಲ್ಲಿ ಆಸೆಯಿದ್ದೇ ಇತ್ತು—ಸ್ವಲ್ಪ ಹೊತ್ತಾದರೂ ಬಂದುಹೋಗಲು ಅವರಿಗೆ ಸಾಧ್ಯವಾಗಬಹುದೋ ಏನೋ ಎಂದು. ಆದ್ದರಿಂದ ಸಂಜೆಯ ವೇಳೆಗೆ, ಸಾಧ್ಯವಾದರೆ ಅವರನ್ನು ಕರೆತರುವಂತೆ ಒಬ್ಬನನ್ನು ದಕ್ಷಿಣೇಶ್ವರಕ್ಕೆ ಕಳಿಸಿದಳು. ರಾತ್ರಿ ಒಂಬತ್ತು ಗಂಟೆಯಾದರೂ ಆತ ವಾಪಸು ಬರದಿದ್ದಾಗ ಇನ್ನು ತಡ ಮಾಡಬಾರದೆಂದು ನೆರೆದಿದ್ದ ಭಕ್ತರನ್ನು ಊಟಕ್ಕೆಬ್ಬಿಸಲಾಯಿತು. ಅಷ್ಟರಲ್ಲಿ ದಕ್ಷಿಣೇಶ್ವರಕ್ಕೆ ಹೋಗಿದ್ದ ವ್ಯಕ್ತಿ ಹಿಂದಿರುಗಿ ಬಂದ. ಶ್ರೀರಾಮಕೃಷ್ಣರ ದೇಹಸ್ಥಿತಿಯಲ್ಲಿ ಸುಧಾರಣೆಯೇನೂ ಇಲ್ಲ ಎನ್ನುವುದಲ್ಲದೆ, ಅಂದು ಅವರ ಗಂಟಲಲ್ಲಿ ರಕ್ತಸ್ರಾವವಾಯಿತು ಎಂಬ ವಿಷಾದದ ಸುದ್ದಿಯನ್ನು ಆತ ತಂದಿದ್ದ. ಅದನ್ನು ಕೇಳಿ ನರೇಂದ್ರ, ರಾಮಚಂದ್ರ, ಗಿರೀಶ, ದೇವೇಂದ್ರ ಮಜುಮ್ದಾರ, ಮಾಸ್ಟರ್ ಮೊದಲಾದವರೆಲ್ಲ ಚಿಂತಾಕ್ರಾಂತರಾಗಿ, ಮುಂದಿನ ಕ್ರಮದ ಬಗ್ಗೆ ಪರ್ಯಾಲೋಚಿಸತೊಡಗಿದರು. ಆಗ ಅವರಲ್ಲೊಂದು ಒಮ್ಮತದ ಅಭಿಪ್ರಾಯ ವ್ಯಕ್ತವಾಯಿತು—ಶ್ರೀರಾಮಕೃಷ್ಣರು ದಕ್ಷಿಣೇಶ್ವರದಲ್ಲೇ ಇದ್ದರೆ ಅವರಿಗೆ ಒಳ್ಳೆಯ ಚಿಕಿತ್ಸೆಯನ್ನು ಕೊಡಿಸುವುದು ಕಷ್ಟ; ಡಾಕ್ಟರಿಗೆ ಪ್ರತಿದಿನವೂ ಅಷ್ಟು ದೂರ ಬಂದುಹೋಗುವುದಂತೂ ಸಾಧ್ಯವೇ ಇಲ್ಲ ಎನ್ನಬೇಕು; ಹಾಗೆಯೇ ಭಕ್ತರಿಗೂ ಕೂಡ ಓಡಾಡುವುದಕ್ಕೂ ಔಷಧ ಮೊದಲಾದುವನ್ನು ತರುವುದಕ್ಕೂ ಬಹಳ ತೊಂದರೆಯಾಗುತ್ತದೆ; ಆದ್ದರಿಂದ ತಡಮಾಡದೆ ಕಲ್ಕತ್ತದಲ್ಲೇ ಒಂದು ಬಾಡಿಗೆ ಮನೆಯ ವ್ಯವಸ್ಥೆ ಮಾಡಿ ಶ್ರೀರಾಮ ಕೃಷ್ಣರನ್ನು ಕರೆತಂದು ಚಿಕಿತ್ಸೆ ಮಾಡಿಸಬೇಕು—ಎಂದು.

ಹೀಗೆ ಮುಂದಿನ ಮಾರ್ಗವೇನೋ ನಿಶ್ಚಯವಾದಂತಾಯಿತು. ಆದರೆ ನರೇಂದ್ರ

ಬಹಳ ದುಃಖದಲ್ಲಿರುವುದನ್ನು ಕಂಡು ಸ್ನೇಹಿತನೊಬ್ಬ ಕೇಳಿದ, "ಯಾಕೆ ನರೇನ್, ಏನು ಯೋಚಿಸುತ್ತಿದ್ದೀ?" ಆಗ ನರೇಂದ್ರನೆಂದ, "ಯಾರನ್ನು ಅವಲಂಬಿಸಿ ನಾವೆಲ್ಲ ಇಷ್ಟು ಆನಂದದಿಂದಿದ್ದೇವೆಯೋ ಅವರಿನ್ನು ನಮ್ಮನ್ನು ಬಿಟ್ಟು ಹೊರಟು ಹೋಗುತ್ತಾರೆಂದು ತೋರುತ್ತದೆ. ಈ ಬಗೆಯ ಗಂಟಲು ರೋಗ ಕ್ಯಾನ್ಸರಿಗೆ ತಿರುಗಿಕೊಳ್ಳುತ್ತದೆ ಅಂತ ನಾನು ವೈದ್ಯಕೀಯ ಪುಸ್ತಕಗಳಲ್ಲೂ ಓದಿದ್ದೇನೆ, ಡಾಕ್ಟರು ಸ್ನೇಹಿತರಿಂದಲೂ ಕೇಳಿದ್ದೇನೆ. ಇವತ್ತು ರಕ್ತಸ್ರಾವವಾದದ್ದನ್ನು ಕೇಳಿದ ಮೇಲೆ ನನ್ನ ಅನುಮಾನ ಹೆಚ್ಚಾಗಿದೆ... ಕ್ಯಾನ್ಸರ್ ರೋಗಕ್ಕೆ ಇದುವರೆಗೂ ಯಾರೂ ಔಷಧ ಕಂಡುಹಿಡಿದಿಲ್ಲ..."

ಮರುದಿನವೇ ಕೆಲವು ಹಿರಿಯ ಭಕ್ತರು ದಕ್ಷಿಣೇಶ್ವರಕ್ಕೆ ಹೋಗಿ, ಕಲ್ಕತ್ತದಲ್ಲೇ ಉಳಿದುಕೊಂಡು ಚಿಕಿತ್ಸೆ ಪಡೆಯಬೇಕೆಂದು ಶ್ರೀರಾಮಕೃಷ್ಣರನ್ನು ಪ್ರಾರ್ಥಿಸಿಕೊಂಡರು. ಅದಕ್ಕೆ ಅವರು ಒಡನೆಯೇ ಒಪ್ಪಿದರು. ತಾವು ಮುವ್ವತ್ತು ವರ್ಷಗಳಿಂದ ಜೀವಿಸಿದ್ದ, ತಮಗೆ ಪರಮಪ್ರಿಯವಾದ ಆ ಭವತಾರಿಣಿಯ ತಾಣವನ್ನು ತಿಲಮಾತ್ರವೂ ದುಃಖವಿಲ್ಲದೆ ಬಿಟ್ಟು ಹೊರಡಲು ಸಿದ್ಧರಾದರು—ಅನಿಕೇತನರಂತೆ!

ಬಾಗ್‌ಬಜಾರಿನ ದುರ್ಗಾಚರಣ ಮುಖರ್ಜಿ ರಸ್ತೆ ಎಂಬಲ್ಲಿ ಒಂದು ಪುಟ್ಟ ಮನೆ ಸಿಕ್ಕಿತು. ಅದರ ತಾರಸಿಯ ಮೇಲೆ ನಿಂತರೆ ದೂರದಲ್ಲಿ ಗಂಗೆ ಹರಿಯುವುದು ಕಾಣುತ್ತಿತ್ತು. ಬಹುಶಃ ಅದೊಂದೇ ಆ ಮನೆಯ ಗುಣವಿಶೇಷ ಎಂದು ಕಾಣುತ್ತದೆ! ಶ್ರೀರಾಮಕೃಷ್ಣರಿಗೆ ಈ ಮನೆ ಒಪ್ಪಿಗೆಯಾಗಬಹುದು ಎಂದು ಭಕ್ತರು ಭಾವಿಸಿ ಅವರನ್ನು ಅಲ್ಲಿಗೆ ಆಹ್ವಾನಿಸಿದರು.

ಶ್ರೀರಾಮಕೃಷ್ಣರು ಹೊರಡಲನುವಾದರು. ಮೊದಲು ಮಂದಿರಕ್ಕೆ ಹೋಗಿ ಭವತಾರಿಣಿಗೆ ಬಾಗಿ ನಮಿಸಿ ಭಾವದುಂಬಿದ ನಯನಗಳಿಂದ ಅವಳನ್ನೇ ನೋಡಿದರು. ತಾಯಿ-ಮಕ್ಕಳಲ್ಲಿ ಅದಾವ ಭಾವವಿನಿಮಯವಾಯಿತೋ ಹೇಳಬಲ್ಲವರಾರು? ಈಗ ಶ್ರೀರಾಮಕೃಷ್ಣರು ಕಟ್ಟಕಡೆಯ ಬಾರಿ ದಕ್ಷಿಣೇಶ್ವರಕ್ಕೆ ವಿದಾಯ ಹೇಳಿ ಹೊರಟರು. ಅವರ ಚಿಕಿತ್ಸೆ ಎಷ್ಟು ಕಾಲ ನಡೆಯಬಹುದು, ಕಲ್ಕತ್ತದಲ್ಲಿ ಅವರು ಎಷ್ಟು ದಿನ ಇರಬೇಕಾಗಬಹುದು ಎಂಬುದರ ಕಲ್ಪನೆ ಯಾರಿಗೂ ಇದ್ದಂತಿರಲಿಲ್ಲ. ಆದ್ದರಿಂದ ಅವರ ಸತಿ ಶಾರದಾದೇವಿಯವರೂ ಬರಬೇಕೆ ಅಥವಾ ಬೇಡವೆ ಎಂಬ ಪ್ರಶ್ನೆಯೇ ಯಾರ ಮನಸ್ಸಿನಲ್ಲೂ ಏಳಲಿಲ್ಲವೆಂದು ತೋರುತ್ತದೆ. ಹೇಗೋ, ಒಟ್ಟಿನಲ್ಲಿ ಶಾರದಾದೇವಿಯವರು ಪತಿದೇವನನ್ನು ಬೀಳ್ಕೊಟ್ಟು ತಾವು ದಕ್ಷಿಣೇಶ್ವರದಲ್ಲೇ ಉಳಿದುಕೊಂಡರು.

ಶ್ರೀರಾಮಕೃಷ್ಣರು ಭಕ್ತರೊಡನೆ ಬಂದು ತಮಗಾಗಿ ಗೊತ್ತುಪಡಿಸಿದ್ದ ಮನೆಯನ್ನು ನೋಡುತ್ತಾರೆ, ಪಾರಿವಾಳದ ಗೂಡಿನಂತಿದೆ! ದಕ್ಷಿಣೇಶ್ವರದ ವಿಶಾಲವಾದ ಮಂದಿರೋದ್ಯಾನದಲ್ಲಿ, ಗಂಗೆಯ ಮಡಿಲಲ್ಲಿ ಇಷ್ಟು ವರ್ಷಗಳು ಸ್ವಚ್ಛಂದ ಹಕ್ಕಿಯಂತೆ ಆನಂದದಿಂದಿದ್ದ ಅವರಿಗೆ ಈ ಇಕ್ಕಟ್ಟಿನ ಮನೆಯನ್ನು ನೋಡುತ್ತಿದ್ದಂತೆಯೋ ಜುಗುಪ್ಸೆಯಾಯಿತು. "ನಾನು ಇಲ್ಲಿರಲು ಸಾಧ್ಯವೇ ಇಲ್ಲ" ಎನ್ನುತ್ತ ಅಲ್ಲಿಂದ ಹೊರಟೇಬಿಟ್ಟರು. ಮತ್ತು ಕಾಲ್ನಡಿಗೆಯಲ್ಲೇ ಸಮೀಪದ ರಾಮಕಾಂತ ಬಸು ರಸ್ತೆಯಲ್ಲಿದ್ದ ಬಲರಾಮ ಬೋಸನ ಮನೆಗೆ ಬಂದರು. ಬಲರಾಮನೂ ಅವನ ಮನೆಮಂದಿಯೂ ಅವರನ್ನು ಅತ್ಯಾದರದಿಂದ ಬರಮಾಡಿಕೊಂಡರು. "ನಿಮ್ಮ ಮನಸ್ಸಿಗೊಪ್ಪುವ ಬೇರೆ ಮನೆ ಸಿಕ್ಕುವವರೆಗೂ ಇಲ್ಲೇ ಇದ್ದು ಅನುಗ್ರಹಿಸಬೇಕು" ಎಂದು ಪ್ರಾರ್ಥಿಸಿಕೊಂಡರು.

ಈಗ ಭಕ್ತರು ಶ್ರೀರಾಮಕೃಷ್ಣರಿಗಾಗಿ ಸರಿಯಾದ ಮನೆಯನ್ನು ಹುಡುಕುವ

ಪ್ರಯತ್ನದಲ್ಲಿ ಮತ್ತೊಮ್ಮೆ ತೊಡಗಿದರು. ಜೊತೆಗೇ, ಕಲ್ಕತ್ತದ ಪ್ರಸಿದ್ಧ ಆಯುರ್ವೇದ ವೈದ್ಯರಾದ ಗಂಗಾಪ್ರಸಾದ, ಗೋಪೀಮೋಹನ, ದ್ವಾರಕಾನಾಥ, ನವಗೋಪಾಲ ಮೊದಲಾದವರನ್ನು ಕರೆಸಿ ಶ್ರೀರಾಮಕೃಷ್ಣರ ರೋಗದ ವಿಷಯವಾಗಿ ಅವರ ಅಭಿಪ್ರಾಯ ಕೇಳಿದರು. ಶ್ರೀರಾಮಕೃಷ್ಣರನ್ನು ಪರೀಕ್ಷಿಸಿದ ವೈದ್ಯರು, ಇದು ಪರಿಹರಿಸಲು ಅಸಾಧ್ಯವಾದಂತಹ 'ರೋಹಿಣಿ' ಎಂಬ ಕಾಯಿಲೆ ಎನ್ನುವ ನಿಶ್ಚಯಕ್ಕೆ ಬಂದರು. ಬಳಿಕ ಭಕ್ತರು ಗಂಗಾಪ್ರಸಾದನನ್ನು ವೈಯಕ್ತಿಕವಾಗಿ ಮತ್ತೆ ಆ ಬಗ್ಗೆ ಪ್ರಶ್ನಿಸಿದಾಗ ಆತ, "ಆಂಗ್ಲ ಡಾಕ್ಟರುಗಳು ಯಾವುದನ್ನು ಕ್ಯಾನ್ಸರ್ ಎನ್ನುತ್ತಾರೋ ಅದೇ ಈ ರೋಹಿಣಿ ಎನ್ನುವುದು ಕೂಡ. ಶಾಸ್ತ್ರಗಳಲ್ಲೇನೋ ಇದಕ್ಕೆ ಚಿಕಿತ್ಸೆಯನ್ನು ಹೇಳಲಾಗಿದೆ. ಆದರೆ ಆ ಚಿಕಿತ್ಸೆ ಅತ್ಯಂತ ದುಸ್ಸಾಧ್ಯ ಎಂದು ರೂಢಿಯಿಂದ ನಿರ್ಣಯವಾಗಿದೆ" ಎಂದು ತಿಳಿಸಿದ. ಭಕ್ತರಿಗೆ ಬಹಳ ನಿರಾಸೆಯಾಯಿತಾದರೂ ಧೃತಿಗೆಡಲಿಲ್ಲ. ಆಯುರ್ವೇದದಿಂದ ಸಾಧ್ಯವಾಗದಿದ್ದರೆ ಅಲೋಪಥಿ ಚಿಕಿತ್ಸೆ ಕೊಡಿಸುವ ಬಗ್ಗೆ ಆಲೋಚಿಸಿದರು. ಆದರೆ ಅತಿಯಾದ ಔಷಧ ಸೇವನೆ ಶ್ರೀರಾಮಕೃಷ್ಣರ ಶರೀರಕ್ಕೆ ಒಗ್ಗುವುದಿಲ್ಲ ಎಂದು ತಿಳಿದಿದ್ದುದರಿಂದ ಅದನ್ನೂ ಕೈಬಿಟ್ಟು ಹೋಮಿಯೋಪಥಿಯ ಆಲೋಚನೆ ಮಾಡಿದರು. ಇದು ಎಲ್ಲರಿಗೂ ಸರಿಯೆನಿಸಿತು. ಕಲ್ಕತ್ತದ ವಿಖ್ಯಾತ ಹೋಮಿಯೋ ಡಾಕ್ಟರನಾದ ಮಹೇಂದ್ರಲಾಲ ಸರ್ಕಾರನಿಗೆ ಕೆಲಕಾಲ ಶ್ರೀರಾಮಕೃಷ್ಣರ ಚಿಕಿತ್ಸೆಯ ಭಾರವನ್ನು ಒಪ್ಪಿಸಿ ಪ್ರಗತಿಯನ್ನು ಗಮನಿಸುವುದು ಎಂಬ ನಿರ್ಧಾರಕ್ಕೆ ಬಂದರು.

ಈ ನಡುವೆ ಶ್ರೀರಾಮಕೃಷ್ಣರು ಚಿಕಿತ್ಸೆಯ ನಿಮಿತ್ತವಾಗಿ ಕಲ್ಕತ್ತಕ್ಕೆ ಬಂದಿಳಿದುಕೊಂಡಿದ್ದಾರೆ ಎಂಬ ಸುದ್ದಿ ಭಕ್ತವೃಂದದಲ್ಲೆಲ್ಲ ವಾಯುವೇಗದಿಂದ ಹರಡಿತು. ಪರಿಚಿತರೂ ಹೊಸಹೊಸಬರೂ ಅವರ ದರ್ಶನಕ್ಕಾಗಿ ಗುಂಪುಗುಂಪಾಗಿ ಬರುತ್ತ ಬಲರಾಮನ ಮನೆಯನ್ನು ದೊಡ್ಡ ಉತ್ಸವದ ಸ್ಥಳವನ್ನಾಗಿ ಮಾಡಿಬಿಟ್ಟರು. ಅಲ್ಲಿ ಆನಂದದ ಪ್ರವಾಹವೇ ಹರಿಯಲಾರಂಭಿಸಿತು. ಶ್ರೀರಾಮಕೃಷ್ಣರು ಎಂದಿನಂತೆಯೇ ಇವರೆಲ್ಲರನ್ನೂ ಪ್ರೀತ್ಯಾದರಗಳಿಂದ ಬರಮಾಡಿಕೊಂಡು ಅವರವರ ಭಾವಕ್ಕೆ ತಕ್ಕಂತೆ ಸ್ಪಂದಿಸುತ್ತ ಸೂಕ್ತ ಬೋಧನೆಗಳನ್ನು ನೀಡುತ್ತಿದ್ದರು. ಎಷ್ಟೋ ಬಾರಿ ಕೀರ್ತನೆಯಲ್ಲಿ ತೊಡಗಿ ಭಾವಸಮಾಧಿಸ್ಥರೂ ಆಗುತ್ತಿದ್ದರು. ಭಕ್ತರ ಕಳಕಳಿಯ ವಿನಂತಿಗೂ ಡಾಕ್ಟರರ ಸೂಚನೆಗೂ ಬೆಲೆಕೊಟ್ಟು ಅವರು ಆಗಾಗ ತಮ್ಮನ್ನು ನಿಯಂತ್ರಿಸಿಕೊಂಡು ಸುಮ್ಮನಾಗುತ್ತಿದ್ದರು; ಆದರದು ತಾತ್ಕಾಲಿಕವಷ್ಟೆ! ಮತ್ತೆ ಆ ಗಂಟಲ ನೋವನ್ನೂ ಮರೆತು ಭಕ್ತರಿಗಾಗಿ ವಾಕ್ಸುಧೆಯನ್ನು ಹರಿಸತೊಡಗುತ್ತಿದ್ದರು. ಆ ದೃಶ್ಯವನ್ನು ವಿಸ್ಮಯದಿಂದ ವೀಕ್ಷಿಸುತ್ತಿದ್ದ ಭಕ್ತರ ಮನಸ್ಸಿನಲ್ಲಿ ಮತ್ತೆ ಮತ್ತೆ ಒಂದು ಭಾವನೆಯೇಳುತ್ತಿತ್ತು, 'ದಕ್ಷಿಣೇಶ್ವರಕ್ಕೆ ಹೋಗಲು ಅನುಕೂಲವಿಲ್ಲದ ನೂರಾರು ಜನರಿಗೆ ಕೆಲಕಾಲವಾದರೂ ಅಮೃತಪಾನ ಮಾಡಿಸುವ ಉದ್ದೇಶದಿಂದಲೇ ಇವರು ಕಲ್ಕತ್ತಕ್ಕೆ ಬಂದಿದ್ದಾರೇನು ?' ಎಂದು. ಶ್ರೀರಾಮಕೃಷ್ಣರು ಪ್ರತಿ ದಿನವೂ ಬೆಳಗ್ಗೆ ಎಳೆಂಟು ಗಂಟೆಯಿಂದ ಮಧ್ಯಾಹ್ನದವರೆಗೆ, ಬಳಿಕ ತಮ್ಮ ಊಟ ವಿಶ್ರಾಂತಿಗಳನ್ನು ಮುಗಿಸಿ ಮತ್ತೆ ರಾತ್ರಿಯವರೆಗೂ ಎಡೆಯಿಲ್ಲದೆ ಸಂದರ್ಶಕರೊಡನೆ ಬೆರೆಯುತ್ತಿದ್ದರು. ಭಕ್ತವೃಂದದ ಪಾಲಿಗೆ ಇದೊಂದು ಅಮೂಲ್ಯ ಅವಧಿ.

ಹೀಗೆ ಬಲರಾಮ ಬಾಬುವಿನ ಮನೆಯಲ್ಲಿ ಒಂದು ವಾರ ಕಳೆಯಿತು. ಇಷ್ಟರಲ್ಲಿ ಭಕ್ತರು ಶ್ರೀರಾಮಕೃಷ್ಣರ ವಾಸ್ತವ್ಯಕ್ಕಾಗಿ ಉತ್ತರ ಕಲ್ಕತ್ತದ ಶ್ಯಾಮಪುಕುರ ಎಂಬಲ್ಲಿ

ಮನೆಯೊಂದನ್ನು ಬಾಡಿಗೆಗೆ ಹಿಡಿದರು. ೧೮೮೫ರ ಸೆಪ್ಟೆಂಬರ್ ತಿಂಗಳ ಪ್ರಾರಂಭದಲ್ಲಿ ಶ್ರೀರಾಮಕೃಷ್ಣರು ಈ ಮನೆಗೆ ಬಂದರು.

ಇತ್ತ ಶಾರದಾದೇವಿಯವರಿನ್ನೂ ಶ್ರೀರಾಮಕೃಷ್ಣರಿಲ್ಲದ ದಕ್ಷಿಣೇಶ್ವರದಲ್ಲೇ ಉಳಿದುಕೊಂಡಿದ್ದಾರೆ. ಪತಿದೇವರು ಕಲ್ಕತ್ತದಲ್ಲಿ ಇನ್ನೆಷ್ಟು ದಿನ ಇದ್ದಾರು, ತಾವೂ ಅಲ್ಲಿಗೆ ಹೋಗಬೇಕಾಗಬಹುದೆ—ಎನ್ನುವುದೊಂದೂ ಅವರಿಗೆ ತಿಳಿಯದು. ಪತಿಯ ಆರೋಗ್ಯದ ಚಿಂತೆಯ ಜೊತೆಗೆ ಈ ಅನಿಶ್ಚಿತತೆ, ಅಸಹಾಯಕತೆ ಬೇರೆ. ಹೀಗಿರುವಾಗ, ಗಾಯದ ಮೇಲೆ ಬರೆ ಎಳೆದಂಥ ಒಂದು ಪ್ರಸಂಗ ನಡೆಯಿತು.

ಶಾರದಾದೇವಿಯವರ ಆಪ್ತೆಯಾದ ಗೋಲಾಪ್ ಮಾಳ ಸ್ವಭಾವವನ್ನು ನಾವು ನೋಡಿದ್ದೇವೆ. ಈಕೆ ಒಳ್ಳೆಯವಳೇ; ಆದರೆ ನಡವಳಿಕೆಯಲ್ಲಿ ನಯ ನಾಜೂಕು ಕಡಮೆ. ಕೆಲವೊಮ್ಮೆ ದುಡುಕಿ ಏನೇನೋ ಮಾತನಾಡಿಬಿಡುತ್ತಿದ್ದಳು. ಒಂದು ದಿನ ಯೋಗಿನ್ ಮಾಳೊಂದಿಗೆ ಮಾತನಾಡುತ್ತಿದ್ದಾಗ ಈಕೆ, "ನೋಡು, ನನಗನ್ನಿಸುತ್ತದೆ, ಠಾಕೂರರಿಗೆ ಶಾರದಾದೇವಿಯವರ ಮೇಲೆ ಯಾಕೋ ಕೋಪ ಬಂದಿರಬೇಕು, ಅದಕ್ಕೇ ಕಲ್ಕತ್ತಕ್ಕೆ ಹೋಗಿಬಿಟ್ಟಿದ್ದಾರೆ, ಅಂತ" ಎಂದುಬಿಟ್ಟಳು! ಅವಳ ಮನಸ್ಸಿನಲ್ಲಿ ಅಂತಹ ವಿಚಿತ್ರ ವಿಕೃತ ಅಭಿಪ್ರಾಯ ಏಕಾದರೂ ಬಂದಿತೋ ಏನು ಕತೆಯೊ! ಅದು ಹೋಗಲಿ ಎಂದು ಕೊಂಡರೆ, ಯೋಗಿನ್ ಮಾಳಾದರೂ ಆಕೆಯ ಗಳಹುವಿಕೆಯನ್ನು ಕಿವಿಯಿಂದ ಕೇಳಿಸಿ ಕೊಂಡರೂ ಬಾಯಿಂದ ಹೊರಹಾಕದಿದ್ದರೆ ಅನಾಹುತವೇನೂ ಆಗುತ್ತಿರಲಿಲ್ಲ. ಇಲ್ಲ, ಅವಳೂ ಸುಮ್ಮನಿರಲಿಲ್ಲ. ಬಂದು ಶಾರದಾದೇವಿಯವರ ಮುಂದೆಯೇ ಗೋಲಾಪಳ ಮಾತನ್ನು ಒಪ್ಪಿಸಿಬಿಟ್ಟಳು! ಮೊದಲೇ ಚಿಂತಾಕ್ರಾಂತರಾಗಿದ್ದ ಅವರಿಗೆ ಇದನ್ನು ಕೇಳಿ ಎಂಥ ಆಘಾತವಾಗಿರಬೇಕು! ದುಃಖಾಶ್ರು ಅವರ ಕಣ್ಣುಗಳಿಂದ ಉಕ್ಕಿ ಹರಿಯಿತು. ಕೂಡಲೇ ಗಾಡಿ ಮಾಡಿಕೊಂಡು ಕಲ್ಕತ್ತಕ್ಕೆ ಧಾವಿಸಿದರು. ಶ್ರೀರಾಮಕೃಷ್ಣರ ಬಳಿಗೆ ಬಂದು ಕಣ್ಣೀರಿಡುತ್ತ ಕೇಳಿದರು: "ನೀವು ನನ್ನ ಮೇಲೆ ಕೋಪಮಾಡಿಕೊಂಡು ಇಲ್ಲಿಗೆ ಬಂದಿದ್ದೀರಂತೆ, ಇದು ನಿಜವೆ?"

ಶ್ರೀರಾಮಕೃಷ್ಣರು (ಆಶ್ಚರ್ಯದಿಂದ): "ಆ್ಞ! ಯಾರು ಹೇಳಿದರು ಹಾಗೆ!"

ಶಾರದಾದೇವಿ: "ಗೋಲಾಪ್ ಹೇಳಿದಳಲ್ಲ?"

ಇದನ್ನು ಕೇಳಿ ಶ್ರೀರಾಮಕೃಷ್ಣರು ಕಿಡಿಕಿಡಿಯಾದರು.

"ಹಾಗೇನು? ಹಾಗೆ ಹೇಳಿ ಅವಳು ನಿನ್ನ ಕಣ್ಣಲ್ಲಿ ನೀರು ಬರಿಸಿದಳೆ? ತಿಳಿಗೇಡಿ! ನೀನು ಯಾರು ಅಂತ ಅವಳಿಗೆ ಗೊತ್ತಿಲ್ಲವೇನು? ಕಳಿಸು ಅವಳನ್ನು ಇಲ್ಲಿಗೆ!"

ಸದ್ಯ, ಶ್ರೀರಾಮಕೃಷ್ಣರಿಗೆ ತಮ್ಮ ಮೇಲೆ ಕೋಪ ಬರುವಂಥದೇನೂ ನಡೆಯ ಲಿಲ್ಲವಲ್ಲ ಎಂದು ಸಮಾಧಾನಗೊಂಡು ಶಾರದಾದೇವಿಯವರು ದಕ್ಷಿಣೇಶ್ವರಕ್ಕೆ ಮರಳಿ ದರು. ಶ್ರೀರಾಮಕೃಷ್ಣರು ತನ್ನನ್ನು ಕರೆದರು ಎಂದು ತಿಳಿದು ಗೋಲಾಪ್ ಮಾ ಅವ ರಲ್ಲಿಗೆ ಹೋದಳು. ಶ್ರೀರಾಮಕೃಷ್ಣರು, "ಏನಿದೆಲ್ಲ ಚೇಷ್ಟೆ! ಹಾಗೇಕೆ ಮಾತನಾಡಿ ಅವಳನ್ನು ಸಂಕಟಪಡಿಸಿದೆ? ಅವಳು ಯಾರು ಎನ್ನುವುದು ಗೊತ್ತಿಲ್ಲವೆ ನಿನಗೆ? ನಡಿ, ಈ ಕ್ಷಣವೇ ಹೋಗಿ ಅವಳ ಕ್ಷಮೆ ಬೇಡಿಕೊ!" ಎಂದು ಚೆನ್ನಾಗಿ ಛೀಮಾರಿ ಹಾಕಿ ಕಳಿಸಿದರು. ಗೋಲಾಪ್ ಮಾ ಶಾರದಾದೇವಿಯವರ ಬಳಿಗೆ ಓಡಿದಳು. ಪಶ್ಚಾ ತ್ತಾಪದಿಂದ ಕಣ್ಣೀರ್ಗರೆಯುತ್ತ, "ಅಮ್ಮಾ, ತಿಳಿಯದೆ ಏನೇನೋ ಮಾತಾಡಿಬಿಟ್ಟೆ. ಠಾಕೂರರು ನನ್ನ ಮೇಲೆ ಕೋಪಿಸಿಕೊಂಡಿದ್ದಾರೆ. ದಯವಿಟ್ಟು ನನ್ನನ್ನು ಕ್ಷಮಿಸಿಬಿಡಿ"

ಎಂದು ಬೇಡಿಕೊಂಡಳು. ಆದರೆ ಶಾರದಾದೇವಿಯವರಾಗಲೇ ಅವಳನ್ನು ಮನ್ನಿಸಿ ಆಗಿತ್ತು. ವಾತ್ಸಲ್ಯದಿಂದ ಅವಳ ಬೆನ್ನು ತಟ್ಟುತ್ತ ಸುಮ್ಮನೆ, "ಓ ಗೋಲಾಪ್!" ಎಂದಷ್ಟೇ ಉದ್ಗರಿಸಿದರು. ಗೋಲಾಪಳ ದುಗುಡವೆಲ್ಲ ಒಮ್ಮೆಗೇ ಹಾರಿಹೋಯಿತು, ಹೃದಯ ತಿಳಿಯಾಯಿತು.

ಶ್ಯಾಮಪುಕುರದಲ್ಲಿ ಶ್ರೀರಾಮಕೃಷ್ಣರಿಗಾಗಿ ಗೊತ್ತುಪಡಿಸಿದ್ದ ಮನೆಯ ಒಂದು ಭಾಗ ಮಾತ್ರ ಉಪಯೋಗಕ್ಕೆ ಲಭ್ಯವಿತ್ತು. ಕಟ್ಟಡದ ಮೊದಲ ಅಂತಸ್ತಿನಲ್ಲಿ ಎರಡು ದೊಡ್ಡ ಕೋಣೆಗಳೂ ಎರಡು ಸಣ್ಣ ಕೋಣೆಗಳೂ ಇದ್ದುವು. ಒಂದು ದೊಡ್ಡ ಕೋಣೆ ಶ್ರೀರಾಮಕೃಷ್ಣರ ವಸತಿಗಾಗಿ. ಇನ್ನೊಂದು, ಸಂದರ್ಶಕರನ್ನು ಭೇಟಿಯಾಗಲು ಬೈಠಕ್ ಖಾನೆಯಂತೆ ಉಪಯೋಗಕ್ಕೆ ಬಂದಿತು. ಚಿಕ್ಕ ಕೋಣೆಗಳಲ್ಲಿ ರಾತ್ರಿಹೊತ್ತು ಕೆಲವು ಭಕ್ತರು ಮಲಗಿಕೊಳ್ಳುತ್ತಿದ್ದರು. ತಾರಸಿಯ ಮೇಲಕ್ಕೆ ಹೋಗಲು ಮೆಟ್ಟಿಲ ಸಾಲೂ, ಮೆಟ್ಟಿಲುಗಳು ತಾರಸಿಗೆ ಸೇರುವಲ್ಲಿ ಒಂದು ಸಣ್ಣ ಕೋಣೆಯೂ ಇದ್ದುವು.

ಹಿಂದೆಯೇ ಆಗಿದ್ದ ನಿರ್ಧಾರದಂತೆ, ಶ್ರೀರಾಮಕೃಷ್ಣರ ಚಿಕಿತ್ಸೆಯ ಭಾರವನ್ನು ಡಾ. ಮಹೇಂದ್ರಲಾಲ ಸರ್ಕಾರನಿಗೆ ಒಪ್ಪಿಸಲಾಯಿತು. ಈತ ಅನೇಕ ವರ್ಷಗಳ ಹಿಂದೆ—ಮಥುರನ ಜೀವಿತಾವಧಿಯಲ್ಲಿ—ಮಥುರನ ಕುಟುಂಬದವರ ಚಿಕಿತ್ಸೆ ಗಾಗಿ ದಕ್ಷಿಣೇಶ್ವರಕ್ಕೆ ಬರುತ್ತಿದ್ದ. ಆಗ ಅವನಿಗೆ ಶ್ರೀರಾಮಕೃಷ್ಣರ ಪರಿಚಯವೂ ಸ್ವಲ್ಪಮಟ್ಟಿಗೆ ಆಗಿತ್ತು. ಆದರೆ ಇದು ಬಹಳ ಹಿಂದಿನ ಮಾತು. ಸರ್ಕಾರನೋ ದೊಡ್ಡ ಡಾಕ್ಟರು; ಎಂದಮೇಲೆ ಸಹಜವಾಗಿಯೇ ಬಿಡುವಿಲ್ಲದಷ್ಟು ಕೆಲಸ. ಆದ್ದರಿಂದ ಅವನು ಹಿಂದೆ ಶ್ರೀರಾಮಕೃಷ್ಣರನ್ನು ಭೇಟಿಯಾಗಿದ್ದಿರಬಹುದಾದರೂ ಅವರ ನೆನಪು ಅವನಿಗಿರ ಲಾರದು ಎಂದು ಭಕ್ತರು ಊಹಿಸಿದರು. ಆದ್ದರಿಂದ ಮೊದಲ ಬಾರಿ ಅವನನ್ನು ಶ್ರೀರಾಮಕೃಷ್ಣರ ಗಂಟಲ ಪರೀಕ್ಷೆಗೆಂದು ಕರೆತರುವಾಗ, ರೋಗಿ ಯಾರೆಂಬುದನ್ನು ಅವನಿಗೆ ತಿಳಿಸಿರಲಿಲ್ಲ. ಆದರೆ ಶ್ರೀರಾಮಕೃಷ್ಣರನ್ನು ನೋಡುತ್ತಿದ್ದಂತೆಯೇ ಅವನಿಗೆ ಅವರ ಗುರುತು ಹತ್ತಿತು. ಬಳಿಕ ಬಹಳ ಎಚ್ಚರಿಕೆಯಿಂದ ಪರೀಕ್ಷೆ ಮಾಡಿ, ಔಷಧ-ಪಥ್ಯಗಳನ್ನೆಲ್ಲ ತಿಳಿಸಿಕೊಟ್ಟ. ಹಾಗೆಯೇ ಸ್ವಲ್ಪ ಹೊತ್ತು ಕುಳಿತಿದ್ದು ಧರ್ಮ ಸಂಬಂಧವಾಗಿಯೂ ಕಾಳೀಮಂದಿರದ ವಿಚಾರವಾಗಿಯೂ ಅವರೊಡನೆ ಮಾತನಾಡಿ ಬೀಳ್ಕೊಂಡ.

ಶ್ಯಾಮಪುಕುರದ ಮನೆಯಲ್ಲಿ ಶ್ರೀರಾಮಕೃಷ್ಣರಿಗೆ ಡಾ. ಸರ್ಕಾರನಿಂದ ನಿಯತ ವಾದ ಚಿಕಿತ್ಸೆ ಪ್ರಾರಂಭವಾಯಿತು. ಮೊದಲ ದಿನ ಭಕ್ತರು, ಆತನಿಗೆ ಮೊದಲೇ ನಿರ್ಧಾರವಾಗಿದ್ದಷ್ಟು ಶುಲ್ಕವನ್ನು ಕೊಟ್ಟರು. ಆತ ಒಳ್ಳೇ ಅನುಭವಿ; ಹೆಸರಾಂತ ಡಾಕ್ಟರು. ಆದ್ದರಿಂದ ಆತನ ಶುಲ್ಕವೂ ಹೆಚ್ಚೇ. ಭಕ್ತರು ಕೊಟ್ಟ ಹಣವನ್ನು ಅವನು ಸಹಜವಾಗಿಯೇ ಸ್ವೀಕರಿಸಿದ. ದುಡ್ಡನ್ನು ಶ್ರೀರಾಮಕೃಷ್ಣರೇ ಕೊಡುತ್ತಾರೆಂದೋ, ಅವರ ಬಳಿ ಸಾಕಷ್ಟು ಹಣ ಇರಬಹುದೆಂದೋ ಆತ ಭಾವಿಸಿದ್ದಿರಬೇಕು. ಅಥವಾ ಆ ಬಗ್ಗೆ ಆಲೋಚಿಸಿಯೇ ಇಲ್ಲದಿರಲೂಬಹುದು. ಮಾರನೆಯ ದಿನ ಆತ ಮತ್ತೆ ಬಂದಾಗ, ಮಾತಿನ ಸಂದರ್ಭದಲ್ಲಿ, ಶ್ರೀರಾಮಕೃಷ್ಣರ ಚಿಕಿತ್ಸೆಗೆ ಏರ್ಪಾಡು ಮಾಡಿ ಖರ್ಚನ್ನೆಲ್ಲ ವಹಿಸಿಕೊಳ್ಳುತ್ತಿರುವವರು ಈ ಭಕ್ತರೇ ಎಂಬುದು ಗೊತ್ತಾಯಿತು. ಭಕ್ತರು ಶ್ರೀರಾಮ ಕೃಷ್ಣರ ಮೇಲಿರಿಸಿದ್ದ ಭಕ್ತಿ-ಪ್ರೀತಿಗಳನ್ನು ಕಂಡು ಅವನು ಬಹಳ ಸಂತಸಪಟ್ಟ. ಮತ್ತು, "ನಾನು ಕೂಡ ಇನ್ನುಮೇಲೆ ಯಾವುದೇ ಶುಲ್ಕವನ್ನೂ ತೆಗೆದುಕೊಳ್ಳದೆ, ನನ್ನಿಂದ ಸಾಧ್ಯವಾದ ಮಟ್ಟಿಗೆ ಚಿಕಿತ್ಸೆ ಮಾಡುತ್ತೇನೆ; ಈ ಮೂಲಕ ನಿಮ್ಮ ಸತ್ಕಾರ್ಯದಲ್ಲಿ ಯತ್ಕಿಂಚಿತ್ ನೆರವಾಗುತ್ತೇನೆ" ಎಂದು ಮಾತುಕೊಟ್ಟ.

ಹೀಗೆ, ಭಾಗ್ಯವಶಾತ್ ಒಳ್ಳೇ ನಿಪುಣನಾದ ವೈದ್ಯನ ಸೇವೆಯಂತೂ ಲಭ್ಯ ವಾಯಿತು. ಆದರೆ ಅಷ್ಟಕ್ಕೇ ಭಕ್ತರು ನಿಶ್ಚಿಂತರಾಗಿ ಕುಳಿತುಕೊಳ್ಳುವಂತಿಲ್ಲ. ಇನ್ನೂ ಎರಡು ಅತಿ ಮುಖ್ಯ ಅಗತ್ಯಗಳನ್ನು ಪೂರೈಸಬೇಕಾಗಿದೆ. ಮೊದಲನೆಯದಾಗಿ, ಈಗ ಶ್ರೀರಾಮಕೃಷ್ಣರನ್ನು ಎಚ್ಚರದಿಂದ ಹಗಲಿರುಳೂ ನೋಡಿಕೊಳ್ಳುತ್ತ ಅವರ ಸೇವೆ-ಶುಶ್ರೂಷೆ ಮಾಡುವವರು ಬೇಕಾಗಿದ್ದಾರೆ. ಎರಡನೆಯದಾಗಿ, ಶ್ರೀರಾಮಕೃಷ್ಣರಿಗೆ ಒಗ್ಗು ವಂಥ-ಒಪ್ಪುವಂಥ ಪಥ್ಯದ ಅಡುಗೆಯನ್ನು ತಯಾರಿಸಬಲ್ಲವರೊಬ್ಬರ ಆವಶ್ಯಕತೆ ಎದ್ದುತೋರುತ್ತಿದೆ. ಈಗ ಎರಡು ಸಮಸ್ಯೆಗಳಿಗೂ ಸಹಜ ಪರಿಹಾರಗಳೇ ಗೋಚರ ವಾದುವು. ಗುರುದೇವನಿಗೆ ಸಕಲ ರೀತಿಯಲ್ಲೂ ಸೇವೆ ಸಲ್ಲಿಸಲು ತರುಣಶಿಷ್ಯರೆಲ್ಲ ಮುಂದಾದರು; ಇನ್ನು ಶ್ರೀರಾಮಕೃಷ್ಣರ ಪಥ್ಯದಡುಗೆ ತಯಾರಿಸಲು ಸ್ವಯಂ ಅವರ ಸತಿ ಶಾರದಾದೇವಿಯವರೇ ಇದ್ದಾರಲ್ಲ! ಅವರನ್ನೇ ಇಲ್ಲಿಗೆ ಕರೆಸಿಕೊಂಡರಾಯಿತು ಎಂದು ಭಕ್ತರು ಭಾವಿಸಿದರು.

ಆದರೆ ಆಲೋಚಿಸಿ ನೋಡಿದಾಗ ಗೋಚರವಾಯಿತು, ಈ ಎರಡು ಉಪಾಯ ಗಳೂ ಅಷ್ಟೇನೂ ಸುಲಭವಾಗಿ ಕಾರ್ಯಗತವಾಗುವಂಥವಲ್ಲ ಎಂದು. ಶ್ರೀರಾಮ ಕೃಷ್ಣರ ಸೇವೆ ಮಾಡಲು ತರುಣಶಿಷ್ಯರೇನೋ ಉತ್ಸಾಹದಿಂದ ಮುಂದಾದರು. ಆದರೆ ಅವರೆಲ್ಲ ಇನ್ನೂ ಶಾಲಾಕಾಲೇಜು ವಿದ್ಯಾರ್ಥಿಗಳು. ಎಷ್ಟೋ ಹುಡುಗರ ತಾಯ್ತಂದೆ ಯರಿಗೆ ಅವರು ಶ್ರೀರಾಮಕೃಷ್ಣರ ಬಳಿಗೆ ಬಂದುಹೋಗುವುದೇ ಅಷ್ಟೇನೂ ಸಹ್ಯ ವಾಗದ ವಿಷಯ. ಇನ್ನು ಅವರೆಲ್ಲ ಹಗಲಿರುಳೂ ಗುರುಸೇವೆಯಲ್ಲೇ ಕಳೆಯಲಾರಂಭಿ ಸಿದರೆ ಆ ತಾಯ್ತಂದೆಯರು ಸುಮ್ಮನೆ ಬಿಡುವವರಲ್ಲ ಎಂಬುದರ ಸೂಚನೆ ಸಿಗ ಲಾರಂಭಿಸಿತು!

ಇನ್ನು, ಶಾರದಾದೇವಿಯವರು ಶ್ಯಾಮಪುಕುರದ ಮನೆಗೆ ಬಂದಿರುವುದು ಮತ್ತೂ ಅಸಂಭವನೀಯವಾಗಿ ತೋರಿತು. ಏಕೆಂದರೆ ಈ ಮನೆಯಲ್ಲಿ ಸ್ತ್ರೀಯರಿಗಾಗಿ ಪ್ರತ್ಯೇಕ ಕೋಣೆಯ ಸೌಲಭ್ಯವಿರಲಿಲ್ಲ. ಹಾಗಿರುವಾಗ ಅತ್ಯಂತ ಲಜ್ಜಾವತಿಯಾದ ಶಾರದಾದೇವಿಯವರು ಇಲ್ಲಿ ಏಕಾಂಗಿನಿಯಾಗಿ ಹೇಗೆತಾನೆ ವಾಸಮಾಡಿಯಾರು? ಶ್ರೀರಾಮಕೃಷ್ಣರ ಮೂರ್ನಾಲ್ಕು ಮಂದಿ ತರುಣಶಿಷ್ಯರಲ್ಲದೆ ಭಕ್ತರ ಪೈಕಿ ಅವರನ್ನು ಕಣ್ಣಲ್ಲಿ ಕಂಡಿದ್ದವರು ಕೂಡ ಅಪರೂಪ—ಅಷ್ಟರಮಟ್ಟಿಗೆ ಗೋಪ್ಯವಾಗಿ ಜೀವಿಸಿದ್ದವರು ಅವರು. ಅಂಥವರೀಗ ಇದ್ದಕ್ಕಿದ್ದಂತೆ ಇಲ್ಲಿ ಇಷ್ಟೊಂದು ಜನ ಪುರುಷರ ನಡುವೆ ಇರಬೇಕೆಂದರೆ ಸಾಧ್ಯವೆ? ಈ ಸಮಸ್ಯೆಯನ್ನು ಭಕ್ತರು ಶ್ರೀರಾಮಕೃಷ್ಣರ ಮುಂದಿಟ್ಟರು. ಆದರೆ ಅವರಿಗೂ ಏನು ಹೇಳಬೇಕೆಂದು ತೋಚದಾಯಿತು. "ಹೌದು! ಅವಳು ತುಂಬ ಸಂಕೋಚ ಸ್ವಭಾವದವಳು! ಅವಳು ಇಲ್ಲಿಗೆ ಬಂದು ಇದ್ದಾಳೆಯೆ?... ಇರಲಿ; ಯಾವುದಕ್ಕೂ ಅವಳನ್ನೇ ಒಂದು ಮಾತು ಕೇಳಿನೋಡಿ. ಬರುವಹಾಗಿದ್ದರೆ ಬರಲಿ" ಎಂದುತ್ತರಿಸಿದರು.

ಆದರೆ ಭಕ್ತರ್ಯಾರಿಗೂ ಶಾರದಾದೇವಿಯವರ ಗುಣಸ್ವಭಾವಗಳ ಸ್ಪಷ್ಟ ಪರಿಚಯವೇ ಇರಲಿಲ್ಲವೆನ್ನಬೇಕು. ಅವರು ಸದಾ ಜನಗಳ ಕಣ್ಣಿಂದ ಮರೆಯಾಗಿ ಕಾನನ ಕುಸುಮದಂತೆ ಜೀವಿಸುತ್ತಿದ್ದವರೇನೋ ನಿಜವೇ. ಆದರೆ ಅಗತ್ಯ ಬಿದ್ದರೆ ಎಂತಹ ಕಠಿಣ ಸಂದರ್ಭಕ್ಕೂ, ಅನನುಕೂಲತೆಗೂ ಹೊಂದಿಕೊಂಡುಹೋಗಬಲ್ಲ ಅದ್ಭುತ ಸಾಮರ್ಥ್ಯವೂ ಅವರಲ್ಲಿತ್ತು. ಶ್ರೀರಾಮಕೃಷ್ಣರು ನೀಡಿದ ಶಿಕ್ಷಣದಿಂದ ಅವರು ಬೆಳೆಸಿಕೊಂಡಿದ್ದ ಒಂದು ಶ್ರೇಷ್ಠ ಗುಣ ಇದು. ಈಗ ಪತಿದೇವನಿಗೆ ಪಥ್ಯದ ಅಡಿಗೆ ತಯಾರಿಸಲು ತಮ್ಮ ಅಗತ್ಯವಿದೆ ಎಂದು ಗೊತ್ತಾಯಿತೋ ಇಲ್ಲವೋ, ಅವರು ಬೇರೆ ಯಾವ ಯೋಚನೆಯನ್ನೂ ಮಾಡದೆ ಅತ್ಯಾನಂದದಿಂದ ಹೊರಟು ಬಂದುಬಿಟ್ಟರು.

ಶ್ಯಾಮಪುಕುರದ ಮನೆಯಲ್ಲಿ ಶ್ರೀರಾಮಕೃಷ್ಣರು ಸುಮಾರು ಮೂರು ತಿಂಗಳ ಕಾಲ ಇದ್ದರು. ಈ ಅವಧಿಯಲ್ಲಿ ಶಾರದಾದೇವಿಯವರು ಇಲ್ಲಿ ಎಷ್ಟೋ ಅನನುಕೂಲತೆಗಳನ್ನೆಲ್ಲ ಸಹಿಸಿಕೊಂಡು, ಕ್ಷಣಮಾತ್ರವಾದರೂ ಅಸಮಾಧಾನಗೊಳ್ಳದೆ ಹೇಗೆ ವಾಸವಾಗಿದ್ದರು ಎಂಬುದನ್ನು ನೋಡಿದರೆ ಆಶ್ಚರ್ಯವಾಗದಿರದು. ಆ ಮನೆಯಲ್ಲಿದ್ದ ಎರಡು ಸಣ್ಣ ಕೋಣೆಗಳಲ್ಲಿ ಒಂದನ್ನು ಅವರಿಗೆ ಬಿಟ್ಟುಕೊಡಲಾಯಿತು. ಅದನ್ನು ಅವರು ರಾತ್ರಿ ಮಲಗಲು ಮಾತ್ರ ಬಳಸುತ್ತಿದ್ದರು. ಬೆಳಗ್ಗೆ ಎಲ್ಲರಿಗಿಂತ ಮುಂಚೆಯೇ—ಮೂರು ಗಂಟೆಯೊಳಗಾಗಿ—ಎದ್ದು ಸ್ನಾನಾದಿಗಳನ್ನು ಮುಗಿಸಿಕೊಂಡು, ಎರಡನೆಯ ಮಹಡಿಯ ಬಳಿಯಿದ್ದ ಕಿರಿದಾದ ಮೊಗಸಾಲೆಯಂಥ ಜಾಗಕ್ಕೆ ಹೊರಟು ಹೋಗುತ್ತಿದ್ದರು. ಅಲ್ಲೇ ಶ್ರೀರಾಮಕೃಷ್ಣರಿಗಾಗಿ ಪಥ್ಯದ ಅಡಿಗೆ ಮಾಡುತ್ತಿದ್ದರು. ಅಡಿಗೆ ತಯಾರಾದ ಮೇಲೆ, ಶ್ರೀರಾಮಕೃಷ್ಣರ ವಯಸ್ಕ ಶಿಷ್ಯನಾದ ಹಿರಿಯ ಗೋಪಾಲನ ಮೂಲಕವೋ ಲಾಟುವಿನ ಮೂಲಕವೋ ಕೆಳಗಡೆಗೆ ಸುದ್ದಿ ಕಳಿಸುತ್ತಿದ್ದರು. ಆಗ ಕೆಲವೊಮ್ಮೆ ಕೆಳಗಿರುವ ಭಕ್ತರೆಲ್ಲ ಆಚೀಚೆಗೆ ಸರಿದು, ಶಾರದಾದೇವಿಯವರೇ ಅಡಿಗೆಯನ್ನು ತಂದು ಬಡಿಸಲು ಅವಕಾಶ ಮಾಡಿಕೊಡುತ್ತಿದ್ದರು. ಇಲ್ಲದಿದ್ದರೆ ಆ ಶಿಷ್ಯರಲ್ಲೇ ಯಾರಾದರೊಬ್ಬರು ಹೋಗಿ ಅಡಿಗೆಯನ್ನು ತರುತ್ತಿದ್ದರು. ಶಾರದಾದೇವಿಯವರು ತಮ್ಮ ಮಧ್ಯಾಹ್ನದ ಊಟ ವಿಶ್ರಾಂತಿಗಳನ್ನೆಲ್ಲ ಮೇಲ್ಗಡೆಯೇ ಮುಗಿಸಿಕೊಳ್ಳುತ್ತಿದ್ದರು. ಹೀಗೆ ಹಗಲೆಲ್ಲ ಅಲ್ಲೇ ಇದ್ದು ರಾತ್ರಿ ಸುಮಾರು ಹನ್ನೊಂದು ಗಂಟೆಗೆ ಎಲ್ಲರೂ

ಮಲಗಿದ ಮೇಲೆ ಕೆಳಗಿನ ತಮ್ಮ ಕೋಣೆಗೆ ಹಿಂದಿರುಗಿ, ಕೆಲವೇ ತಾಸುಗಳ ಕಾಲ ನಿದ್ರೆ ಮಾಡುತ್ತಿದ್ದರು.

ಈ ರೀತಿಯಲ್ಲಿ ಶ್ರೀರಾಮಕೃಷ್ಣರು ಗುಣಮುಖರಾಗುವಂತಾಗಲು ಯಾವುದೇ ಸೇವೆಯನ್ನು ಮಾಡಲು ಶಾರದಾದೇವಿಯವರು ಕಟಿಬದ್ಧರಾಗಿ ನಿಂತಿದ್ದರು. ಅವರು ಇಂತಹ ಮಹತ್ವಪೂರ್ಣವಾದ ಜವಾಬ್ದಾರಿಯನ್ನು ನಿರ್ವಹಿಸುತ್ತಿದ್ದರೂ ಕೂಡ ಅವರು ಅಲ್ಲಿ ವಾಸವಾಗಿದ್ದಾರೆಂಬ ವಿಷಯವೇ ಎಷ್ಟೋ ಭಕ್ತರಿಗೆ ತಿಳಿದಿರಲಿಲ್ಲ! ಏಕೆಂದರೆ ಅವರ ವ್ಯಕ್ತಿತ್ವ, ಅವರ ಕಾರ್ಯವಿಧಾನ ಎಲ್ಲವೂ ಅಷ್ಟು ನೀರವ, ಶಾಂತ.

ಶಾರದಾದೇವಿಯವರ ಆಗಮನದಿಂದ ಶ್ರೀರಾಮಕೃಷ್ಣರ ಪಥ್ಯದ ಸಮಸ್ಯೆ ಪರಿಹಾರವಾಯಿತು. ಈಗ ಅವರಿಗೆ ಹಗಲಿರುಳೂ ಸೇವೆ ಮಾಡಬಲ್ಲವರ ಅಗತ್ಯವೊದಗಿದೆ. ಇದಕ್ಕಾಗಿ ತರುಣಶಿಷ್ಯರನ್ನೆಲ್ಲ ಹುರಿದುಂಬಿಸಿ ಸಂಘಟಿಸುವ ಕಾರ್ಯಕ್ಕೆ ಶಿಷ್ಯಾಗ್ರಣಿಯಾದ ನರೇಂದ್ರನಾಥ ಹೆಗಲುಕೊಟ್ಟ.

ಹಾಗೆ ನೋಡಿದರೆ, ಅವನ ಜೀವನದ ಅತಿ ವಿಷಮ ಪರಿಸ್ಥಿತಿಯಿನ್ನೂ ಕೊನೆಗೊಂಡಿರಲಿಲ್ಲ. ತನ್ನ ತಂದೆಯ ಹಠಾತ್ ಮರಣದ ಬಳಿಕ ಎಷ್ಟೆಷ್ಟೋ ಕಷ್ಟನಿಷ್ಠುರಗಳನ್ನೆಲ್ಲ ಅನುಭವಿಸಿ, ಪಡಬಾರದ ಪಾಡುಗಳನ್ನೆಲ್ಲ ಪಟ್ಟು, ಕಡೆಗೆ ಭಗವತಿಯಲ್ಲಿ ಶರಣು ಬಂದ ನರೇಂದ್ರ, ಶ್ರೀರಾಮಕೃಷ್ಣರಿಂದ "ನಿನ್ನ ಮನೆಯವರು ಇನ್ನು ಮೇಲೆ ಸಾಧಾರಣ ಅನ್ನ-ಬಟ್ಟೆಗೆ ತೊಳಲಾಡಬೇಕಾಗುವುದಿಲ್ಲ" ಎಂಬ ಆಶ್ವಾಸನೆಯನ್ನು ಪಡೆದಿದ್ದ. ಈಗ ಮೂರ್‍ನಾಲ್ಕು ತಿಂಗಳ ಹಿಂದೆ, ಅವನಿಗೆ ಪಂಡಿತ ವಿದ್ಯಾಸಾಗರನ ಹೊಸದೊಂದು ಶಾಲೆಯಲ್ಲಿ ಮುಖ್ಯೋಪಾಧ್ಯಾಯನ ಹುದ್ದೆ ಸಿಕ್ಕಿತ್ತು. ಆದರೆ ಸ್ವಲ್ಪ ನೆಲೆಯೂರುವಷ್ಟರಲ್ಲಿ, ಅವನು ತನ್ನ ಪಿತ್ರಾರ್ಜಿತವಾದ ಮನೆಗೆ ಸಂಬಂಧಪಟ್ಟ ಮೊಕದ್ದಮೆಗಾಗಿ ಬಹಳಷ್ಟು ಓಡಾಡಬೇಕಾಗಿ ಬಂದಿತು. ಜೊತೆಗೆ ಬಿ.ಎಲ್. ಪರೀಕ್ಷೆ ಹತ್ತಿರವಾಗುತ್ತಿದ್ದು ಅದಕ್ಕೆ ತಯಾರಿ ನಡೆಸಬೇಕಿತ್ತು. ಹೀಗಿರುವಾಗ, ಈಗ ಶ್ರೀರಾಮಕೃಷ್ಣರು ಕಾಯಿಲೆ ಬಿದ್ದು, ಅವರ ಸೇವೆ ಶುಶ್ರೂಷೆ ಮಾಡುವ ಅಗತ್ಯವೊದಗಿದ್ದರಿಂದ ಅವನು ತನ್ನ ಹುದ್ದೆಗೆ ರಾಜೀನಾಮೆ ಕೊಟ್ಟುಬಿಟ್ಟ. ಮತ್ತು ತನ್ನೆಲ್ಲ ಸಂಕಟಗಳ ನಡುವೆಯೂ ಶಕ್ತಿಮೀರಿ ಶ್ರೀರಾಮಕೃಷ್ಣರ ಸೇವೆಮಾಡಿ ಅವರನ್ನು ಉಳಿಸಿಕೊಳ್ಳುವ ತೀವ್ರ ಪ್ರಯತ್ನದಲ್ಲಿ ತೊಡಗಿದ.

ಅವನೀಗ ರಾತ್ರಿಯ ವೇಳೆ ಶ್ಯಾಮಪುಕುರದ ಮನೆಯಲ್ಲೇ ಇರಲಾರಂಭಿಸಿದ. ಜೊತೆಗೆ ಇತರ ತರುಣರನ್ನೂ ಗುರುಸೇವೆ ಮಾಡುವ ಈ ಪರಮಪುಣ್ಯದ ಕಾರ್ಯದಲ್ಲಿ ಪಾಲ್ಗೊಳ್ಳುವಂತೆ ಪ್ರೇರೇಪಿಸಿದ. ಈಗಾಗಲೇ ಅವರೆಲ್ಲ ಶ್ರೀರಾಮಕೃಷ್ಣರು ನರೇಂದ್ರನ ಗುಣಗಾನ ಮಾಡುವುದನ್ನು ಕೇಳಿದ್ದರು; ಆತನ ಪರಿಚಯ ಹೊಂದಿ, ಅವನ ವ್ಯಕ್ತಿತ್ವದ ವೈಭವವನ್ನು ಕಣ್ಣಾರೆ ಕಂಡು ಮನಸೋತಿದ್ದರು. ಅವನನ್ನು ಶಿಷ್ಯರೆಲ್ಲರ ನಾಯಕನನ್ನಾಗಿ ಪ್ರತಿಷ್ಠಿಸಬೇಕೆಂಬುದು ಶ್ರೀರಾಮಕೃಷ್ಣರ ಉದ್ದೇಶವಾಗಿತ್ತು ಎನ್ನುವುದನ್ನು ನಾವೀಗಾಗಲೇ ಕಂಡಿದ್ದೇವೆ. ಈಗ ಅವರು ರೋಗಗ್ರಸ್ತರಾಗಿ ಹಾಸಿಗೆ ಹಿಡಿದಾಗ ಆ ತರುಣರಲ್ಲಿ—ವಿಶೇಷತಃ ನರೇಂದ್ರನೊಂದಿಗೆ—ಪರಸ್ಪರ ಗಾಢವಿಶ್ವಾಸ, ಸೌಹಾರ್ದ ಬೆಳೆಯತೊಡಗಿತು. ನರೇಂದ್ರ ಅವರನ್ನೆಲ್ಲ ವೈಯಕ್ತಿಕವಾಗಿಯೂ ಒಟ್ಟಾಗಿಯೂ ಆತ್ಮೀಯತೆಯಿಂದ ಮಾತನಾಡಿಸಿದ. ತನ್ನ ಉಜ್ವಲ ವಾಗ್ಧಾರೆಯಿಂದ, ನಿಸ್ವಾರ್ಥಪ್ರೇಮದಿಂದ, ವಿನೂತನ ಆಲೋಚನಾಲಹರಿಯ ಮೋಡಿಯಿಂದ ಅವರನ್ನು

ಸೆರೆಹಿಡಿದ. ಶ್ರೀಗುರುಸೇವೆ ಮತ್ತು ತನ್ಮೂಲಕ ಭಗವದ್ದರ್ಶನ—ಈ ಮಹೋದ್ದೇಶಗಳಿಗಾಗಿ ತಮ್ಮ ಜೀವನಗಳನ್ನೇ ಸಮರ್ಪಣ ಮಾಡುವಂತೆ ಅವರನ್ನು ಪ್ರಚೋದಿಸತೊಡಗಿದ. ಕ್ರಮೇಣ ಆ ಶಿಷ್ಯರಲ್ಲಿ ಕೆಲವರು ತಾವೂ ಶ್ಯಾಮಪುಕುರದಲ್ಲೇ ಇರುತ್ತ, ಶ್ರೀರಾಮಕೃಷ್ಣರ ಸೇವೆಯಲ್ಲಿ ನಿರತರಾದರು.

ತಮ್ಮ ಮಕ್ಕಳ ಮನಸ್ಥಿತಿಗಳಲ್ಲಿ ಆಗುತ್ತಿರುವ ಪರಿವರ್ತನೆಯ ಅರಿವಾಗುವವರೆಗೂ ಈ ತರುಣರ ತಾಯ್ತಂದೆಯರು ಅವರ ಓಡಾಟದ ವಿಚಾರದಲ್ಲಿ ಹೆಚ್ಚಾಗಿ ಆಕ್ಷೇಪವೆತ್ತಲಿಲ್ಲ. ಆದರೆ ಶ್ರೀರಾಮಕೃಷ್ಣರ ರೋಗ ವೃದ್ಧಿಯಾಗುತ್ತ ಬಂದಂತೆ ಈ ಶಿಷ್ಯರು ಸೇವಾಕಾರ್ಯಕ್ಕೆ ತಮ್ಮ ತನುಮನಗಳನ್ನರ್ಪಿಸಿಬಿಟ್ಟರು. ಸಹಜವಾಗಿಯೇ ಶಾಲಾಕಾಲೇಜು ಅಧ್ಯಯನದತ್ತ ಅವರ ಗಮನ ಕಡಿಮೆಯಾಯಿತು; ಅಷ್ಟೇ ಅಲ್ಲ, ಅವರು ರಾತ್ರಿ ವೇಳೆ ತಮ್ಮ ಮನೆಗಳಿಗೆ ಹೋಗುವುದೂ, ಮನೆಗಳಲ್ಲಿ ಊಟ ಮಾಡುವುದೂ ಅಪರೂಪವಾಯಿತು. ಈಗ ಮಾತ್ರ ತಾಯ್ತಂದೆಯರೆಲ್ಲ ಎಚ್ಚತ್ತರು. 'ಏನೋ ಹೆಚ್ಚುಕಡಿಮೆಯಾಗುತ್ತಿದೆ' ಎಂಬ ಶಂಕೆ ತಾಳಿದರು, ಆತಂಕಗೊಂಡರು. "ಸುಮ್ಮನೆ ಎಂದಿನಂತೆ ಹೊತ್ತೊತ್ತಿಗೆ ಮನೆ ಸೇರಿಕೊಂಡು ಊಟಪಾಠಗಳ ಕಡೆಗೆ ಗಮನ ಕೊಡು. ನಿಮ್ಮಂಥ ಹುಡುಗರಿಗೆ ಯಾಕೆ ಆ ಸಾಧುವಿನ ಗೊಡವೆ?" ಎಂದು ತಮ್ಮತಮ್ಮ ಮಕ್ಕಳನ್ನು ಗದರಿಕೊಂಡರು. ಅದು ಫಲಿಸದಿದ್ದಾಗ ಬೆದರಿಕೆ ಹಾಕಿದರು; ಬಲವಂತವಾಗಿ ಹಿಡಿದಿಡಲು ನೋಡಿದರು. ಆದರೆ ಅತ್ತ ನರೇಂದ್ರನ ಪ್ರೇಮಪೂರ್ಣ ಒತ್ತಾಯದ ಬಲ ನಿರಂತರವಾಗಿ ಸೆಳೆಯುತ್ತಿತ್ತು. ತನ್ನ ಅನುಪಮ ಗುರುಭಕ್ತಿ ಶ್ರದ್ಧೆ ನಿಷ್ಠೆಗಳ ದೃಷ್ಟಾಂತದಿಂದ ಮತ್ತು ಉಜ್ವಲ ನುಡಿಗಳಿಂದ ಅವನು ಇತರ ಶಿಷ್ಯರಲ್ಲಿ ಎಂತಹ ಪ್ರಚೋದನೆಯನ್ನುಂಟುಮಾಡಲು ಸಮರ್ಥನಾದನೆಂದರೆ, ಅವರ ತಾಯ್ತಂದೆಯರ ಬುದ್ಧಿಮಾತುಗಳೂ ಬಲಗುಂದಿದುವು. ಮತ್ತು ಹೀಗೆ ಗುರುಸೇವೆ ಆತ್ಮಸಾಕ್ಷಾತ್ಕಾರಗಳ ಆದರ್ಶಕ್ಕಾಗಿ ಜೀವನವನ್ನು ಮೀಸಲಾಗಿರಿಸಲು ಮುಂದಾದವರ ಸಂಖ್ಯೆ ಮೊದಲು ನಾಲ್ಕೈದಾಗಿದ್ದು, ಕೆಲವು ತಿಂಗಳ ಅವಧಿಯಲ್ಲಿ ಅದರ ನಾಲ್ಕರಷ್ಟಾಯಿತು.

* * * *

ಶ್ರೀರಾಮಕೃಷ್ಣರ ಸೇವೆ ಶುಶ್ರೂಷೆಗಳಿಗೆ ಸಂಬಂಧಿಸಿದಂತೆ ಭಕ್ತಸಮೂಹದ ಎರಡು ಮುಖ್ಯ ಸಮಸ್ಯೆಗಳಂತೂ ಬಗೆ ಹರಿದಿದ್ದುವು. ಆದರೆ ಅವೆರಡಕ್ಕಿಂತಲೂ ಜಟಿಲವಾದ ಯಕ್ಷಪ್ರಶ್ನೆಯೊಂದು ಈಗ ಉದ್ಭವಿಸಿದೆ. ಡಾಕ್ಟರುಗಳ ಆಗಿನ ಅಭಿಪ್ರಾಯದಂತೆ, ಶ್ರೀರಾಮಕೃಷ್ಣರ ಗಂಟಲ ರೋಗ ಗುಣಹೊಂದುವುದು ಪೂರ್ತಿ ಅಸಾಧ್ಯವೇನಲ್ಲ; ಆದರೆ ಚಿಕಿತ್ಸೆಯಂತೂ ದೀರ್ಘಕಾಲ ನಡೆಯಲೇಬೇಕು ಎನ್ನುವುದು ಖಂಡಿತ. ಈಗ ಪ್ರಶ್ನೆಯೇನೆಂದರೆ, ಕೊನೆಯವರೆಗೂ ಅದಕ್ಕೆ ತಗಲುವ ವೆಚ್ಚವನ್ನೆಲ್ಲ ವಹಿಸಿಕೊಳ್ಳುವ ಮಹಾನುಭಾವರು ಯಾರು ಎನ್ನುವುದು. ಕೇವಲ ಔಷಧ-ಪಥ್ಯಗಳ ಖರ್ಚು ಮಾತ್ರವಲ್ಲ; ಆದರೊಂದಿಗೆ ಮನೆಬಾಡಿಗೆ, ಯುವಕಭಕ್ತರ ಊಟೋಪಚಾರದ ಖರ್ಚು, ಓಡಾಟದ ಖರ್ಚು ಇವೆಲ್ಲ ಸೇರಿಕೊಳ್ಳುತ್ತವೆ! ಇಷ್ಟನ್ನೂ ಭರಿಸುವ ಸಾಮರ್ಥ್ಯ ಯಾರಿಗಿದೆ? ಅದೂ, ಒಂದು ವಾರವೆ, ಒಂದು ತಿಂಗಳೆ? ಅನಿಶ್ಚಿತ ಅವಧಿಯವರೆಗೆ ನಿರಂತರವಾಗಿ ಸಾಗಬೇಕಾಗಿದೆ! ಈವರೆಗೆ ಶ್ರೀರಾಮಕೃಷ್ಣರ ಚಿಕಿತ್ಸೆಯ ಭಾರ ಹೊತ್ತಿದ್ದವರಲ್ಲಿ ಮುಖ್ಯರಾದವರೆಂದರೆ ಬಲರಾಮ, ಸುರೇಂದ್ರ, ರಾಮಚಂದ್ರ,

ಗಿರೀಶ, ಮಹೇಂದ್ರ ಮೊದಲಾದ ಕೆಲವು ಭಕ್ತರು. ಈ ಭಕ್ತರಲ್ಲಿ ಸುರೇಂದ್ರ, ಬಲರಾಮ, ರಾಮಚಂದ್ರ ಇವರುಗಳು ತಕ್ಕಮಟ್ಟಿನ ಅನುಕೂಲಸ್ಥರೇ ಆದರೂ ಒಟ್ಟೊಟ್ಟಿಗೇ ನೂರಾರು, ಸಾವಿರಾರು ರೂಪಾಯಿ ಖರ್ಚುಮಾಡಬಲ್ಲಷ್ಟು ಧನಿಕರಲ್ಲ. ಆದರೆ ಶ್ರೀರಾಮಕೃಷ್ಣರ ಸತತ ಸಾನ್ನಿಧ್ಯದಿಂದ ಅವರೆದೆಗಳಲ್ಲಿ ಅಲೌಕಿಕ ಉತ್ಸಾಹ, ಭರವಸೆ, ಆನಂದಗಳ ಸರಿತೆಯೊಂದು ನಿರಂತರವಾಗಿ ಹರಿಯುತ್ತಿತ್ತು. ಆದ್ದರಿಂದ ಮುಂದೇನು ಎಂಬ ಚಿಂತೆಯನ್ನು ಹಚ್ಚಿಕೊಳ್ಳದೆ ಅವರೆಲ್ಲ ಕರ್ತವ್ಯಪರರಾಗಿದ್ದರು. ಆದರೆ ಅವರುಗಳ ಈ ಉಲ್ಲಾಸಮಯ ಮನೋಭಾವ ಯಾವಾಗಲೂ ಹಾಗೆಯೇ ಇರುವುದು ಸಾಧ್ಯವಿರಲಿಲ್ಲ. ಆಗಾಗ ಆತಂಕ ಶಂಕೆಗಳು ಅವರನ್ನು ಮುತ್ತುತ್ತಿದ್ದುವು; ಮನಸ್ಸು ಅಸ್ಥಿರವಾಗುತ್ತಿತ್ತು. ಅತ್ಯಾಶ್ಚರ್ಯದ ಸಂಗತಿಯೆಂದರೆ ಅಂತಹ ಸಂದರ್ಭವೊದಗಿದಾಗಲೆಲ್ಲ ಅವರಿಗೆ ಶ್ರೀರಾಮಕೃಷ್ಣರಲ್ಲಿ ಆಧ್ಯಾತ್ಮಿಕ ಶಕ್ತಿಯ ಹೊಚ್ಚ ಹೊಸ ಪ್ರಭೆಯೊಂದು ಮಿಂಚಿನಂತೆ ಗೋಚರವಾಗುತ್ತಿತ್ತು. ಕೂಡಲೇ ಅವರ ಮನಸ್ಸಿನಿಂದ ಅಸಹಾಯಕತೆಯ ಭಾವನೆ ದೂರವಾಗಿ ಹೊಸ ಧೈರ್ಯವುದಿಸುತ್ತಿತ್ತು. ಅಷ್ಟು ಮಾತ್ರವಲ್ಲ, ಆ ಪ್ರಕಾಶದಲ್ಲಿ ಅವರು ಶ್ರೀರಾಮಕೃಷ್ಣರ ದಿವ್ಯತೆಯನ್ನು ಪ್ರಸ್ಫುಟವಾಗಿ ಕಾಣುತ್ತಿದ್ದರು. ಯಾರನ್ನು ತಾವು ತಮ್ಮ ಜೀವನದ ಪರಮಾಧಾರ ಸ್ವರೂಪರೆಂದು ಅಂಗೀಕರಿಸಿ ನಂಬಿಕೊಂಡಿದ್ದೇವೆಯೋ ಅವರು ಕೇವಲ ಒಬ್ಬ ಮಹಾಪುರುಷರಲ್ಲ, ಅವರು ಸಾಕ್ಷಾತ್ ಭಗವತ್ಸ್ವರೂಪಿ, ನರರೂಪಧರನಾದ ನಾರಾಯಣ; ಅವರ ಜನನ, ಅವರು ಗೈದ ತಪಸ್ಸು-ಸಾಧನೆಗಳು, ಅವರ ಪ್ರತಿಯೊಂದು ಕರ್ಮ ಮತ್ತು ಈಗ ಅವರು ಅನಾರೋಗ್ಯದಿಂದಾಗಿ ಅನುಭವಿಸುತ್ತಿರುವ ನೋವು—ಇವೆಲ್ಲವೂ ಜಗದ್ಧಿತಕ್ಕಾಗಿಯೇ ಎಂಬ ದೃಢ ವಿಶ್ವಾಸವು ಆಪ್ತಭಕ್ತರಲ್ಲಿ ದೃಢವಾಗಿ ಮೂಡುತ್ತಲಿತ್ತು. "ಇಲ್ಲದಿದ್ದರೆ, ಜನನ ಜರಾ ಮರಣಗಳೇ ಮೊದಲಾದ ಸಕಲ ದೋಷಗಳಿಗೆ ಅತೀತರೂ ಸತ್ಯಸಂಕಲ್ಪರೂ ಆದವರ ದೇಹಕ್ಕೆ ರೋಗವೆಲ್ಲಿ! ಭಕ್ತರಿಗೆ ತಮ್ಮ ಸೇವಾವಕಾಶ ಕೊಟ್ಟು ಅವರನ್ನು ಧನ್ಯರನ್ನಾಗಿಸುವುದಕ್ಕಾಗಿಯೇ ಈಗ ಶ್ರೀರಾಮಕೃಷ್ಣರು ಹೀಗೆ ರೋಗಗ್ರಸ್ತರಾದಂತಿದ್ದಾರೆ, ಅಷ್ಟೇ. ಆದ್ದರಿಂದ ಸಂಶಯಪಡುವುದೇಕೆ ? 'ಹಣದ ಕೊರತೆಯುಂಟಾದರೇನು ಗತಿ' ಎಂಬ ಈ ಸಂದೇಹವೇಕೆ ? ನಮಗೆ ಈ ಸೇವೆಯ ಭಾಗ್ಯವನ್ನು ನೀಡಿದವರೇ ಅದಕ್ಕೆ ಆಗತ್ಯವಾದ ವ್ಯವಸ್ಥೆಯನ್ನೆಲ್ಲ ಪೂರೈಸುತ್ತಾರೆ !"—ಹೀಗೆಲ್ಲ ತಮ್ಮ ತಮ್ಮೊಳಗೆ ಚರ್ಚಿಸುತ್ತ ಭಕ್ತರು ನೆಮ್ಮದಿ ತಂದುಕೊಳ್ಳುತ್ತಿದ್ದರು.

ಆದರೆ ಇವು ಕೇವಲ ಸಮಾಧಾನ ತಂದುಕೊಳ್ಳುವ ಹುಸಿ ಮಾತುಗಳಾಗಿರಲಿಲ್ಲ. ನಿಜವಾಗಿಯೂ ಅವರಲ್ಲಿ ಅಂತಹ ವಿಶ್ವಾಸ ಮೂಡಿತ್ತು. ಅವರಲ್ಲಿ ಕೆಲವರು ಹೀಗೆನ್ನುತ್ತಿದ್ದರು: "ಠಾಕೂರರು ತಮ್ಮ ವ್ಯವಸ್ಥೆಯನ್ನು ತಾವೇ ಮಾಡಿಸಿಕೊಳ್ಳುತ್ತಾರೆ. ಒಂದು ವೇಳೆ ಹಾಗಲ್ಲದಿದ್ದರೂ ಏನಂತೆ ! ನಮ್ಮ ಮನೆಯ ಒಂದು ಇಟ್ಟಿಗೆ ನಿಂತಿರುವವರೆಗೂ ಚಿಂತೆಯೇಕೆ ? ಈ ಮನೆಯನ್ನು ಅಡವಿಟ್ಟು ಅವರ ಸೇವೆ ನಡೆಸುತ್ತೇವೆ !" ಇನ್ನು ಕೆಲವರು, "ನಮ್ಮ ಮಕ್ಕಳೇ ಕಾಯಿಲೆ ಬಿದ್ದರೆ, ಅಥವಾ ಅವರ ಮದುವೆ ಮುಂಜಿ ಮಾಡಬೇಕಾಗಿ ಬಂದರೆ, ಹೇಗೋ ಮಾಡಿ ಹಣ ಹೊಂದಿಸಿಕೊಳ್ಳುವುದಿಲ್ಲವೆ ? ಹಾಗೆಯೇ ಈಗಲೂ ಮಾಡಿದರಾಯಿತು ! ನನ್ನ ಹೆಂಡತಿಯ ಮೈಮೇಲೆ ಒಂದೆರಡು ಆಭರಣವಿರುವವರೆಗೆ ಯಾವ ಭಯವೂ ಇಲ್ಲ" ಎಂದಿದ್ದರು. ಇನ್ನು ಕೆಲವರು ಬಾಯಿಂದ ಹೀಗೇನೂ ಹೇಳದಿದ್ದರೂ ಮೌನವಾಗಿಯೇ ತಮ್ಮ ಮನೆಖರ್ಚನ್ನು ಕಡಿಮೆ

ಮಾಡಿ, ಉಳಿದ ಹಣವನ್ನು ಸಂತೋಷದಿಂದ ಶ್ರೀರಾಮಕೃಷ್ಣರ ಸೇವೆಗೆ ವಿನಿಯೋಗಿಸ ತೊಡಗಿದ್ದರು. ಶ್ಯಾಮಪುಕುರದ ಮನೆಬಾಡಿಗೆಯ ವೆಚ್ಚವನ್ನು ಸುರೇಂದ್ರನೊಬ್ಬನೇ ನಿರ್ವಹಿಸುತ್ತಿದ್ದ. ಬಲರಾಮ, ಮಹೇಂದ್ರನಾಥ, ರಾಮಚಂದ್ರ, ಗಿರೀಶ ಇವರೆಲ್ಲ ಸೇರಿ ಶ್ರೀರಾಮಕೃಷ್ಣರ ಹಾಗೂ ಅವರ ಪರಿಚಾರಕರ ಇತರ ಖರ್ಚುಗಳನ್ನು ತೂಗಿಸುತ್ತಿದ್ದರು.

ಹೀಗೆ, ಶ್ರೀರಾಮಕೃಷ್ಣರ ಮೇಲಣ ಭಕ್ತಿ-ಪ್ರೇಮಗಳ ದೆಸೆಯಿಂದಾಗಿ ಆಪ್ತಭಕ್ತರ ನಡುವೆ ವಿಶೇಷವಾದ ಪ್ರೀತಿ ವಿಶ್ವಾಸಗಳ ಬಂಧನವೊಂದು ಉಂಟಾಗತೊಡಗಿತ್ತು. ಶ್ರೀರಾಮಕೃಷ್ಣರ ಭಕ್ತರ ಸಂಘ ಎಂಬ ವೃಕ್ಷದ ಬೀಜಾಂಕುರಕಾರ್ಯ ದಕ್ಷಿಣೇಶ್ವರದಲ್ಲೇ ಆಗಿತ್ತು. ಈಗ ಶ್ಯಾಮಪುಕುರದಲ್ಲಿ, ಮತ್ತು ಕೆಲವು ತಿಂಗಳ ಬಳಿಕ ಕಾಶೀಪುರದ ತೋಟದ ಮನೆಯಲ್ಲಿ, ಅದು ಒಂದು ಸ್ಪಷ್ಟ ಆಕಾರ ತಾಳಿ, ತೀವ್ರ ಗತಿಯಲ್ಲಿ ಬೆಳೆಯ ಲಾರಂಭಿಸಿತು. ಇದನ್ನು ಕಂಡು ಭಕ್ತರಿಗೆ ಮತ್ತೆಮತ್ತೆ ಅನ್ನಿಸತೊಡಗಿತ್ತು—'ಈ ರೀತಿ ಯಲ್ಲಿ ಸಂಘನಿರ್ಮಾಣ ಮಾಡುವುದೇ ಶ್ರೀರಾಮಕೃಷ್ಣರು ಕಾಯಿಲೆ ಬೀಳುವುದರ ಉದ್ದೇಶವಾಗಿರಬಹುದೆ ?' ಎಂದು.

ದಿನ ಕಳೆದಂತೆ, ಶ್ರೀರಾಮಕೃಷ್ಣರ ಕಾಯಿಲೆಯ ಕುರಿತಾಗಿ ಭಕ್ತರಲ್ಲಿ ಹೊಸಹೊಸ ಊಹೆಗಳೂ ಆಲೋಚನಾಲಹರಿಗಳೂ ಮೂಡತೊಡಗಿದ್ದುವು. ರೋಗದ ನಿಜವಾದ ಕಾರಣವಾದರೂ ಏನಿರಬಹುದು? ಅವರು ಇನ್ನೆಷ್ಟು ದಿನದಲ್ಲಿ ಗುಣಹೊಂದ ಬಹುದು?—ಈ ಪ್ರಶ್ನೆಗಳ ಬಗ್ಗೆ ಭಕ್ತರು ತೀವ್ರ ಜಿಜ್ಞಾಸೆ ನಡೆಸುತ್ತಿದ್ದರು. ಕೆಲಕೆಲವು ಭಕ್ತರು ಇವುಗಳಿಗೆ ತಮ್ಮದೇ ಆದ ಉತ್ತರಗಳನ್ನು ಊಹಿಸಿಕೊಂಡರು. ಇವು ಆಯಾ ಭಕ್ತರ ಸ್ವಭಾವ-ಮನೋಧರ್ಮಗಳ ಹಿನ್ನೆಲೆಗೆ ತಕ್ಕಂತೆಯೇ ಇದ್ದುವು! ಶ್ರೀರಾಮ ಕೃಷ್ಣರ ಈಗಿನ ದೈಹಿಕ ಸ್ಥಿತಿಯ ಆಧಾರದ ಮೇಲಂತೂ ಕಾಯಿಲೆಯ ಕಾರಣವನ್ನು ಊಹಿಸಲು ಸಾಧ್ಯವಿರಲಿಲ್ಲ. ಆದ್ದರಿಂದ ಹಿಂದಿನ ಅವರ ಅತ್ಯಪೂರ್ವವಾದ ಸಾಧನಾ ಜೀವನದ ಹಿನ್ನೆಲೆಯ ಮೇಲೆ ಭಕ್ತರ ಊಹೆಗಳು ಆಧಾರಿತವಾಗಿದ್ದುವು. ಕೆಲವರು ಈ ಬಗೆಯ ಊಹೆಗಳನ್ನು ಮಾಡಿದ್ದಲ್ಲದೆ, ಎಲ್ಲರ ಮುಂದೂ ಹೇಳಲಾರಂಭಿಸಿದರು.

ಅದರಲ್ಲಿ ಒಂದು ಪಂಗಡದ ಅಭಿಪ್ರಾಯ ಇದು: ಶ್ರೀರಾಮಕೃಷ್ಣರು ಈ ಯುಗದ ಅವತಾರಪುರುಷರು; ಅವರ ಈ ಕಾಯಿಲೆ-ಯಾತನೆಯೆಲ್ಲ ಕೇವಲ ಒಂದು ಲೀಲೆ ಮಾತ್ರ; ಒಂದು ವಿಶಿಷ್ಟ ಉದ್ದೇಶವನ್ನು ಈಡೇರಿಸುವುದಕ್ಕಾಗಿಯೇ ಅವರು ಈ ರೀತಿಯಲ್ಲಿ ಲೀಲೆಯನ್ನು ನಡೆಸುತ್ತಿದ್ದಾರೆ; ಇಷ್ಟಪಟ್ಟರೆ ಅವರು ಈ ಕ್ಷಣದಲ್ಲೇ ಗುಣ ಹೊಂದಿ ಹಿಂದಿನಂತಾಗಬಲ್ಲರು—ಎಂದು. ಹೀಗೆ ಭಾವಿಸಿ ಪ್ರಚಾರ ಮಾಡುತ್ತಿದ್ದವರ ಮುಖಂಡನೆಂದರೆ ಗಿರೀಶ್‌ಚಂದ್ರ ಘೋಷ್. ಇನ್ನೊಂದು ಪಂಗಡ ಹೀಗೆನ್ನುತ್ತಿತ್ತು: ಎಂದಿನಿಂದಲೂ ಶ್ರೀರಾಮಕೃಷ್ಣರು ಸಂಪೂರ್ಣವಾಗಿ ಜಗನ್ಮಾತೆಯನ್ನೇ ಅವಲಂಬಿಸಿ ಕೊಂಡು, ತಮ್ಮ ಪ್ರತಿಯೊಂದು ಕರ್ಮವನ್ನೂ ಆಕೆಯ ಇಚ್ಛೆಗೆ ಅನುಸಾರವಾಗಿಯೇ ನಡೆಸಲು ಅಭ್ಯಾಸ ಮಾಡಿರುವವರಲ್ಲವೆ? ಆದ್ದರಿಂದ ಲೋಕಕಲ್ಯಾಣವೆಂಬ, ನಾವರಿ ಯದ ಒಂದು ವಿಶಿಷ್ಟ ಇಚ್ಛೆಯನ್ನು ಪೂರೈಸುವುದಕ್ಕಾಗಿ ಅವಳೇ ಈಗ ಅವರನ್ನು ಸ್ವಲ್ಪಕಾಲ ರೋಗಗ್ರಸ್ತರನ್ನಾಗಿ ಮಾಡಿಟ್ಟಿದ್ದಾಳೆ. ಅವಳ ಆ ಉದ್ದೇಶ ಈಡೇರಿದೊಡ ನೆಯೇ ಶ್ರೀರಾಮಕೃಷ್ಣರು ಆರೋಗ್ಯವಂತರಾಗಿ ಬಿಡುತ್ತಾರೆ.

ಈ ಎರಡು ಅಭಿಪ್ರಾಯಗಳಿಗೂ ವ್ಯತಿರಿಕ್ತವಾದ ಮತ್ತೊಂದು ಭಾವನೆ ಹೀಗಿತ್ತು: 'ಜನನ ಮರಣ ಮುಪ್ಪು ರೋಗ ಇವೆಲ್ಲ ಶರೀರಧರ್ಮಕ್ಕನುಸಾರವಾಗಿ

ಬರುವಂಥವು; ಶರೀರವೆಂದಮೇಲೆ ಇವೆಲ್ಲ ಬರುವುದು ಅತ್ಯಂತ ಸಹಜ. ಶ್ರೀರಾಮಕೃಷ್ಣರಿಗೆ ಈಗ ಬಂದಿರುವ ಕಾಯಿಲೆಯಾದರೂ ಹಾಗೆ ಉಂಟಾದದ್ದೇ. ಆದ್ದರಿಂದ, ಅದಕ್ಕೆ ಏನೋ ಒಂದು ಅದ್ಭುತ ರಹಸ್ಯ ಕಾರಣವಿರಬೇಕು ಎಂದು ಕಲ್ಪಿಸಿ ಹೀಗೆ ಚರ್ಚೆ ನಡೆಸುತ್ತ ಊಹಾಪೋಹಗಳನ್ನೆಬ್ಬಿಸುವುದೇಕೆ ? ಶ್ರೀರಾಮಕೃಷ್ಣರು ದೈವೀಗುಣ ಸಂಪನ್ನರಾದ ದೇವಮಾನವರೇ ಸರಿ. ಆದರೂ ಅವರು ಯಾರು, ಅವರ ನಿಜಸ್ವರೂಪವೇನು ಎಂಬೀ ವಿಷಯಗಳೆಲ್ಲ ನಮಗೇನೂ ತಿಳಿಯದು. ಸರಿಯಾಗಿ ತರ್ಕ-ಯುಕ್ತಿಗಳಿಂದ ವಿವೇಚಿಸಿ ಸತ್ಯಾಂಶವನ್ನು ಅರಿತುಕೊಂಡ ಹೊರತು ಅವರ ಕುರಿತಾಗಿ ಯಾವ ನಿಷ್ಕರ್ಷೆಯನ್ನೂ ನಾವು ಒಪ್ಪಲಾರೆವು. ಶ್ರೀರಾಮಕೃಷ್ಣರು ಗುಣಮುಖರಾಗುವಂತೆ ನಾವೆಲ್ಲ ಅವರಿಗೆ ಹೃತ್ಪೂರ್ವಕವಾಗಿ ಸೇವೆ ಸಲ್ಲಿಸೋಣ. ಮಾನವಜೀವನದ ಪರಮೋತ್ಕೃಷ್ಟವಾದ ಆದರ್ಶವನ್ನು ಅವರು ನಮ್ಮ ಕಣ್ಣೆದುರಿಗಿಟ್ಟಿದ್ದಾರೆ. ಆ ಅಚ್ಚಿನಲ್ಲೇ ನಮ್ಮನಮ್ಮ ಜೀವನಗಳನ್ನು ರೂಪಿಸಿಕೊಳ್ಳಲು ಶಕ್ತಿಮೀರಿ ಪ್ರಯತ್ನಿಸೋಣ; ಸಾಧನೆ-ಭಜನೆಗಳಲ್ಲಿ ತೊಡಗೋಣ. ಇದೇ ನಮ್ಮ ಈಗಿನ ಪರಮ ಕರ್ತವ್ಯ'—ಈ ಬಗೆಯ ಅಭಿಪ್ರಾಯ ತಾಳಿ ಪ್ರಚಾರ ಮಾಡುತ್ತಿದ್ದವರಲ್ಲಿ ಅಗ್ರಗಣ್ಯನಾದವನೆಂದರೆ ಭಕ್ತವೃಂದದಲ್ಲಿ ಅತ್ಯಂತ ಬುದ್ಧಿವಂತನೂ ವಿಚಾರವಂತನೂ ಆದ ನರೇಂದ್ರನಾಥ. ಈ ವಿಷಯದಲ್ಲಿ ಅವನು ಯುವ ಶಿಷ್ಯವರ್ಗದ ಪ್ರತಿನಿಧಿಯಂತಿದ್ದ ಎನ್ನಬಹುದು.

ಹೀಗೆ ವಿವಿಧ ಭಕ್ತರು ತಮ್ಮ ಸಹಜಸ್ವಭಾವಗಳಿಗೆ ಅನುಗುಣವಾಗಿ ವಿವಿಧ ಭಾವಗಳನ್ನು ಹೊಂದಿದ್ದರಾದರೂ, ಶ್ರೀರಾಮಕೃಷ್ಣರ ಪರಮೋದಾರವಾದ ಬೋಧನೆಯನ್ನು ಅನುಸರಿಸಿ ನಡೆದರೆ ತಮ್ಮ ಜೀವಿತೋದ್ದೇಶ ನೆರವೇರುತ್ತದೆ ಎಂಬುದರಲ್ಲಿ ಅವರಿಗೆ ಸಂಶಯವಿರಲಿಲ್ಲ. ಅಲ್ಲದೆ, ತಾವು ಶ್ರೀರಾಮಕೃಷ್ಣರಿಗೆ ಸಲ್ಲಿಸುವ ಸೇವೆ ಕೇವಲ ಅವರು ಗುಣಹೊಂದುವುದಕ್ಕಾಗಿ ಅಲ್ಲ; ತಮಗೆ ಜನ್ಮಾಂತರದ ಪುಣ್ಯಫಲದಿಂದಾಗಿ ಈ ಅವಕಾಶ ದೊರಕಿದೆ; ಇದು ಎಲ್ಲರಿಗೂ ಯಾವಾಗಲೂ ಪ್ರಾಪ್ತವಾಗುವಂಥದಲ್ಲ ಎಂಬ ನಂಬಿಕೆ ಆ ಭಕ್ತರಲ್ಲಿ ಮೂಡಿತ್ತು. ಆದ್ದರಿಂದ, ಭಕ್ತರಲ್ಲಿ ಒಂದು ಪಂಗಡ ಶ್ರೀರಾಮಕೃಷ್ಣರನ್ನು 'ಅವತಾರಪುರುಷ' ಎಂದು, ಇನ್ನೊಂದು ಪಂಗಡ 'ಗುರು ಹಾಗೂ ಅತಿಮಾನವ' ಎಂದು, ಮತ್ತೊಂದು ಪಂಗಡ 'ದೇವಮಾನವ' ಎಂದು ಹೀಗೆ ಬೇರೆಬೇರೆಯಾಗಿ ಪರಿಗಣಿಸುತ್ತಿದ್ದರೂ ಕೂಡ, ಅವರ ಶ್ರದ್ಧೆ ಮಾತ್ರ ಏಕರೀತಿಯದಾಗಿತ್ತು.

# ವೈದ್ಯನಾಗಿ ಬಂದ, ಶಿಷ್ಯನಾಗಿ ನಿಂದ   ೩೦

ಹೋಮಿಯೋಪಥಿ ವೈದ್ಯನಾದ ಮಹೇಂದ್ರಲಾಲ ಸರ್ಕಾರ ಶ್ರೀರಾಮಕೃಷ್ಣರ ಚಿಕಿತ್ಸೆಯ ಜವಾಬ್ದಾರಿ ಸ್ವೀಕರಿಸಿದ್ದನ್ನು ಹಿಂದೆ ನೋಡಿದೆವು. ಈತ ಒಬ್ಬ ಸಮರ್ಥ ಡಾಕ್ಟರಷ್ಟೇ ಅಲ್ಲದೆ ಕಟುತರ ವಿಚಾರಬುದ್ಧಿಯ, ಪ್ರಭಾವಶಾಲೀ ವ್ಯಕ್ತಿತ್ವದ ಮೇಧಾವಿ. ವಯಸ್ಸು ಸುಮಾರು ಅರವತ್ತು-ಅರವತ್ತೈದು. ಪಾಶ್ಚಾತ್ಯ ಹಾಗೂ ಬ್ರಾಹ್ಮಸಮಾಜದ ಚಿಂತನೆಯ ಗಾಢ ಪ್ರಭಾವಕ್ಕೊಳಗಾದವನು. ಧಾರ್ಮಿಕ-ಆಧ್ಯಾತ್ಮಿಕ ವಿಚಾರಗಳಲ್ಲಿ ನಿಶ್ಚಿತಾಭಿಪ್ರಾಯಗಳನ್ನು ಹೊಂದಿದ್ದವನಾದರೂ ಅವನದು ತೆರೆದ ಮನಸ್ಸು, ಸತ್ಯಾನ್ವೇಷಕ ಬುದ್ಧಿ. ಅವನು ಹಾಸ್ಯಪ್ರಿಯ, ರಸಾಸ್ವಾದಕ; ಆದರೆ ಭಾವುಕನಲ್ಲ. ಇಂತಹ ವರ್ಣಮಯ ವ್ಯಕ್ತಿ ಶ್ರೀರಾಮಕೃಷ್ಣರ ಸಂಪರ್ಕಕ್ಕೆ ಬರುವಂತಾದುದು ತುಂಬ ಮಹತ್ವದ ಸಂಗತಿ. ಸ್ವತಃ ಸರ್ಕಾರನಿಗೆ ಅದರಿಂದಾದ ಲಾಭವಂತೂ ಅಪಾರ. ಅದರೊಂದಿಗೆ, ಅವನು ಶ್ರೀರಾಮಕೃಷ್ಣರೊಂದಿಗೆ ಒಡನಾಡಿದ ರೀತಿ, ನಡೆಸಿದ ಸಂಭಾಷಣೆಗಳು, ಅವರಿಂದ ಕಲಿತ ಪಾಠಗಳು ಇವೆಲ್ಲ ನಮ್ಮ ಪಾಲಿಗೆ ಅತ್ಯಂತ ಸ್ವಾರಸ್ಯಕರ ಮತ್ತು ಬೋಧಪ್ರದ.

ಶ್ರೀರಾಮಕೃಷ್ಣರ ನಿಷ್ಕಲ್ಮಶ ವ್ಯಕ್ತಿತ್ವದಿಂದಲೂ, ನೇರ-ಸರಳ ಮಾತುಗಳಿಂದಲೂ ಸರ್ಕಾರ ಬಹುಬೇಗ ಆಕರ್ಷಿತನಾದ. ಮತ್ತು ಅತ್ಯುತ್ಸಾಹದಿಂದ ಅವರ ಚಿಕಿತ್ಸೆಗೆ ಮುಂದಾದ. ಮೊದಮೊದಲಂತೂ ಅವರ ಶರೀರಸ್ಥಿತಿಯನ್ನು ಸರಿಯಾಗಿ ಪರೀಕ್ಷಿಸಿ ಅಂದಾಜು ಮಾಡುವುದಕ್ಕಾಗಿ ದಿನಕ್ಕೆ ಮೂರು ಸಲದಂತೆ ಎಷ್ಟೋ ದಿನ ತಪ್ಪದೆ ಬಂದು ಔಷಧ-ಪಥ್ಯಗಳನ್ನು ನೀಡಲಾರಂಭಿಸಿದ. ಚಿಕಿತ್ಸೆಗೆ ಸಂಬಂಧಪಟ್ಟ ಕೆಲಸ ಮುಗಿದ ಮೇಲೆ ಅಧ್ಯಾತ್ಮಕ್ಕೆ ಸಂಬಂಧಿಸಿದ ನಾನಾ ವಿಷಯಗಳ ಬಗ್ಗೆ ಶ್ರೀರಾಮಕೃಷ್ಣರೊಂದಿಗೆ ಚರ್ಚಿಸುತ್ತಿದ್ದ. ಅವರ ದೃಷ್ಟಿವೈಶಾಲ್ಯ-ಔದಾರ್ಯಗಳು ಅವನಿಗೆ ವಿಶೇಷವಾಗಿ ಮೆಚ್ಚುಗೆಯಾದುವು. ಕ್ರಮೇಣ ಮೂರ್ನಾಲ್ಕು ಗಂಟೆಗಳಷ್ಟು ಕಾಲವನ್ನು ಅವರ ಸನ್ನಿಧಿಯಲ್ಲೇ ಕಳೆಯಲಾರಂಭಿಸಿದ. ನಿಜಕ್ಕೂ ಆತ ಕೈತುಂಬ ಕೆಲಸದ ಡಾಕ್ಟರು—ಮಾಡಿದಷ್ಟೂ ಕೆಲಸ, ಗಳಿಸಿದಷ್ಟೂ ಸಂಪಾದನೆ! ಅಂಥವರಲ್ಲಿ ಆತ ತಮ್ಮೊಂದಿಗೆ ಅಷ್ಟೊಂದು 'ಬೆಲೆ ಬಾಳುವ' ವೇಳೆ ಕಳೆಯುವುದನ್ನು ಕಂಡು ಒಂದು ದಿನ ಶ್ರೀರಾಮಕೃಷ್ಣರು ಅವನಿಗೆ ಕೃತಜ್ಞತೆ ಸೂಚಿಸಹೊರಟರು. ಸರ್ಕಾರ ಅವರನ್ನು ಅರ್ಧಕ್ಕೇ ತಡೆದು ನುಡಿದ:

“ನಾನು ಕೇವಲ ನಿಮಗೋಸ್ಕರ ಇಲ್ಲಿ ಇಷ್ಟೊಂದು ಹೊತ್ತು ಕಳೆಯುತ್ತಿದ್ದೇನೆ ಎಂದುಕೊಂಡಿರಾ? ಇಲ್ಲ ಇಲ್ಲ. ಇದರಲ್ಲಿ ನನ್ನ ಸ್ವಾರ್ಥವೂ ಇದೆ! ನಿಮ್ಮೊಂದಿಗೆ ಮಾತನಾಡುವುದರಲ್ಲಿ ನನಗೆ ಅಷ್ಟು ಆನಂದ ಸಿಗುತ್ತದೆ. ಹಿಂದೆಯೇ ನಿಮ್ಮನ್ನು ಕಂಡಿದ್ದನಾದರೂ ಆಗ ನಾನು ನೂರೆಂಟು ಕೆಲಸಗಳಿಗೆ ಮನಸ್ಸು ಕೊಟ್ಟಿದ್ದರಿಂದ ಇಷ್ಟೊಂದು ನಿಕಟವಾಗಿ ನಿಮ್ಮನ್ನು ಅರಿತುಕೊಳ್ಳುವ ಅವಕಾಶ ದೊರೆತಿರಲಿಲ್ಲ.

“ನಿಮ್ಮ ಸತ್ಯಪ್ರೇಮಕ್ಕಾಗಿ ನಾನು ನಿಮ್ಮನ್ನು ಇಷ್ಟೊಂದು ಪ್ರೀತಿಸುತ್ತಿದ್ದೇನೆ. ನೀವು ಯಾವುದನ್ನು ಸತ್ಯವೆಂದು ತಿಳಿದಿರುತ್ತೀರೋ ಅದನ್ನು ಒಂದು ಕೂದಲೆಳೆ

ಯಷ್ಟಾದರೂ ಬದಲಿಸಿ ಹೇಳಲಾರಿರಿ, ಅದಕ್ಕೆ ಕಿಂಚಿತ್ತಾದರೂ ವ್ಯತಿರಿಕ್ತವಾಗಿ ನಡೆದು ಕೊಳ್ಳಲಾರಿರಿ. ಆದರೆ ಉಳಿದವರೆಲ್ಲ ಆಡುವುದೊಂದು, ಮಾಡುವುದು ಇನ್ನೊಂದು. ಅದನ್ನು ಮಾತ್ರ ನನಗೆ ಸಹಿಸುವುದಕ್ಕೇ ಸಾಧ್ಯವಿಲ್ಲ. ನಾನು ನಿಮ್ಮ ಮುಖಸ್ತುತಿ ಮಾಡುತ್ತಿದ್ದೇನೆಂದು ಭಾವಿಸಬೇಡಿ. ನಾನು ಅಂಥವನಲ್ಲವೇ ಅಲ್ಲ. ನಾನೊಬ್ಬ ಖಡಕ್ಕಿನ ಮನುಷ್ಯ. ನಮ್ಮಪ್ಪನಾದರೂ ಸರಿಯೆ, ಅವರೇನಾದರೂ ತಪ್ಪುಮಾಡಿದರೆ, ಅದನ್ನು ಅವರೆದುರಿಗೇ ಹೇಳದೆ ಇರಲು ನನ್ನಿಂದ ಸಾಧ್ಯವಿಲ್ಲ. ನನ್ನ ಹರಿತ ನಾಲಿಗೆಗಾಗಿಯೇ ಹೆಸರಾದವನು ನಾನು !"

ಸರ್ಕಾರನ ಮಾತನ್ನು ಕೇಳಿದ ಶ್ರೀರಾಮಕೃಷ್ಣರು ನಗುತ್ತ ಇಂತೆಂದರು: "ಹೌದು, ನಾನೂ ಹಾಗೇ ಕೇಳಿದ್ದೇನೆ. ಆದರೆ, ನೀನು ಎಷ್ಟೋ ದಿನಗಳಿಂದ ಇಲ್ಲಿಗೆ ಬರುತ್ತಿದ್ದರೂ ನನಗೆ ಅದರ ಅನುಭವವಿನ್ನೂ ಆಗಿಲ್ಲ."

ಸರ್ಕಾರ: "ಸದ್ಯ, ಅದು ನಮ್ಮಿಬ್ಬರ ಭಾಗ್ಯ! ನಾನಂತೂ ಯಾವುದಾದರೂ ಸರಿಯಿಲ್ಲ ಅನ್ನಿಸಿದರೆ ಸಹಿಸಿಕೊಂಡು ಸುಮ್ಮನಿರುವ ಕುಳವೇ ಅಲ್ಲ. ಸತ್ಯವೆಂದು ತಿಳಿದದ್ದನ್ನು ನೆಲೆಗೊಳಿಸಬೇಕು ಅಂತಲೇ ನಾನು ಆಜೀವವೂ ಓಡಾಡುತ್ತಿದ್ದೇನೆ; ನಾನು ಹೋಮಿಯೋಪಥಿ ಚಿಕಿತ್ಸೆಯನ್ನು ಹಿಡಿದಿರುವುದೂ ಅದಕ್ಕಾಗಿಯೇ; ಮತ್ತು ಅದೇ ಉದ್ದೇಶದಿಂದಲೇ 'ವಿಜ್ಞಾನಾನುಷ್ಠಾನ ಸಂಘ' (The Association for the Cultivation of Science) ವನ್ನು ಸ್ಥಾಪಿಸಿದ್ದೇನೆ. ನನ್ನೆಲ್ಲ ಕಾರ್ಯಗಳೂ ಆ ಒಂದು ಉದ್ದೇಶಕ್ಕಾಗಿಯೇ ಎನ್ನಬಹುದು."

ಆಗ ಅಲ್ಲಿದ್ದ ಭಕ್ತರಲ್ಲಿ ಕೆಲವರು ಹೀಗೆ ಮಾತನಾಡಿಕೊಂಡರು: "ಡಾಕ್ಟರು ಸತ್ಯಾನುರಾಗಿಗಳೇನೋ ಹೌದು. ಆದರೆ ಅವರಿಗೆ ಅಪರಾ (ಲೌಕಿಕ) ವಿದ್ಯೆಯ ಮಿತಿಗೊಳಪಟ್ಟ ವ್ಯಾವಹಾರಿಕ ಸತ್ಯಗಳನ್ನು ಕಂಡುಕೊಳ್ಳುವುದರಲ್ಲೇ ಆಸಕ್ತಿ. ಠಾಕೂರರಿಗಾದರೋ ಪರಾವಿದ್ಯೆಯ ಮೇಲೆಯೇ ಸದಾ ಅನುರಾಗ."

ಈ ಮಾತು ಸರ್ಕಾರನಿಗೆ ಸಮ್ಮತವಾಗಲಿಲ್ಲ. ಆತ ಹುಬ್ಬುಗಂಟಿಕ್ಕಿ ನುಡಿದ:

"ನಿಮ್ಮದೆಲ್ಲ ಒಂದೇ ಮಾತು! ವಿದ್ಯೆಯಲ್ಲಿ ಪರಾವಿದ್ಯೆ, ಅಪರಾವಿದ್ಯೆ ಅಂತ ಎರಡಿರಲು ಸಾಧ್ಯವೇ? ಯಾವ ವಿದ್ಯೆಯಿಂದ ಸತ್ಯದ ಅರಿವುಂಟಾಗುವುದೋ ಅದ ರಲ್ಲಿ ಮೇಲುಕೀಳುಗಳುಂಟೆ? ಒಂದು ವೇಳೆ ಹಾಗಿದೆ ಅಂತಿಟ್ಟುಕೊಂಡರೂ ಅಪರಾವಿದ್ಯೆಯಿಂದಲೇ ಪರಾವಿದ್ಯೆಯನ್ನು ಗಳಿಸಬೇಕು ಅಂತ ಒಪ್ಪಲೇ ಬೇಕು. ನಿಜಕ್ಕೂ ನಿಸರ್ಗವಿಜ್ಞಾನದ ಅಧ್ಯಯನದ ಮೂಲಕ ತಿಳಿದುಬರುವ ಸಂಗತಿಗಳಿಂದಲೇ ನಾವು ಜಗತ್ಕಾರಣನಾದ ಭಗವಂತನ ವಿಷಯವನ್ನು ಮತ್ತಷ್ಟು ಚೆನ್ನಾಗಿ ಅರಿಯಬಹುದು. ನಾನು ನಾಸ್ತಿಕ ವಿಜ್ಞಾನಿಗಳ ವಿಚಾರವೆತ್ತುವುದಿಲ್ಲ ಬಿಡಿ, ಅವರು ಕಣ್ಣಿದ್ದೂ ಕುರುಡರು. ಆದರೆ 'ಅನಾದಿಯೂ ಅನಂತನೂ ಆದ ಭಗವಂತನನ್ನು ನಾನು ಪೂರ್ತಿಯಾಗಿ ಅರಿತು ಕೊಂಡಿದ್ದೇನೆ' ಅಂತ ಹೇಳುವವನು ಮಾತ್ರ ಸುಳ್ಳುಗಾರ, ದಗಾಖೋರ! ಅಂಥವನನ್ನು ಹುಚ್ಚಾಸ್ಪತ್ರೆಗೆ ಸೇರಿಸಬೇಕು!"

ಶ್ರೀರಾಮಕೃಷ್ಣರು ಮುಗುಳ್ನಕ್ಕು, ಸರ್ಕಾರನನ್ನು ಪ್ರಸನ್ನದೃಷ್ಟಿಯಿಂದ ಈಕ್ಷಿಸುತ್ತ ಹೀಗೆಂದರು: "ನೀನೆಂದದ್ದು ನಿಜ. ಭಗವಂತನಿಗೆ ಒಂದು ಇತಿಮಿತಿಯನ್ನು ಹಾಕಲೆಳಸುವವರು ಕ್ಷುದ್ರಬುದ್ಧಿಯವರು. ನಾನು ಕೂಡ ಅವರ ಮಾತನ್ನು ಸಹಿಸಲಾರೆ."

ಹೀಗೆಂದ ಶ್ರೀರಾಮಕೃಷ್ಣರು ತಮಗೆ ತುಂಬ ಪ್ರಿಯವಾದ, ಸಂತ ರಾಮಪ್ರಸಾ

ದನ ರಚನೆಯೊಂದನ್ನು ಹಾಡುವಂತೆ ಒಬ್ಬನಿಗೆ ಹೇಳಿದರು. ಆತ ಹಾಡಿದ:

*ತಾಯಿ ದುರ್ಗೆಯ ನಿಜವನರಿಯುವ ಧೀರರಾರೋ ಜಗದೊಳು।*
*ಆರು ದರುಶನ ವೇದಶಾಸ್ತ್ರ-ಪುರಾಣವರಿಯದು ಅವಳನು॥*

*ಯೋಗಿಹೃದಯದ ದಿವ್ಯನಿತ್ಯಾನಂದರೂಪಿಣಿ ಆಕೆಯು ।*
*ತನ್ನ ಆನಂದದಲಿ ತಾನೇ ಜೀವರದೆಯೊಳಗಿರುವಳು॥*

*ಸಕಲಬ್ರಹ್ಮಾಂಡವನು ಬಸಿರಲಿ ಧರಿಸಿ ನಿತ್ಯವು ಪೊರೆವಳು ।*
*ಮೂಲಾಧಾರ ಸಹಸ್ರಾರದಿ ಮುನಿಗಳವಳನು ನೆನೆವರು॥*

*ಶಿವನ ಹೊರತಿನ್ನಾರು ಅರಿಯರು ಅವಳ ದಿವ್ಯಸ್ವರೂಪವ ।*
*ಪದ್ಮವನದಲಿ ಹಂಸರೂಪನ ಜೊತೆಗೆ ನಲಿಯುವ ಮಾಟವ॥*

*ಕಡಲನೀಜುವೆನೆಂಬ ಮರುಳನ ಕಲ್ಪನೆಗೆ ನಗುವಂದದಿ ।*
*ಇಂಥ ತಾಯಿಯ ತಿಳಿದೆನೆಂದರೆ ಶ್ರೀಪ್ರಸಾದನು ನಗುವನು॥*

*ಕುಬ್ಜನಾದವ ಮುಗಿಲ ಚಂದ್ರನ ಹಿಡಿವ ಯತ್ನದ ತೆರದಲಿ ।*
*ಬುದ್ಧಿಯರಿತರು ಹೃದಯವರಿಯದು ತಾಯಿ ದುರ್ಗೆಯ ನಿಜವನು॥*

ಹಾಡಿನಲ್ಲಿ ಬುದ್ಧಿ-ಹೃದಯಗಳ ಪ್ರಸ್ತಾಪ ಬಂದಾಗ ಶ್ರೀರಾಮಕೃಷ್ಣರು, ಹಾಡುತ್ತಿದ್ದ ಶಿಷ್ಯನನ್ನು ತಡೆಯುವಂತೆ ಮೆಲ್ಲನೆ ನೇವರಿಸುತ್ತ ಹೇಳಿದರು:

"ಹಾಗಲ್ಲ ಅದು; ಅದು ಉಲ್ಲಟಪಲ್ಲಟವಾಗಿದೆ. 'ಆಕೆಯನ್ನು ಅರಿಯುವುದು ತನ್ನಿಂದ ಸಾಧ್ಯವಿಲ್ಲ ಎಂದು ನನ್ನ ಬುದ್ಧಿಶಕ್ತಿಯು ಕೈಬಿಡುತ್ತದೆ; ಆದರೆ ಇನ್ನೂ ಹೆಚ್ಚು ತಿಳಿಯಬೇಕು ಎಂದು ನನ್ನ ಹೃದಯ ಹಂಬಲಿಸುತ್ತದೆ' ಅಂತ ಆಗಬೇಕು. ಅನಾದಿ-ಅನಂತನಾದ ಈಶ್ವರನನ್ನು ಅರಿಯಲೆಂದು ಹೋಗುವ ಬುದ್ಧಿಗೆ, ಅದು ತನ್ನಿಂದ ಸಾಧ್ಯವಿಲ್ಲ ಎನ್ನುವುದು ಬೇಗನೆ ಗೊತ್ತಾಗಿಬಿಡುತ್ತದೆ. ಆದರೆ ನಮ್ಮ ಅಂತರ್ಯ ಮಾತ್ರ ಅದನ್ನು ಅಷ್ಟು ಬೇಗ ಒಪ್ಪದೆ ಆತನನ್ನು ಅರಿಯಬೇಕೆಂದು ಹಾತೊರೆಯುತ್ತದೆ."

ಸರ್ಕಾರನಿಗೆ ಈ ಮಾತು ತುಂಬ ಮೆಚ್ಚುಗೆಯಾಯಿತು. ಆತನೆಂದ:

"ಸರಿಯಾಗಿ ಹೇಳಿದಿರಿ ನೀವು. ಬುದ್ಧಿ ಎನ್ನುವುದು ಬಹಳ ಚಿಕ್ಕದು. ಒಂದಿಷ್ಟು ತಿಣುಕುವಷ್ಟರಲ್ಲೇ ಅದಕ್ಕೆ ತನ್ನಿಂದ ಇನ್ನು ಸಾಧ್ಯವೇ ಇಲ್ಲ ಎನ್ನಿಸಿಬಿಡುತ್ತದೆ. ಆದರೆ ಹೃದಯ ಹಾಗೆ ಹೇಳದಿರುವುದರಿಂದಲೇ ಮನುಷ್ಯ ಸತ್ಯವನ್ನು ಸ್ವಲ್ಪವಾದರೂ ಕಂಡುಕೊಂಡಿದ್ದಾನೆ, ಇನ್ನೂ ಕಂಡುಕೊಳ್ಳುತ್ತಿದ್ದಾನೆ."

ಈ ನಡುವೆ, ಭಕ್ತಿಪ್ರಚೋದಕವಾದ ಆ ಹಾಡನ್ನು ಕೇಳುತ್ತ ಕೇಳುತ್ತ ಅಲ್ಲಿದ್ದ ಭಕ್ತರೆಲ್ಲ ಮುಗ್ಧರಾಗಿದ್ದರು. ಒಂದಿಬ್ಬರು ಯುವಶಿಷ್ಯರಂತೂ ಭಾವಾವೇಶದಿಂದ ಶರೀರ ಪ್ರಜ್ಞೆಯನ್ನೇ ಕಳೆದುಕೊಂಡಿದ್ದರು. ಅದನ್ನು ಕಂಡ ಡಾಕ್ಟರು ಕುತೂಹಲಗೊಂಡು ಅವರ ನಾಡಿ ಹಿಡಿದು ನೋಡಿ, "ಮೂರ್ಛೆ ತಪ್ಪಿದವರಂತಿದೆ ಇವರ ಸ್ಥಿತಿ!" ಎಂದು ಆಶ್ಚರ್ಯದಿಂದ ಉದ್ಗಾರ ಮಾಡಿದ. ಶ್ರೀರಾಮಕೃಷ್ಣರು ಆ ಶಿಷ್ಯರ ಎದೆಯನ್ನು ನೇವರಿಸುತ್ತ ಮೃದುವಾಗಿ ಭಗವನ್ನಾಮವೋಚ್ಚಾರ ಮಾಡಿದಾಗ ಅವರು ಮತ್ತೆ ಮೊದಲಿನಂತಾದರು. ಅದನ್ನು ಕಂಡ ಸರ್ಕಾರ, ಶ್ರೀರಾಮಕೃಷ್ಣರನ್ನುದ್ದೇಶಿಸಿ ನುಡಿದ: "ಓ, ಇದೆಲ್ಲ ನಿಮ್ಮ ಲೀಲೆಯೋ ಅಂತ ಕಾಣುತ್ತದೆ?" ಆಗ ಶ್ರೀರಾಮಕೃಷ್ಣರು ಮುಗುಳ್ನಗುತ್ತ

"ಇಲ್ಲಪ್ಪ, ನನ್ನದಲ್ಲ ! ಇವೆಲ್ಲ ಆಗುತ್ತಿರುವುದು ಭಗವದಿಚ್ಛೆಯಿಂದಲೇ. ಈ ಹುಡುಗರ ಮನಸ್ಸಿನ್ನೂ ಹಣ-ಹೆಂಡತಿ-ಮಕ್ಕಳು, ಹೆಸರು- ಕೀರ್ತಿ, ಇವುಗಳಲ್ಲಿ ಸಿಕ್ಕಿಕೊಂಡಿಲ್ಲ. ಆದ್ದರಿಂದ ಭಗವಂತನ ಗುಣಮಹಿಮೆಗಳನ್ನು ಕೇಳಿದೊಡನೆ ಅವನಲ್ಲೇ ತನ್ಮಯರಾಗಿ ಬಿಡುತ್ತಾರೆ" ಎಂದರು.

ಈಗ ಹಿಂದಿನ ವಿಷಯ ಮತ್ತೆ ಚರ್ಚೆಗೆ ಬಂದಿತು. ಅಲ್ಲಿದ್ದವರೊಬ್ಬರು ಡಾಕ್ಟರಿಗೆ ಹೇಳಿದರು: "ನೀವೇನೋ ದೇವರನ್ನು ಒಪ್ಪಿಕೊಳ್ಳುತ್ತೀರಿ. ಮತ್ತು ಅವನ ವಿಷಯದಲ್ಲಿ ಇತಿಮಿತಿಗಳನ್ನು ಹೇರುವುದಿಲ್ಲ. ಆದರೆ ವಿಜ್ಞಾನದಲ್ಲೇ ಹೆಚ್ಚು ನಂಬಿಕೆ ತಳೆದಿರುವ ಒಂದು ಪಂಗಡವು ದೇವರ ಅಸ್ತಿತ್ವವನ್ನು ಒಪ್ಪುವುದೇ ಇಲ್ಲ. ಇನ್ನು ಕೆಲವರು ಅವನ ಅಸ್ತಿತ್ವವನ್ನು ಒಪ್ಪಿದರೂ ಅವನು ತಾವು ಆರಾಧಿಸುವ ರೂಪದಲ್ಲಿ ಮಾತ್ರ ಇರಬಲ್ಲನೇ ಹೊರತು ಇತರ ರೂಪಗಳನ್ನು ತಳೆಯಲಾರ ಎಂದು ವಾದಿಸುತ್ತಾರೆ. ಮತ್ತು ಹಾಗೆಂದು ಢಣಾಢಂಗುರವಾಗಿ ಪ್ರಚಾರವನ್ನೂ ಮಾಡುತ್ತಾರೆ."

ಡಾಕ್ಟರ್: "ಹೌದು, ಅವರು ಹಾಗೆನ್ನುವುದುಂಟು. ಆದರೆ ಅವೆಲ್ಲ ಜ್ಞಾನದಿಂದ ದೊರಕಿದ ಅನುಭವದ ಮಾತುಗಳು ಎಂದುಕೊಂಡಿರೇನು ? ಇಲ್ಲ, ಇಲ್ಲ. ಅವೆಲ್ಲ ಪೊಳ್ಳು ಪಾಂಡಿತ್ಯದ ಪರಿಣಾಮ. ಪುಸ್ತಕದಿಂದ ಪಡೆದ ಜ್ಞಾನ ಜೀರ್ಣವಾಗದಿದ್ದಾಗ ಆಗುವುದು ಹೀಗೆಯೇ! ಈ ಸೃಷ್ಟಿಯ ವಿಚಾರವಾಗಿ ಎಲ್ಲೋ ಒಂದೆರಡು ವಿಷಯ ಗಳನ್ನು ತಿಳಿದುಕೊಂಡ ಮಾತ್ರಕ್ಕೆ ತಾವು ಜಗತ್ತಿನ ರಹಸ್ಯವನ್ನೆಲ್ಲ ಅರಿತುಬಿಟ್ಟಿದ್ದೇವೆ ಅಂತಲೇ ಅವರ ಭಾವನೆ. ಇಂಥವರಲ್ಲಿ ಪುಸ್ತಕಪಾಂಡಿತ್ಯವೇನೋ ಇರುತ್ತದೆ, ಆದರೆ ಅನುಭವ ಸೊನ್ನೆ. ಆದರೆ ಯಾರಿಗೆ ಪಾಂಡಿತ್ಯದೊಂದಿಗೆ ಅನುಭವವೂ ಆಗಿರುತ್ತದೋ ಅಂಥವರ ದೃಷ್ಟಿಕೋನದಲ್ಲಿ ಇಂಥ ಬುದ್ಧಿಭ್ರಮಣೆಯ ದೋಷ ಕಂಡುಬರುವುದಿಲ್ಲ. ಭಗವಂತ ಇಂತಿಂಥ ರೂಪುಗಳಲ್ಲಿ ಮಾತ್ರ ಇರಬಲ್ಲ ಎನ್ನುವ ಭಾವನೆಯೆಲ್ಲ ನನ್ನ ಬಳಿಯಲ್ಲೂ ಸುಳಿಯಲಾರವು."

ಶ್ರೀರಾಮಕೃಷ್ಣರು: "ನೀನೆನ್ನುವುದು ನಿಜ. ಪಾಂಡಿತ್ಯದ ಜೊತೆಜೊತೆಯಲ್ಲೇ ಅಹಂಕಾರ ಹುಟ್ಟಿಕೊಳ್ಳುತ್ತದೆ: 'ಪಂಡಿತ ನಾನು, ನಾನು ತಿಳಿದಿದ್ದೇ ಸರಿ, ಇತರರು ಹೇಳುವುದೆಲ್ಲ ತಪ್ಪು' ಎಂಬ ಉದ್ಧಟತನ. ಮನುಷ್ಯ ನಾನಾ ಪಾಶಗಳಿಂದ ಬದ್ಧ. ಪಾಂಡಿತ್ಯದ ಮದವೂ ಒಂದು ಪಾಶ. ನೀನು ಅಷ್ಟೊಂದು ವಿದ್ಯಾಭ್ಯಾಸ ಮಾಡಿದ್ದರೂ ನಿನಗೆ ಅಹಂಕಾರವಿಲ್ಲ. ಇದು ಭಗವಂತನ ಕೃಪೆಯೇ ಸರಿ."

ಈ ಮಾತಿನಿಂದ ಡಾಕ್ಟರಿಗೆ ಒಂದು ಬಗೆಯ ಉತ್ತೇಜನ ಸಿಕ್ಕಂತಾಯಿತು; ಹೇಳಿದ: "ಅಹಂಕಾರ ಪಡುವುದಿರಲಿ, ನಾನು ತಿಳಿದದ್ದು ಅತ್ಯಲ್ಪ ಅಥವಾ ಏನೂ ಇಲ್ಲವೇ ಇಲ್ಲ ಎಂಬುದೇ ನನ್ನ ಭಾವನೆ. ನನಗನ್ನಿಸುತ್ತದೆ, ನಾನು ತಿಳಿಯಬೇಕಾದ್ದು ಇನ್ನೂ ಎಷ್ಟೋ ಇದೆ ಅಂತ. ಅಲ್ಲದೆ, ಪ್ರತಿಯೊಬ್ಬನಿಗೂ ನನಗೆ ಗೊತ್ತಿಲ್ಲದ ವಿಷಯ ಗಳೆಷ್ಟೋ ತಿಳಿದಿರುತ್ತವೆ. ಅದನ್ನು ನಾನು ಕಣ್ಣಾರೆ ಕಾಣುತ್ತಿದ್ದೇನೆ. ಅಂದಮೇಲೆ, ಅಹಂಕಾರ ಪಟ್ಟುಕೊಳ್ಳುವುದಕ್ಕೇನಿದೆ ? ಆದ್ದರಿಂದ ನನಗೆ ಇತರರಿಂದ ಕಲಿತುಕೊಳ್ಳು ವುದಕ್ಕೆ ಅವಮಾನವೆನ್ನಿಸುವುದಿಲ್ಲ. (ಸುತ್ತ ಇರುವ ಭಕ್ತರನ್ನು ತೋರಿಸಿ) ಇವರಿಂದ ಕೂಡ ನಾನು ಕಲಿಯಬೇಕಾದ ವಿಷಯಗಳು ಹಲವು ಇರಬಹುದು. ಆದ್ದರಿಂದ ನಾನು ಯಾರ ಪಾದಧೂಳಿಯನ್ನಾದರೂ ಸ್ವೀಕರಿಸಲು ಸಿದ್ಧನಿದ್ದೇನೆ."

ಇದನ್ನು ಕೇಳಿದ ಶ್ರೀರಾಮಕೃಷ್ಣರೆಂದರು: "ನಾನು ಕೂಡ ಇವರಿಗೆ ಹೇಳುತ್ತಿರು

ತ್ತೇನೆ, 'ಗೆಳೆಯಾ, ಎಲ್ಲಿಯವರೆಗೆ ನಾನು ಜೀವಿಸಿರುತ್ತೇನೋ ಅಲ್ಲಿಯವರೆಗೂ ಕಲಿಯುತ್ತಿರುತ್ತೇನೆ' ಅಂತ." ಬಳಿಕ ಸುತ್ತಲಿರುವವರಿಗೆ ಡಾಕ್ಟರನ್ನು ತೋರಿಸುತ್ತ ನುಡಿದರು: "ಇವರು ಎಷ್ಟು ವಿನಯವಂತರು ನೋಡಿದಿರಾ? ಒಳಗೆ ಒಳ್ಳೇ ಸತ್ತ್ವವಿದೆ. ಆದ್ದರಿಂದಲೇ ಇವರಿಗೆ ಇಂತಹ ಸದ್ಬುದ್ಧಿ."

ಡಾಕ್ಟರ್ ಸರ್ಕಾರನಿಗೆ ತಮ್ಮ ಮೇಲಿನ ಪ್ರೀತಿ-ವಿಶ್ವಾಸ ಕ್ರಮೇಣ ಹೆಚ್ಚುತ್ತ ಬಂದಂತೆ ಶ್ರೀರಾಮಕೃಷ್ಣರು ಅವನನ್ನು ಆಧ್ಯಾತ್ಮಿಕ ಪಥಕ್ಕೆ ತರಲು ತೊಡಗಿದರು. ಮತ್ತು ಆತನ ಬುದ್ಧಿಶಕ್ತಿ, ವಿಚಾರವಂತಿಕೆ, ಸಂಸ್ಕೃತಿಗಳಿಗೆ ಸರಿದೂಗಬಲ್ಲ ನರೇಂದ್ರ ಗಿರೀಶ ಮಹೇಂದ್ರನೇ ಮೊದಲಾದ ತಮ್ಮ ಆಪ್ತಶಿಷ್ಯರೊಂದಿಗೆ ಆತ ಬೆರೆಯುವಂತೆ ಪ್ರೋತ್ಸಾಹಿಸಿದರು. ಈ ಶಿಷ್ಯರು ಶ್ರೀರಾಮಕೃಷ್ಣರ ಸಮ್ಮುಖದಲ್ಲಿ ಮಾತ್ರವಲ್ಲದೆ ಆಗಾಗ ಅವನ ಮನೆಗೂ ಹೋಗಿ ಅವನೊಂದಿಗೆ ನಾನಾ ವಿಚಾರಗಳ ಬಗ್ಗೆ ಚರ್ಚಿಸುತ್ತಿದ್ದರು. ಇವರುಗಳ ಸತ್ವ-ಸಾಮರ್ಥ್ಯವನ್ನೂ ಪ್ರಾಮಾಣಿಕತೆಯನ್ನೂ ಮನಗಂಡ ಮಹೇಂದ್ರ ಲಾಲ ಸರ್ಕಾರ ಅತ್ಯಂತ ಸಂತುಷ್ಟನಾದ. ಗಿರೀಶನ ಪರಿಚಯವಾದ ಮೇಲೆ ಒಂದು ದಿನ ಆತನ 'ಬುದ್ಧಚರಿತೆ' ನಾಟಕವನ್ನು ನೋಡಿಬಂದು ಅದನ್ನು ಮನಸಾರೆ ಕೊಂಡಾಡಿದ. ಮತ್ತು ಅವನ ಇನ್ನೂ ಅನೇಕ ನಾಟಕಗಳನ್ನು ವೀಕ್ಷಿಸಿದ. ಹಾಗೆಯೇ ನರೇಂದ್ರನ ವ್ಯಕ್ತಿತ್ವ, ಮಾತುಕತೆ ಸರ್ಕಾರನನ್ನು ಬಹುವಾಗಿ ಆಕರ್ಷಿಸಿತು. ಒಂದು ದಿನ ಆತ ನರೇಂದ್ರನನ್ನು ಮನೆಗೆ ಆಹ್ವಾನಿಸಿ ಊಟ ಮಾಡಿಸಿದ. ನರೇಂದ್ರ ಸಂಗೀತದಲ್ಲೂ ನಿಪುಣ ಎಂದು ಗೊತ್ತಾದಾಗ ಅವನ ಸಂಕೀರ್ತನವನ್ನು ಕೇಳಲು ಉತ್ಸುಕನಾದ. ಅದಾದ ಕೆಲದಿನಗಳಲ್ಲೇ ಒಂದು ಮಧ್ಯಾಹ್ನ ಅವನು ಶ್ರೀರಾಮಕೃಷ್ಣರನ್ನು ನೋಡಲು ಬಂದಿದ್ದಾಗ ನರೇಂದ್ರ ಎರಡು-ಮೂರು ಗಂಟೆಗಳ ಕಾಲ ಹಾಡಿ ಗಾನಾಮೃತವನ್ನೇ ವರ್ಷಿಸಿದ. ಅದನ್ನಾಲಿಸಿದ ಸರ್ಕಾರ ಪರಮಾನಂದಗೊಂಡು ಅವನನ್ನು ಪುತ್ರವಾತ್ಸಲ್ಯದಿಂದ ತಬ್ಬಿಕೊಂಡು ಮನಸಾರೆ ಹರಸಿ, "ಇವನಂತಹ ಒಬ್ಬ ಹುಡುಗ ಭಗವತ್ಸಾಕ್ಷಾತ್ಕಾರದ ಉದ್ದೇಶದಿಂದ ಬಂದಿರುವುದನ್ನು ಕಂಡು ನನಗೆ ತುಂಬ ಆನಂದವಾಗಿಬಿಟ್ಟಿದೆ. ನಿಜಕ್ಕೂ ಇವನೊಂದು ರತ್ನ! ಇವನು ಯಾವುದಕ್ಕೇ ಕೈಹಾಕಲಿ ಉನ್ನತಿಗೇರುವುದು ಖಂಡಿತ" ಎಂದು ಶ್ರೀರಾಮಕೃಷ್ಣರ ಮುಂದೆ ಹೊಗಳಿದ. ಆಗ ಅವರು ಹೆಮ್ಮೆಯಿಂದ ನರೇಂದ್ರನನ್ನೇ ಈಕ್ಷಿಸುತ್ತ ನುಡಿಯುತ್ತಾರೆ: "ಅದ್ವೈತಗೋಸ್ವಾಮಿಯ ಆರ್ತ ಕರೆಗೋಗೊಟ್ಟು ಶ್ರೀಚೈತನ್ಯನು ನದಿಯಾಪಟ್ಟಣದಲ್ಲಿ ಜನ್ಮವೆತ್ತಿದ ಎನ್ನುವ ಮಾತಿದೆ. ಹಾಗೆಯೇ ಈ ಬಾರಿ ಇವೆಲ್ಲ (ತಮ್ಮ ಅವತಾರ, ಲೀಲೆ) ಇವನಿಗಾಗಿಯೇ!" ಅಂದಿನಿಂದ, ಶ್ರೀರಾಮಕೃಷ್ಣರನ್ನು ಪರೀಕ್ಷಿಸಲು ಬಂದಾಗ ಅಲ್ಲಿ ನರೇಂದ್ರನಿದ್ದರೆ, ಸರ್ಕಾರ ಅವನಿಂದ ಕೆಲವು ಹಾಡುಗಳನ್ನು ಕೇಳದೆ ಹೋಗುತ್ತಿರಲಿಲ್ಲ.

ಭಕ್ತವೃಂದದಲ್ಲಿ ಅನೇಕರು ಶ್ರೀರಾಮಕೃಷ್ಣರನ್ನು ಭಗವದವತಾರರೆಂದು, ಚೈತನ್ಯಾಂಶ ಸಂಭೂತರೆಂದು, ಇಲ್ಲವೆ ಮಹಾಪುರುಷನೆಂದು ಪರಿಗಣಿಸಿ ಅಕ್ಷರಶಃ ಪೂಜಿಸುತ್ತಿದ್ದರೆಂಬುದನ್ನು ನಾವು ಬಲ್ಲೆವು. ಸರ್ಕಾರನಿಗೆ ಮಾತ್ರ ಮೊದಮೊದಲು ಇವೆಲ್ಲ ಸ್ವಲ್ಪವೂ ಸಹ್ಯವಾಗಲಿಲ್ಲ. ಅತಿಭಾವುಕರಾದ ಕೆಲವರು ತಿಳಿಗೇಡಿತನದಿಂದಾಗಿ, ಇಲ್ಲವೆ ಉದ್ದಿಶ್ಯಪೂರ್ವಕವಾಗಿ ಶ್ರೀರಾಮಕೃಷ್ಣರಂತಹ ಒಬ್ಬ ಸರಳ ವ್ಯಕ್ತಿಯನ್ನು ವಿಪರೀತವಾಗಿ ಹೊಗಳಿ ಕೊಂಡಾಡುತ್ತ ದಂಭಾಚಾರದಲ್ಲಿ ತೊಡಗಿದ್ದಾರೆ; ಮತ್ತು ಅವರ ತಲೆಯನ್ನೂ ಕೆಡಿಸುತ್ತಿದ್ದಾರೆ ಎಂದು ಭಾವಿಸಿದ. ಆದರೆ ಶ್ರೀರಾಮಕೃಷ್ಣರನ್ನೂ ಭಕ್ತರನ್ನೂ ಸನಿಹ

ದಿಂದ ನೋಡುತ್ತ, ಅವರ ನಿಕಟ ಪರಿಚಯ ಮಾಡಿಕೊಂಡಹಾಗೆಲ್ಲ ಅವನ ಈ ಭಾವನೆ ದೂರವಾಗುತ್ತ ಬಂತು. ಈ ಭಕ್ತರು ಕೂಡ ಮಂದಮತಿಗಳೇನಲ್ಲ, ಮತ್ತು ಅವರ ಭಕ್ತಿಶ್ರದ್ಧೆ ಪ್ರಾಮಾಣಿಕವಾದದ್ದು, ವಿಚಾರಪೂರ್ಣವಾದದ್ದು ಎಂಬುದರ ಅರಿವಾದಂತೆ ಅವನು ಶ್ರೀರಾಮಕೃಷ್ಣರೊಂದಿಗೆ ಭಕ್ತರನ್ನೂ ಪ್ರೀತಿಯಿಂದ ನೋಡಲಾರಂಭಿಸಿದ. ಇವರೆಲ್ಲ ಸೇರಿಕೊಂಡು ಶ್ರೀರಾಮಕೃಷ್ಣರನ್ನು ಒಬ್ಬ ದೇವತೆಯನ್ನಾಗಿ ಮಾಡಿಕೂರಿಸಿಲ್ಲ ಎಂಬ ಸಮಾಧಾನ ಅವನಿಗುಂಟಾಯಿತು. ಆದರೆ ಅವನಿಗೆ ಭಕ್ತರ ವರ್ತನೆ ಪೂರ್ತಿ ಒಪ್ಪಿಗೆಯಾಗಲೇ ಇಲ್ಲ. ದೇವರಲ್ಲಿ ನಂಬಿಕೆಯಿಡುವುದನ್ನು, ದೇವರಿಗೆ ಶ್ರದ್ಧೆಯನ್ನರ್ಪಿಸುವುದನ್ನು ಆತ ಒಪ್ಪುತ್ತಾನೆ. ಆದರೆ ಒಬ್ಬ 'ಮಾನವಮಾತ್ರ'ನನ್ನು ಗುರು ಅಥವಾ ಅವತಾರ ಎಂದು ಕರೆಯುವುದು ಮಾತ್ರ ಅವನಿಗೆ ಸಹ್ಯವಾಗದ ಸಂಗತಿ. ಶ್ರೀರಾಮಕೃಷ್ಣರೆದುರಿನಲ್ಲೇ ಅವನು ತನ್ನ ಅಭಿಪ್ರಾಯವನ್ನು ಅನೇಕ ವೇಳೆ ನಿಶ್ಶಂಕೆಯಿಂದ ವ್ಯಕ್ತಪಡಿಸುತ್ತಿದ್ದ. ಯಾರನ್ನು ಇಂದು ಜನಕೋಟಿ 'ಅವತಾರಪುರುಷರು' ಎಂದು (ಶ್ರೀರಾಮ, ಶ್ರೀಕೃಷ್ಣನೇ ಮೊದಲಾದವರನ್ನು) ನಂಬಿ ಆರಾಧಿಸುತ್ತದೆಯೋ ಅವರು ನಿಜಕ್ಕೂ ಹೇಗಿದ್ದರೋ ಹೇಗೆ ಜೀವಿಸಿದ್ದರೋ ಊಹಿಸುವುದು ಅಸಾಧ್ಯ; ಏಕೆಂದರೆ ಆ ವ್ಯಕ್ತಿಗಳ ಭಕ್ತ-ಶಿಷ್ಯಗಣ ಅವರ ಮಹಿಮೆಯನ್ನು ಪ್ರಚಾರ ಮಾಡ ಹೊರಟು, ತಮ್ಮ ಬುದ್ಧಿಯ ಲೋಪದೋಷಗಳಿಂದಾಗಿ ಎಷ್ಟೋ ವಿಷಯಗಳನ್ನು ಅತಿಶಯವಾಗಿ ಬಣ್ಣಿಸಿ ವಿಕೃತಗೊಳಿಸಿಬಿಟ್ಟಿದೆ—ಇದು ಸರ್ಕಾರನ ಅಭಿಪ್ರಾಯ. ಒಂದು ದಿನ ಅವನು ಶ್ರೀರಾಮಕೃಷ್ಣರ ಮುಂದೆ ಹೀಗೆಂದ:

"ಪರಮಾತ್ಮನಿಗೆ ಪೂಜೆ ಸಲ್ಲಿಸುವುದನ್ನು ನಾನು ಅರ್ಥ ಮಾಡಿಕೊಳ್ಳಬಲ್ಲೆ. ಆದರೆ ಅನಂತನಾದ ಆ ಪರಮಾತ್ಮನು ಮನುಷ್ಯರೂಪದಲ್ಲಿ ಬರುತ್ತಾನೆ ಎಂದರೆ ಬಹಳ ಕರಕರೆಯಾಗುತ್ತದೆ. ಅವನು ಯಶೋದಾಪುತ್ರನಾಗಿ, ಮೇರೀಪುತ್ರನಾಗಿ, ಶಚೀಪುತ್ರನಾಗಿ (ಕ್ರಮವಾಗಿ ಕೃಷ್ಣ, ಕ್ರಿಸ್ತ, ಶ್ರೀಚೈತನ್ಯ) ಬಂದಿದ್ದಾನೆ ಅಂತ ಹೇಳಿದರೆ ನಂಬುವುದು ಕಷ್ಟ. ಈ 'ಪುತ್ರ'ರ ಪಂಗಡ ನಮ್ಮ ದೇಶವನ್ನೇ ಹಾಳುಮಾಡಿದೆ!"

ಅವನ ಸಿಡುಕು ಮಾತುಗಳನ್ನು ಕೇಳಿ ಶ್ರೀರಾಮಕೃಷ್ಣರು ನಗುತ್ತ ಭಕ್ತರನ್ನುದ್ದೇಶಿಸಿ ನುಡಿದರು: "ಏನೆನ್ನುತ್ತಾನೆ ನೋಡಿ ಈತ! . . . ಆದರೆ ಸಂಕುಚಿತಬುದ್ಧಿಯ ಕೆಲವು ಮತಾಂಧ ಅನುಯಾಯಿಗಳು ಅವತಾರಪುರುಷರ ಮಹಿಮೆಯನ್ನು ಅತಿಶಯ ಮಾಡಿ ಬಣ್ಣಿಸುವುದರ ಮೂಲಕ, ಮತ್ತು ತಮ್ಮ ದೋಷಪೂರ್ಣ ವರ್ತನೆಯ ಮೂಲಕ, ಜನರ ಮನಸ್ಸಿನಲ್ಲಿ ಇಂತಹ ಭಾವನೆಯೇಳುವಂತೆ ಮಾಡಿದುದು ನಿಜ."

ಅವತಾರದ ಸಂಬಂಧವಾಗಿ ಸರ್ಕಾರ ತನ್ನ ಈ ಅಭಿಪ್ರಾಯವನ್ನು ಮುಂದಿಟ್ಟು ಗಿರೀಶಚಂದ್ರ ಘೋಷನೊಂದಿಗೂ ನರೇಂದ್ರನೊಂದಿಗೂ ಅನೇಕ ಬಾರಿ ಸಾಕಷ್ಟು ವಾಗ್ವಾದ ನಡೆಸಿದ. ಇವರಿಬ್ಬರೂ ತಮ್ಮತಮ್ಮದೇ ಆದ ರೀತಿಯಲ್ಲಿ, ಅವನ ವಾದಕ್ಕೆ ತಕ್ಕಂತೆ—ಅಷ್ಟೇ ತರ್ಕಬದ್ಧವಾಗಿ, ನ್ಯಾಯಸಮ್ಮತವಾಗಿ—ಪ್ರತಿವಾದ ಮಾಡಿದರು. ಸರ್ಕಾರನಿಗೆ ಇವರ ಅಭಿಪ್ರಾಯಗಳನ್ನು ಒಪ್ಪಲು ಸಾಧ್ಯವಾಗದಿದ್ದರೂ, ತನ್ನ ಮನಸ್ಸಿಗೆ ಸರಿಯೆನಿಸಿದ್ದನ್ನು ಇತರರ ಮೇಲೆ ಹೇರಲಾಗುವುದಿಲ್ಲ ಎಂಬ ತಿಳಿವಳಿಕೆ ಮೂಡಿತು. ಆದರೆ ತರ್ಕದಿಂದ ತಿಳಿಸಿಕೊಡಲಾಗದಿದ್ದ ವಿಷಯಗಳು ಕೂಡ, ಶ್ರೀರಾಮಕೃಷ್ಣರ ಅಲೌಕಿಕ ಮಾಧುರ್ಯ, ಭಕ್ತಿ ಮತ್ತು ಆಗಾಗ ಸ್ಫುಟವಾಗಿ ವ್ಯಕ್ತಗೊಳ್ಳುತ್ತಿದ್ದ ಅವರ ಆಧ್ಯಾತ್ಮಿಕ ಶಕ್ತಿ ಇವುಗಳ ಮೂಲಕ ಅವನಿಗೆ ಕ್ರಮೇಣ ಮನದಟ್ಟಾಗತೊಡಗಿದ್ದುವು.

ಅದು ಹೇಗೆ ಸಾಧ್ಯವಾಯಿತು ಎಂಬುದನ್ನು ಅಲ್ಲಿ ನಡೆದ ಕೆಲವು ಸಂಭಾಷಣೆಗಳ ಆಧಾರದಿಂದ ಅರಿತುಕೊಳ್ಳಬಹುದು:

ಮನುಷ್ಯಮನುಷ್ಯರ ಅಂತಶ್ಶಕ್ತಿಯಲ್ಲಿ ತಾರತಮ್ಯವಿದೆ, ಮತ್ತು ಒಬ್ಬನಿಗಿಂತ ಮತ್ತೊಬ್ಬ ಹೆಚ್ಚು ಎಂಬುದನ್ನು ಸರ್ಕಾರ ಒಪ್ಪಲಾರ; ಆದ್ದರಿಂದಲೇ ಅವತಾರ ತತ್ತ್ವವನ್ನೂ ಒಪ್ಪಲಾರ. ದೇವರು ಮನುಷ್ಯರನ್ನು ಸೃಜಿಸಿದ್ದಾನೆ; ಪ್ರತಿಯೊಬ್ಬ ಜೀವಿಯೂ ಅನಂತವಾದ, ಕೊನೆಯಿಲ್ಲದ, ಪ್ರಗತಿಯನ್ನು ಸಾಧಿಸುತ್ತಲೇ ಹೋಗ ಬೇಕು ಎನ್ನುವುದು ಆತನ ನಂಬಿಕೆ. ಆದ್ದರಿಂದ ಗಿರೀಶನೇ ಮೊದಲಾದವರೊಂದಿಗೆ ಸಂಭಾಷಿಸುತ್ತ, ಅವನೆನ್ನುತ್ತಾನೆ:

"ಮನುಷ್ಯ 'ಅನಂತ ಪ್ರಗತಿ'ಯನ್ನು ಸಾಧಿಸಲು ಸಾಧ್ಯವೆಂಬ ಮಾತನ್ನು ನಾನು ಒಪ್ಪುತ್ತೇನೆ. ಅದು ಹಾಗಿಲ್ಲದಿದ್ದರೆ ಈ ಮೂರು ದಿನದ ಬಾಳು ಯಾತಕ್ಕೆ ?...ಅಂಥ ಜೀವನ ನಡೆಸುವ ಬದಲು ಉರುಳು ಹಾಕಿಕೊಂಡು ಸತ್ತೇನು ! ಆದರೆ 'ಅವತಾರ'ವೆ ! ಎಂಥದದು ? ಅಮೇಧ್ಯವನ್ನು ವಿಸರ್ಜಿಸುವ ಮನುಷ್ಯನೊಬ್ಬನ ಮುಂದೆ ಅಡ್ಡಬೀಳು ವುದೆ ! ಅರ್ಥಹೀನ ! ಆದರೆ ಭಗವಂತನ ಬೆಳಕೇ ಒಬ್ಬನಲ್ಲಿ ಪ್ರತಿಫಲನಗೊಂಡಿದೆ ಅಂತ ಹೇಳಿ, ಅದನ್ನು ಬೇಕಾದರೆ ಒಪ್ಪೋಣ."

ಗಿರೀಶ (ಮುಗುಳ್ನಗುತ್ತ): "ಆದರೆ ಆ ಭಗವಂತನ ಬೆಳಕನ್ನು ನೀವೇನೂ ನೋಡಿಲ್ಲವಲ್ಲ !"

ಇದಕ್ಕೆ ಕೂಡಲೇ ಉತ್ತರಿಸದೆ ಸರ್ಕಾರ ಸ್ವಲ್ಪ ತಡವರಿಸಿದ. ಆಗ ಅವನ ಸ್ನೇಹಿತ ಆತನ ಕಿವಿಯಲ್ಲೇನೋ ಉಸುರಿದ.

ಸರ್ಕಾರ (ಗಿರೀಶನಿಗೆ): "ನೀವೂ ಅಷ್ಟೇ, ಪ್ರತಿಫಲನವನ್ನಲ್ಲದೆ ನೇರವಾಗಿ ಬೆಳಕನ್ನೇ ನೋಡಿಲ್ಲವಲ್ಲ !"

ಗಿರೀಶ (ಬಿಸಿಯೇರಿ): "ನೋಡುತ್ತಿದ್ದೇನೆ ! ಬೆಳಕನ್ನೇ ಪ್ರತ್ಯಕ್ಷವಾಗಿ ನೋಡು ತ್ತಿದ್ದೇನೆ ! ಶ್ರೀಕೃಷ್ಣ ಒಬ್ಬ ಅವತಾರಪುರುಷ ಅಂತ ನಾನು ಸಾಬೀತು ಮಾಡುತ್ತೇನೆ. ಆಗದಿದ್ದರೆ ನನ್ನ ನಾಲಿಗೆಯನ್ನೇ ಕತ್ತರಿಸಿಕೊಂಡುಬಿಡುತ್ತೇನೆ !"

ಸ್ವಲ್ಪ ಹೊತ್ತಿನಿಂದ ಇವರ ಮಾತುಗಳನ್ನು ಸುಮ್ಮನೆ ಆಲಿಸುತ್ತಿದ್ದ ಶ್ರೀರಾಮ ಕೃಷ್ಣರು ಈಗ ಮಧ್ಯ ಪ್ರವೇಶಿಸಿ ನುಡಿದರು: "ಇವೆಲ್ಲ ಕೆಲಸಕ್ಕೆ ಬಾರದ ಮಾತುಗಳು. ಸನ್ನಿಯಿಂದ ನರಳುವ ರೋಗಿಯ ಬಡಬಡಿಕೆಯ ಹಾಗೆ. ಬೆಣ್ಣೆಯನ್ನು ಕಾಯಿಸಿದಾಗ ಮೊದಲು ಅದು 'ಕಲಕಲ' ಅಂತ ಶಬ್ದಮಾಡುತ್ತದೆ. ಆದರೆ ಪೂರ್ತಿ ಕಾದ ಮೇಲೆ ಶಬ್ದವೆಲ್ಲ ನಿಂತುಹೋಗುತ್ತದೆ. ಯಾರ ಮನಸ್ಸು ಯಾವ ರೀತಿಯದೋ ಅದಕ್ಕನು ಗುಣವಾಗಿಯೇ ಅವರು ಭಗವಂತನನ್ನು ಭಾವಿಸುವುದು.

"ಲಕ್ಷ್ಮಣ ಕೇಳುತ್ತಾನೆ, 'ರಾಮ ! ವಸಿಷ್ಠರಂಥ ಮಹರ್ಷಿಗಳಿಗೂ ಪುತ್ರ ಶೋಕವೆ ?' ಅಂತ. ಅದಕ್ಕೆ ರಾಮನೆನ್ನುತ್ತಾನೆ, 'ತಮ್ಮಾ, ಯಾರಲ್ಲಿ ಜ್ಞಾನ ಇರು ವುದೋ ಅವರಲ್ಲಿ ಅಜ್ಞಾನವೂ ಇರುತ್ತದೆ. ಬೆಳಕಿನ ಬೋಧೆ ಇರುವವರಿಗೆ ಕತ್ತಲಿನ ಬೋಧೆಯೂ ಇರುತ್ತದೆ. ಆದ್ದರಿಂದ ನೀನು ಜ್ಞಾನ-ಅಜ್ಞಾನಗಳೆರಡಕ್ಕೂ ಅತೀತನಾಗು' ಅಂತ. ಭಗವಂತನನ್ನು ತುಂಬ ನಿಕಟವಾಗಿ ಕಂಡು ಅರಿತಾಗ ಅಂತಹ ಸ್ಥಿತಿ ಒದಗುತ್ತದೆ. ಇದಕ್ಕೇ ವಿಜ್ಞಾನ ಅಂತ ಹೆಸರು.

"ಕಾಲಿಗೆ ಮುಳ್ಳು ಚುಚ್ಚಿಕೊಂಡರೆ ಇನ್ನೊಂದು ಮುಳ್ಳನ್ನು ಹುಡುಕಿತಂದು

ಆದರಿಂದ ಮೊದಲನೆಯ ಮುಳ್ಳನ್ನು ತೆಗೆಯುತ್ತೇವೆ; ಬಳಿಕ ಎರಡನ್ನೂ ಬಿಸಾಡುತ್ತೇವೆ. ಹಾಗೆಯೇ ಜ್ಞಾನ ಎನ್ನುವ ಮುಳ್ಳಿನಿಂದ ಅಜ್ಞಾನ ಎನ್ನುವ ಮುಳ್ಳನ್ನು ತೆಗೆದು ಹಾಕಿ ಆಮೇಲೆ ಎರಡನ್ನೂ ಬಿಸಾಡಬೇಕು.

"ಪೂರ್ಣಜ್ಞಾನಕ್ಕೆ ಕೆಲವು ಲಕ್ಷಣಗಳಿವೆ. ಅವುಗಳಲ್ಲಿ ಒಂದೆಂದರೆ, ತರ್ಕ, ಚರ್ಚೆ ಇವೆಲ್ಲ ನಿಂತುಹೋಗುವುದು."

ಸರ್ಕಾರ: "ಅದು ಸರಿ; ಆದರೆ ಆ ಪೂರ್ಣಜ್ಞಾನ ಎನ್ನುವಂಥದು ಶಾಶ್ವತವಾಗಿ ಉಳಿದುಕೊಳ್ಳುತ್ತದೆಯೆ ? ನೀವು ಹೇಳುತ್ತೀರಿ, ಎಲ್ಲವೂ ದೇವರೇ ಅಂತ. ಹಾಗಾದರೆ ನೀವೇಕೆ ಈ ಪರಮಹಂಸಗಿರಿ ಮಾಡುತ್ತೀರಿ ? ಇವರೆಲ್ಲ ಬಂದು ನಿಮ್ಮ ಸೇವೆ ಮಾಡುವುದು ತಾನೆ ಏಕೆ ? ನೀವು ಸುಮ್ಮನೆ ನಿಮ್ಮಷ್ಟಕ್ಕೆ ಗಪ್‌ಚಿಪ್ಪಾಗಿ ಇದ್ದುಬಿಡ ಬಾರದೆ ?"

ಶ್ರೀರಾಮಕೃಷ್ಣರು (ಮಂದಹಾಸ ಬೀರುತ್ತ): "ನೀರು ಶಾಂತವಾಗಿದ್ದರೂ ಅಷ್ಟೆ, ಅಲೆ ಏಳುತ್ತಿದ್ದರೂ ಅಷ್ಟೆ, ನೀರು ನೀರೆ.

"ಇನ್ನೊಂದು ವಿಷಯ ಹೇಳಬೇಕು ನಿನಗೆ. ನಾನ್ಯಾಕೆ 'ಮಾವುತ ನಾರಾಯಣ'ನ ಮಾತು ಕೇಳಬಾರದು ? ಒಮ್ಮೆ ಒಬ್ಬ ಗುರು ತನ್ನ ಶಿಷ್ಯನಿಗೆ, 'ಸಕಲವೂ ನಾರಾಯಣನೇ' ಅಂತ ಬೋಧಿಸಿದ್ದನಂತೆ. ಆ ಶಿಷ್ಯ ದಾರಿಯಲ್ಲಿ ಹೋಗುತ್ತಿದ್ದಾಗ ಒಂದು ಮದಿಸಿದ ಆನೆ ಎದುರಿಗೆ ಬಂತು. ಆದರೆ ಅವನು ಗುರುವಿನ ಮಾತನ್ನು ಜ್ಞಾಪಿಸಿ ಕೊಂಡು ಅಲ್ಲೇ ನಿಂತ. 'ಆನೆಯೂ ನಾರಾಯಣನೇ ಅಲ್ಲವೆ ? ಅದೇನು ಮಾಡೀತು ?' ಅಂತ ಆಲೋಚಿಸಿದ. 'ಓಡಿಹೋಗು, ಓಡಿಹೋಗು !' ಅಂತ ಮಾವುತ ಕೂಗಿ ಕೊಂಡರೂ ಅವನು ಅಲುಗಾಡಲೇ ಇಲ್ಲ. ಸರಿ, ಆನೆ ಬಂದು ಅವನನ್ನು ಎತ್ತಿ ಪಕ್ಕಕ್ಕೆ ಬಿಸಾಡಿ ಹೊರಟುಹೋಯಿತು. ಆದರೆ ಅವನು ಸಾಯಲಿಲ್ಲ. ಸ್ವಲ್ಪ ಶೈತ್ಯೋಪಚಾರ ಮಾಡಿದ ಮೇಲೆ ಪ್ರಜ್ಞೆ ಮರಳಿ ಎದ್ದ. ಗುರುಗಳು, 'ಯಾಕಯ್ಯಾ ನೀನು ಅಲ್ಲಿಂದ ಓಡಿಹೋಗದೆ ಅಲ್ಲೇ ನಿಂತದ್ದು ?' ಅಂತ ಕೇಳಿದಾಗ, 'ನೀವೇ ಹೇಳಿದ್ದಿರಲ್ಲ, ಎಲ್ಲವೂ ನಾರಾಯಣನೇ ಅಂತ ? ಅದಕ್ಕೇ' ಅಂದ. ಆಗ ಗುರುಗಳು ಹೇಳುತ್ತಾರೆ, 'ಅದೇನೋ ನಿಜಾಪ್ಪ, ಆದರೆ ನೀನು 'ಮಾವುತ ನಾರಾಯಣ'ನ ಮಾತಿಗೆ ಯಾಕೆ ಬೆಲೆ ಕೊಡಲಿಲ್ಲ ?'

"ಶುದ್ಧಮನಸ್ಸು, ಶುದ್ಧಬುದ್ಧಿಗಳಾಗಿ ನಮ್ಮೊಳಗೆ ವಾಸಿಸುತ್ತಿರುವವನು ಸ್ವಯಂ ಭಗವಂತನೇ. ನಾನು ಯಂತ್ರ, ಅವನು ಯಂತ್ರಿ; ನಾನು ಮನೆ, ಆತ ಯಜಮಾನ; ಅವನೇ ಮಾವುತ ನಾರಾಯಣ."

ಆದರೆ ಸರ್ಕಾರನಿಗೆ ಇದಾವುದೂ ಸಮ್ಮತವಾಗುತ್ತಿಲ್ಲ.

"ನಿಮ್ಮನ್ನೊಂದು ಪ್ರಶ್ನೆ ಕೇಳುತ್ತೇನೆ—ಹಾಗಿದ್ದರೆ ನೀವ್ಯಾಕೆ ಈಗ ಈ ಕಾಯಿಲೆ ಯನ್ನು ಹೋಗಲಾಡಿಸು ಅಂತ ನನ್ನನ್ನು ಕೇಳಿಕೊಳ್ಳುತ್ತಿದ್ದೀರಿ ?"

ಶ್ರೀರಾಮಕೃಷ್ಣರು: "ಎಲ್ಲಿಯವರೆಗೆ ನನಗೆ 'ಅಹಂ' ಎಂಬ 'ಘಟ'ದ ಪರಿವೆ ಯಿರುವುದೋ ಅಲ್ಲಿಯವರೆಗೂ ಹೀಗೇ ವ್ಯವಹರಿಸಬೇಕಾಗುತ್ತದೆ. ಎಲ್ಲೆಲ್ಲೂ ನೀರು ತುಂಬಿಕೊಂಡಿರುವ ಒಂದು ಮಹಾಸಾಗರವನ್ನು ಊಹಿಸಿಕೊ. ಅದರೊಳಗೆ ಬಿರಿದ ಘಟವೊಂದು ಮುಳುಗಿಕೊಂಡಿದೆ ಅನ್ನು. ನೀರು ಘಟದ ಒಳಗೂ ಇದೆ, ಹೊರಗೂ ಇದೆ. ಆದರೆ ಆ ಘಟ ಒಡೆದ ಹೊರತು ನೀರು ಬೆರೆತು ಒಂದಾಗಲಾರದು. ನನ್ನೊಳಗೆ

ಈ 'ಅಹಂ' ಎಂಬ ಘಟವನ್ನು ಇಟ್ಟಿರುವವನು ಅವನೇ."

ಸರ್ಕಾರ (ಅಸಹನೆಯಿಂದ): "ಈ ಅಹಂ ಗಿಹಂ ಇವೆಲ್ಲ ಏನು ನೀವು ಹೇಳುತ್ತಿರುವುದು ? ಏನು, ಆತ ನಮ್ಮ ಮೇಲೆ ಕಣ್ಕಟ್ಟು ಮಾಡುತ್ತಿದ್ದಾನೆ ಅಂತ ಹೇಳುತ್ತಿದ್ದೀರಾ ?"

ಗಿರೀಶ (ಸರ್ಕಾರನಿಗೆ): "ಮಹಾಶಯರೇ, ಆತ ಹಾಗೆ ಮಾಡುತ್ತಿಲ್ಲ ಅಂತ ನಿಮಗೆ ಹೇಗೆ ಗೊತ್ತು ?"

ಶ್ರೀರಾಮಕೃಷ್ಣರು (ಮುಗುಳ್ನಗುತ್ತ): "ಅಹಂ ಎಂಬುದನ್ನು ನಮ್ಮಲ್ಲಿಟ್ಟಿರುವವನು ಅವನೇ. ಇದೆಲ್ಲ ಆತನ ಆಟ, ಆತನ ಲೀಲೆ. ರಾಜನ ಮಕ್ಕಳು ಆಟವಾಡುತ್ತಿದ್ದಾರೆ ಎಂದುಕೊ. ಅವರೆಲ್ಲ ರಾಜಕುಮಾರರೇ ಆದರೂ, ಆಟದ ವೇಳೆಯಲ್ಲಿ ಒಬ್ಬ ಮಂತ್ರಿಯಾಗುತ್ತಾನೆ, ಒಬ್ಬ ಸೇನಾಪತಿಯಾಗುತ್ತಾನೆ. ಹೀಗೆ ಉಳಿದವರೂ ಒಂದೊಂದು ಪಾತ್ರ ವಹಿಸಿಕೊಳ್ಳುತ್ತಾರೆ, ಅಲ್ಲವೆ ?

(ಡಾಕ್ಟರಿಗೆ) "ನೋಡು, ನಿನಗೇ ಸಾಕ್ಷಾತ್ಕಾರವಾದಾಗ ಇವೆಲ್ಲ ಒಪ್ಪಿಗೆಯಾಗುತ್ತವೆ. ಆತನ ದರ್ಶನ ದೊರೆಯಿತು ಎಂದರೆ ಸಕಲ ಸಂಶಯಗಳೂ ನಿವೃತ್ತಿಯಾಗುತ್ತವೆ."

ಸರ್ಕಾರ: "ಎಂದಿಗಾದರೂ ಎಲ್ಲ ಸಂಶಯಗಳೂ ತೊಲಗುವುದುಂಟೆ !"

ಶ್ರೀರಾಮಕೃಷ್ಣರು: "ನಾನು ಈವರೆಗೂ ಹೇಳಿದ್ದನ್ನು ಅರ್ಥಮಾಡಿಕೊ. ಇನ್ನೂ ಹೆಚ್ಚಾಗಿ ತಿಳಿದುಕೊಳ್ಳಬೇಕೆಂಬ ಇಚ್ಛೆಯಾದರೆ ನೀನು ಏಕಾಂತದಲ್ಲಿ ಪ್ರಾರ್ಥನೆ ಮಾಡಬೇಕಾಗುತ್ತದೆ. ಏಕೆ ಹೀಗೆಲ್ಲ ಮಾಡಿಟ್ಟಿದ್ದೀಯ ಅಂತ ಅವನನ್ನೇ ಕೇಳು.

"ಮನೆಯ ಚಿಕ್ಕ ಹುಡುಗ ಭಿಕ್ಷುಕನಿಗೆ, ಒಂದು ಹಿಡಿ ಅಕ್ಕಿಯನ್ನು ಬೇಕಾದರೆ ಹಾಕಬಲ್ಲ. ಆದರೆ ಆತ ರೈಲ್ವೆ ಛಾರ್ಜು ಕೇಳಿದರೆ ಮನೆಯ ಯಜಮಾನನ್ನೇ ಕರೆಯಬೇಕಾಗುತ್ತದೆ."

ಸರ್ಕಾರ ಮೌನವಾಗಿ ಕುಳಿತಿದ್ದಾನೆ.

ಶ್ರೀರಾಮಕೃಷ್ಣರು: "ಇರಲಿ, ನೀನು ವಿಚಾರಪ್ರೇಮಿ, ಒಳ್ಳೆಯದೇ... ಸರಿ, ಈಗ ಸ್ವಲ್ಪ ವಿಚಾರ ಮಾಡೋಣ. ಇಲ್ಲಿ ಕೇಳು. ಜ್ಞಾನಿಗಳ ದೃಷ್ಟಿಯಲ್ಲಿ ಅವತಾರ ಎನ್ನುವಂಥಾದ್ದೇನೂ ಇಲ್ಲ.

"ಒಮ್ಮೆ ಒಬ್ಬ ಜಾದೂಗಾರ ರಾಜನ ಬಳಿಗೆ ಬಂದು ತನ್ನ ವಿದ್ಯೆಯನ್ನು ಪ್ರದರ್ಶಿಸಲಾರಂಭಿಸಿದ. ಈಗ ಇದ್ದಕ್ಕಿದ್ದಂತೆ ಅವನು ಮಾಯವಾಗಿ ಅಲ್ಲೊಬ್ಬ ಕುದುರೆ ಸವಾರ ನಿಂತಿರುವುದನ್ನು ಎಲ್ಲರೂ ಕಂಡರು. ಆ ಸವಾರ ಅದ್ಭುತವಾದ ವಸ್ತ್ರಾಭರಣಗಳನ್ನು ಧರಿಸಿದ್ದ; ನಾನಾ ವಿಧವಾದ ಶಸ್ತ್ರಾಸ್ತ್ರಗಳನ್ನು ಹಿಡಿದಿದ್ದ. ಈಗ ರಾಜನೂ ಆಸ್ಥಾನಿಕರೂ ವಿಚಾರ ಮಾಡತೊಡಗಿದರು ತಮ್ಮೆದುರಿಗೆ ಕಾಣಬರುತ್ತಿರುವ ಈ ಅಮೋಘ ದೃಶ್ಯದಲ್ಲಿ ಯಾವುದು ಸತ್ಯ, ಯಾವುದು ಸತ್ಯವಲ್ಲ ಎಂದು. ಕುದುರೆಯಂತೂ ಸತ್ಯವೆಂದು ತೋರಲಿಲ್ಲ. ಹಾಗೆಯೇ ಆತನ ವಸ್ತ್ರಾಭರಣಗಳೂ ಶಸ್ತ್ರಾಸ್ತ್ರಗಳೂ ಸತ್ಯವೆಂಬಂತೆ ಅನ್ನಿಸಲಿಲ್ಲ. ಈ ವೇಳೆಗೆ ಅಲ್ಲಿ ಇದ್ದಕ್ಕಿದ್ದಂತೆ ಜಾದೂಗಾರ ತನ್ನ ಸ್ಥಾನದಲ್ಲಿ ಪುನಃ ಪ್ರತ್ಯಕ್ಷನಾದ. ಆಗ ಅವರಿಗೆಲ್ಲ ಸಂದೇಹಕ್ಕೆ ಎಡೆಯಿಲ್ಲದಂತೆ ಗೋಚರವಾಯಿತು—ಅಲ್ಲಿರುವುದು ಸವಾರನೊಬ್ಬನೇ, ಅವನು ಮಾತ್ರ ಸತ್ಯ ಎನ್ನುವುದು. ಈ ದೃಷ್ಟಾಂತದ ಇಂಗಿತಾರ್ಥವೇನೆಂದರೆ, ಬ್ರಹ್ಮವೊಂದೇ ಸತ್ಯ, ಜಗತ್ತು ಮಿಥ್ಯೆ

ಅಂತ. ವಿಚಾರ ಮಾಡುತ್ತ ಹೋದರೆ ಕಡೆಗೆ ಏನೂ ಉಳಿಯುವುದಿಲ್ಲ."

ಸರ್ಕಾರ: "ಒಪ್ಪಿದೆ. ಇದಕ್ಕೆ ನನ್ನ ಆಕ್ಷೇಪಣೆಯಿಲ್ಲ."

ಶ್ರೀರಾಮಕೃಷ್ಣರು: "ಆದರೆ ಭ್ರಮೆಯಿಂದ ಪಾರಾಗುವುದು ಅಷ್ಟು ಸುಲಭವಲ್ಲ. ಜ್ಞಾನ ದೊರೆತ ಮೇಲೂ ಸ್ವಲ್ಪ ಭ್ರಮೆ ಅಂಟಿಕೊಂಡಿರುತ್ತದೆ. ಒಬ್ಬ ಮನುಷ್ಯ ಕನಸಿನಲ್ಲಿ ಹುಲಿಯನ್ನು ಕಂಡು ಬೆದರಿದ. ಎಚ್ಚರವಾಯಿತು. ಆದರೆ ಆಮೇಲೂ ಅವನೆದೆ ಡಬ್ ಡಬ್ ಅಂತ ಹೊಡೆದುಕೊಳ್ಳುತ್ತಲೇ ಇತ್ತು."

ಸರ್ಕಾರ: "ಇವೆಲ್ಲ ಬಹಳ ಫೈನ್ ಆದ ಮಾತುಗಳು."

ಶ್ರೀರಾಮಕೃಷ್ಣರು: "ಏನು, ಎಂಥ ಮಾತುಗಳು ಅಂದೆ ?"

ಸರ್ಕಾರ: "ಫೈನ್ !"

ಶ್ರೀರಾಮಕೃಷ್ಣರು: "ಹಾಗಾದರೆ ನನಗೊಂದು 'ಥ್ಯಾಂಕ್ಯೂ' ಕೊಡು."

ಸರ್ಕಾರ (ಹಾಸ್ಯವಾಗಿ): "ಯಾಕೆ ! ನಾನು ಎಷ್ಟು ಕಷ್ಟ ತೆಗೆದುಕೊಂಡು ಇಲ್ಲಿಗೆ ಬರುತ್ತೇನೆ ಏನು ಕತೆ ! ಅಂಥದರಲ್ಲಿ 'ಥ್ಯಾಂಕ್ಯೂ' ಕೊಡು ಎನ್ನುವಿರಲ್ಲ !"

ಶ್ರೀರಾಮಕೃಷ್ಣರು: "ಅಲ್ಲ, ಹಾಗಲ್ಲ; ದಡ್ಡರಿಗೋಸ್ಕರವಾದರೂ ಏನಾದರೊಂದು ಮಾತು ಹೇಳು. ರಾವಣ ಸತ್ತ ಮೇಲೆ ವಿಭೀಷಣ ಲಂಕೆಯ ರಾಜನಾಗಲು ಒಪ್ಪಲಿಲ್ಲ. ಅವನೆಂದ, 'ಹೇ ರಾಮ, ನನಗೆ ನೀನೇ ದೊರೆತಿರುವಾಗ ಈ ರಾಜ್ಯ-ಕೋಶ ಎಲ್ಲ ಯಾತಕ್ಕೆ ?' ಆದಕ್ಕೆ ರಾಮ ಹೇಳಿದ, 'ವಿಭೀಷಣ, ಅಜ್ಞಾನಿಗಳು ನಿನ್ನನ್ನು ಕೇಳುತ್ತಾರೆ, "ನೀನು ಅಷ್ಟೊಂದಾಗಿ ರಾಮನ ಸೇವೆ ಮಾಡಿದೆಯಲ್ಲ, ನಿನಗೆ ಅದರಿಂದೇನು ಲಾಭವಾಯಿತು ?" ಅಂತ. ಅಂಥವರ ಸಮಾಧಾನಕ್ಕಾಗಿಯಾದರೂ ನೀನು ರಾಜನಾಗು' ಅಂತ."

ಸರ್ಕಾರ: "ಅಂಥ ದಡ್ಡರು ಇಲ್ಲೂ ಇದ್ದಾರೆಯೆ ?"

ಶ್ರೀರಾಮಕೃಷ್ಣರು (ಮುಗುಳ್ನಗುತ್ತ): "ಓಹೊ, ಖಂಡಿತ ! ಸಮುದ್ರದಲ್ಲಿ ನಾನಾ ಬಗೆಯ ವಸ್ತುಗಳಿರುವಂತೆ ಇಲ್ಲಿ ಮುತ್ತುಗಳೂ ಇವೆ, ಶಂಖಗಳೂ ಇವೆ, ಕಪ್ಪೆಚಿಪ್ಪೂ ಇವೆ." (ಎಲ್ಲರೂ ನಗುತ್ತಾರೆ.)

ಈಗ ಸರ್ಕಾರ ನಿರ್ಗಮಿಸಲು ಅನುವಾಗಿ ನಿಂತ. ಶ್ರೀರಾಮಕೃಷ್ಣರಿಗೆ ಎರಡು ಗುಳಿಗೆಗಳನ್ನು ಕೊಟ್ಟು ಹಾಸ್ಯವಾಗಿ ಹೇಳಿದ: "ಇಗೊಳ್ಳಿ, ಎರಡು ಮಾತ್ರೆಗಳಿವೆ— ಒಂದು ಪುರುಷ, ಇನ್ನೊಂದು ಪ್ರಕೃತಿ." (ನಗು)

ಶ್ರೀರಾಮಕೃಷ್ಣರು (ನಗುತ್ತ): "ಹೌದು ಹೌದು, ಪ್ರಕೃತಿ-ಪುರುಷರು ಯಾವಾಗಲೂ ಜೊತೆಯಲ್ಲೇ ಇರುತ್ತಾರೆ..."

ಅಂದು ವಿಜಯದಶಮಿ. ಶ್ರೀರಾಮಕೃಷ್ಣರು ಸರ್ಕಾರನಿಗೆ ಸಿಹಿತಿಂಡಿ ಕೊಡಿಸಿದರು. ಅದನ್ನು ತಿನ್ನುತ್ತ ಅವನೆಂದ: "ಈಗ ಬೇಕಾದರೆ ಥ್ಯಾಂಕ್ಯೂ ಹೇಳುತ್ತೇನೆ—ಈ ಸಿಹಿತಿಂಡಿಗಾಗಿ. ಆದರೆ ನಿಮ್ಮ ಬೋಧನೆಗಲ್ಲ..."

ಸ್ವಲ್ಪಹೊತ್ತಿಗೆ ಅವನು ಶ್ರೀರಾಮಕೃಷ್ಣರಿಂದ ಬೀಳ್ಕೊಂಡು ಹೊರಟ.

ವಿಜಯದಶಮಿಯ ಶುಭದಿನವಾದ್ದರಿಂದ ಭಕ್ತರೆಲ್ಲ ಶ್ರೀರಾಮಕೃಷ್ಣರಿಗೆ ಪ್ರಣಾಮ ಮಾಡಿ ಅವರ ಪಾದಧೂಳಿ ಸ್ವೀಕರಿಸಿದರು. ಬಳಿಕ ಅವರು ಒಬ್ಬರನ್ನೊಬ್ಬರು ಆಲಿಂಗಿಸಿಕೊಂಡು ಶುಭ ಕೋರಿದರು. ಶ್ರೀರಾಮಕೃಷ್ಣರು ತೀವ್ರ ಅನಾರೋಗ್ಯದಿಂದ ಬಳಲುತ್ತಿದ್ದರೂ ತಮ್ಮ ರಸಾತ್ಮಕವಾದ ಮಾತುಕತೆಯಿಂದ, ಆನಂದವನ್ನೇ ನಿರಂತರ

ಸೂಸುವ ಮಂದಹಾಸದಿಂದ ಯಾರಿಗೂ ಆದರ ನೆನಪೇ ಬಾರದಂತೆ ಮಾಡಿಬಿಟ್ಟಿದ್ದಾರೆ. ಭಕ್ತರ ಹಿಗ್ಗಿಗೆ ಪಾರವೇ ಇಲ್ಲ. ಪರಸ್ಪರ ಆಲಿಂಗನ ಮತ್ತು ಸಿಹಿವಿತರಣೆ ಬಹಳ ಹೊತ್ತಿನವರೆಗೆ ನಡೆಯಿತು.

ಶ್ರೀರಾಮಕೃಷ್ಣರೀಗ ಕೆಲವು ಭಕ್ತರೊಂದಿಗೆ ಹರ್ಷದಿಂದ ಸಂಭಾಷಿಸುತ್ತಿದ್ದಾರೆ. ಡಾ. ಸರ್ಕಾರನ ಪ್ರಸ್ತಾಪ ಬಂದಿತು.

ಶ್ರೀರಾಮಕೃಷ್ಣರು (ಮಾಸ್ಟರಿಗೆ): "ಆತ ಆಗಲೇ ಬಹಳ ಬದಲಾಯಿಸಿಬಿಟ್ಟಿದ್ದಾನೆ. ಅಲ್ಲವೆ ?"

ಮಾಸ್ಟರ್: "ಹೌದು. ಇಲ್ಲಿಗೆ ಬಂದನೆಂದರೆ ಸ್ವಲ್ಪ ಮಂಕು ಕವಿದಂತೆ ಆಗಿಬಿಡುತ್ತಾನೆ. ಅವನು ನಿಮ್ಮ ಔಷಧದ ಮಾತನ್ನೇ ಎತ್ತುವುದಿಲ್ಲ. ನಾವು ಅದನ್ನು ಜ್ಞಾಪಿಸಿದರೆ ಆಗ, 'ಓ ಹೌದು ಹೌದು ! ಔಷಧ ಕೊಡಬೇಕು !' ಎನ್ನುತ್ತಾನೆ."

ಶ್ರೀರಾಮಕೃಷ್ಣರನ್ನು ನೋಡಲು ಬಂದಾಗಲೆಲ್ಲ ಡಾ. ಸರ್ಕಾರ ಹೀಗೆಯೇ ಶ್ರೀರಾಮಕೃಷ್ಣರ ಮತ್ತು ಭಕ್ತರ ಜೊತೆಯಲ್ಲಿ ಮಾತನಾಡುತ್ತ ಕುಳಿತುಬಿಡುತ್ತಿದ್ದ. ಹಾಗೆ ಚರ್ಚಿಸುತ್ತ ವಿಚಾರವಿನಿಮಯ ಮಾಡಿಕೊಳ್ಳುವುದೆಂದರೆ ಅವನಿಗೆ ಎಲ್ಲಿಲ್ಲದ ಆನಂದ. ಒಂದು ದಿನ ಬಹಳ ಹೊತ್ತು ನಾನಾ ವಿಷಯಗಳ ಬಗ್ಗೆ ಮಾತುಕತೆ ನಡೆಯಿತು. ಬಳಿಕ ಗಿರೀಶಚಂದ್ರ ಘೋಷ್ ಮುಗುಳ್ನಗುತ್ತ ಡಾಕ್ಟರನ್ನು ಕೇಳಿದ: "ನೀವು ಬಂದು ಆಗಲೇ ಮೂರ್ನಾಲ್ಕು ಗಂಟೆಯಾಯಿತು. ನಿಮ್ಮ ರೋಗಿಗಳ ಗತಿಯೇನು ?"

ಸರ್ಕಾರ: "ಹ್ಞೂಂ, ಸರಿ ಸರಿ ! ಇನ್ನು ಡಾಕ್ಟರ್‌ಗಿರಿ ಮಾಡಿದಂತೆಯೆ ! ನಿಮ್ಮ ಪರಮಹಂಸರು ಸಿಕ್ಕಿಬಿಟ್ಟು ನಾನು ಎಲ್ಲವನ್ನೂ ಕಳೆದುಕೊಳ್ಳಬೇಕಾಗಿದೆ."

ಶ್ರೀರಾಮಕೃಷ್ಣರು: " 'ಕರ್ಮನಾಶ' ಅಂತ ಒಂದು ನದಿ ಇದೆ. ಅದರಲ್ಲಿ ಮುಳುಗು ಹಾಕಿದರೆ ಕರ್ಮನಾಶವಾಗಿಬಿಡುತ್ತದೆ. ಆಮೇಲೆ ಆ ವ್ಯಕ್ತಿಯಿಂದ ಯಾವ ಕರ್ಮವೂ ಸಾಧ್ಯವಿಲ್ಲ." (ನಗು)

ಈಗ ಡಾಕ್ಟರು, ಗಿರೀಶ ಮಹೇಂದ್ರನೇ ಮೊದಲಾದ ಭಕ್ತರನ್ನುದ್ದೇಶಿಸಿ ನುಡಿದ: "ಸ್ನೇಹಿತರೇ, ನನ್ನನ್ನು ನಿಮ್ಮಲ್ಲೇ ಒಬ್ಬ ಎಂಬಂತೆ ನೋಡಿ. ನಾನಿದನ್ನು ಒಬ್ಬ ಡಾಕ್ಟರಾಗಿ ಹೇಳುತ್ತಿಲ್ಲ. ನನ್ನನ್ನು ನಿಮ್ಮವನು ಎಂದು ಭಾವಿಸಿದರೆ ನಾನು ನಿಮ್ಮವನೇ."

ಬಹಳವಾಗಿ ಮಾತನಾಡಿ ಗಂಟಲಿಗೆ ಶ್ರಮ ಕೊಡುವುದು ಶ್ರೀರಾಮಕೃಷ್ಣರ ಆರೋಗ್ಯಕ್ಕೆ ಹಾನಿಕರ. ಆದ್ದರಿಂದ ಹಾಗೆ ಮಾಡಬಾರದು ಎಂದು ಒತ್ತಿ ಹೇಳುತ್ತಿದ್ದವನು ಡಾಕ್ಟರ್ ಸರ್ಕಾರ. ಆದರೆ ಈ ದಿನ ಅವನೇ ಇಷ್ಟು ಹೊತ್ತು ಬೇರಾವುದರ ಪರಿವೆಯೇ ಇಲ್ಲದಂತೆ ಅವರೊಡನೆ ಮಾತಾಡಿದ್ದಾನೆ, ಅವರ ಮಾತುಗಳನ್ನು ಕೇಳಿದ್ದಾನೆ ! ಈಗ ಇದನ್ನು ಸಮರ್ಥಿಸಿಕೊಳ್ಳುವುದಾದರೂ ಹೇಗೆ ? ಆದ್ದರಿಂದ ಶ್ರೀರಾಮಕೃಷ್ಣರಿಗೆ ಹೇಳುತ್ತಾನೆ:

"ನೋಡಿ, ಈ ರೋಗ ಬಂದಿರುವವರು ಜನರೊಂದಿಗೆ ಮಾತಾಡಬಾರದು. ಆದರೆ ನನ್ನ ವಿಷಯ ಮಾತ್ರ ಪ್ರತ್ಯೇಕ. ನೀವು ನನ್ನ ಜೊತೆ ಮಾತ್ರ ಮಾತಾಡಬಹುದು. ಅದರಿಂದೇನೂ ತೊಂದರೆಯಿಲ್ಲ." (ಎಲ್ಲರೂ ನಗುತ್ತಾರೆ.)

ಡಾಕ್ಟರು ತನ್ನ ಮಗನನ್ನು ಕರೆತಂದು ಶ್ರೀರಾಮಕೃಷ್ಣರಿಗೆ ಪರಿಚಯಿಸಿದ್ದ. ಅವನ ಪ್ರಸ್ತಾಪವೆತ್ತಿ ಶ್ರೀರಾಮಕೃಷ್ಣರೆಂದರು:

"ನಿನ್ನ ಮಗ ಅಮೃತ ಅವತಾರತತ್ತ್ವವನ್ನು ಒಪ್ಪುವುದಿಲ್ಲ. ಆದರೆ ಅದರಲ್ಲಿ

ತೊಂದರೆಯೇನಿಲ್ಲ. ದೇವರನ್ನು ನಿರಾಕಾರ ಎಂದು ಭಾವಿಸಿಯೂ ಆತನ ಸಾಕ್ಷಾತ್ಕಾರ ಪಡೆಯುಬಹುದು. ನಿನ್ನ ಮಗ ತುಂಬ ಒಳ್ಳೆಯ ಹುಡುಗ."

ಸರ್ಕಾರ: "ಅವನು ನಿಮ್ಮ ಶಿಷ್ಯ."

ಶ್ರೀರಾಮಕೃಷ್ಣರು (ಮಂದಹಾಸಯುಕ್ತರಾಗಿ): "ನನ್ನ ಶಿಷ್ಯ ಎಂಬವನು ಈ ಭೂಮಂಡಲದಲ್ಲೇ ಇಲ್ಲ. ಬದಲಾಗಿ ನಾನೇ ಎಲ್ಲರ ಶಿಷ್ಯ. ಎಲ್ಲರೂ ಭಗವಂತನ ಮಕ್ಕಳು; ಆತನ ದಾಸರು. ನಾನೂ ಭಗವಂತನ ಒಂದು ಮಗು, ನಾನೂ ಆತನ ಒಬ್ಬ ದಾಸ. ಚಂದಮಾಮ ಎಲ್ಲ ಮಕ್ಕಳಿಗೂ ಮಾಮನೇ !"

ಶ್ರೀರಾಮಕೃಷ್ಣರು ಶ್ಯಾಮಪುಕುರದ ಮನೆಗೆ ಬಂದು ಸುಮಾರು ಒಂದು ತಿಂಗಳಾಗಿದೆ. ಈ ಅವಧಿಯಲ್ಲಿ ಅವರ ದೇಹಾರೋಗ್ಯದಲ್ಲಿ ಸುಧಾರಣೆಯೇನೂ ಆಗಿಲ್ಲ. ಆಗಾಗ ಏನೋ ಸ್ವಲ್ಪ ಮೇಲಾದಂತೆ ಕಂಡುಬಂದರೂ ಅದು ತಾತ್ಕಾಲಿಕ ಮಾತ್ರ. ಆದರೆ ಶ್ರೀರಾಮಕೃಷ್ಣರು ಹೀಗೆ ಅನಾರೋಗ್ಯಪೀಡಿತರಾಗಿದ್ದರೂ ಆಪ್ತಭಕ್ತರೆಲ್ಲ ಒಟ್ಟಾಗಿ ಸೇರುವಂತಾಗಿರುವುದರಿಂದ ಮತ್ತು ಅವರಿಗೆ ಶ್ರೀರಾಮಕೃಷ್ಣರ ಸತತ ಸಾನ್ನಿಧ್ಯ ದೊರಕುವಂತಾಗಿರುವುದರಿಂದ ಅಲ್ಲೊಂದು ಅತ್ಯುತ್ಸಾಹದ ವಾತಾವರಣ ನಿರ್ಮಾಣಗೊಂಡಿದೆ.

ಹೀಗಿರುವಾಗ, ಶ್ರೀರಾಮಕೃಷ್ಣರ ಆಧ್ಯಾತ್ಮಿಕ ಶಕ್ತಿಯನ್ನು ವ್ಯಕ್ತಗೊಳಿಸುವ, ಮತ್ತು ಅವರ ಅಲೌಕಿಕ ದರ್ಶನಗಳ ಸತ್ಯತೆಗೆ ಪುರಾವೆಯಂತಿದ್ದ ಅದ್ಭುತ ಘಟನೆಯೊಂದನ್ನು ಕಣ್ಣಾರೆ ಕಾಣುವ ಅವಕಾಶ ಭಕ್ತರಿಗೆ ಲಭ್ಯವಾಯಿತು.

ದುರ್ಗಾಪೂಜೆಯ ಮಹೋತ್ಸವ ಸಮೀಪಿಸುತ್ತಿದೆ. ಎಲ್ಲೆಲ್ಲೂ ಸಂಭ್ರಮ. ಆದರೆ ತಮ್ಮೆಲ್ಲ ಆನಂದದ ಕೇಂದ್ರಸ್ವರೂಪರಾದ ಶ್ರೀರಾಮಕೃಷ್ಣರು ದುರ್ಭರ ಕಾಯಿಲೆಗೆ ಗುರಿಯಾಗಿರುವುದರಿಂದ ಅವರ ಭಕ್ತವರ್ಗವನ್ನು ಮ್ಲಾನತೆ ಆವರಿಸಿದೆ. ಆದರೆ ಅದರಲ್ಲೂ ಕೆಲವು ಭಕ್ತರು ಮಾತ್ರ, ಈ ಕಾಯಿಲೆಯೆಂಬುದು ಶ್ರೀರಾಮಕೃಷ್ಣರು ಸ್ವೇಚ್ಛೆಯಿಂದ ತಂದುಕೊಂಡಿರುವಂಥದು, ಅವರು ಸ್ವಲ್ಪ ಸಮಯ ಈ ನಾಟಕ ನಡೆಸಿ ಮತ್ತೆ ಸರಿಹೋಗಿಬಿಡುತ್ತಾರೆ ಎಂದೇ ನಂಬಿದ್ದಾರೆ; ಮತ್ತು ಇತರರೆದುರು ಹಾಗೆಯೇ ಪ್ರಚಾರ ಮಾಡುತ್ತಿದ್ದಾರೆ.

ಪರಮಭಕ್ತನಾದ ಸುರೇಂದ್ರನಾಥ ಮಿತ್ರ ಈ ವರ್ಷ ತನ್ನ ಮನೆಯಲ್ಲಿ ದುರ್ಗಾಪೂಜೆ ನಡೆಸಬೇಕೆಂದು ಸಂಕಲ್ಪಿಸಿದ್ದಾನೆ. ಹಿಂದೆ ಅವನ ಮನೆಯಲ್ಲಿ ಅದನ್ನು ತಪ್ಪದೆ ಆಚರಿಸಲಾಗುತ್ತಿತ್ತು. ಆದರೆ ಏನೋ ಒಂದು ವಿಘ್ನವುಂಟಾದುದರಿಂದ ಈಚೆಗೆ ಕೆಲ ವರ್ಷಗಳಿಂದ ನಿಂತುಹೋಗಿತ್ತು. ಮನೆಯಲ್ಲಿ ಯಾರಾದರೂ ಅದನ್ನು ಪುನರಾರಂಭಿಸುವ ಮಾತೆತ್ತಿದರೆ, ಉಳಿದವರೆಲ್ಲ ಅದಕ್ಕೆ ಆಕ್ಷೇಪವೆತ್ತಿ, ಭಯ ಹುಟ್ಟಿಸಿ ತಪ್ಪಿಸಿಬಿಡುತ್ತಿದ್ದರು. ಆದರೆ ಶ್ರೀರಾಮಕೃಷ್ಣರ ಕೃಪಾಬಲವನ್ನು ಅವಲಂಬಿಸಿದ ಮೇಲೆ ಸುರೇಂದ್ರ ಬೇರೆ ಯಾವ ದೈವವಿಘ್ನವನ್ನಾಗಲಿ, ಶಕುನವನ್ನಾಗಲಿ ಲೆಕ್ಕಿಸುತ್ತಿರಲಿಲ್ಲ. ಮತ್ತು ಏನಾದರೊಂದು ಕಾರ್ಯಕ್ಕೆ ಕೈಹಚ್ಚಿದರೆ, ಇತರರ ಅಸಮಂಜಸವಾದ ಆಕ್ಷೇಪಗಳನ್ನು ಮನ್ನಿಸುತ್ತಿರಲಿಲ್ಲ. ಆದ್ದರಿಂದ ಈ ವರ್ಷ ದುರ್ಗಾಪೂಜೆ ನಡೆಸಬೇಕೆಂದು ಒಮ್ಮೆ ಸಂಕಲ್ಪಿಸಿದ ಮೇಲೆ ಯಾರ ಆಕ್ಷೇಪಣೆಗೂ ಬೆದರಿಕೆಗೂ ಕಿವಿಗೊಡದೆ ತನ್ನಷ್ಟಕ್ಕೆ ಮುಂದುವರಿದ. ಶ್ರೀರಾಮಕೃಷ್ಣರ ಅನುಮತಿ ಪಡೆದು ವಿಗ್ರಹವನ್ನು ಮನೆಗೆ ತಂದಿರಿಸಿದ. ಕಾಕತಾಳೀಯವೆಂಬಂತೆ ಪೂಜೆಗೆ ಕೆಲದಿನ ಮೊದಲು ಮನೆಯಲ್ಲಿ ಒಂದಿಬ್ಬರು ಕಾಯಿಲೆಬಿದ್ದು, 'ಅದಕ್ಕೆ ನೀನೇ ಹೊಣೆ' ಎಂಬ ಮನೆಮಂದಿಯ ನಿಂದೆಗೆ ಪಾತ್ರನಾಗಬೇಕಾಯಿತು. ಆದರೂ ವಿಚಲಿತನಾಗದೆ ಅವನು ಭಕ್ತಿಯಿಂದ ಜಗನ್ಮಾತೆಯ ಪೂಜೆಯನ್ನು ಪ್ರಾರಂಭಿಸಿಯೇ ಬಿಟ್ಟ. ಪೂಜೆಗೆ ತನ್ನ ಗುರುಭಾಯಿಗಳೆಲ್ಲರಿಗೂ ಆದರದ ಆಹ್ವಾನವಿತ್ತ. ಆದರೆ

ಶ್ರೀರಾಮಕೃಷ್ಣರು ರೋಗಗ್ರಸ್ತರಾಗಿರುವುದರಿಂದ ಅವರನ್ನು ತನ್ನ ಮನೆಗೆ ಬರಮಾಡಿ ಕೊಳ್ಳಲು ಸಾಧ್ಯವಿಲ್ಲವಲ್ಲಾ ಎಂಬ ಒಂದೇ ಚಿಂತೆ ಅವನ ಆನಂದದ ಬುಗ್ಗೆಗೆ ತಡೆಯಾಗಿತ್ತು.

ಸಪ್ತಮಿಯು ದಿನ ಪೂಜೆಯೆಲ್ಲ ನೆರವೇರಿತು. ಮಹಾಷ್ಟಮಿ ಬಂದಿದೆ. ಇತ್ತ ಶ್ಯಾಮಪುಕುರದ ಮನೆಯಲ್ಲಿ ಅನೇಕ ಭಕ್ತರು, ತರುಣಶಿಷ್ಯರು ಸೇರಿ ಭಗವತ್ ಸಲ್ಲಾಪ, ಭಜನೆಗಳಲ್ಲಿ ತೊಡಗಿ ಆನಂದದಲ್ಲಿದ್ದಾರೆ. ಅಪರಾಹ್ನ ನಾಲ್ಕು ಗಂಟೆಗೆ ಮಹೇಂದ್ರಲಾಲ ಸರ್ಕಾರ ಬಂದ. ಸ್ವಲ್ಪ ಹೊತ್ತಿನ ಮೇಲೆ ಶ್ರೀರಾಮಕೃಷ್ಣರ ಇಚ್ಛೆಯಂತೆ ನರೇಂದ್ರ ಹಾಡಲಾರಂಭಿಸಿದ. ಕರ್ಣಾನಂದಕರವಾದ ಆತನ ಕಂಠಶ್ರೀಯನ್ನು ಆಲಿಸುತ್ತ ಎಲ್ಲರೂ ವಿವಶರಾದರು. ಶ್ರೀರಾಮಕೃಷ್ಣರು ಬಳಿಯಲ್ಲಿದ್ದ ಡಾಕ್ಟರಿಗೆ ಆಗಾಗ ಹಾಡಿನ ಭಾವಾರ್ಥವನ್ನು ಮೆಲುದನಿಯಲ್ಲಿ ತಿಳಿಸುತ್ತಿದ್ದರು; ಇನ್ನು ಕೆಲವೊಮ್ಮೆ ಭಾವಾತಿಶಯ ದಿಂದ ಸಮಾಧಿಸ್ಥರಾಗುತ್ತಿದ್ದರು. ಡಾಕ್ಟರು ಕೂಡ ಅಲ್ಲಿ ಉಕ್ಕಿ ಹರಿಯುತ್ತಿದ್ದ ಭಾವ ಪ್ರವಾಹದಲ್ಲಿ ಸಿಲುಕಿಕೊಂಡು ಸಂಪೂರ್ಣ ವೈಮರೆತ!

ಗಂಟೆಗಳು ಉರುಳುತ್ತಿದ್ದರೂ ಯಾರಿಗೂ ಬಾಹ್ಯಜಗತ್ತಿನ ಪರಿವೆಯೇ ಇದ್ದಂ ತಿರಲಿಲ್ಲ. ನೋಡನೋಡುತ್ತಿದ್ದಂತೆಯೇ ರಾತ್ರಿ ಏಳೂವರೆ ಗಂಟೆ ಹೊಡೆಯಿತು. ಈಗ ನರೇಂದ್ರ ಹಾಡುವುದನ್ನು ನಿಲ್ಲಿಸಿದ. ಇಷ್ಟು ಹೊತ್ತಿನ ಮೇಲೆ ಸರ್ಕಾರನಿಗೆ ಎಚ್ಚರ ವಾಯಿತು. ಅತ್ಯಂತ ಸಂತುಷ್ಟನಾಗಿ ಅವನು ನರೇಂದ್ರನನ್ನು ಗಾಢವಾಗಿ ಆಲಿಂಗಿಸಿ ಕೊಂಡ. ಬಳಿಕ, ಶ್ರೀರಾಮಕೃಷ್ಣರ ಅನುಮತಿ ಪಡೆದು ಹೊರಟ. ಶ್ರೀರಾಮಕೃಷ್ಣರು ಕೂಡ ನಗುನಗುತ್ತ ಎದ್ದುನಿಂತರು; ಆದರೆ ಅತ್ಯಾಶ್ಚರ್ಯಕರ ರೀತಿಯಲ್ಲಿ ಇದ್ದಕ್ಕಿದ್ದಂತೆ ಗಾಢ ಸಮಾಧಿಸ್ಥಿತಿಗೇರಿದರು. ದೃಷ್ಟಿ ಸ್ಥಿರವಾಗಿದೆ; ಮೊಗದಲ್ಲಿ ಮಂದಹಾಸ, ರೋಮ ಗಳೆಲ್ಲ ನಿಮಿರಿ ನಿಂತಿವೆ. ಆದರೆ ಶರೀರ ಸಂಪೂರ್ಣ ನಿಷ್ಪಂದಿತವಾಗಿದೆ; ಉಸಿರಾಟ ನಿಂತುಹೋಗಿದೆ! ಜೀವವಿರುವ ಯಾವ ಸೂಚನೆಯೂ ಕಾಣಬರುತ್ತಿಲ್ಲ! ಈ ಹಠಾತ್ ಪರಿವರ್ತನೆಯನ್ನು ಕಂಡು ಭಕ್ತರಿಗೆಲ್ಲ ವಿಸ್ಮಯ. ಏಕೆಂದರೆ ಈಗ ಶ್ರೀರಾಮಕೃಷ್ಣರು ಸಮಾಧಿಸ್ಥಿತಿಗೇರುವುದಕ್ಕೆ ಪ್ರಚೋದನೆಯೇನೂ ಇರಲಿಲ್ಲ. ಹಾಗಾದರೆ ಇದಕ್ಕೆ ಕಾರ ಣವೇನಿರಬಹುದು? ಆಗ ಕೆಲವರಿಗೆ ಇದ್ದಕ್ಕಿದ್ದಂತೆ ಹೊಳೆಯಿತು—ಇದು ಸಪ್ತಮೀ-ಅಷ್ಟಮೀ ತಿಥಿಗಳು ಕೂಡುವ, ಸಂಧಿಪೂಜೆಯ ಪವಿತ್ರ ಮುಹೂರ್ತವಲ್ಲವೆ? ಆದ್ದ ರಿಂದಲೇ ಶ್ರೀರಾಮಕೃಷ್ಣರು ದೇವೀಭಾವದಲ್ಲಿ ಮುಳುಗಿಹೋಗಿದ್ದಾರೆ! ಆದರೆ ಅವರ ಜಾಗ್ರತ ಮನಸ್ಸಿಗೆ ಈ ವಿಷಯ ತಿಳಿದಿರದಿದ್ದರೂ ಅವರು ಹಾಗೆ ಸಮಾಧಿಗೇರಿದ್ದನ್ನು ಗಮನಿಸಿದಾಗ ಭಕ್ತರಿಗೆಲ್ಲ ಮತ್ತೂ ಆಶ್ಚರ್ಯ.

ಈ ನಡುವೆ, ಶಿಲಾವಿಗ್ರಹದಂತೆ ಅಚಲರಾಗಿ ನಿಂತ ಶ್ರೀರಾಮಕೃಷ್ಣರನ್ನು ಕಂಡು ಸರ್ಕಾರ ಬೆರಗಾದ. ಆ ದಿನ ಅವನ ಸ್ನೇಹಿತನಾದ ಮತ್ತೊಬ್ಬ ಡಾಕ್ಟರು ಕೂಡ ಬಂದಿದ್ದ. ಇಬ್ಬರೂ ಕುತೂಹಲಿಗಳಾಗಿ, ಸಮಾಧಿಸ್ಥಿತಿಯಲ್ಲಿದ್ದ ಶ್ರೀರಾಮಕೃಷ್ಣರ ಶರೀರವನ್ನು ವೈಜ್ಞಾನಿಕವಾಗಿ ಪರೀಕ್ಷಿಸಲು ಮುಂದಾದರು. ಸರ್ಕಾರ ತನ್ನ ಸ್ಟೆತೋಸ್ಕೋಪಿನಿಂದ ಅವರ ಎದೆಬಡಿತವನ್ನು ಆಲಿಸಲು ಪ್ರಯತ್ನಿಸಿದ. ಆದರೆ ಎಷ್ಟು ಸೂಕ್ಷ್ಮವಾಗಿ ಗಮನಿ ಸಿದರೂ ಸದ್ದು ಕೇಳಿಬರಲಿಲ್ಲ! ಅಷ್ಟಕ್ಕೇ ತೃಪ್ತನಾಗದೆ ಅವನೊಂದಿಗಿದ್ದ ಮತ್ತೊಬ್ಬ ಡಾಕ್ಟರು, ಶ್ರೀರಾಮಕೃಷ್ಣರ ಕಣ್ರೆಪ್ಪೆ ಬಡಿಯುವುದೋ ಇಲ್ಲವೋ ಎಂದು ಪರೀಕ್ಷಿಸಲು ಅವರ ತೆರೆದ ಕಣ್ಣುಗಳನ್ನು ಬೆರಳಿನಿಂದ ಸ್ಪರ್ಶಿಸಿ ನೋಡಿದ! ಅವನ ಈ ಕೃತ್ಯ ಅಲ್ಲಿದ್ದ

ಭಕ್ತರಿಗೆಲ್ಲ ಅಸಮಾಧಾನ ತಂದಿತು. ಆ ವಿಷಯ ಅಂತಿರಲಿ, ಆದರೆ ಅವನು ಹಾಗೆ ಬೆರಳು ಹಾಕಿದಾಗ ಕಣ್ರೆಪ್ಪೆ ಮಿಟುಕಲೇ ಇಲ್ಲ! ಇದನ್ನು ಕಂಡ ಡಾಕ್ಟರರ ಆಶ್ಚರ್ಯಕ್ಕೆ ಪಾರವೇ ಇಲ್ಲವಾಯಿತು. ಡಾ. ಸರ್ಕಾರ ಸಾಮಾನ್ಯನಲ್ಲ. ಅವನು ಮಾನವನ ಶರೀರ–ಮನಸ್ಸುಗಳ ಪರಸ್ಪರ ಹೊಂದಾಣಿಕೆಗಳ ಬಗ್ಗೆ ಆಳವಾಗಿ ಅಧ್ಯಯನ ಮಾಡಿ, ಆ ಬಗ್ಗೆ ಒಂದು ಪುಸ್ತಕವನ್ನೇ ಬರೆದಿದ್ದವನು. ಈಗ ಶ್ರೀರಾಮಕೃಷ್ಣರ ಸಮಾಧಿಸ್ಥಿತಿಯ ವೈಚಿತ್ರ್ಯವನ್ನು ಕಣ್ಣಾರೆ ಕಂಡು ಅವನು ಅವಾಕ್ಕಾದ. ಅದು ಅವನನ್ನು ಗಾಢ ಆಲೋಚನೆಯಲ್ಲಿ ತೊಡಗಿಸಿತು. 'ಹೊರನೋಟಕ್ಕೆ ವ್ಯಕ್ತಿ ಸಂಪೂರ್ಣ ನಿರ್ಜೀವನಾದಂತೆಯೇ ತೋರುವ ಈ ಸ್ಥಿತಿಯ ಬಗ್ಗೆ ಆಧುನಿಕ ವಿಜ್ಞಾನ ಏನು ಹೇಳಲೂ ಅಸಮರ್ಥವಾಗಿದೆ; ಇದನ್ನು ಕೇವಲ ಮೂರ್ಛೆ ತಪ್ಪಿದ ಸ್ಥಿತಿ ಎಂದು ಭಾವಿಸಿದರೆ ಅದು ಪಾಶ್ಚಾತ್ಯ ಮನೋವಿಜ್ಞಾನಿಗಳ ಅಜ್ಞಾನ-ಮೊಂಡುತನಗಳ ದ್ಯೋತಕ; ಮತ್ತು ಪಾಶ್ಚಾತ್ಯ ವಿಜ್ಞಾನವಾಗಲಿ ತತ್ತ್ವಶಾಸ್ತ್ರವಾಗಲಿ ಈವರೆಗೆ ವಿವರಿಸಲು ಸಾಧ್ಯವಾಗಿಲ್ಲದ, ಮುಂದೆಯೂ ಸಾಧ್ಯವಿರದ, ಅನೇಕ ವಿಷಯಗಳು ಈ ಸೃಷ್ಟಿಯಲ್ಲಿವೆ' ಎಂದು ಅವನು ಒಪ್ಪಿಕೊಳ್ಳಬೇಕಾಯಿತು.

ಸುಮಾರು ಅರ್ಧ ಗಂಟೆಯಷ್ಟು ದೀರ್ಘಾವಧಿಯ ಬಳಿಕ ಶ್ರೀರಾಮಕೃಷ್ಣರಿಗೆ ಬಾಹ್ಯಪ್ರಜ್ಞೆ ಮರಳಿತು. ಅವರಿಂದ ಬೀಳ್ಕೊಂಡು ಸರ್ಕಾರ ಹೊರಟುಹೋದ.

ಈಗ ಶ್ರೀರಾಮಕೃಷ್ಣರು ಸಮಾಧಿಸ್ಥಿತಿಯಲ್ಲಿ ತಮಗಾದ ದರ್ಶನಾನುಭವವನ್ನು ಭಕ್ತರೆದುರು ಹೀಗೆ ಬಣ್ಣಿಸಿದರು: "ಇಲ್ಲಿಂದ (ತಮ್ಮ ಶರೀರದಿಂದ) ಸುರೇಂದ್ರನ ಮನೆಯವರೆಗೂ ಒಂದು ಜ್ಯೋತಿರ್ಮಾರ್ಗ ತೆರೆದುಕೊಂಡದ್ದನ್ನು ಕಂಡೆ. ಆತನ ಭಕ್ತಿಯ ಉತ್ಕಟತೆಯಿಂದಾಗಿ, ಅಲ್ಲಿರಿಸಿರುವ ವಿಗ್ರಹದಲ್ಲಿ ಜಗನ್ಮಾತೆ ಆವಿರ್ಭಾವಗೊಂಡಿದ್ದಾಳೆ. ಆಕೆಯ ಹಣೆಗಣ್ಣಿನಿಂದ ಬೆಳಕಿನ ಕಿರಣಗಳು ಹೊಮ್ಮಿದ್ದನ್ನೂ ನಾನು ನೋಡಿದೆ. ಮನೆಯ ಮುಂಭಾಗದ ಹಜಾರದಲ್ಲಿ ದೀಪಮಾಲೆಯನ್ನು ಹಚ್ಚಿಡಲಾಗಿದೆ. ಒಳಗೆ ದೇವಿಯ ಮುಂದೆ ಕುಳಿತು ಸುರೇಂದ್ರ ವ್ಯಾಕುಲ ಹೃದಯದಿಂದ 'ಅಮ್ಮಾ ಅಮ್ಮಾ' ಅಂತ ಕೂಗುತ್ತ ರೋದಿಸುತ್ತಿದ್ದಾನೆ. ನೀವೆಲ್ಲ ಈಗಲೇ ಅವನ ಮನೆಗೆ ಹೋಗಿ. ನಿಮ್ಮನ್ನೆಲ್ಲ ನೋಡಿದರೆ ಅವನಿಗೆಷ್ಟೋ ಸಮಾಧಾನವಾಗುತ್ತದೆ."

ಇದನ್ನು ಕೇಳಿ ಭಕ್ತರ ಕುತೂಹಲ ಗರಿಗೆದರಿತು. ನರೇಂದ್ರನೇ ಮೊದಲಾಗಿ ಎಲ್ಲರೂ ಶ್ರೀರಾಮಕೃಷ್ಣರಿಗೆ ಪ್ರಣಮಿಸಿ, ಕೂಡಲೇ ಹೊರಟರು. ಅವರು ಹೇಳಿದ್ದು ನಿಜವಿರಬಹುದೆ? ಸುರೇಂದ್ರನ ಮನೆಗೆ ಹೋಗಿ ನೋಡುವವರೆಗೂ ಸಮಾಧಾನವಿಲ್ಲ! ಬೇಗಬೇಗನೆ ಬಂದು ನೋಡುತ್ತಾರೆ—ಹೌದು; ಶ್ರೀರಾಮಕೃಷ್ಣರು ಹೇಳಿದ್ದ ಸ್ಥಳದಲ್ಲಿ ನಿಜಕ್ಕೂ ಸಾಲುದೀಪವನ್ನು ಬೆಳಗಿಸಲಾಗಿತ್ತು. ಮತ್ತು ಅವರು ಸಮಾಧಿಸ್ಥರಾಗಿದ್ದ ಸಮಯದಲ್ಲೇ ಸುಮಾರು ಒಂದು ಗಂಟೆಯ ಕಾಲ ಸುರೇಂದ್ರ ಭಾವೋತ್ಕರ್ಷದಿಂದ 'ಅಮ್ಮಾ ಅಮ್ಮಾ' ಎಂದು ಕೂಗುತ್ತ ಕಣ್ಣೀರ್ಗರೆಯುತ್ತಿದ್ದ ಎಂದೂ ತಿಳಿದು ಬಂತು. ಶ್ರೀರಾಮಕೃಷ್ಣರು ಸಮಾಧಿಯಲ್ಲಿ ಕಂಡ ದರ್ಶನದೊಂದಿಗೆ ಇವೆಲ್ಲ ತಾಳೆಯಾಗುವುದನ್ನು ಕಂಡಾಗ ಭಕ್ತರಿಗಾದ ವಿಸ್ಮಯ ಅಷ್ಟಿಷ್ಟಲ್ಲ.

ಮತ್ತೆ ಮೂರು ವಾರಗಳು ಉರುಳಿದುವು. ಹಿಂದೆ ಚಿಕಿತ್ಸೆಯ ಪ್ರಾರಂಭಾವಸ್ಥೆಯಲ್ಲಿ ಸ್ವಲ್ಪ ಅನುಕೂಲವಾದಂತೆ ತೋರಿತ್ತು; ಆದರೆ ಈಗ ಆ ಸುಧಾರಣೆಯೂ ಕಂಡುಬರುತ್ತಿರಲಿಲ್ಲ. ವ್ಯಾಧಿ ಉಲ್ಬಣಿಸಬಹುದೆಂಬ ಭೀತಿಯೇ ತಲೆದೋರತೊಡಗಿತು.

ಆದರೆ ಶ್ರೀರಾಮಕೃಷ್ಣರ ಪ್ರಸನ್ನತೆ ಆನಂದಗಳು ಮಾತ್ರ ಕಡಿಮೆಯಾಗುವ ಬದಲು ಮತ್ತಷ್ಟು ಹೆಚ್ಚಾಗುತ್ತಿರುವಂತೆ ಭಕ್ತರಿಗೆ ತೋರಿತು. ಡಾಕ್ಟರ್ ಸರ್ಕಾರನಂತೂ ಈ ರೋಗವನ್ನು ತನಗೊಂದು ಸವಾಲೆಂದು ಭಾವಿಸಿ, ಅವರನ್ನು ಗುಣಪಡಿಸಲು ತನ್ನ ಶಕ್ತಿ ಮೀರಿ ಪ್ರಯತ್ನಿಸಲು ಕಂಕಣಬದ್ಧನಾಗಿದ್ದ. ಮತ್ತೆಮತ್ತೆ ಔಷಧಗಳನ್ನು ಬದಲಿಸುತ್ತ ಪರಿಣಾಮವನ್ನು ಸೂಕ್ಷ್ಮವಾಗಿ ಗಮನಿಸುತ್ತಿದ್ದ. ಪಥ್ಯದ ವಿಚಾರದಲ್ಲಂತೂ ತುಂಬ ಕಟ್ಟುನಿಟ್ಟಾಗಿದ್ದ. ಕೆಲವೊಮ್ಮೆ, ಪಥ್ಯಕ್ಕೆ ಅವನು ಕೊಡುತ್ತಿದ್ದ ಅತಿಮಹತ್ವ ಹಾಸ್ಯಾಸ್ಪದವಾಗಿ ತೋರುತ್ತಿತ್ತು. ಆದರೂ ಯಾರೂ ಅವನ ಮಾತನ್ನು ಮೀರಿ ನಡೆಯುತ್ತಿರಲಿಲ್ಲ. ಆದರೆ ಏನು ಮಾಡಿದರೂ ಉದ್ದೇಶಿತ ಪರಿಣಾಮ ದೊರಕದಿದ್ದಾಗ, 'ಇದು ಋತು ಬದಲಾವಣೆಯ ಪ್ರಭಾವ; ಚಳಿ ಕಡಿಮೆಯಾದರೆ ಮತ್ತೆ ಆರೋಗ್ಯ ಸುಧಾರಿಸುತ್ತದೆ' ಎಂದು ಅವನು ಅಭಿಪ್ರಾಯಪಟ್ಟ.

ಇದೀಗ ದೀಪಾವಳಿ ಬಂದಿದೆ; ಜೊತೆಗೇ ಶ್ರೀರಾಮಕೃಷ್ಣರಿಗೆ ತುಂಬ ಪ್ರಿಯವಾದ ಕಾಳೀಪೂಜೆ. ಅಂದು ಕೂಡ, ದುರ್ಗಾಪೂಜೆಯ ದಿನದಂತೆಯೇ ಶ್ರೀರಾಮಕೃಷ್ಣರ ಆಧ್ಯಾತ್ಮಿಕ ಶಕ್ತಿ ವಿಶೇಷರೂಪದಲ್ಲಿ ವ್ಯಕ್ತಗೊಂಡುದನ್ನು ಕಾಣುವ ಭಾಗ್ಯ ಭಕ್ತರಿಗೆಲ್ಲ ಒದಗಿಬಂತು.

ಆಪ್ತಭಕ್ತನಾದ ದೇವೇಂದ್ರನಾಥ ಮಜುಮ್ದಾರನಿಗೆ ಪ್ರತಿಮೆಯನ್ನಿರಿಸಿ ಕಾಳೀ ಪೂಜೆ ಮಾಡಬೇಕು ಎನ್ನುವ ಮನಸ್ಸಿತ್ತು. ಅದನ್ನು ಇಲ್ಲಿ ಶ್ಯಾಮಪುಕುರದ ಮನೆಯಲ್ಲೇ—ಶ್ರೀರಾಮಕೃಷ್ಣರ ದಿವ್ಯಸಾನ್ನಿಧ್ಯದಲ್ಲೇ—ಭಕ್ತರೆಲ್ಲ ಸೇರಿ ನಡೆಸಿದರೆ ಎಂಥ ಆನಂದ...! ಆದರೆ ಭಕ್ತರಲ್ಲಿ ಹೆಚ್ಚಿನವರು ಇದಕ್ಕೆ ಒಪ್ಪಲಿಲ್ಲ. ಪೂಜೆಯ ಉತ್ಸಾಹ ಗದ್ದಲಗಳಿಂದ ಶ್ರೀರಾಮಕೃಷ್ಣರು ಮತ್ತೆಮತ್ತೆ ಭಾವೋದ್ದೀಪ್ತರಾದರೆ ಅವರ ಆರೋಗ್ಯ ಮತ್ತಷ್ಟು ಹದಗೆಟ್ಟೀತು ಎಂದು ಅವರೆಲ್ಲ ಅಭಿಪ್ರಾಯಪಟ್ಟರು. ದೇವೇಂದ್ರನಿಗೂ ಹೌದೆನಿಸಿತು; ತನ್ನ ಆಲೋಚನೆಯನ್ನು ಕೈಬಿಟ್ಟ. ಆದರೆ ಪೂಜೆಯ ಹಿಂದಿನ ದಿನ ಶ್ರೀರಾಮಕೃಷ್ಣರು ಇದ್ದಕ್ಕಿದ್ದಂತೆ, "ನಾಳೆ ಕಾಳೀಪೂಜೆ ಮಾಡಬೇಕು. ಅದನ್ನು ಸಣ್ಣ ಪ್ರಮಾಣದಲ್ಲಿ ಆಚರಿಸಲು ವ್ಯವಸ್ಥೆ ಮಾಡಿ" ಎಂದು ತಾವಾಗಿಯೇ ಕೆಲವರೆದುರು ಹೇಳಿಬಿಟ್ಟರು. ಇದನ್ನು ಕೇಳಿ ಎಲ್ಲರೂ ಉತ್ಸಾಹಿತರಾದರು. ಆದರೆ ಈಗ ಕೆಲವು ಪ್ರಶ್ನೆಗಳೆದ್ದುವು: ದೇವಿಗೆ ಪಂಚೋಪಚಾರ ಪೂಜೆ ಮಾಡುವುದೇ ಅಥವಾ ಷೋಡಶೋಪಚಾರವೆ? ಅನ್ನನೈವೇದ್ಯ ಮಾಡೋಣವೇ ಹೇಗೆ? ಅರ್ಚಕನ ಕೆಲಸ ನಿರ್ವಹಿಸುವವರು ಯಾರು?—ಭಕ್ತರು ತಮ್ಮತಮ್ಮಲ್ಲೇ ಚರ್ಚೆ ನಡೆಸಿದರು. ಏನೂ ಇತ್ಯರ್ಥವಾಗಲಿಲ್ಲ. ಕೊನೆಗೆ, ಹೂ ಹಣ್ಣುಗಳು, ಶ್ರೀಗಂಧ, ಧೂಪ, ದೀಪ, ನೈವೇದ್ಯಕ್ಕೆ ಭಕ್ಷ್ಯ ಇವಷ್ಟನ್ನು ಮಾತ್ರ ತಂದಿಟ್ಟುಕೊಳ್ಳುವುದು; ಬಳಿಕ ಶ್ರೀರಾಮಕೃಷ್ಣರು ಹೇಳಿದಂತೆ ಮಾಡುವುದು ಎಂದು ತೀರ್ಮಾನಿಸಿದರು.

ಮಾರನೆಯ ದಿನ ಹಗಲೆಲ್ಲ ಭಜನೆ-ಕೀರ್ತನೆಗಳಲ್ಲಿ ಆನಂದವಾಗಿ ಕಳೆಯಿತು. ಕ್ರಮೇಣ ಸಂಜೆಯಾಗಿ ರಾತ್ರಿ ಏಳು ಗಂಟೆ ಹೊಡೆಯಿತು. ಆದರೆ ಇದುವರೆಗೂ ಶ್ರೀರಾಮಕೃಷ್ಣರು ಪೂಜೆಯ ಪ್ರಸ್ತಾಪವೆತ್ತಿಲ್ಲ. ಎಂದಿನಂತೆ ಹಾಸಿಗೆಯ ಮೇಲೆ ಸ್ಥಿರ ಭಾವದಿಂದ ಕುಳಿತಿದ್ದಾರೆ. ಅವರ ಮನಸ್ಸಿನಲ್ಲೇನಿದೆ, ಪೂಜೆ ಹೇಗೆ ಮಾಡಬೇಕೆಂಬ ವಿಷಯದಲ್ಲಿ ಅವರ ಅಭಿಪ್ರಾಯವೇನು ಎನ್ನುವುದು ಯಾರಿಗೂ ತಿಳಿಯದು. ಆದರೂ ಪೂಜಾಸಾಮಗ್ರಿಗಳನ್ನೂ ನೈವೇದ್ಯವನ್ನೂ ಅವರ ಬಳಿಯಲ್ಲೇ ತಂದಿಟ್ಟರು.

ಹಿಂದೆ ಕೆಲವೊಮ್ಮೆ ಶ್ರೀರಾಮಕೃಷ್ಣರು ಭಾವಸ್ಥಿತಿಯಲ್ಲಿ ತಮ್ಮನ್ನು ತಾವೇ ಪೂಜಿಸಿಕೊಳ್ಳುವುದನ್ನು ಕೆಲವರು ಕಂಡಿದ್ದರು. ಈ ದಿನವೂ ಅವರು ತಮ್ಮ ದೇಹ-ಮನಸ್ಸುಗಳನ್ನೇ ಪರಮಾತ್ಮನ ಮತ್ತು ಆದ್ಯಾಶಕ್ತಿಯ ಪ್ರತೀಕವಾಗಿ ಭಾವಿಸಿ (ಈ ಬಗೆಯ ಪೂಜೆಗೆ ಶಾಸ್ತ್ರಸಮ್ಮತಿಯೂ ಇದೆ) ಪೂಜೆ ಸಲ್ಲಿಸಿಕೊಳ್ಳಲು ಉದ್ದೇಶಿಸಿರಬಹುದೆ? ಆದರೆ ಪೂಜಾಸಾಮಗ್ರಿಗಳನ್ನು ತಮ್ಮ ಬದಿಯಲ್ಲಿ ತಂದಿರಿಸಿದ್ದನ್ನು ಕಂಡೂ ಶ್ರೀರಾಮಕೃಷ್ಣರು ಏನೂ ಹೇಳದೆ ಮೌನವಾಗಿಯೇ ಇದ್ದರು!

ಧೂಪದೀಪಗಳನ್ನು ಹಚ್ಚಿದ್ದರಿಂದ ಕೋಣೆಯಲ್ಲೊಂದು ವಿಶೇಷ ವಾತಾವರಣ ನಿರ್ಮಾಣಗೊಂಡಿದೆ. ಗಿರೀಶ, ರಾಮಚಂದ್ರ, ಮಹೇಂದ್ರ, ದೇವೇಂದ್ರ, ಚುಣಿಲಾಲ್, ಬಿಹಾರಿ, ರಾಖಾಲ, ನಿರಂಜನ, ಶರಚ್ಚಂದ್ರ, ಚಿಕ್ಕನರೇಂದ್ರ ಮೊದಲಾಗಿ ಮುವ್ವತ್ತಕ್ಕೂ ಹೆಚ್ಚು ಜನರು ಶ್ರೀರಾಮಕೃಷ್ಣರ ಸುತ್ತಲೂ ನೆಲದ ಮೇಲೆ ಕುಳಿತಿದ್ದಾರೆ. ಅಷ್ಟು ಜನರಿದ್ದರೂ ಒಂದು ಅಪೂರ್ವ ನಿಶ್ಶಬ್ದತೆ ತಾಂಡವವಾಡುತ್ತಿದೆ. ಮುಂದೇನು? ಮುಂದೇನು?... ಅತ್ಯಂತ ಮಹತ್ವದ ಸಂಗತಿಯೇನೋ ಘಟಿಸಲಿದೆ ಎಂಬ ನಿರೀಕ್ಷೆ-ಕುತೂಹಲಗಳು ಎಲ್ಲರ ಮನಸ್ಸನ್ನೂ ಆವರಿಸಿವೆ.

ಮಹಾ ಶ್ರದ್ಧಾಳುವೂ ಭಕ್ತಿವಂತನೂ ಆದ ಗಿರೀಶಚಂದ್ರ ಘೋಷ್ ಕೂಡ ತೀವ್ರವಾಗಿ ಆಲೋಚಿಸುತ್ತಿದ್ದಾನೆ—'ಶ್ರೀರಾಮಕೃಷ್ಣರು ತಮಗೋಸ್ಕರ ಕಾಳೀಪೂಜೆ ಮಾಡಬೇಕಾಗಿದೆಯೆ?. . . ಇಲ್ಲ! ಒಂದು ವೇಳೆ ಅವರ ಮನಸ್ಸಿನಲ್ಲಿ ಆತ್ಮಸಂತೋಷಕ್ಕಾಗಿ ಹಾಗೆ ಮಾಡುವ ಇಚ್ಛೆ ಎದ್ದಿತ್ತು ಎಂದೇ ಇಟ್ಟುಕೊಂಡರೂ ಈಗ ಅವರು ಸ್ಥಿರವಾಗಿ ಕುಳಿತಿರುವುದಾದರೂ ಏಕೆ. . .? ಹಾಗಾದರೆ, ತಮ್ಮ ಶರೀರವೆಂಬ ಜೀವಂತ ಮೂರ್ತಿಯಲ್ಲಿ ಜಗನ್ಮಾತೆಯನ್ನು ಪೂಜಿಸಿ ಭಕ್ತರು ಧನ್ಯರಾಗಲಿ ಎಂದಿರಬಹುದೆ...? ಹೌದು! ಇದು ಖಂಡಿತ!'

ಈ ಆಲೋಚನೆ ಬಂದೊಡನೆಯೇ ಅವನಲ್ಲೊಂದು ಆವೇಶವುಂಟಾಯಿತು. ಇದ್ದಕ್ಕಿದ್ದಂತೆ ಬಳಿಯಲ್ಲಿದ್ದ ಹರಿವಾಣದಿಂದ ಒಂದು ಹೂವಮಾಲೆಯನ್ನೂ ಶ್ರೀಗಂಧವನ್ನೂ ತೆಗೆದುಕೊಂಡು "ಜೈ ಮಾ! ಜೈ ಮಾ!" ಎಂದು ಉದ್ಘೋಷಿಸುತ್ತ ಶ್ರೀರಾಮಕೃಷ್ಣರ ಪಾದಪದ್ಮಗಳಿಗೆ ಅದನ್ನು ಸಮರ್ಪಿಸಿ ನಮಸ್ಕರಿಸಿದ! ಕಾಳೀಮಾತೆಗಾಗಿ ಮೀಸಲಾಗಿದ್ದುದು ಶ್ರೀರಾಮಕೃಷ್ಣರಿಗೆ ನೈವೇದ್ಯವಾಯಿತು! ಅಷ್ಟೇ. ಕಣ್ಣೆವೆಯಿಕ್ಕುವುದರೊಳಗಾಗಿ ಶ್ರೀರಾಮಕೃಷ್ಣರಲ್ಲೊಂದು ಅಪೂರ್ವ ಪರಿವರ್ತನೆಯುಂಟಾಗಿ ಬಿಟ್ಟಿತು! ಅವರ ರೋಮರೋಮಗಳೆಲ್ಲ ನಿಮಿರಿ ನಿಂತುವು; ಮುಖಮಂಡಲ ದಿವ್ಯ ಕಾಂತಿಯನ್ನು ಸೂಸುತ್ತಿತ್ತು. ಕೈಗಳೆರಡೂ ವರ-ಅಭಯಗಳನ್ನು ನೀಡುವಂತೆ ಮೇಲೆದ್ದಿದ್ದು ಅವರೊಳಗೆ ದೇವಿಯ ಆವಾಹನೆಯಾಗಿರುವುದನ್ನು ಸೂಚಿಸುತ್ತಿತ್ತು. ಅವರು ಗಾಢ ಸಮಾಧಿಯಲ್ಲಿ ಮುಳುಗಿಹೋದರು.

ಸ್ವಯಂ ಜಗನ್ಮಾತೆಯಂತೆ ಕಂಗೊಳಿಸುತ್ತಿದ್ದ ಅವರನ್ನು, ಭಕ್ತರೆಲ್ಲ ಪರಮಾಶ್ಚರ್ಯದಿಂದ ದಿಟ್ಟಿಸಲಾರಂಭಿಸಿದರು. ಆದರೆ ಇವೆಲ್ಲ ಎಷ್ಟು ಬೇಗ ನಡೆದುಹೋದುವೆಂದರೆ, ಏನಾಯಿತು ಎನ್ನುವುದೇ ಎಷ್ಟೋ ಜನಕ್ಕೆ ಗೊತ್ತಾಗಲಿಲ್ಲ. ಹತ್ತಿರದಲ್ಲಿದ್ದವರು ಕೂಡ, ಶ್ರೀರಾಮಕೃಷ್ಣರು ಭಾವಾವಿಷ್ಟರಾದುದನ್ನು ಕಂಡೇ ಗಿರೀಶ ಅವರಿಗೆ ಪುಷ್ಪಾಂಜಲಿ ನೀಡಿದ ಎಂದು ಭಾವಿಸಿದರು. ಸ್ವಲ್ಪ ದೂರದಲ್ಲಿದ್ದವರಿಗೆ, ಜ್ಯೋತಿರ್ಮಯಿಯಾದ ಜಗನ್ಮಾತೆಯೇ ಹೀಗೆ ಶ್ರೀರಾಮಕೃಷ್ಣರ ಶರೀರದಲ್ಲಿ ಇದ್ದಕ್ಕಿದ್ದಂತೆ ಪ್ರಕಟ

ವಾದಳೋ ಎಂದು ತೋರುತ್ತಿತ್ತು.

ಈಗ ಭಕ್ತರ ಉತ್ಸಾಹಕ್ಕೆ ಮಿತಿಯೇ ಇಲ್ಲದಂತಾಯಿತು. ಗಿರೀಶನನ್ನು ಅನುಸರಿಸಿ ಮಹೇಂದ್ರ, ರಾಖಾಲ, ರಾಮಚಂದ್ರ ಹಾಗೂ ಇತರೆಲ್ಲ ಭಕ್ತರೂ ಒಬ್ಬೊಬ್ಬರಾಗಿ ತಮತಮಗೆ ತೋಚಿದಂತೆ, ಮಂತ್ರ-ಸ್ತುತಿಗಳನ್ನು ಪಠಿಸುತ್ತ, ಪುಷ್ಪ-ಗಂಧಗಳನ್ನು ಅರ್ಪಿಸುತ್ತ ಶ್ರೀರಾಮಕೃಷ್ಣರಿಗೆ ಪ್ರಣಾಮ ಮಾಡಿದರು. ಜಯಘೋಷ, ಸ್ತೋತ್ರ, ಗಾಯನಗಳಿಂದ ಕೋಣೆ ಅನುರಣಿತವಾಯಿತು.

ಸ್ವಲ್ಪ ಹೊತ್ತು ಹೀಗೆ ನಡೆದ ಮೇಲೆ ಆವೇಶ ಸ್ವಲ್ಪ ಶಾಂತವಾಗಿ, ಶ್ರೀರಾಮ ಕೃಷ್ಣರಿಗೆ ಅರ್ಧಬಾಹ್ಯಾವಸ್ಥೆ ಒದಗಿತು. ಆಗ ಭಕ್ತರು ಪೂಜೆಗಾಗಿ ಇರಿಸಿದ್ದ ಹಣ್ಣು ಸಿಹಿತಿಂಡಿಗಳನ್ನು ಅವರಿಗೆ ನಿವೇದಿಸಿದರು. ಶ್ರೀರಾಮಕೃಷ್ಣರು ಅವುಗಳಲ್ಲಿ ಒಂದೊಂದು ತುಣುಕನ್ನು ಪರಿಗ್ರಹಿಸಿ, "ನಿಮ್ಮ ಭಕ್ತಿ-ಜ್ಞಾನಗಳು ವರ್ಧಿಸಲಿ!" ಎಂದು ಎಲ್ಲರನ್ನೂ ಹರಸಿದರು. ಅನಂತರ ಬಹಳ ಹೊತ್ತಿನವರೆಗೆ, ಭಾವೋತ್ಸಾಹಭರಿತವಾದ ಸಾಮೂಹಿಕ ಕೀರ್ತನೆ-ಭಜನೆ ನಡೆಯಿತು. ಬಳಿಕ ಭಕ್ತರೆಲ್ಲ ಪ್ರಸಾದ ಸ್ವೀಕಾರ ಮಾಡಿದರು.

ಹೀಗೆ ಕಾಳೀಪೂಜೆಯ ಆ ದಿನ, ಅಪೂರ್ವ ವಿಧಾನದಿಂದ ಜಗನ್ಮಾತೆಯನ್ನು ಪೂಜಿಸಿ ತನ್ಮೂಲಕ ಗಳಿಸಿದ ಅಲೌಕಿಕ ಆನಂದವೆಂಬುದು ಆ ಭಕ್ತರೆಲ್ಲರ ಹೃನ್ಮಂದಿರ ಗಳಲ್ಲಿ ಚಿರನೂತನವಾಗಿ ನೆಲೆ ನಿಂತಿತು. ಮುಂದೆ ಯಾವಾಗಲಾದರೂ ದುಃಖಸಂಕಟ ಗಳು ಬಂದೊದಗಿ ತಾವು ನಿರ್ಬಲರಾದಂತೆ ಅನ್ನಿಸಿದರೆ, ಒಡನೆಯೇ ಅವರಿಗೆ ದಿವ್ಯ ಮಂದಹಾಸಭರಿತವಾದ ಶ್ರೀರಾಮಕೃಷ್ಣರ ಪ್ರಸನ್ನವದನವೂ, ಅವರು ತಾಳಿದ ವರಾ ಭಯಕರ ಮುದ್ರೆಯೂ ಮನಃಪಟಲದಲ್ಲಿ ಮೂಡುತ್ತಿತ್ತು; ತಾವು ಸದಾ 'ದೇವ ರಕ್ಷಿತರು' ಎಂಬುದನ್ನು ಸ್ಮರಣೆಗೆ ತರುತ್ತಿತ್ತು.

ಶ್ರೀರಾಮಕೃಷ್ಣರು ಶ್ಯಾಮಪುಕುರದಲ್ಲಿ ವಾಸಿಸತೊಡಗಿದ ಮೇಲೆ ಅವರ ಆಧ್ಯಾತ್ಮಿಕ ಶಕ್ತಿಯೂ ದೈವೀಭಾವವೂ ಹೆಚ್ಚೆಚ್ಚು ಸ್ಫುಟವಾಗಿ ವ್ಯಕ್ತವಾಗತೊಡಗಿದ್ದುವು. ದುರ್ಗಾಪೂಜೆ, ಕಾಳೀಪೂಜೆಗಳಂದು ನಡೆದ ಅದ್ಭುತ ಘಟನೆಗಳಲ್ಲಿ ಮಾತ್ರವಲ್ಲದೆ ಅನುದಿನದ ಅನೇಕ ಸಂದರ್ಭಗಳಲ್ಲಿ ಶ್ರೀರಾಮಕೃಷ್ಣರ ಕೃಪೆ ಹಾಗೂ ಮಹಿಮಾವಿಶೇಷಗಳನ್ನು ಭಕ್ತರು ಗಮನಿಸತೊಡಗಿದ್ದರು. ಇದರಿಂದ ಅವರ ದೈವತ್ವದ ಕುರಿತಾಗಿ ಭಕ್ತರ ವಿಶ್ವಾಸ ಹೆಚ್ಚುತ್ತ ಬರುತ್ತಿತ್ತು. ಅದಕ್ಕೆ ಉದಾಹರಣೆಯಾಗಿ ಕೆಲವು ಪ್ರಸಂಗಗಳನ್ನು ನೋಡಬಹುದು.

ಪರಮ ಭಕ್ತನೂ 'ರಸದ್ದಾರ'ನೂ ಆದ ಬಲರಾಮ ಬೋಸನ ವಿಷಯ ನಮಗೆ ತಿಳಿದೇ ಇದೆ. ವಿಖ್ಯಾತ ಶ್ರೀಮಂತ ವೈಷ್ಣವಕುಲಕ್ಕೆ ಸೇರಿದ ಈತ ಹೇಗೆ ಶ್ರೀರಾಮಕೃಷ್ಣರ ಸಂಪರ್ಕಕ್ಕೆ ಬರುತ್ತಿದ್ದಂತೆಯೇ ಅವರ ಗಾಢ ಆಕರ್ಷಣೆಗೊಳಗಾಗಿ ಅವರಲ್ಲಿ ತ್ರಿಕರಣಪೂರ್ವಕವಾಗಿ ಶರಣಾದ, ಮತ್ತು ಅವನೊಂದಿಗೆ ಹೇಗೆ ಅವನ ಹೆಂಡತಿ ಮಕ್ಕಳೂ ಶ್ರೀರಾಮಕೃಷ್ಣರ ಆಪ್ತವಲಯಕ್ಕೆ ಸೇರಿಕೊಂಡರು ಎನ್ನುವ ಆಶ್ಚರ್ಯಕರ ವೃತ್ತಾಂತವನ್ನು ಹಿಂದೆಯೇ ನೋಡಿದ್ದೇವೆ. ಶ್ರೀರಾಮಕೃಷ್ಣರ ಬಗ್ಗೆ ಅವನಲ್ಲಿ ಮೂಡಿದ್ದ ಶ್ರದ್ಧಾಭಕ್ತಿಗಳು ಕ್ರಮೇಣ ಮತ್ತಷ್ಟು ಆಳವಾದುವು. ಅವರ ಸಹವಾಸದಲ್ಲಿ ಅವನ ಜೀವನವೇ ಪರಿವರ್ತನೆಗೊಳ್ಳತೊಡಗಿತು.

ಆದರೆ ಬಲರಾಮನ ಈ ವರ್ತನೆ ಅವನ ಸಂಬಂಧಿಕರಲ್ಲಿ ಅನೇಕರ ಅಸಮಾಧಾನಕ್ಕೆ ಕಾರಣವಾಯಿತು. ಅವನು ಧಾರ್ಮಿಕ ಜೀವನಕ್ಕೆ ಮನಕೊಡಲಾರಂಭಿಸಿದ ಎಂದಲ್ಲ ಅವರ ಕೋಪ. ಆದರೆ ತಮ್ಮ ವೈಷ್ಣವ ವಂಶ, ಆದರ ಕೀರ್ತಿ, ಹೆಚ್ಚುಗಾರಿಕೆ, ತಲಾಂತರದಿಂದ ಬಂದ ಮಡಿವಂತಿಕೆಯೇ ಮೊದಲಾದ ಸಂಪ್ರದಾಯಗಳು, ತಮ್ಮ ಶ್ರೀಮಂತಿಕೆ—ಇವೆಲ್ಲ ಅವರಿಗೆ ವಿಶೇಷ ಅಭಿಮಾನದ ವಿಷಯಗಳು. ವೈಷ್ಣವಮತದ ಧರ್ಮಗುರುಗಳನ್ನಲ್ಲದೆ ಮತ್ತಾವ ಗುರುವನ್ನೂ ಸಾಧುವನ್ನೂ ಲೆಕ್ಕಿಸುವವರಲ್ಲ ಅವರು. ಅಲ್ಲದೆ ಎಂಥೆಂಥ ಮಹಿಮಾವಂತರನ್ನೆಲ್ಲ ಹಿರಿಯರನ್ನಾಗಿ ಪಡೆದ ತಮ್ಮಲ್ಲೂ ಆ ಮಹಿಮೆ ರಕ್ತಗತವಾಗಿ ಬಂದಿದೆ ಎಂಬುದೇ ಅವರ ದೃಢವಾದ ನಂಬಿಕೆ. ಇನ್ನು ಆ ರಾಮಕೃಷ್ಣರೋ, ಆಚಾರ ನಿಯಮ ವ್ರತ ನಿಷ್ಠೆಗಳೊಂದೂ ಇಲ್ಲದ ಸ್ವೇಚ್ಛಾಚಾರಿ; ಜಪಮಾಲೆ, ತಿಲಕ, ಮುದ್ರೆ ಮೊದಲಾದ ವೈಷ್ಣವ ಚಿಹ್ನೆಗಳನ್ನು ಧರಿಸುವುದರ ವಿರೋಧಿ; ಆಹಾರದ ವಿಷಯದಲ್ಲಿ ಮಡಿತನವಿಲ್ಲದವರು ಎಂಬ ನಾನಾ 'ಸುದ್ದಿ'ಗಳೆಲ್ಲ ಅವರಿಗೆ ತಿಳಿದುಬಂದಿದ್ದುವು. ಹೀಗಿರುವಾಗ ತಮ್ಮವನಾದ ಬಲರಾಮನು ಕುಲಗೌರವವನ್ನು—ಅದೇನು ಮೂರುಕಾಸಿನ ವಸ್ತುವೆಂಬಂತೆ—ತೊರೆದು ಆ ರಾಮಕೃಷ್ಣರ ಚರಣದಾಸನಾಗಿಬಿಟ್ಟಿದ್ದಾನೆ ಎಂಬುದು ಗೊತ್ತಾದಾಗ ಅವರಿಗೆಲ್ಲ ಅದೆಷ್ಟು ಇರಿಸುಮುರಿಸಾಗಿರಬೇಕು! ಆ ಬಂಧುಗಳು ಬಂದು ಬಲರಾಮನಿಗೆ ಸಾಕಷ್ಟು ಬುದ್ಧಿ ಹೇಳಿದರು. ಇದು ತಮ್ಮ ಮನೆತನದ ಮರ್ಯಾದೆಯ ಪ್ರಶ್ನೆ ಎಂದು ವಿವರಿಸಿದರು. "ಸರಿಯಾದ ಗುರುಗಳನ್ನು-ಮಹಾತ್ಮರನ್ನು ನೋಡಬೇಕು, ಉಪದೇಶ ಪಡೆಯಬೇಕು ಅಂತ ಇಷ್ಟ

ಇದ್ದರೆ ನಮ್ಮ ಭಗವಾನ್‌ದಾಸ್ ಬಾಬಾಜಿಯವರೇ ಇದ್ದಾರಲ್ಲ! ಅವರನ್ನು ಬಿಟ್ಟು ಸುಮ್ಮನೆ ಕಂಡಕಂಡವರ ಬಳಿಗೇಕೆ ಹೋಗುತ್ತಿ?'' ಎಂದರು. ಸಾಧು ಸ್ವಭಾವದ ಬಲರಾಮ ಇದನ್ನು ಕೇಳಿ ನೊಂದನಾದರೂ ಪ್ರತಿಯಾಡದೆ ಸುಮ್ಮನಿದ್ದುಬಿಟ್ಟ. ಆದರೆ ತನ್ನ ವರ್ತನೆಯನ್ನು ಮಾತ್ರ ಕಿಂಚಿತ್ತೂ ಮಾರ್ಪಡಿಸಿಕೊಳ್ಳಲಿಲ್ಲ. ಕಡೆಗೆ ಆತನ ನಂಟರಿಗೆ ರೇಗಿತು. 'ಇವನನ್ನು ಸರಿ ಮಾಡಲು ಒಂದೇ ಉಪಾಯ' ಎಂದು ಆಲೋಚಿಸಿ, ಇದ್ದದ್ದನ್ನೂ ಇಲ್ಲದ್ದನ್ನೂ ಸೇರಿಸಿ ಪರವೂರಿನಲ್ಲಿದ್ದ ಆತನ ಚಿಕ್ಕಪ್ಪನ ಮಕ್ಕಳಾದ ಹರಿವಲ್ಲಭ ಮತ್ತು ನಿಮಾಯಿಚರಣರ ಕಿವಿಯೂದಿದರು.

ನಾವು ಹಿಂದೆಯೇ ನೋಡಿದಂತೆ, ಬಲರಾಮನದು ಅಲ್ಪತೃಪ್ತಿಯ ಮನೋಭಾವ. ಅಲ್ಲದೆ ದೈಹಿಕವಾಗಿ ದುರ್ಬಲ. ಆದ್ದರಿಂದ ತನ್ನ ಪಾಲಿನ ಜಮೀನು–ಆಸ್ತಿಯ ನಿರ್ವಹಣೆಯನ್ನೂ ಚಿಕ್ಕಪ್ಪನ ಮಕ್ಕಳಿಗೇ ಒಪ್ಪಿಸಿ, ಅವರು ಕೊಡುತ್ತಿದ್ದ ಮಾಸಾಶನದಲ್ಲೇ ಜೀವನ ನಡೆಸುತ್ತಿದ್ದ. ಮತ್ತು ಅವರ ಕೋರಿಕೆಯ ಮೇರೆಗೇ ಅವನು ಪುರೀ ಪಟ್ಟಣವನ್ನು ಬಿಟ್ಟುಬಂದು ಕಲ್ಕತ್ತದಲ್ಲಿ ಹರಿವಲ್ಲಭನಿಗೆ ಸೇರಿದ ಮನೆಯಲ್ಲಿ ವಾಸಿಸಲಾರಂಭಿಸಿದ್ದುದು. ಹೀಗೆ ಒಂದು ರೀತಿಯಲ್ಲಿ ಅವನು ತನ್ನ ಚಿಕ್ಕಪ್ಪನ ಮಕ್ಕಳ ದಾಕ್ಷಿಣ್ಯದಲ್ಲಿದ್ದ. 'ಈಗ ಇತರ ಬಂಧುಗಳ ಮಾತು ಕೇಳಿಕೊಂಡು ಹರಿವಲ್ಲಭ ತನ್ನನ್ನು ಆ ಮನೆ ಬಿಟ್ಟುಹೋಗುವಂತೆ ಹೇಳಿದರೆ ಏನು ಮಾಡುವುದಪ್ಪಾ?' ಎಂಬ ಶಂಕೆ ಅವನನ್ನು ಕೊರೆಯತೊಡಗಿತು.

ಅವನು ಅಂದುಕೊಳ್ಳುತ್ತಿದ್ದಂತೆಯೇ ಆಗಿಹೋಯಿತು. ಅವನ ಬಗ್ಗೆ ಅಸಮಾಧಾನ ಸೂಚಿಸಿ ಆ ಸೋದರರಿಬ್ಬರೂ ಪತ್ರ ಬರೆದರು. ಮತ್ತು ಯಾವುದೋ ಜರೂರು ವಿಷಯವನ್ನು ನಿರ್ಧಾರ ಮಾಡುವುದಕ್ಕಾಗಿ ಹರಿವಲ್ಲಭ ಕಲ್ಕತ್ತಕ್ಕೆ ಬರುತ್ತಿದ್ದಾನೆ ಎಂದೂ ತಿಳಿದುಬಂತು. 'ಬರಲಿ, ಏನಂತೆ? ನಾನೇನೂ ಅನ್ಯಾಯ ಮಾಡಿಲ್ಲವಲ್ಲ' ಎಂದು ಬಲರಾಮ ತನ್ನೊಳಗೇ ಹೇಳಿಕೊಂಡು ಮನಸ್ಸನ್ನು ಗಟ್ಟಿ ಮಾಡಿಕೊಂಡ. ಇಷ್ಟರ ಮೇಲೆ ಅವನೇನಾದರೂ ತನ್ನ ಮೇಲೆ ಸುಳ್ಳು ಆಪಾದನೆ ಮಾಡಿದರೂ, ತಾನು ಮಾತ್ರ ಶ್ರೀರಾಮಕೃಷ್ಣರು ಕಾಯಿಲೆ ಮಲಗಿರುವ ಈ ಕಠಿಣ ಸಮಯದಲ್ಲಿ ಅವರನ್ನು ಬಿಟ್ಟು ಎಲ್ಲಿಗೂ ಹೋಗುವುದಿಲ್ಲ ಎಂದು ನಿರ್ಧಾರ ಮಾಡಿದ.

ಕೆಲದಿನಗಳಲ್ಲೇ ಹರಿವಲ್ಲಭ ಬಂದಿಳಿದ. ಬಲರಾಮ ಅವನನ್ನು ಪ್ರೀತಿಯಿಂದ ಸ್ವಾಗತಿಸಿ ಆತನ ಅನುಕೂಲಕ್ಕೆ ಎಲ್ಲ ವ್ಯವಸ್ಥೆ ಮಾಡಿಕೊಟ್ಟು ತಾನು ಹಿಂದಿನಂತೆಯೇ ಶ್ರೀರಾಮಕೃಷ್ಣರ ಬಳಿಗೆ ಬಂದುಹೋಗುವುದನ್ನು ಮುಂದುವರಿಸಿದ. ಆದರೆ ಅವನ ಮನಸ್ಸಿನಲ್ಲೇನೋ ತಳಮಳ ನಡೆಯುತ್ತಿದೆ ಎಂಬುದನ್ನು ಪತ್ತೆ ಹಚ್ಚಲು ಶ್ರೀರಾಮಕೃಷ್ಣರಿಗೆ ತಡವಾಗಲಿಲ್ಲ. ಹರಿವಲ್ಲಭ ಕಲ್ಕತ್ತಕ್ಕೆ ಬಂದ ದಿನವೇ ಅವರು ಬಲರಾಮನ ಮ್ಲಾನ ಮುಖವನ್ನು ಕಂಡು ಅತ್ಯಂತ ಅನುಕಂಪದಿಂದ ಅವನನ್ನು ಬಳಿ ಕರೆದು ಮಾತಾಡಿಸಿದರು. ವಿಷಯವೆಲ್ಲ ತಿಳಿಯಿತು. ಬಳಿಕ ಕೇಳಿದರು, "ಆಯಿತು; ಹರಿವಲ್ಲಭನ ಸ್ವಭಾವ ಎಂಥದು? ಅವನನ್ನು ಇಲ್ಲಿಗೆ ಕರೆತರಲು ಸಾಧ್ಯವಾದೀತೇನು?''

ಬಲರಾಮ: "ಅವನೇನೋ ಒಳ್ಳೆಯವನೇ. ಉದಾರಿ, ಬುದ್ಧಿವಂತ. ಮಾತ್ರವಲ್ಲ, ಭಕ್ತಿಮತಿ ಕೂಡ. ಆದರೆ ಒಂದೇ ಒಂದು ದೋಷವೆಂದರೆ, ವಿಚಾರ ಮಾಡದೆ ಚಾಡಿ ಮಾತುಗಳನ್ನೆಲ್ಲ ನಂಬಿಬಿಡುತ್ತಾನೆ. ನನ್ನ ವಿಷಯದಲ್ಲೂ ಈಗ, ಇತರರು ಹೇಳಿದ್ದನ್ನೆಲ್ಲ ಕೇಳಿ ಏನೋ ಒಂದು ನಿರ್ಧಾರಕ್ಕೆ ಬಂದುಬಿಟ್ಟಿದ್ದಾನೆ. ನಾನು ಇಲ್ಲಿಗೆ ಬರುವ

ವಿಷಯದಲ್ಲೇ ಅವನಿಗೆ ತುಂಬ ಅಸಮಾಧಾನ. ಹಾಗಿರುವಾಗ ನಾನು ಹೇಳಿದರೆ ಬರುತ್ತಾನೆಯೆ ?"

ಶ್ರೀರಾಮಕೃಷ್ಣರು: "ಹಾಗೋ ವಿಷಯ ! ಸರಿ, ನೀನು ಆ ಕೆಲಸ ಮಾಡಬೇಕಾಗಿಲ್ಲ. ಗಿರೀಶನನ್ನು ಇಲ್ಲಿಗೆ ಬರಹೇಳು."

ಗಿರೀಶ ಸಂತೋಷದಿಂದ ಆ ಜವಾಬ್ದಾರಿ ವಹಿಸಿಕೊಂಡು ಹೀಗೆಂದ: "ಹೇಗಿದ್ದರೂ ನಾನೂ ಹರಿವಲ್ಲಭನೂ ಸಹಪಾಠಿಗಳಾಗಿದ್ದವರು. ಅವನು ಕಲ್ಕತ್ತಕ್ಕೆ ಬಂದಾಗಲೆಲ್ಲ ನಾವು ಭೇಟಿಯಾಗುವುದುಂಟು. ಇವತ್ತೇ ನಾನವನನ್ನು ನೋಡಿಬರುತ್ತೇನೆ."

ಹರಿವಲ್ಲಭನನ್ನು ಗಿರೀಶ ಹೇಗೆ ಮಾತನಾಡಿಸಿದನೋ, ಶ್ರೀರಾಮಕೃಷ್ಣರನ್ನು ಭೇಟಿಯಾಗುವಂತೆ ಹೇಗೆ ಮನವೊಲಿಸಿದನೋ ತಿಳಿಯದು. ಆದರೆ ಮಹಾ ಶ್ರದ್ಧಾಳುವೂ ಅಷ್ಟೇ ಚತುರನೂ ಆದ ಆತನಿಗೆ ಆ ಕೆಲಸ ಅಷ್ಟೇನೂ ಕಷ್ಟವಾಗಲಿಲ್ಲ ಎನ್ನುವುದು ಖಂಡಿತ. ಮರುದಿನವೇ ಸಂಜೆ ಹರಿವಲ್ಲಭನೊಂದಿಗೆ ಬಂದು ಶ್ರೀರಾಮಕೃಷ್ಣರಿಗೆ ಅವನನ್ನು ಪರಿಚಯಿಸಿದ.

ಶ್ರೀರಾಮಕೃಷ್ಣರು ಅತ್ಯಂತ ವಿಶ್ವಾಸದಿಂದ ಅವನನ್ನು ತಮ್ಮ ಬದಿಯಲ್ಲೇ ಕುಳ್ಳಿರಿಸಿಕೊಂಡು ಮಾತನಾಡಿಸಿದರು:

"ನಿನ್ನ ವಿಷಯವಾಗಿ ಆಗಲೇ ಅನೇಕರಿಂದ ಕೇಳಿ, ನಿನ್ನನ್ನು ಕಾಣಬೇಕು ಅಂತ ಮನಸ್ಸಾಗಿತ್ತು. ಆದರೆ ನೀನು ಲೆಕ್ಕಾಚಾರದ ಬುದ್ಧಿಯವನೇನೋ ಎಂದು ಹಿಂದೇಟು ಹಾಕುತ್ತಿದ್ದೆ. (ಗಿರೀಶನಿಗೆ) ಆದರೆ ಈತ ಅಂಥವನಲ್ಲ ಅಂತ ಈಗ ಗೊತ್ತಾಯಿತು. ಇವನು ಬಾಲಕನಂತೆ ಸರಳ ಸ್ವಭಾವದವನು ! ಇವನ ಕಣ್ಣುಗಳನ್ನು ನೋಡು ! ಅಂತರ್ಯದಲ್ಲಿ ದೈವಭಕ್ತಿಯಿಲ್ಲದಿದ್ದರೆ ಇಂತಹ ಕಣ್ಣುಗಳಿರುವುದಿಲ್ಲ."

ಹೀಗೆಂದ ಶ್ರೀರಾಮಕೃಷ್ಣರು ಇದ್ದಕ್ಕಿದ್ದಂತೆ ಅವನನ್ನೊಮ್ಮೆ ಸ್ಪರ್ಶಿಸಿ ನುಡಿದರು: "ಹೌದು ! ನಿನ್ನನ್ನು ನೋಡಿದರೆ ನನ್ನ ಮನಸ್ಸು ಹಿಂಜರಿಯುವುದಿರಲಿ, ನೀನು ನಮಗೆ ತುಂಬ ಬೇಕಾದ ಹತ್ತಿರದ ಬಂಧುವೋ ಎಂಬಂತೆ ತೋರುತ್ತಿದೆ !"

ಶ್ರೀರಾಮಕೃಷ್ಣರನ್ನು ನೋಡಿ ಅವರ ಬಾಯಿಂದ ಒಂದೆರಡು ಪ್ರೀತಿಯ ಮಾತನ್ನು ಕೇಳುವಷ್ಟರಲ್ಲೇ ಹರಿವಲ್ಲಭ ಕರಗಿಹೋಗಿದ್ದ. ಆದರೆ ಯಾವಾಗ ಅವರ ಮಾಂತ್ರಿಕ ಕರಸ್ಪರ್ಶವಾಯಿತೋ ಆಗ ಅವನಲ್ಲೊಂದು ಪರಿವರ್ತನೆಯೇ ಆದಂತೆನಿಸಿತು. ಕೂಡಲೇ ಬಾಗಿ ಅವರ ಪಾದಧೂಳಿಯನ್ನು ತಲೆಗೆ ತಾಗಿಸಿಕೊಂಡು ಮೆಲ್ಲ ನುಸುರಿದ: "ಅದು ತಮ್ಮ ಕೃಪೆ !"

ಬಳಿಕ ಭಗವತ್ಸಲ್ಲಾಪ ಪ್ರಾರಂಭವಾಯಿತು. ಭಗವಂತನಲ್ಲಿ ಭಕ್ತಿ ಶ್ರದ್ಧೆ ನಿರ್ಭರತೆ ಇವನ್ನು ಗಳಿಸುವುದರಲ್ಲೇ ಮಾನವಜೀವನದ ಸಾರ್ಥಕ್ಯ ಎಂದು ಶ್ರೀರಾಮಕೃಷ್ಣರು ತಮ್ಮ ಅತಿ ಸರಳ ಸುಂದರ ನುಡಿಗಳಿಂದ ಮನಗಾಣಿಸಿದರು. ಹಾಗೆ ಹೇಳುತ್ತ ಹೇಳುತ್ತಲೇ ಅವರಿಗೆ ಭಾವಾವೇಶವುಂಟಾಯಿತು. ನೆರೆದವರಲ್ಲಿ ಒಬ್ಬನಿಗೆ, ಒಂದು ಹಾಡು ಹೇಳುವಂತೆ ಸೂಚಿಸಿದರು. ಅದರ ಭಾವಾರ್ಥವನ್ನು ಹರಿವಲ್ಲಭನಿಗೆ ವಿವರಿಸುತ್ತ ಗಾಢ ಸಮಾಧಿಸ್ಥರಾದರು. ಅಲ್ಲಿ ನಿರ್ಮಾಣಗೊಂಡ ದಿವ್ಯ ಆಧ್ಯಾತ್ಮಿಕ ತರಂಗಗಳಿಗೆ ಸ್ಪಂದಿಸುತ್ತ ಕೆಲವು ಭಕ್ತರಲ್ಲೂ ಭಾವಾವೇಶವುಂಟಾಯಿತು. ಹರಿವಲ್ಲಭನಿಗೂ ಉಕ್ಕಿಬಂದ ಕಣ್ಣೀರನ್ನು ತಡೆದುಕೊಳ್ಳಲಾಗಲಿಲ್ಲ !

ಶ್ರೀರಾಮಕೃಷ್ಣರು ಪ್ರಕೃತಿಸ್ಥರಾದ ಮೇಲೆ ಮತ್ತೆ ಹರಿವಲ್ಲಭನೊಂದಿಗೆ ಕೆಲಕಾಲ

ಮಾತಾಡಿದರು. ಅನಂತರ ಅವನು ಅವರಿಗೆ ನಮಸ್ಕರಿಸಿ ಬೀಳ್ಕೊಂಡ. ಅಂದಿನಿಂದ ಅವನು ಬಲರಾಮನ ವಿಷಯದಲ್ಲಿ ಸಂಪೂರ್ಣ ವಿಶ್ವಾಸದಿಂದ ಇದ್ದುಬಿಟ್ಟ.

ಎಷ್ಟೇ ಸಮಜಾಯಿಷಿಯಿಂದ ಅಸಾಧ್ಯವಾಗಬಹುದಿದ್ದ ಕಾರ್ಯವನ್ನು ಶ್ರೀರಾಮಕೃಷ್ಣರು ತಮ್ಮ ಸ್ಪರ್ಶದಿಂದ ಮತ್ತು ಕೆಲವೇ ಮಾತುಗಳಿಂದ ಪವಾಡ ದೋಪಾದಿಯಲ್ಲಿ ಸಾಧಿಸಿದ್ದನ್ನು ಕಂಡ ಭಕ್ತರು ವಿಸ್ಮಿತರಾದರು.

ಶ್ಯಾಮಪುಕುರದಲ್ಲಿದ್ದಾಗ ಶ್ರೀರಾಮಕೃಷ್ಣರ ಕಾಯಿಲೆ ಉಲ್ಬಣಿಸಿದಂತೆ ಅವರ ದರ್ಶನಲಾಭವನ್ನರಸಿ ಬರುವ ಜನರ ಸಂಖ್ಯೆಯೂ ಹೆಚ್ಚಿತು. ಶಾರದಾಪ್ರಸನ್ನ, ಮಣೀಂದ್ರಕೃಷ್ಣ ಮೊದಲಾದ ತರುಣಶಿಷ್ಯರೂ, ಹರೀಶಚಂದ್ರ ಮುಸ್ತಫಿ ಇನ್ನಿತರ ಗೃಹಸ್ಥಭಕ್ತರೂ ಶ್ರೀರಾಮಕೃಷ್ಣರ ಪ್ರಥಮ ದರ್ಶನ ಮಾಡಿದ್ದು ಇಲ್ಲಿಯೇ. ಇನ್ನೂ ಅನೇಕರು ಹಿಂದೆಯೇ ಅವರನ್ನು ಕಂಡಿದ್ದರೂ, ಅವರ ನಿಕಟ ಸಂಪರ್ಕಕ್ಕೆ ಬರಲು ಸಾಧ್ಯವಾದುದು ಈಗಲೇ. ಹೊಸದಾಗಿ ಬರುವ ಎಲ್ಲ ವ್ಯಕ್ತಿಗಳಿಗೂ ಶ್ರೀರಾಮಕೃಷ್ಣರು ಅವರವರ ಸಂಸ್ಕಾರವಿಶೇಷಗಳಿಗೆ ಅನುಸಾರವಾಗಿ ಭಕ್ತಿಪ್ರಧಾನವಾದ, ಅಥವಾ ಜ್ಞಾನ ಮಿಶ್ರಿತ ಭಕ್ತಿಪ್ರಧಾನವಾದ ಸಾಧನಾಮಾರ್ಗಗಳನ್ನು ತಿಳಿಸಿಕೊಡುತ್ತಿದ್ದರು.

ಒಂದು ದಿನ, ಹೊಸಬನಾದ ಯುವಕನೊಬ್ಬನಿಗೆ ಅವರು ಸಾಕಾರ ಹಾಗೂ ನಿರಾಕಾರ ಧ್ಯಾನಗಳಿಗೆ ಸೂಕ್ತವಾದ ನಾನಾ ಆಸನಗಳನ್ನೂ ಅಂಗಚಿಹ್ನೆಗಳನ್ನೂ ತೋರಿಸುತ್ತ ವಿವರಿಸುತ್ತಿದ್ದರು. ಪದ್ಮಾಸನದಲ್ಲಿ ಕುಳಿತು, ಎಡ ಅಂಗೈ ಮೇಲೆ ಬಲ ಮುಂಗೈ ಬರುವಂತೆ ಎರಡೂ ಕೈಗಳನ್ನು ಎದೆಯ ಮೇಲಿಟ್ಟುಕೊಂಡು ಕಣ್ಮುಚ್ಚಿ, "ನೋಡು, ಇದೇ ಎಲ್ಲ ಪ್ರಕಾರದ ಸಾಕಾರಧ್ಯಾನಗಳಿಗೆ ಯೋಗ್ಯವಾದ ಆಸನ" ಎಂದರು. ಬಳಿಕ, ಬಲಗೈಯನ್ನು ಬಲಗಾಲಿನ ಮೇಲೂ ಎಡಗೈಯನ್ನು ಎಡಗಾಲಿನ ಮೇಲೂ ಇರಿಸಿ ಎರಡೂ ಕೈಗಳ ಹೆಬ್ಬೆರಳು ತೋರ್ಬೆರಳುಗಳನ್ನು ತಾಗಿಸುತ್ತ ಉಳಿದ ಬೆರಳುಗಳನ್ನು ನೇರವಾಗಿಟ್ಟುಕೊಂಡು ಹುಬ್ಬುಗಳ ನಡುವೆ ದೃಷ್ಟಿಯನ್ನು ಸ್ಥಿರಗೊಳಿಸುವುದೇ ನಿರಾಕಾರಧ್ಯಾನಕ್ಕೆ ಪ್ರಶಸ್ತ ಆಸನ ಎಂದು ವಿವರಿಸಿದರು. ಆದರೆ ಹಾಗೆ ಹೇಳುವಷ್ಟರಲ್ಲೇ ಸಮಾಧಿಸ್ಥರಾದರು. ಸ್ವಲ್ಪ ಹೊತ್ತಿನ ಮೇಲೆ ಮನಸ್ಸನ್ನು ಬಲಾತ್ಕಾರದಿಂದ ಕೆಳಗಿಳಿಸಿ, ಸ್ವಲ್ಪ ದುಃಖದಿಂದೆಂಬಂತೆ ಹೇಳಿದರು: "ಪೂರ್ತಿಯಾಗಿ ತೋರಿಸಲು ನನ್ನಿಂದ ಸಾಧ್ಯವಾಗಲಿಲ್ಲ. ಆ ರೀತಿಯಲ್ಲಿ ಕುಳಿತುಕೊಳ್ಳುವಷ್ಟರಲ್ಲೇ ಮನಸ್ಸು ಉದ್ದೀಪನಗೊಂಡು ಸಮಾಧಿಗೇರುತ್ತದೆ. ಆಗ ವಾಯು ಮೇಲಕ್ಕೇರಿ ಗಂಟಲ ಹುಣ್ಣು ಕೆರಳುತ್ತದೆ. ಆದ್ದರಿಂದ ಡಾಕ್ಟರು, ನಾನು ಸಮಾಧಿಗೇರಬಾರದು ಅಂತ ಬಹಳವಾಗಿ ಹೇಳಿಹೋಗಿದ್ದಾರೆ."

ಅದನ್ನು ಕೇಳಿದ ಯುವಕ ಕಾತರಗೊಂಡು ನುಡಿದ: "ಅಯ್ಯೋ! ಹಾಗಾದರೆ ನೀವು ಅವನ್ನೆಲ್ಲ ಯಾಕೆ ತೋರಿಸಲು ಹೋದಿರಿ? ನಾನೇನೂ ಅವನ್ನು ನೋಡಬೇಕು ಅಂತ ಬಯಸಲಿಲ್ಲವಲ್ಲಾ!"

ಅದಕ್ಕೆ ಶ್ರೀರಾಮಕೃಷ್ಣರೆಂದರು: "ಅದು ನಿಜವೇ. ಆದರೆ ನಿನಗೆ ಸ್ವಲ್ಪ ಏನನ್ನಾದರೂ ಹೇಳಿಕೊಡದೆ ಇರಲು ನನ್ನಿಂದಾದೀತೆ?"

ಅವರ ಅಪಾರ ಕರುಣೆಯನ್ನು ಭಾವಿಸುತ್ತ ಆತ ಮೂಕನಾದ.

ಶ್ರೀರಾಮಕೃಷ್ಣರ ದೈನಂದಿನ ಮಾತುಕತೆ, ವರ್ತನೆಗಳಲ್ಲೂ ಕೂಡ ಒಂದು ಅಪೂರ್ವ ಮಾಧುರ್ಯ, ಏನೋ ಒಂದು ಅಸಾಧಾರಣತೆ ಇರುತ್ತಿತ್ತು. ಹೊಸದಾಗಿ ಬಂದ ಅನೇಕರು ಅದನ್ನು ಕಂಡೇ ಮುಗ್ಧರಾಗಿಬಿಡುತ್ತಿದ್ದರು. ಅಂಥದೊಂದು ಪ್ರಸಂಗ

ವನ್ನು ಇಲ್ಲಿ ನೋಡಬಹುದು.

ಗಿರೀಶ ಘೋಷನ ತಮ್ಮ ಅತುಲಕೃಷ್ಣನ ಸ್ನೇಹಿತನಾದ ಉಪೇಂದ್ರ ಎಂಬವನು ಪರವೂರಿನಲ್ಲಿ ಮುನ್ಸಿಫನಾಗಿದ್ದ. ಅವನಿಗೆ ಅತುಲ 'ನೀನಿಲ್ಲಿಗೆ ಬಂದಾಗ ಒಂದು ಅದ್ಭುತ ವಸ್ತುವನ್ನು ತೋರಿಸುತ್ತೇನೆ' ಎಂದು ಬರೆದಿದ್ದ. ಅದರಂತೆ ಅವನೊಮ್ಮೆ ಕಲ್ಕತ್ತಕ್ಕೆ ಬಂದಾಗ ಅವನನ್ನು ಶ್ಯಾಮಪುಕುರದಲ್ಲಿದ್ದ ಶ್ರೀರಾಮಕೃಷ್ಣರ ಬಳಿಗೆ ಕರೆತಂದ. ಆ ವೇಳೆಗೆ ಅವರ ಕಾಯಿಲೆ ಉಲ್ಬಣಗೊಂಡಿದ್ದುದರಿಂದ ಯಾರಿಗೂ ಸಂದರ್ಶನ ದೊರೆಯುವುದೇ ಕಷ್ಟವಾಗಿತ್ತು. ಆದರೆ ಉಪೇಂದ್ರನ ಅದೃಷ್ಟದಿಂದ ಅಂದೇ ಅವರ ದರ್ಶನಾವಕಾಶ ಲಭ್ಯವಾಯಿತು.

ಆಗ ಅಪರಾಹ್ನ; ಕೋಣೆ ತುಂಬ ಜನ. ಅತುಲನೂ ಉಪೇಂದ್ರನೂ ಬಂದು ನಡುವೆ ಕುಳಿತರು. ನಾನಾ ವಿಧವಾಗಿ ಮಾತುಕತೆ ನಡೆಯುತ್ತಿತ್ತು; ಆದರೆ ಎಲ್ಲವೂ ಭಗವದ್ವಿಚಾರ ಎಂದು ಹೇಳಲು ಬರುವಂತಿರಲಿಲ್ಲ. ಅಲ್ಲೊಬ್ಬ ಪ್ರಸಿದ್ಧ ಚಿತ್ರಕಾರನಿದ್ದು ದರಿಂದ ಚಿತ್ರಕಲೆಯ ವಿಷಯ, ಅಕ್ಕಸಾಲಿಗರು ಮೋಸ ಮಾಡುವ ವಿಷಯ, ಅದಕ್ಕೆ ಪೂರಕವಾಗಿ ಒಂದು ತಮಾಷೆಯ ಕಥೆ (ಹಿಂದೆ ಬಂಕಿಮಚಂದ್ರನಿಗೆ ಹೇಳಿದ್ದು)— ಇಂಥ 'ಸಾಮಾನ್ಯ' ವಿಷಯಗಳ ಚರ್ಚೆಯೇ ನಡೆಯಿತು. ಅತುಲನಿಗೆ ಕಸಿವಿಸಿಯಾಗು ತ್ತಿದೆ, 'ಇದೇನು ಇವತ್ತು ಬರೀ ಕೆಲಸಕ್ಕೆ ಬಾರದ ಮಾತುಕತೆಯೇ ನಡೆಯುತ್ತಿದೆ ಯಲ್ಲಾ! ಹೊಸಬನೊಬ್ಬ ಬಂದಿದ್ದಾನೆ; ಅದೂ ಒಳ್ಳೇ ಗೌರವಸ್ಥ. ಅವನು ಬಂದಾಗಲೇ ಹೀಗಾಗಬೇಕೆ ? ಸರಿ, ಅವನಿನ್ನೇನುತಾನೆ ಭಾವಿಸುತ್ತಾನೆ ?' ಎಂದು. ಹೀಗೆ ಆಲೋಚಿ ಸುತ್ತ ಅವನ ಮುಖ ಬಾಡಿಹೋಯಿತು. ಮೆಲ್ಲನೆ ಉಪೇಂದ್ರನ ಕಡೆಗೆ ನೋಡು ತ್ತಾನೆ—ಆತ ಒಳ್ಳೇ ಗಮನವಿಟ್ಟು ಮಾತುಗಳನ್ನೆಲ್ಲ ಆಲಿಸುತ್ತಿದ್ದಾನೆ; ಮುಖ ಪ್ರಸನ್ನ ವಾಗಿದೆ ! ಅತುಲ ಅವನಿಗೆ 'ಬಾ, ಹೊರಡೋಣ' ಎಂಬಂತೆ ಸನ್ನೆ ಮಾಡಿದ. ಆದರೆ ಅವನು ಏಳುವ ಇಚ್ಛೆಯನ್ನೇನೂ ತೋರದೆ, 'ಸ್ವಲ್ಪ ತಾಳು, ಸ್ವಲ್ಪ ತಾಳು' ಎಂದು ಸನ್ನೆಯಿಂದಲೇ ತಿಳಿಸಿದ. ಕಡೆಗೆ ಇವನು ಎರಡು ಮೂರು ಸಲ ಕರೆದ ಮೇಲೆ ಎದ್ದು ಬಂದ. "ಏನಯ್ಯಾ ಮಾಡುತ್ತಿದ್ದೆ ಇಷ್ಟು ಹೊತ್ತೂ? ಏನು ವಿಶೇಷ ಇದೆ ಅಂತ ಅಲ್ಲಿ ಕುಳಿತಿದ್ದೆ ? ನಾವು ನಿನ್ನನ್ನು ಗಮಾರ ಅಂತ ಕರೆಯುವುದು ಸುಮ್ಮನೆಯೆ ?" ಎಂದು ಉಪೇಂದ್ರನನ್ನು ತಮಾಷೆ ಮಾಡಿದ ಅತುಲ. ಆಗ ಆತ ಗಂಭೀರವಾಗಿ ಹೇಳಿದ: "ಇಲ್ಲವೋ. ನಿಜವಾಗಿಯೂ ಆ ಮಾತುಗಳೆಲ್ಲ ನನಗೆ ತುಂಬಾ ಹಿಡಿಸಿದುವು. ನಾನು ಈ ಹಿಂದೆ, ಎಲ್ಲರನ್ನೂ ಸಮಾನವಾಗಿ ಪ್ರೀತಿಸುವುದರ ಬಗ್ಗೆ—ವಿಶ್ವಪ್ರೇಮದ ಬಗ್ಗೆ—ಕಿವಿಯಿಂದ ಕೇಳಿದ್ದೆ ಅಷ್ಟೆ. ಅದನ್ನೆಲ್ಲೂ ಯಾರಲ್ಲೂ ಕಂಡಿರಲಿಲ್ಲ. ಆದರೆ ಇವತ್ತು ಠಾಕೂರರು ಎಲ್ಲರೊಡನೆ ಬೆರೆತು, ಅವರೆಲ್ಲರ ಅಭಿರುಚಿಯ ವಿಷಯ ಗಳಲ್ಲೂ ಆನಂದಿಸುವ ರೀತಿಯನ್ನು ನೋಡಿದಮೇಲೆ ಆ ಬಗೆಯ ಪ್ರೇಮವನ್ನು ಪ್ರತ್ಯಕ್ಷವಾಗಿ ಕಂಡಂತಾಯಿತು ! ಇನ್ನೊಂದು ದಿನ ಮತ್ತೆ ಬರಲೇಬೇಕು. ನನ್ನ ಮೂರು ಪ್ರಶ್ನೆಗಳಿವೆ, ಅವನ್ನು ಅವರ ಮುಂದಿಡಬೇಕು."

ಇನ್ನೊಂದು ದಿನ ಅತುಲ ಉಪೇಂದ್ರನೊಂದಿಗೆ ಬಂದ. ಆಗ ಶ್ರೀರಾಮಕೃಷ್ಣರ ಸನ್ನಿಧಿಯಲ್ಲಿ ಹೆಚ್ಚು ಜನರಿರಲಿಲ್ಲ. ಇವರಿಬ್ಬರಿಗೂ ಪರಿಚಿತನಾದ ಮಲ್ಲಿಕ್ ಎಂಬ ವನೂ ಅಲ್ಲಿದ್ದ. ಉಪೇಂದ್ರನಿಗೆ ಅತುಲ, "ನೋಡು, ಪ್ರಶ್ನೆ ಕೇಳುವುದಾದರೆ ನೀನೇ ಕೇಳಬೇಕು. ಇನ್ನೊಬ್ಬರ ಮುಖಾಂತರ ಕೇಳಬೇಡ. ಹಾಗಾದರೆ ಮಾತ್ರ ನಿನಗೆ ಸರಿ

ಯಾದ ಉತ್ತರ ಸಿಗುತ್ತದೆ'' ಎಂದು ಮೊದಲೇ ಒತ್ತಿ ಹೇಳಿದ್ದ. ಆದರೆ ಉಪೇಂದ್ರನಿಗೆ ಸಂಕೋಚ. ತನ್ನ ಪ್ರಶ್ನೆಯನ್ನು ಮಲ್ಲಿಕನ ಮೂಲಕ ಕೇಳಿಸಿದ. ಶ್ರೀರಾಮಕೃಷ್ಣರೇನೋ ಉತ್ತರಿಸಿದರು. ಆದರೆ ಉಪೇಂದ್ರನಿಗೆ ಸಮಾಧಾನವಾಗಲಿಲ್ಲ ಎನ್ನುವುದು ಅವನ ಮುಖಭಾವದಲ್ಲೇ ತಿಳಿಯುತ್ತಿತ್ತು. ಬಳಿಕ ಅತುಲ ಅವನಿಗೆ ಹೇಳಿದ, "ಹಾಗಾದದ್ದ ರಲ್ಲೇನೂ ಆಶ್ಚರ್ಯವಿಲ್ಲ. ನಾನು ಮೊದಲೇ ಹೇಳಿರಲಿಲ್ಲವೆ? ಹೋಗಲಿ, ಇನ್ನೊಮ್ಮೆ ನೀನೇ ಕೇಳು. ಯಾರಿಗೂ ವಕಾಲತ್ತು ಕೊಡಲು ಹೋಗಬೇಡ.''

ಮತ್ತೊಂದು ದಿನ, ಸ್ವಲ್ಪ ಧೈರ್ಯ ತಂದುಕೊಂಡು ಉಪೇಂದ್ರ ಕೇಳಿದ: "ಮಹಾ ಶಯರೆ, ಭಗವಂತನು ಸಾಕಾರನೋ ನಿರಾಕಾರನೋ? ಒಂದು ವೇಳೆ ಅವನು ಎರಡೂ ಆಗಿದ್ದಾನೆ ಎನ್ನುವುದಾದರೆ, ಆ ರೀತಿಯ ವಿರುದ್ಧಸ್ವಭಾವಗಳೆರಡೂ ಒಬ್ಬನಲ್ಲೇ ಇರಲು ಹೇಗೆ ಸಾಧ್ಯ?'' ಶ್ರೀರಾಮಕೃಷ್ಣರು ಇದಕ್ಕೆ ಸರಳ ದೃಷ್ಟಾಂತದ ಮೂಲಕ, "ಹೌದು, ಭಗವಂತನು ಸಾಕಾರ ನಿರಾಕಾರಗಳೆರಡೂ ಆಗಿರುವುದು ನಿಜ. ಇದು ಹೇಗೆ ಗೊತ್ತೆ? ನೀರು-ಮಂಜುಗಡ್ಡೆಗಳಿರುವಂತೆ'' ಎಂದು ವಿವರಿಸಿದರು. ಉಪೇಂದ್ರ ಕಾಲೇಜಿನಲ್ಲಿ ವಿಜ್ಞಾನವನ್ನು ಓದಿದ್ದವನು. ಈ ನೀರು-ಮಂಜುಗಡ್ಡೆಯ ಉದಾಹರಣೆ ಅವನ ಮನಸ್ಸಿಗೆ ಚೆನ್ನಾಗಿ ನಾಟಿತು; ಪೂರ್ತಿ ಸಮಾಧಾನ ಕೊಟ್ಟಿತು. ಸ್ವಲ್ಪ ಹೊತ್ತಿನ ಮೇಲೆ ಅವನು ಎದ್ದುಬಂದಾಗ ಅತುಲ ಕೇಳಿದ, "ನೀನು ಮೂರು ಪ್ರಶ್ನೆ ಕೇಳಬೇಕು ಅಂತ ಇದ್ದವನಲ್ಲವೆ? ಒಂದನ್ನೇ ಕೇಳಿ ಸುಮ್ಮನಾದೆಯಲ್ಲಾ?'' ಅದಕ್ಕೆ ಉಪೇಂದ್ರ "ಅದೊಂದೇ ಉತ್ತರದಿಂದ ನನ್ನ ಮೂರು ಸಂದೇಹಗಳೂ ಪರಿಹಾರವಾದುವಲ್ಲ!'' ಎಂದುತ್ತರಿಸಿದ.

ಉಪೇಂದ್ರನ ಪ್ರಶ್ನೆ, ಶ್ರೀರಾಮಕೃಷ್ಣರು ನೀಡಿದ ಉತ್ತರ—ಇವೆರಡೂ ಅಲ್ಲೇ ಇದ್ದ ರಾಮಚಂದ್ರ ದತ್ತನ ಕಿವಿಗೆ ಬಿದ್ದಿದ್ದುವು. ಆತ ಶ್ರೀರಾಮಕೃಷ್ಣರ ಜೀವನ-ಸಂದೇಶ ಗಳ ಬಗ್ಗೆ ಕೆಲವು ಪುಸ್ತಕಗಳನ್ನು ಬರೆದಿದ್ದವನು. ಅವನು ಆಮೇಲೆ ಬಂದು ಅತುಲನ ಹತ್ತಿರ ಹೇಳಿದ, "ಮಹಾಶಯರೆ, ಠಾಕೂರರು ಉಪೇಂದ್ರರ ಪ್ರಶ್ನೆಗೆ ಬಹಳ ಜಟಿಲ ವಾದ ಉತ್ತರ ಕೊಟ್ಟುಬಿಟ್ಟರು. ಅದನ್ನವರು ಗ್ರಹಿಸಲಾರರು. ಅವರನ್ನು ನನ್ನ ಬಳಿಗೆ ಕರೆತನ್ನಿ. ನನ್ನ 'ತತ್ತ್ವಪ್ರಕಾಶಿಕಾ' ಎನ್ನುವ ಪುಸ್ತಕವನ್ನು ಅವರು ಓದಬೇಕು. ಆಗ ಅವರಿಗೆ ಠಾಕೂರರ ಉತ್ತರದ ಅರ್ಥ ತಿಳಿಯುತ್ತದೆ.'' ಈ ಜಂಬದ ಮಾತು ಕೇಳಿ ಅತುಲನಿಗೆ ಕೋಪ ಬಂತು. "ರಾಮಚಂದ್ರ ದತ್ತರೇ, ನೀವು ನಮಗಿಂತ ಏಳು ವರ್ಷ ಮೊದಲಿನಿಂದಲೇ ಠಾಕೂರರ ಬಳಿಗೆ ಬರುತ್ತಿದ್ದೀರಿ ನಿಜ. ಆದರೆ ಸ್ವಯಂ ಠಾಕೂರರಿಂದ ತಿಳಿಯಪಡಿಸಲು ಅಸಾಧ್ಯವಾದುದನ್ನು ಯಾರಿಗಾದರೂ ನಿಮ್ಮ ಪುಸ್ತಕ ಓದಿ ತಿಳಿಯ ಲಾದೀತೆ? ಎಂಥ ಮಾತಿದು ನಿಮ್ಮದು! ಉಪೇಂದ್ರನಿಗೆ ನಿಮ್ಮ ಪುಸ್ತಕ ಕೊಡಬೇಕು ಅಂತಿದ್ದರೆ ಕೊಡಿ, ಅದು ಬೇರೆ ಮಾತು'' ಎಂದು ಹೇಳಿಬಿಟ್ಟ. ಪಾಪ, ರಾಮಚಂದ್ರ ಬೇವಿನೆಣ್ಣೆ ಕುಡಿದವನಂತೆ ಮುಖ ಮಾಡಿಕೊಂಡು, ಉಪೇಂದ್ರನಿಗೆ ಪುಸ್ತಕ ಕೊಟ್ಟ.

ಶ್ಯಾಮಪುಕುರವಾಸದ ಈ ದಿನಗಳಲ್ಲೇ ಶ್ರೀರಾಮಕೃಷ್ಣರ ಆಧ್ಯಾತ್ಮಿಕ ಸಾಮ್ರಾಜ್ಯದ ಮತ್ತೊಂದು ಅದ್ಭುತವನ್ನು ನೋಡುವ ಭಾಗ್ಯ ಭಕ್ತರಿಗೊದಗಿತು.

ಅಂದು ಅಕ್ಟೋಬರ್ ೩೧ನೇ ತಾರೀಖು. ಶ್ರೀರಾಮಕೃಷ್ಣರು ಬೆಳಗಿನ ಸ್ನಾನ ಮುಗಿಸಿಕೊಂಡು ಕೋಣೆಗೆ ಹಿಂದಿರುಗಿದರು. ರಾಮಚಂದ್ರ ಮೊದಲಾದ ಭಕ್ತರು ಆಗಷ್ಟೇ ಬಂದಿದ್ದರು. ರಾಮಚಂದ್ರನನ್ನುದ್ದೇಶಿಸಿ ಶ್ರೀರಾಮಕೃಷ್ಣರು ನುಡಿದರು: "ನೋಡು ರಾಮ, ಈಗತಾನೆ ನಾನು ದರ್ಶನದಲ್ಲಿ ಒಬ್ಬ ಗಟ್ಟಿಮುಟ್ಟಾದ ಸಂನ್ಯಾಸಿಯನ್ನು ಕಂಡೆ. ಆತ ಕಾವಿಯ ಕೌಪೀನ ಧರಿಸಿದ್ದ. ಅವನನ್ನು ನಾನು ಹಿಂದೆಂದೂ ನೋಡಿರಲಿಲ್ಲ."

ರಾಮಚಂದ್ರ (ಮುಗುಳ್ನಗುತ್ತ): "ಮಹಾಶಯರೆ, ನಮಗೇನು ಗೊತ್ತಾಗುತ್ತದೆ ಆ ವಿಷಯವೆಲ್ಲ? ನೀವು ಇಹ-ಪರಲೋಕಗಳ ಎಷ್ಟೋ ಸಂಗತಿಗಳನ್ನು ಕಾಣುತ್ತಿರುತ್ತೀರಿ. ಅವುಗಳ ಅರ್ಥ ನಮಗೆ ಹೇಗೆತಾನೆ ತಿಳಿಯಬೇಕು?"

ಶ್ರೀರಾಮಕೃಷ್ಣರು ಚಿಕ್ಕ ಹುಡುಗನಂತೆ, ಅರ್ಧ ಅಂತರ್ಮುಖಿಗಳಾಗಿ ಉದ್ಗರಿಸಿದರು: "ಹೌದು, ನಿಜಕ್ಕೂ ನಾನೊಬ್ಬ ಸಂನ್ಯಾಸಿಯನ್ನು ನೋಡಿದೆ. ಆದರೆ ಆತ ಯಾರು ಅಂತ ಗೊತ್ತಾಗುತ್ತಿಲ್ಲ..."

ಈಗ ಆ ವಿಷಯ ಅಷ್ಟಕ್ಕೇ ಮುಕ್ತಾಯಗೊಂಡಿತು. ಶ್ರೀರಾಮಕೃಷ್ಣರು ಮೆಲ್ಲನೆ ಮಂಚದ ಮೇಲೆ ಕುಳಿತರು. ಭಕ್ತರು ಅವರೆದುರಿನಲ್ಲಿ ಆಸೀನರಾದರು.

ಇದಾಗಿ ಒಂದು ತಾಸಿನ ಮೇಲೆ ಅಪರಿಚಿತ ವ್ಯಕ್ತಿಯೊಬ್ಬ ಬಂದ. ಪಾಶ್ಚಾತ್ಯರಂತೆ ಷರಾಯಿ, ಕಪ್ಪು ಷರಟು ಮತ್ತು ಕಪ್ಪು ಟೊಪ್ಪಿ ಧರಿಸಿದ್ದಾನೆ. ಉದ್ದನೆಯ ಗಡ್ಡ ಬಿಟ್ಟಿದ್ದಾನೆ. ಕೈಯಲ್ಲಿ ಬೆತ್ತ. ನೋಡಲು ಬಿಹಾರಿನವನಂತಿದ್ದಾನೆ. ವಯಸ್ಸು ಮುವ್ವತ್ತೈದರ ಆಸುಪಾಸು. ಈತ ಮಹಡಿಯ ಮೇಲಕ್ಕೆ ಬಂದು, ಅಲ್ಲಿದ್ದ ತರುಣ ಮಣೀಂದ್ರಕೃಷ್ಣನನ್ನು ಕೇಳಿದ: "ಏನಪ್ಪಾ, ರಾಮಕೃಷ್ಣ ಪರಮಹಂಸರು ಇರುವುದು ಇಲ್ಲೇ ಏನು?" "ಹೌದು ಸ್ವಾಮಿ, ಬನ್ನಿ" ಎನ್ನುತ್ತ ಮಣೀಂದ್ರ ಅವನನ್ನು ಒಳಕ್ಕೆ ಕರೆತಂದ.

ಆ ವ್ಯಕ್ತಿ ಶ್ರೀರಾಮಕೃಷ್ಣರಿಗೆ ಪ್ರಣಾಮ ಮಾಡಿ ಕುಳಿತ. ಶ್ರೀರಾಮಕೃಷ್ಣರು ಅವನನ್ನು ಮುಗುಳ್ನಗೆಯೊಂದಿಗೆ ಸ್ವಾಗತಿಸಿದರು. ಆತ ಸ್ವಲ್ಪ ಹೊತ್ತು ಮೌನವಾಗಿದ್ದು, ಬಳಿಕ ತನ್ನ ಪರಿಚಯ ಹೇಳಿಕೊಂಡ.

ಅವನೊಬ್ಬ ಕ್ರೈಸ್ತ ಸಾಧಕ. ಕ್ವೇಕರ್* ಪಂಥಕ್ಕೆ ಸೇರಿದವನು. ವಾಯುವ್ಯ ಭಾರತದಲ್ಲಿ ಹುಟ್ಟಿ ಬೆಳೆದವನು. ಹೆಸರು ಪ್ರಭುದಯಾಲ ಮಿಶ್ರ.

ಸ್ವಲ್ಪ ಹೊತ್ತು ವಿವಿಧ ಧರ್ಮಗಳಿಗೆ ಸಂಬಂಧಿಸಿದಂತೆ, ಅವುಗಳ ಮೂಲ ತತ್ತ್ವಗಳ ಬಗ್ಗೆ, ಮಾತುಕತೆ ನಡೆಯಿತು. ಮಾತಿನ ನಡುವೆ ಪ್ರಭುದಯಾಲ "ಏಸು

---

*ಇದು ೧೭ನೇ ಶತಮಾನದಲ್ಲಿ ಜನ್ಮತಳೆದ ಕ್ರೈಸ್ತರ ಒಂದು ಪಂಗಡ. ಇದರ ಸದಸ್ಯರು ಶಾಂತಿ ತತ್ತ್ವಗಳಲ್ಲಿ ದೃಢನಿಷ್ಠೆಯುಳ್ಳವರು; ಗೌರವ ಪ್ರದರ್ಶನಕ್ಕೆ ಗಮನ ಕೊಡದವರು. ಇವರ ನಡೆನುಡಿ, ಉಡುಗೆ ಎಲ್ಲವೂ ಸರಳ.

ಕೇವಲ ಮೇರೀಪುತ್ರನಲ್ಲ, ಆತ ಸ್ವಯಂ ಭಗವಂತ" ಎಂದು ಅಭಿಪ್ರಾಯಪಟ್ಟ. ಆತ ಭಾವಭರಿತನಾಗಿದ್ದಂತೆ ತೋರಿತು.

ಶ್ರೀರಾಮಕೃಷ್ಣರು ಅವನನ್ನು ಕೇಳಿದರು, "ನಿನಗೇನಾದರೂ ದರ್ಶನಾನುಭವಗಳು ಆಗುತ್ತವೆಯೆ ?"

ಪ್ರಭುದಯಾಲ: "ಹಿಂದೆ ಸಂಸಾರವನ್ನು ತ್ಯಜಿಸುವುದಕ್ಕೆ ಮೊದಲೇ ನಾನು ಧ್ಯಾನದಲ್ಲಿ ಒಂದು ಜ್ಯೋತಿಯನ್ನು ಕಾಣುತ್ತಿದ್ದೆ. ಒಮ್ಮೆ ನನಗೆ ಏಸುಭಗವಂತನ ದರ್ಶನವೂ ಆಯಿತು. ಆತನ ಸೌಂದರ್ಯವನ್ನು ನಾನು ಹೇಗೆ ಬಣ್ಣಿಸಲಿ! ಅದರ ಮುಂದೆ ರಮಣಿಯ ಸೌಂದರ್ಯವೂ ಅತ್ಯಂತ ಕ್ಷುದ್ರವಾಗಿ ಕಾಣುತ್ತದೆ."

ಭಕ್ತರೆಲ್ಲ ಈ ವಿಷಯಗಳನ್ನು ಕೇಳಿ ಪರಮಾಶ್ಚರ್ಯಗೊಂಡರು. ಈಗ ಆತ, ತನ್ನನ್ನು ಇಲ್ಲಿಗೆ ಕರೆತಂದ ಪ್ರೇರಕಶಕ್ತಿಯ ಬಗ್ಗೆ ಶ್ರೀರಾಮಕೃಷ್ಣರಿಗೆ ಹೇಳತೊಡಗಿದ:

"ಒಮ್ಮೆ, ಅತ್ಯುನ್ನತ ಸಾಕ್ಷಾತ್ಕಾರ ಮಾಡಿಕೊಂಡ ವ್ಯಕ್ತಿ ಯಾರಾದರೂ ಇದ್ದರೆ ಅವನನ್ನು ನೋಡಬೇಕು ಎನ್ನುವ ಇಚ್ಛೆ ನನ್ನ ಮನಸ್ಸಿನಲ್ಲಿ ಹುಟ್ಟಿತು. ಆಗೊಂದು ದಿನ ಧ್ಯಾನದಲ್ಲಿ ಒಂದು ದೃಶ್ಯವನ್ನು ಕಂಡೆ: ಒಂದು ಹೊಳೆಯ ಬದಿಯ ತೋಟ; ಅದರಲ್ಲಿ ಇಬ್ಬರು ವ್ಯಕ್ತಿಗಳು. ಒಬ್ಬನು ಎತ್ತರದ ಪೀಠದ ಮೇಲೂ ಇನ್ನೊಬ್ಬ ಆತನ ಪಾದದ ಬಳಿಯಲ್ಲೂ ಕುಳಿತಿದ್ದರು. ಪೀಠದ ಮೇಲೆ ಕುಳಿತಿದ್ದವನು ಮಹಾಯೋಗಿಯಂತಿದ್ದ. ಅವನ ತೇಜಸ್ಸು ಕಣ್ಣು ಕೋರೈಸುತ್ತಿತ್ತು. ಆತ ಅತ್ಯುನ್ನತ ಅವಸ್ಥೆಯನ್ನು ತಲುಪಿದ್ದಾನೆ, ಮತ್ತು ಇನ್ನೊಬ್ಬ ವ್ಯಕ್ತಿ ಅಷ್ಟೆತ್ತರಕ್ಕೆ ಏರಿದವನಲ್ಲವಾದರೂ ಸಾಮಾನ್ಯನಂತೂ ಅಲ್ಲ ಎಂಬ ನಿಶ್ಚಿತ ಅಭಿಪ್ರಾಯ ನನ್ನಲ್ಲಿ ಮೂಡಿತು.

"ಈ ದರ್ಶನವಾದ ಮೇಲೆ, ಈ ಮಹಾತ್ಮರು ಖಂಡಿತವಾಗಿಯೂ ಎಲ್ಲೋ ಜೀವಿಸಿದ್ದಾರೆ ಎಂದು ನನಗನ್ನಿಸತೊಡಗಿತು. ಆದರೆ ಅವರೆಲ್ಲಿದ್ದಾರೋ ನಾನವರನ್ನು ಹೇಗೆ ಹುಡುಕುವುದೋ ಎಂಬುದು ತೋಚದೆಹೋಯಿತು. ಮತ್ತು, ಇನ್ನೊಮ್ಮೆ ಅವರನ್ನು ಧ್ಯಾನದಲ್ಲೇ ನೋಡಬೇಕೆಂದು ಎಷ್ಟು ಪ್ರಯತ್ನಿಸಿದರೂ ಸಫಲನಾಗಲಿಲ್ಲ. ಬಳಿಕ ಅವರನ್ನು ಹುಡುಕುತ್ತ ನಾನು ಹಲವೆಡೆಗಳಲ್ಲಿ, ಮುಖ್ಯವಾಗಿ ಪಶ್ಚಿಮ ಭಾರತದಲ್ಲಿ ಸುತ್ತಾಡಿದೆ. ಕಡೆಗೆ ಘಾಜೀಪುರದ ಪವಾಹಾರಿ ಬಾಬಾರ ಬಗ್ಗೆ ಕೇಳಿ ಅಲ್ಲಿಗೂ ಹೋದೆ. ಆದರೆ ಅವರನ್ನು ಕಂಡಾಗ ಅತೀವ ನಿರಾಶೆಯಾಯಿತು. ನಾನು ಕಂಡಿದ್ದ ಆ ಇಬ್ಬರು ವ್ಯಕ್ತಿಗಳಿಗೂ ಬಾಬಾರಿಗೂ ಯಾವುದೇ ಹೋಲಿಕೆಯಿರಲಿಲ್ಲ. ಆದರೆ ಅವರಲ್ಲೊಬ್ಬರ ಛಾಯಾಚಿತ್ರವನ್ನು ಬಾಬಾರ ಗೋಡೆಯ ಮೇಲೆ ತೂಗುಹಾಕಿದ್ದನ್ನು ಕಂಡು ಆಶ್ಚರ್ಯಚಕಿತನಾದೆ. 'ಇದು ಯಾರ ಚಿತ್ರ ?' ಅಂತ ಕೇಳಿದಾಗ, 'ಅವರು ರಾಮಕೃಷ್ಣ ಪರಮಹಂಸರು' ಅಂತ ಬಾಬಾ ಉತ್ತರಿಸಿದರು. ನಾನು ಕಾತರದಿಂದ ಕೇಳಿದೆ, 'ಎಲ್ಲಿದ್ದಾರೆ ಅವರು ?' ಅಂತ. 'ಪರಮಹಂಸರು ಬಹಳ ವರ್ಷಗಳಿಂದಲೂ ದಕ್ಷಿಣೇಶ್ವರದಲ್ಲಿದ್ದರು. ಈಗ ಅವರಿಗೆ ತುಂಬ ಕಾಯಿಲೆಯಾಗಿರುವುದರಿಂದ ಚಿಕಿತ್ಸೆಗಾಗಿ ಭಕ್ತರು ಕಲ್ಕತ್ತಕ್ಕೆ ಕರೆತಂದಿದ್ದಾರೆ' ಅಂತ ಬಾಬಾ ತಿಳಿಸಿದರು. ಅದನ್ನು ಕೇಳಿ ನಾನಿಲ್ಲಿಗೆ ಧಾವಿಸಿ ಬಂದೆ. ಈಗ ಇವರನ್ನು ಪ್ರತ್ಯಕ್ಷ ನೋಡಿದೊಡನೆಯೇ ನನಗೆ ಸಂಪೂರ್ಣ ದೃಢವಾಯಿತು— ನಾನು ಕಂಡ ಯೋಗಿ ಇವರೇ ಅಂತ !"

ನೆರೆದ ಭಕ್ತರೆಲ್ಲ ಉಸಿರಾಡುವುದನ್ನೂ ಮರೆತು, ಆತನ ಮಾತುಗಳನ್ನು ಆಲಿಸುತ್ತಿದ್ದಾರೆ.

ಆತ ತನ್ನ ಅನುಭವಗಳ ಬಗ್ಗೆ ಹೇಳಿಕೊಳ್ಳುತ್ತ ಪುನಃ ನುಡಿದ: "ಈಗ ನೀವು ನೋಡುತ್ತಿರುವ ಉಡುಪು ನನ್ನ ಎಂದಿನ ಉಡುಗೆಯಲ್ಲ." ಹೀಗೆನ್ನುತ್ತ ಕೇಳುಗರಲ್ಲಿ ವಿಶ್ವಾಸ ಮೂಡಿಸುವುದಕ್ಕಾಗಿ ಆತ ತನ್ನ ಮೇಲಂಗಿಯನ್ನು ಕಳಚಿದ—ಒಳಗೆ ಕಾಷಾಯವಸ್ತ್ರ! "ಇದೇ ನನ್ನ ನಿತ್ಯದ ಉಡುಗೆ."

ಅದನ್ನು ಕಂಡೊಡನೆ ಶ್ರೀರಾಮಕೃಷ್ಣರು ಎದ್ದು ನಿಂತು ಗಾಢಸಮಾಧಿಸ್ಥರಾಗಿ ಬಿಟ್ಟರು. ಅವರ ಕೈಗಳೆರಡೂ ಕ್ರಿಸ್ತನ ಚಿತ್ರದಲ್ಲಿರುವಂತೆ ಮೇಲೆತ್ತಿವೆ; ಮುಖದಲ್ಲಿ ಅಪೂರ್ವ ಮಂದಹಾಸ!

ಶ್ರೀರಾಮಕೃಷ್ಣರ ಈ ಭಾವವನ್ನು ನೋಡಿ ಪ್ರಭುದಯಾಲ ಆನಂದಪರವಶನಾದ. ಧನ್ಯತೆಯ ಕಣ್ಣೀರು ಸುರಿಸುತ್ತ ಮೊಣಕಾಲೂರಿ ಅವರ ಮುಖಾರವಿಂದವನ್ನು ಎವೆಯಿಕ್ಕದೆ ದಿಟ್ಟಿಸಿದ. ಉದ್ವೇಗದಿಂದ ಅವನ ಮೈಯೆಲ್ಲ ಅದುರುತ್ತಿತ್ತು. ಬರಿಗಣ್ಣಿಗೆ ಕಾಣದ ಮತ್ತೇನನ್ನೋ ಆತನ ಅಂತರ್ದೃಷ್ಟಿ ಗ್ರಹಿಸುತ್ತಿದ್ದುದು ಸ್ಪಷ್ಟವಾಗಿತ್ತು.

ಇವರಿಬ್ಬರ ಅಪೂರ್ವ ಭಾವವಿನಿಮಯವನ್ನು ಕಂಡು ಭಕ್ತರೆಲ್ಲ ಸ್ತಬ್ಧರಾಗಿದ್ದರು. ಪ್ರಭುದಯಾಲನ ಕಾಷಾಯವಸ್ತ್ರವನ್ನು ನೋಡಿದ ಮೇಲೆ, ಶ್ರೀರಾಮಕೃಷ್ಣರು ಅಂದು ಬೆಳಗ್ಗೆ ದರ್ಶನದಲ್ಲಿ ಕಂಡಿದ್ದ ಸಂನ್ಯಾಸಿ ಈತನೇ ಎಂಬುದರಲ್ಲಿ ಯಾರಿಗೂ ಸಂದೇಹವುಳಿಯಲಿಲ್ಲ.

ಸ್ವಲ್ಪ ಹೊತ್ತಿನ ಮೇಲೆ ಶ್ರೀರಾಮಕೃಷ್ಣರಿಗೆ ಭಾಗಶಃ ಪ್ರಜ್ಞೆ ಮರಳಿತು. ಪ್ರಭುದಯಾಲನನ್ನು ನೋಡುತ್ತ ನಗಲಾರಂಭಿಸಿದರು. ಅವನು ತಮ್ಮ ಹಳೆಯ ಪರಿಚಿತನೋ ಎಂಬಂತೆ "ಚೆನ್ನಾಗಿದ್ದೀಯಾ?" ಎಂದು ಕೇಳಿದರು. ಅವರ ಆ ಭಾವ ಹಾಗೇ ಮುಂದುವರಿಯಿತು. ಈಗ ಆತನ ಕೈಗಳೆರಡನ್ನೂ ತಮ್ಮ ಕೈಗಳಲ್ಲಿ ಹಿಡಿದು ಕುಲುಕುತ್ತ ನುಡಿದರು, "ನೀನು ಯಾವುದನ್ನು ಬಯಸಿ ಶ್ರಮಿಸುತ್ತಿದ್ದೀಯೋ ಅದು ನಿನಗೆ ದೊರೆಯುತ್ತದೆ." ಹೀಗೆನ್ನುತ್ತಿರುವಾಗ ಅವರ ಮನಸ್ಸು ಭಾವಸಮಾಧಿಗೂ ಅರ್ಧಬಾಹ್ಯಪ್ರಜ್ಞೆಗೂ ನಡುವೆ ಓಲಾಡುತ್ತಿತ್ತು.

ಪ್ರಭುದಯಾಲ ಕೈಮುಗಿದುಕೊಂಡು ವಿನೀತಭಾವದಿಂದ ಹೇಳಿದ:

"ಆ ದಿನದಿಂದ (ತಾನು ಅವರನ್ನು ದರ್ಶನದಲ್ಲಿ ಕಂಡಂದಿನಿಂದ) ನಾನು ನನ್ನ ತನು ಮನ ಪ್ರಾಣಗಳನ್ನು ನಿಮಗೆ ಅರ್ಪಣೆ ಮಾಡಿಬಿಟ್ಟಿದ್ದೇನೆ."

ಶ್ರೀರಾಮಕೃಷ್ಣರಿನ್ನೂ ಭಾವಾವಸ್ಥೆಯಲ್ಲೇ ಇದ್ದರು. ಅವರ ನಗು ನಿರಂತರವಾಗಿ ಮುಂದುವರಿದಿತ್ತು.

ಸ್ವಲ್ಪ ಹೊತ್ತಿನ ಮೇಲೆ ಅವರು ಸಂಪೂರ್ಣ ಬಹಿರ್ಮುಖರಾಗಿ ಹಾಸಿಗೆಯ ಮೇಲೆ ಕುಳಿತರು. ಅಲ್ಲಿ ನೆರೆದಿದ್ದ ಭಕ್ತರನ್ನು ಸಂತೋಷದಿಂದ ನೋಡುತ್ತ ಪ್ರಭುದಯಾಲ ಉದ್ಗರಿಸಿದ: "ನಾನಿಂದು ಧನ್ಯನಾದೆ!"

ಮತ್ತೆ, ಶಾಂತನಾಗಿ ದೃಢಸ್ವರದಲ್ಲಿ ನುಡಿದ: "ಇವರು (ಶ್ರೀರಾಮಕೃಷ್ಣರು) ಯಾರು ಅಂತ ನೀವಿನ್ನೂ ಗುರುತಿಸಿಲ್ಲ. ಇವರೂ ಕ್ರಿಸ್ತನೂ ಒಂದೇ! ಇವತ್ತು ನೀವು ಇವರನ್ನು ನೋಡಿದಂಥ ಸ್ಥಿತಿಯಲ್ಲೇ ಏಸುಕ್ರಿಸ್ತನೂ ಇರುತ್ತಿದ್ದುದು. ಕ್ರಿಸ್ತ-ಪರಮಹಂಸರಿಬ್ಬರನ್ನೂ ನಾನೀಗಾಗಲೇ ದರ್ಶನದಲ್ಲಿ ಕಂಡಿದ್ದೇನೆ. ಇವರೇ ಅವನು ಎನ್ನುವುದು ಖಂಡಿತ."

ಒಬ್ಬ ಕ್ರೈಸ್ತಧರ್ಮೀಯನಿಂದ ಇಂತಹ ಆಶ್ಚರ್ಯಕರ ವೃತ್ತಾಂತವನ್ನೂ ಮಾತು

ಗಳನ್ನೂ ಕೇಳಿದ ಭಕ್ತರು ರೋಮಾಂಚಗೊಂಡರು.

ಈಗ ಅವರು ಆತನ ಧಾರ್ಮಿಕ ಹಿನ್ನೆಲೆಯ ಬಗ್ಗೆ ತಿಳಿಯಬಯಸಿದರು. ಆತ ಕ್ರೈಸ್ತನಾಗಿದ್ದೂ ಕಾಷಾಯವಸ್ತ್ರ ಧರಿಸುವುದರ ಬಗ್ಗೆ ಪ್ರಶ್ನಿಸಿದಾಗ ಅವನೆಂದ:

"ನಾನು ಹುಟ್ಟಿದ್ದು ಬ್ರಾಹ್ಮಣ ಕುಲದಲ್ಲೇ. ಆದರೆ ಸೌಭಾಗ್ಯವಶದಿಂದ ಏಸು ಕ್ರಿಸ್ತನನ್ನು ಆರಾಧ್ಯದೈವನನ್ನಾಗಿ ಸ್ವೀಕರಿಸಿ, ಅವನಲ್ಲಿ ಶ್ರದ್ಧೆ ತಳೆದೆ. ಹಾಗೆಂದ ಮಾತ್ರಕ್ಕೆ ನಮ್ಮ ಪೂರ್ವಿಕರು ತಲೆತಲಾಂತರದಿಂದ ನಡೆಸಿಕೊಂಡು ಬಂದ ಆಚಾರ-ವಿಚಾರಗಳನ್ನೆಲ್ಲ ತ್ಯಜಿಸಲಾದೀತೆ ? ನನಗೆ ಹಿಂದೂ ಯೋಗಶಾಸ್ತ್ರಗಳಲ್ಲಿ ಸಂಪೂರ್ಣ ಶ್ರದ್ಧೆಯಿದೆ. ಏಸುವನ್ನು ಇಷ್ಟದೇವತೆಯನ್ನಾಗಿ ಭಾವಿಸಿ ಸಾಧನೆ ಮಾಡುತ್ತಿದ್ದೇನೆ. ಭಾರತದ ಯೋಗಿವರ್ಯರು ಅನಾದಿಕಾಲದಿಂದಲೂ ಈ ಕಾಷಾಯವಸ್ತ್ರವನ್ನೇ ಧರಿಸುತ್ತ ಬಂದಿದ್ದಾರಲ್ಲವೆ ? ಆದ್ದರಿಂದ ನನಗೆ ಇದು ಅತ್ಯಂತ ಪ್ರೀತಿಪಾತ್ರವಾದ ಉಡುಗೆ.

"ಜಾತಿಭೇದಗಳಲ್ಲಿ ನನಗೆ ವಿಶ್ವಾಸವಿಲ್ಲ. ಆದರೆ ಯಾರೆಂದರವರ ಕೈಯಿಂದ ಆಹಾರವನ್ನು ಸ್ವೀಕರಿಸುವುದು ಯೋಗಾಭ್ಯಾಸಿಗಳಿಗೆ ಒಳ್ಳೆಯದಲ್ಲ ಎನ್ನುವುದು ನನ್ನ ನಂಬಿಕೆ. ಆದ್ದರಿಂದ ನಾನೇ ಹವಿಷ್ಯಾನ್ನವನ್ನು ಸ್ವಯಂಪಾಕ ಮಾಡಿಕೊಳ್ಳುತ್ತೇನೆ. ಹೀಗೆ ಯೋಗಸಾಧನೆ ಮಾಡಿದ್ದರ ಫಲವಾಗಿ, ನಾನು ಕ್ರೈಸ್ತನಾಗಿದ್ದರೂ ಸಹ, ಜ್ಯೋತಿರ್ದರ್ಶನವೇ ಮೊದಲಾದ ಅನುಭವಗಳನ್ನು ಗಳಿಸಿದ್ದೇನೆ."

ಚಿಕ್ಕಂದಿನಿಂದಲೂ ಅವನೊಳಗೆ ವೈರಾಗ್ಯದ ದೀಪ ಮಿನುಗುತ್ತಲೇ ಇತ್ತು. ಆದರೆ ಅವನ ಅಣ್ಣನ ಮದುವೆಯ ಹಿಂದಿನ ದಿನವೇ ಮದುಮಗನೂ ಅವನ ಮತ್ತೊಬ್ಬ ಸೋದರನೂ ಚಪ್ಪರ ಕುಸಿದುಬಿದ್ದುದರಿಂದ ತೀರಿಹೋದರು. ಪ್ರಭುದಯಾಲನ ವಿರಕ್ತಿಯನ್ನು ಜ್ವಲಂತಗೊಳಿಸಲು ಇಷ್ಟೇ ಸಾಕಾಯಿತು. ಆ ದಿನವೇ ಅವನು ಸಂಸಾರವನ್ನು ತ್ಯಜಿಸಿ ಹೊರಟುಬಿಟ್ಟ—ಇದು ಭಕ್ತರಿಗೆ ಅವನಿಂದ ತಿಳಿದುಬಂದ ಸಂಗತಿ.

ಪ್ರಭುದಯಾಲನಿಗೆ ಉಪಾಹಾರ ನೀಡುವಂತೆ ಶ್ರೀರಾಮಕೃಷ್ಣರು ಶಿಷ್ಯರಿಗೆ ಸೂಚಿಸಿದರು. ಅಂತೆಯೇ ತರುಣಶಿಷ್ಯರು ಆತನನ್ನು ಬೇರೊಂದು ಕೋಣೆಗೆ ಕರೆದೊಯ್ದು ಉಪಚರಿಸಿದರು. ಆ ಸಂದರ್ಭದಲ್ಲಿ, ಶಿಷ್ಯರ ನಾಯಕನಾದ ನರೇಂದ್ರ ಆತನಿಗೆ ಆಧ್ಯಾತ್ಮಸಂಬಂಧವಾದ ಮತ್ತು ವೈಯಕ್ತಿಕವಾದ ಅನೇಕ ಪ್ರಶ್ನೆಗಳನ್ನು ಹಾಕಿದ. ಎಲ್ಲಕ್ಕೂ ತೃಪ್ತಿಕರವಾದ ಉತ್ತರ ಸಿಕ್ಕಿತು. ಆತನ ಪ್ರಾಮಾಣಿಕತೆಯನ್ನೂ ಸಿದ್ಧಿಯನ್ನೂ ಮನಗಂಡು ಸುಪ್ರೀತನಾದ ನರೇಂದ್ರ ಅವನಿಗೆ ಪ್ರಣಾಮ ಸಲ್ಲಿಸಿ ಶ್ರದ್ಧಾಂಜಲಿಯನ್ನರ್ಪಿಸಿದ. ಅವನ ಮೇಲ್ಪಂಕ್ತಿಯನ್ನನುಸರಿಸಿ ಇತರ ಶಿಷ್ಯರೂ ಹಾಗೆಯೇ ಮಾಡಿದರು.

ಶ್ರೀರಾಮಕೃಷ್ಣರ ಪ್ರಸಾದವನ್ನು ಸಂತೋಷದಿಂದ ಎಲ್ಲರೊಂದಿಗೆ ಹಂಚಿಕೊಂಡು ಭುಜಿಸಿದ ಬಳಿಕ ಪ್ರಭುದಯಾಲ ಅವರಿಗೆ ಮತ್ತೊಮ್ಮೆ ನಮಿಸಿ ಕೃತಾರ್ಥಭಾವದಿಂದ ನಿರ್ಗಮಿಸಿದ.

ಶ್ರೀರಾಮಕೃಷ್ಣರ ಕಾಯಿಲೆ ಒಂದೇ ಸಮನೆ ಉಲ್ಬಣಗೊಳ್ಳುತ್ತಿರುವುದನ್ನು ಕಂಡು ಭಕ್ತರಿಗೆಲ್ಲ ಕಳವಳ. ಆದರೆ ಪರಮಾಶ್ಚರ್ಯದ ಸಂಗತಿಯೆಂದರೆ ಅಂತಹ ದುರ್ಭರ ಅವಸ್ಥೆಯಲ್ಲೂ ಅವರ ಮಾನಸಿಕ ಸ್ಥಿತಿಯಲ್ಲಿ ಲೇಶಮಾತ್ರವೂ ಬದಲಾವಣೆಯಿರಲಿಲ್ಲ. ಅದೇ ಉಲ್ಲಾಸ, ಚುರುಕುತನ, ಹಾಸ್ಯಪ್ರಿಯತೆ ಮತ್ತು ಸದಾ ಅದೇ ಭಗವದ್ಭಾವ, ಪರಹಿತಚಿಂತನೆ ! ಕೆಲವೊಮ್ಮೆ ಗಂಟಲಿನ ಹುಣ್ಣು ಕೆರಳಿ ರಕ್ತಸ್ರಾವವಾಗುತ್ತಿತ್ತು. ಆಹಾರ ವನ್ನು ನುಂಗುವುದಕ್ಕೆ ಬಹಳ ಕಷ್ಟವಾಗುತ್ತಿತ್ತು. ಅದೆಂತಹ ಅಸಹನೀಯ ವೇದನೆ ! ಇತರರಿಗೆ ಊಹಿಸಲೂ ಸಾಧ್ಯವಿಲ್ಲ. ಸಾಮಾನ್ಯರಿಗೇನಾದರೂ ಅಂತಹ ಸ್ಥಿತಿ ಬಂದು ಬಿಟ್ಟರೆ ಅವರ ಸುತ್ತಮುತ್ತ ಗೋಳಿನ ವಾತಾವರಣ ತಾಂಡವವಾಡುತ್ತಿರುತ್ತದೆ. ಆದರೆ ಶ್ರೀರಾಮಕೃಷ್ಣರ ಕಾಯಿಲೆಯ ಸಂಗತಿಯೇ ಬೇರೆ. ಜೊತೆಯಲ್ಲಿರುವವರಿಗೆ ಅದೊಂದು ಬಿಡಿಸಲಾಗದ ಒಗಟಾಗಿ ತೋರುತ್ತಿತ್ತು. ಏಕೆಂದರೆ, ಅವರು ನಿರಂತರವೂ ಭಗವದಾ ನಂದವನ್ನು ಸವಿಯುವ ಪರಿ ಕಣ್ಣೆದುರಿಗೇ ಕಾಣುತ್ತಿದೆ ! ಕ್ಷಣಮಾತ್ರದಲ್ಲಿ ಮನಸ್ಸನ್ನು ದೇಹದಿಂದ ಹಿಂದೆಳೆದುಕೊಂಡು ನಿರ್ವಿಕಲ್ಪಸ್ಥಿತಿಗೇರಬಲ್ಲ ಅದ್ಭುತ ದೃಶ್ಯವಂತೂ ಸರ್ವೇಸಾಮಾನ್ಯ. ಅಲ್ಲದೆ, ದಿನಗಳೆದಂತೆಲ್ಲ ಅವರ ಅಪಾರ ಆಧ್ಯಾತ್ಮಿಕ ಶಕ್ತಿ ಯೆಂಬುದು ನಾನಾ ವಿಧದಲ್ಲಿ ಸುವ್ಯಕ್ತಗೊಳ್ಳುತ್ತಿದೆ. ಹೀಗಿರುವಾಗ, ಇಂಥವರ ಶರೀರಕ್ಕೆ ರೋಗವೆಂದರೇನು ? ಯಾತನೆಯೆಂದರೇನು ? ಅವರು ಇಷ್ಟಪಟ್ಟರೆ ಈ ರೋಗವನ್ನು ಗುಣಪಡಿಸಿಕೊಳ್ಳಲಾರರೆ ?

ಈ ವಿಷಯವಾಗಿ ಭಕ್ತರಲ್ಲಿ ನಾನಾ ಬಗೆಯ ಊಹಾಪೋಹಗಳೆದ್ದುದನ್ನು ಹಿಂದೆಯೇ ನೋಡಿದೆವು. ಗಿರೀಶ ಹೇಳುತ್ತಿದ್ದ, "ಇದು ಇವರ ಲೀಲೆ, ಅಷ್ಟೆ. ಮನು ಷ್ಯರ ದುಃಖವನ್ನು ಹರಣ ಮಾಡುವುದಕ್ಕಾಗಿಯೇ ಹೀಗೊಂದು ಸೋಗು ಹಾಕಿದ್ದಾರೆ" ಎಂದು. ರಾಮಚಂದ್ರನೆನ್ನುತ್ತಿದ್ದ, "ಈ ರೀತಿ ಕಾಯಿಲೆಯಾಗದಿದ್ದರೆ ಅವರನ್ನು ಯಾರು ಗುರುತಿಸುತ್ತಿದ್ದರು ? ಆರೋಗ್ಯದಿಂದಿರುವಾಗ ಯಾರು ಬೇಕಾದರೂ ದೇವರಲ್ಲಿ ಮನ ಸ್ಸಿಡಬಹುದು. ಆದರೆ ಯಾರು ದೇಹಸೌಖ್ಯವಿಲ್ಲದಾಗಲೂ ನಿರಂತರ ನಿರ್ವಿಕಲ್ಪಾವಸ್ಥೆ ಯಲ್ಲಿರಬಲ್ಲರೋ ಅವರು ಅವತಾರಪುರುಷರೇ ಸರಿ." ನರೇಂದ್ರ ತನ್ನ ಸಂಗಡಿಗರಿಗೆ ಹೇಳುತ್ತಿದ್ದ, "ನಮ್ಮ ಸೇವೆಯನ್ನು ಸ್ವೀಕರಿಸಲೆಂದೇ ಠಾಕೂರರು ರೋಗಗ್ರಸ್ತರಾಗಿ ದ್ದಾರೆ. ಏಕೆ ಯೋಚನೆ ಮಾಡುತ್ತೀರಿ ? ಅವರು ಆರೋಗ್ಯವಾಗಿದ್ದಿದ್ದರೆ ನಮಗೆ ಅವರ ಸೇವೆ ಮಾಡುವ ಭಾಗ್ಯ ಸಿಗುತ್ತಿತ್ತೇ ? ಇದೊಂದು ಸುಯೋಗವೇ ಸರಿ. ಇದನ್ನು ಬಿಡ ಬಾರದು. ನಾವೆಲ್ಲ ಸೇರಿ ಹೇಗೆ ಅವರ ಸೇವೆ ಮಾಡಬೇಕು ಅಂದರೆ ಅವರಿಗೆ ನಮ್ಮನ್ನು ಬಿಟ್ಟು ಹೋಗುವುದಕ್ಕೇ ಸಾಧ್ಯವಾಗಬಾರದು !" ರಾಖಾಲನೆನ್ನುತ್ತಿದ್ದ, "ಅವರು ನಮ್ಮ ಸಂಕಟಗಳ ಹೊರೆಯನ್ನು ತಮ್ಮ ಮೇಲೆ ತೆಗೆದುಕೊಳ್ಳುತ್ತಿದ್ದಾರೆ" ಎಂದು. "ನಮಗೆ ತಿಳಿಯಲಿ ತಿಳಿಯದಿರಲಿ, ಈ ಮೂಲಕ ಏನೋ ಮಹೋದ್ದೇಶವೊಂದು ಈಡೇರು ತ್ತಿದೆಯೆಂಬುದಂತೂ ಖಂಡಿತ" ಎನ್ನುತ್ತಿದ್ದ ಶರಚ್ಚಂದ್ರ. ಶಶಿಭೂಷಣನೆನ್ನುತ್ತಿದ್ದ, "ಏಸುಕ್ರಿಸ್ತ ಜಗತ್ತಿನ ದುಃಖವನ್ನು ಕಂಡು ಶಿಲುಬೆಗೇರಿದ. ಹಾಗೆಯೇ ಇವರು ಜೀವಿ

ಗಳ ದುಃಖದ ಪರಿಹಾರಕ್ಕಾಗಿ ಈ ರೋಗವನ್ನು ಅನುಭವಿಸುತ್ತಿದ್ದಾರೆ.'' ಕೇದಾರನಾಥ ಶ್ರೀರಾಮಕೃಷ್ಣರ ಮುಂದೆ ಕೈಮುಗಿದುಕೊಂಡು, ''ಪ್ರಭು, ಇನ್ನೆಷ್ಟು ದಿನ ಹೀಗೆಯೇ ನಟಿಸುತ್ತೀರಿ ?'' ಎಂದು ಉದ್ಗರಿಸುತ್ತಿದ್ದ. ಹೀಗೆ ಅನೇಕರು ಅನೇಕ ರೀತಿಯಲ್ಲಿ ಹೇಳುತ್ತಿದ್ದರು.

ಶ್ರೀರಾಮಕೃಷ್ಣರ ಲೀಲೆಯನ್ನು ಸಮಗ್ರವಾಗಿ ಕಂಡ ಶ್ರೀಶಾರದಾದೇವಿಯವರು ಮುಂದೊಮ್ಮೆ ನುಡಿಯುತ್ತಾರೆ: ''ಠಾಕೂರರಿಗೆ ಸ್ವೇಚ್ಛೆಯಿಂದ ದೇಹವನ್ನು ತ್ಯಜಿಸುವ ಶಕ್ತಿಯಿತ್ತು. ಅವರು ಯಾವಾಗ ಬೇಕಾದರೂ ಸಮಾಧಿಗೇರಿ ಶರೀರತ್ಯಾಗ ಮಾಡಿಬಿಡ ಬಲ್ಲವರಾಗಿದ್ದರು. ಆದರೆ 'ಈ ಹುಡುಗರನ್ನೆಲ್ಲ ನಾನು ಪರಸ್ಪರ ಪ್ರೀತಿ ವಿಶ್ವಾಸಗಳ ಬಂಧದಿಂದ ಬಿಗಿದಿಡಬೇಕಾಗಿದೆ' ಅಂತ ಅವರು ಹೇಳುತ್ತಿದ್ದರು. ಅಲ್ಲಿಯವರೆಗೂ ಶಿಷ್ಯರ ಮಧ್ಯೆ ಪರಸ್ಪರ ಸುಮ್ಮನೆ ಕುಶಲೋಪರಿ ಮಾಡುವಷ್ಟು ಮಾತ್ರ ಸಲಿಗೆಯಿತ್ತು. 'ನರೇನ್ ಬಾಬು, ಚೆನ್ನಾಗಿದ್ದೀಯಾ ?' 'ಏನಪ್ಪಾ ರಾಖಾಲ್, ಆರೋಗ್ಯವೆ ?'—ಹೀಗೆ. ಆದ್ದರಿಂದಲೇ ಠಾಕೂರರು ಅಷ್ಟು ಕಾಯಿಲೆಯನುಭವಿಸುತ್ತಿದ್ದರೂ ಬೇಗನೆ ಶರೀರವನ್ನು ಬಿಟ್ಟುಬಿಡಲಿಲ್ಲ.''

ಶ್ರೀರಾಮಕೃಷ್ಣರ ಅನಾರೋಗ್ಯದ ಬಗ್ಗೆ ಇತರರ ಅನಿಸಿಕೆಗಳು ಹಾಗಿರಲಿ. ಒಂದು ದಿನ ಶ್ಯಾಮಪುಕುರದ ಮನೆಯಲ್ಲಿ ಶ್ರೀರಾಮಕೃಷ್ಣರಿಗೊಂದು ದರ್ಶನವಾಯಿತು. ತಮ್ಮ ಸೂಕ್ಷ್ಮ ಶರೀರವು ಸ್ಥೂಲಶರೀರದಿಂದಾಚೆಗೆ ಬಂದು ಕೋಣೆಯಲ್ಲಿ ಅತ್ತಿಂದಿತ್ತ ಅಡ್ಡಾಡುತ್ತಿರುವುದನ್ನು ಅವರು ಕಂಡರು. ಅದರ ಬೆನ್ನು ಮತ್ತು ಕುತ್ತಿಗೆಯ ಭಾಗ ಹುಣ್ಣುಗಳಿಂದ ತುಂಬಿರುವುದನ್ನು ಕಂಡು ಅವರಿಗೆ ಆಶ್ಚರ್ಯವಾಯಿತು. ಈ ಜಡ ಶರೀರಕ್ಕೇನೋ ರೋಗ ಬಂದಿರುವುದು ನಿಜವೇ, ಆದರೆ ಸೂಕ್ಷ್ಮಶರೀರದಲ್ಲಿ ಹುಣ್ಣುಗಳು ಕಂಡುಬರುವುದಕ್ಕೇನು ಕಾರಣ ? ಇದಕ್ಕೇನು ಅರ್ಥ ?–ಹೀಗೆ ಆಲೋಚಿಸುತ್ತಿದ್ದಂತೆ ಅವರಿಗೆ ದುಃಖ ಉಮ್ಮಳಿಸಿ ಬಂತು. ಅಳುತ್ತ ಜಗನ್ಮಾತೆಯನ್ನು ಕೇಳಿಕೊಂಡರು: ''ಇದೇನಮ್ಮ! ಈ ಶರೀರದಿಂದ ಯಾವ ಪಾಪಕಾರ್ಯವೂ ನಡೆದಿಲ್ಲ. ಆದರೂ ಇದಕ್ಕೆ ಏಕೀ ದುರವಸ್ಥೆ ?'' ಆಗ ಜಗನ್ಮಾತೆ ಅವರಿಗೆ ತಿಳಿಸಿಕೊಟ್ಟಳು— 'ನಾನಾ ದುಷ್ಕರ್ಮಗಳನ್ನೆಲ್ಲ ಮಾಡಿದ್ದ ಜನರು ನಿನ್ನನ್ನು ಸ್ಪರ್ಶಮಾಡಿ ಪುನೀತರಾಗಿದ್ದಾರೆ; ಆದರೆ ಆ ಪಾಪಗಳ ಭಾರವೆಲ್ಲ ನಿನ್ನ ಮೇಲೆ ಬಿದ್ದುದರಿಂದ ನಿನ್ನ ಸೂಕ್ಷ್ಮ ಶರೀರಕ್ಕೆ ಹಾಗಾಗಿದೆ' ಎಂದು. ಎಂದರೆ, ತಾವು ಜನರ ಪಾಪಗಳನ್ನು ಸ್ವೀಕರಿಸಿದ್ದೇ ತಮ್ಮ ಈ ರೋಗಕ್ಕೆ ಕಾರಣ ಎಂಬುದು ಅವರಿಗೆ ಮನವರಿಕೆಯಾಯಿತು. ಆದರೆ ಇದರಿಂದ ಅವರಿಗಾದದ್ದು ದುಃಖವಲ್ಲ, ಬದಲಾಗಿ ಸಂತಸ—ಈ ಶರೀರದಿಂದ ಒಂದಿಷ್ಟು ಲೋಕಕಲ್ಯಾಣ ಕಾರ್ಯ ನಡೆಯುವಂತಾಯಿತಲ್ಲ ಎಂಬ ತೃಪ್ತಿ! ಈ ದರ್ಶನದ ವಿಚಾರವನ್ನು ಅವರು ಹರ್ಷದಿಂದಲೇ ತಮ್ಮ ಭಕ್ತರೆದುರು ಹೇಳಿದರು. 'ಮಾನವ ಕೋಟಿಯ ಮಂಗಳಕ್ಕಾಗಿ ಬೇಕಾದರೆ ಲಕ್ಷ ಬಾರಿ ಹುಟ್ಟಿಬಂದೇನು !' ಎಂದು ಅವರು ಹೇಳುವುದನ್ನು ಭಕ್ತರೆಲ್ಲ ಹಿಂದೆಯೇ ಎಷ್ಟೋ ಸಲ ಕೇಳಿದ್ದರು. ಈಗ ಆ ದರ್ಶನದ ವಿಷಯ ತಿಳಿದಾಗ, ಅವರ ಪಾರವಿಲ್ಲದ ಕರುಣೆಯನ್ನು ಭಾವಿಸಿ ಭಕ್ತರು ಸ್ತಬ್ಧರಾದರು.

ಈಗ ಒಂದು ಹೊಸ ಆಲೋಚನಾಲಹರಿಯೆದ್ದಿತು: ಶ್ರೀರಾಮಕೃಷ್ಣರೇನೋ ಬಂದಬಂದವರ ಮೇಲೆಲ್ಲ ತಮ್ಮ ಕೃಪೆಯನ್ನು ಧಾರಾಕಾರವಾಗಿ ವರ್ಷಿಸಲು ಸಿದ್ಧರಿದ್ದಾರೆ; ಆದರೆ ಜನಗಳ ಸ್ಪರ್ಶದಿಂದಾಗಿ ಅವರ ಆರೋಗ್ಯ ಹೀಗೆ ಹದಗೆಡುತ್ತಲೇ

ಬಂದರೆ ಗತಿಯೇನು ? ಅವರು ನಮ್ಮ ಕೈತಪ್ಪಿಯೇ ಹೋದರೆ.... ? ಹೀಗೆ ಮಾತನಾಡಿ ಕೊಂಡ ಕೆಲವರು, ಶ್ರೀರಾಮಕೃಷ್ಣರು ಮತ್ತೆ ಆರೋಗ್ಯವಂತರಾಗುವವರೆಗೆ ಹೊಸಬರು ಯಾರೂ ಅವರ ಪಾದ ಮುಟ್ಟಿ ನಮಸ್ಕರಿಸದಂತೆ ಎಚ್ಚರ ವಹಿಸಬೇಕು ಎಂದು ತೀರ್ಮಾನಿಸಿದರು. ಇನ್ನು ಕೆಲವು ಭಕ್ತರು, ತಾವು ಹಿಂದೆ ಮಾಡಿದ ದುಷ್ಕೃತ್ಯಗಳನ್ನು ನೆನೆಸಿಕೊಂಡು, ತಾವು ಕೂಡ ಇನ್ನು ಶ್ರೀರಾಮಕೃಷ್ಣರ ಪವಿತ್ರ ಶರೀರವನ್ನು ಸ್ಪರ್ಶಿಸ ಬಾರದು ಎಂದು ನಿಶ್ಚಯಿಸಿದರು. ಅಲ್ಲದೆ, ಅವರು ಬಹಳ ಮಾತನಾಡಿ ಕಂಠಕ್ಕೆ ಶ್ರಮ ಮಾಡಿಕೊಳ್ಳದಂತೆ ನೋಡಿಕೊಳ್ಳಬೇಕು ಎಂದು ಡಾಕ್ಟರೂ ಎಚ್ಚರಿಸುತ್ತಿದ್ದುದರಿಂದ, ಸಂದರ್ಶಕರ ಸಂಖ್ಯೆಯನ್ನು ಸಾಧ್ಯವಾದಷ್ಟೂ ಮಿತಿಗೊಳಿಸಲು ನಿರ್ಧರಿಸಿ ಬಾಗಿಲಲ್ಲಿ ಕಾವಲು ಕುಳಿತರು. ಶ್ರೀರಾಮಕೃಷ್ಣರಿಗಾದ ದರ್ಶನದ ವಿಷಯ ತಿಳಿದುಬಂದಾಗ ಇನ್ನು ಕೆಲವರು—ಮುಖ್ಯವಾಗಿ ನರೇಂದ್ರ—ಕೌತುಕಗೊಂಡು ಆ ಬಗ್ಗೆ ಗಾಢ ವಿಚಾರದಲ್ಲಿ ತೊಡಗಿದರು. ಒಬ್ಬರು ಇತರರ ಕರ್ಮದ ಫಲವನ್ನು ಸ್ವಇಚ್ಛೆಯಿಂದ ಸ್ವೀಕರಿಸಲು ಸಾಧ್ಯ ಎಂಬುದು ವೈಷ್ಣವ, ಕ್ರೈಸ್ತ ಮೊದಲಾದ ಮತಗಳ ಸಿದ್ಧಾಂತಗಳಲ್ಲೊಂದಾಗಿದೆ. ಶ್ರೀರಾಮಕೃಷ್ಣರ ದರ್ಶನಾನುಭವದಿಂದ ಆ ಸಿದ್ಧಾಂತದ ಸತ್ಯತೆಯು ರುಜುವಾತಾಗು ತ್ತದೆ ಎಂದು ಇವರು ತರ್ಕಿಸಿದರು.

ಆದರೆ ಶ್ರೀರಾಮಕೃಷ್ಣರ ಬಳಿಗೆ ಹೊಸಬರು ಬರದಂತೆ ತಡೆಯುವ ವಿಷಯ ಗೊತ್ತಾದಾಗ ಗಿರೀಶ ಮಾತ್ರ ಅನುಮೋದಿಸಲಿಲ್ಲ. "ನೀವು ಏನೇ ಮಾಡಿ, ಎಷ್ಟೇ ಮಾಡಿ, ಅದೆಲ್ಲ ವ್ಯರ್ಥ. ನಿಮ್ಮ ಪ್ರಯತ್ನಗಳೊಂದು ನಡೆಯುವಂತಿಲ್ಲ. ಏಕೆಂದರೆ ಶ್ರೀರಾಮಕೃಷ್ಣರು ಜನ್ಮವೆತ್ತಿ ಬಂದಿರುವುದೇ ದೀನಹೀನರ, ಪಾಪಿತಾಪಿಗಳ ಉದ್ಧಾರ ಕ್ಕಾಗಿ" ಎಂದುಬಿಟ್ಟ ಆತ. ಆದ್ದರಿಂದ ಈಗ ಭಕ್ತರೆಲ್ಲ ಪುನರಾಲೋಚನೆ ಮಾಡಬೇಕಾ ಯಿತು. ಪೂರ್ತಿ ಹೊಸಬರು ಬಂದರೆ ಅವರಿಗೆ ಮಾತ್ರ ಶ್ರೀರಾಮಕೃಷ್ಣರ ದರ್ಶ ನಾವಕಾಶ ಕೊಡಕೂಡದೆಂದು ನಿಶ್ಚಯಿಸಿದರು. ಆದರೆ ಇದೂ ನಡೆಯಲಿಲ್ಲ. ಏಕೆಂದರೆ ಎಷ್ಟೋ ಜನ ಹೊಸಬರು ಹಳೆಯ ಭಕ್ತರ ಪರಿಚಯದ ಮೂಲಕ ಬಂದಾಗ ಅವರಿಗೆ ಪ್ರವೇಶವನ್ನು ನಿರಾಕರಿಸಲು ಸಾಧ್ಯವಾಗುತ್ತಿರಲಿಲ್ಲ. ಈಗ ಭಕ್ತರು ಮತ್ತೊಮ್ಮೆ ಆಲೋ ಚಿಸಿ, ಒಂದು ವೇಳೆ ಹೊಸಬರನ್ನು ಶ್ರೀರಾಮಕೃಷ್ಣರ ದರ್ಶನ ಮಾಡಲು ಬಿಡಲೇ ಬೇಕಾಗಿಬಂದರೂ ಅವರ ಪಾದಸ್ಪರ್ಶ ಮಾಡಿ ಪ್ರಣಾಮ ಮಾಡಬಾರದೆಂದು ಮೊದಲೇ ಹೇಳಿಬಿಡಬೇಕು ಎಂಬ ಒಂದು ನಿಯಮ ಮಾಡಿಕೊಂಡರು. ಆದರೆ ಪೂರ್ತಿ ಅಪರಿಚಿತರಾದರೂ ಅವರ ವ್ಯಾಕುಲಿತ ಪ್ರಾರ್ಥನೆಯನ್ನು ಕಂಡು ಅವರಿಗೆ ಶ್ರೀರಾಮ ಕೃಷ್ಣರ ದರ್ಶನಾವಕಾಶ ನೀಡಬೇಕಾದ ಪ್ರಸಂಗಗಳೂ ಕೆಲವು ಒದಗಿದುವು.

ಈ ಸಂಬಂಧವಾಗಿ ಒಮ್ಮೆ ತಮಾಷೆಯ ಘಟನೆಯೊಂದು ನಡೆಯಿತು. ಗಿರೀಶನ ಸ್ಟಾರ್ ಥಿಯೇಟರ್ ಎಂಬ ನಾಟಕದ ಕಂಪೆನಿಯಲ್ಲಿ ವಿನೋದಿನಿ ದಾಸಿ ಎಂಬ ನಟಿ ಯೊಬ್ಬಳಿದ್ದಳು. ಕೇವಲ ಇಪ್ಪತ್ತೆರಡು ವರ್ಷದ ತರುಣಿ. ಅತ್ಯಂತ ಪ್ರತಿಭಾವಂತೆ, ಅಷ್ಟೇ ವಿನೀತೆ, ದೈವಭಕ್ತೆ. ಗಿರೀಶನ ನಿರ್ದೇಶನದ ಅನೇಕ ನಾಟಕಗಳಲ್ಲಿ—ಮುಖ್ಯ ವಾಗಿ ಭಕ್ತಿಪ್ರಧಾನವಾದ ಪಾತ್ರಗಳಲ್ಲಿ—ನೈಜ, ಭಾವಪೂರ್ಣ ಅಭಿನಯ ನೀಡಿ ಅಸಂ ಖ್ಯಾತ ಪ್ರೇಕ್ಷಕರ ಮನ ಮಿಡಿಯುವಂತೆ ಮಾಡಿದ್ದಳು. ಬಂಗಾಳದಲ್ಲಿ ಮನೆಮಾತಾದ 'ಚೈತನ್ಯಲೀಲಾ' ಎಂಬ ನಾಟಕದಲ್ಲಿ ಈಕೆ ಚೈತನ್ಯನ ಪಾತ್ರವಹಿಸಿ ನಾಟಕದ ಪ್ರಚಂಡ ಯಶಸ್ಸಿಗೆ ಕಾರಣಳಾಗಿದ್ದಳು. ಕೆಲತಿಂಗಳ ಹಿಂದೆ ಆ ನಾಟಕವನ್ನು ನೋಡಲು

ಹೋಗಿದ್ದ ಶ್ರೀರಾಮಕೃಷ್ಣರು ವಿನೋದಿನಿಯ ಅಭಿನಯಕೌಶಲವನ್ನು ಮೆಚ್ಚಿ ಮನಸಾರೆ ಕೊಂಡಾಡಿದ್ದರು. ನಾಟಕ ಮುಗಿದ ಮೇಲೆ ಅವಳು ಬಂದು ತಮಗೆ ನಮಸ್ಕರಿಸಿದಾಗ ಅವರು ಭಾವಾವಿಷ್ಟರಾಗಿ ತಮ್ಮೆರಡೂ ಕೈಗಳನ್ನು ಆಕೆಯ ತಲೆಯ ಮೇಲಿರಿಸಿ, "ನಿನಗೆ ಆಧ್ಯಾತ್ಮಿಕ ಜಾಗೃತಿಯುಂಟಾಗಲಿ!" ಎಂದು ಹರಸಿ ವಿಶೇಷ ಕೃಪೆದೋರಿದ್ದರು. ಇದನ್ನು ಆಕೆ ತನ್ನ ಪರಮ ಭಾಗ್ಯವೆಂದು ಪರಿಗಣಿಸಿದ್ದಳು. ಮತ್ತು ಅಂದಿನಿಂದಲೇ ಶ್ರೀರಾಮಕೃಷ್ಣರು ಸಾಕ್ಷಾತ್ ಭಗವಂತನೆಂದು ಅವಿಚಲ ವಿಶ್ವಾಸ ತಳೆದು ಭಕ್ತಿ ತೋರ ಲಾರಂಭಿಸಿದ್ದಳು.

ಶ್ರೀರಾಮಕೃಷ್ಣರು ಕಠಿಣ ವ್ಯಾಧಿಗ್ರಸ್ತರಾಗಿದ್ದಾರೆ ಎಂದು ತಿಳಿದುಬಂದಾಗ ವಿನೋದಿನಿ ವ್ಯಾಕುಲಗೊಂಡು, ಅವರ ದರ್ಶನ ಪಡೆಯಬೇಕೆಂದು ಹಾತೊರೆದಳು. ಆದರೆ ಆಗಂತುಕರಿಗೆ ಅವರ ದರ್ಶನ ದುರ್ಲಭವಾಗಿದೆ ಎನ್ನುವುದೂ ಗೊತ್ತಾಯಿತು. ಈಗೇನು ಮಾಡುವುದು ? ಅವಳಿಗೆ ಶ್ರೀರಾಮಕೃಷ್ಣರ ಆಪ್ತ ಭಕ್ತ ಕಾಳೀಪದ ಘೋಷನ ಪರಿಚಯವಿತ್ತು. ಅವನ ಮುಂದೆ ಅವಳು ತನ್ನ ಹೃದಯದ ಹಂಬಲವನ್ನು ತೋಡಿ ಕೊಂಡಳು. ಅವನು ಅದಕ್ಕೆ ಕೂಡಲೇ ಒಪ್ಪಿದ. ಏಕೆಂದರೆ ಆತ ಗಿರೀಶನ ಅನು ಯಾಯಿ. ಶ್ರೀರಾಮಕೃಷ್ಣರು ಯುಗಾವತಾರರು ಎಂಬುದರಲ್ಲಿ ಅವನಿಗೆ ಸಂಶಯವೇ ಇಲ್ಲ. ಆದ್ದರಿಂದ, ದುಷ್ಕರ್ಮಿಗಳು ಪಶ್ಚಾತ್ತಾಪದಿಂದ ಶ್ರೀರಾಮಕೃಷ್ಣರ ಪಾದಸ್ಪರ್ಶ ಮಾಡಿದರೆ ಅವರ ರೋಗ ವೃದ್ಧಿಗೊಳ್ಳುತ್ತದೆ ಎಂಬ ವಾದವನ್ನು ತಿರಸ್ಕರಿಸಿಬಿಟ್ಟಿದ್ದ. ಹೇಗಾದರೂ ಮಾಡಿ ಅವಳಿಗೆ ಅವರ ದರ್ಶನ ಕೊಡಿಸಲು ಒಪ್ಪಿದ.

ಒಂದು ಸಂಜೆ ಅವನು ಒಬ್ಬ ಆಂಗ್ಲ ತರುಣನೊಂದಿಗೆ ಕಾಶೀಪುರದ ಮನೆಗೆ ಬಂದ. "ಈತ ನನ್ನ ಸ್ನೇಹಿತ" ಎಂದು ಗುರುಬಂಧುಗಳಿಗೆ ಪರಿಚಯಿಸಿ, ಶ್ರೀರಾಮ ಕೃಷ್ಣರ ಬಳಿಗೆ ಕರೆದೊಯ್ದ. ಸೂಟು-ಬೂಟು ಧರಿಸಿರುವ ಈ ಸಭ್ಯ ವ್ಯಕ್ತಿಯನ್ನು ತಡೆ ಯುವುದು ಬೇಡವೆಂದೋ, ಕ್ರೈಸ್ತನಾದ ಈತ ಶ್ರೀರಾಮಕೃಷ್ಣರ ಪಾದಸ್ಪರ್ಶ ಮಾಡ ಲಾರ ಎಂಬ ನಂಬಿಕೆಯಿಂದಲೋ ಶಿಷ್ಯರು ಅವನನ್ನು ಹೆಚ್ಚು ಪ್ರಶ್ನಿಸದೆ ಬಿಟ್ಟುಬಿಟ್ಟರು. ಸರಿ, ಇಬ್ಬರೂ ಒಳಗೆ ಹೋದರು. ಆದರೆ, ಶ್ರೀರಾಮಕೃಷ್ಣರಿಗೆ ಮಾತ್ರ ಒಮ್ಮೆಗೇ ಆ 'ಸಾಹೇಬ'ನ ಗುರುತು ಸಿಕ್ಕಿಬಿಟ್ಟಿತು. ಸ್ವತಃ ಪುರುಷರಾಗಿದ್ದು ಸ್ತ್ರೀವೇಷ ಧರಿಸಿ ಜನರ ಕಣ್ಣಿಗೆ ಮಣ್ಣೆರಚಿದವರಲ್ಲವೆ ಅವರು ? ಆ ಅನುಭವದಿಂದಾಗಿಯೋ ಏನೋ, ಪುರುಷ ವೇಷ ಧರಿಸಿ ಬಂದ ವಿನೋದಿನಿಯನ್ನು ಸುಲಭವಾಗಿ ಕಂಡುಹಿಡಿದುಬಿಟ್ಟರು. ಅವಳು ಹಾಗೆ ಬಂದದ್ದರ ಉದ್ದೇಶವನ್ನು ಗ್ರಹಿಸಿ ಮನಸಾರೆ ನಗುತ್ತ, "ಬಾರಮ್ಮಾ, ಬಾ ಕುಳಿತುಕೋ" ಎಂದು ಪ್ರೀತಿಯಿಂದ ಸ್ವಾಗತಿಸಿದರು. ಆಕೆಯ ಭಕ್ತಿ ಶ್ರದ್ಧೆಗಳನ್ನು ಕಂಡು ಸುಪ್ರೀತರಾಗಿ, ಅವಳ ಧೈರ್ಯವನ್ನೂ ಉಪಾಯವನ್ನೂ ಶ್ಲಾಘಿಸಿದರು. ಅನಂತರ, ಭಗವಂತನಲ್ಲಿ ಭರವಸೆಯಿಟ್ಟು ಶರಣಾಗುವಂತೆ ಒಂದೆರಡು ಮಾತಿನಲ್ಲಿ ಬೋಧಿಸಿ ದರು. ವಿನೋದಿನಿ ಧನ್ಯತೆಯ ಕಣ್ಣೀರು ಸುರಿಸುತ್ತ, ಅವರ ಪಾದಪದ್ಮಗಳ ಮೇಲೆ ತಲೆಯಿಟ್ಟು ನಮಿಸಿ, ಅವರಿಂದ ಬೀಳ್ಕೊಂಡಳು. ಆಮೇಲೆ ಶ್ರೀರಾಮಕೃಷ್ಣರು ತಮ್ಮ ಶಿಷ್ಯರನ್ನೆಲ್ಲ ಕರೆದು ಅವರು ಮೋಸ ಹೋದದ್ದನ್ನು ಬಣ್ಣಿಸುತ್ತ ಚಿಕ್ಕ ಹುಡುಗನಂತೆ ನಕ್ಕರು. ತರುಣಶಿಷ್ಯರು ಪೆಚ್ಚಾಗಿ ಮುಖಮುಖ ನೋಡಿಕೊಂಡರು. ಅವರಿಗೆ ಕಾಳೀ ಪದನ ಮೇಲೆ ಕೆಂಡದಂಥಾ ಕೋಪ ಬಂದಿತು. ಆದರೆ ಶ್ರೀರಾಮಕೃಷ್ಣರು ನಕ್ಕು ಆನಂದಿ ಸುವುದನ್ನು ಕಂಡಾಗ ತಾವೂ ಆ ನಗುವಿನಲ್ಲಿ ಸೇರಿಕೊಂಡರು.

ಶ್ರೀರಾಮಕೃಷ್ಣರ ನಿರಂತರ ಸಾನ್ನಿಧ್ಯವೂ ಅವರ ಸೇವೆ ಮಾಡುವ ಭಾಗ್ಯವೂ ದೊರೆತು ಭಕ್ತರೆಲ್ಲ ಭಾವೋತ್ಸಾಹದ ಪ್ರವಾಹದಲ್ಲಿ ಮುಳುಗೇಳುತ್ತಿದ್ದಾರೆ. ಶ್ರೀರಾಮಕೃಷ್ಣರ ಅಭೂತಪೂರ್ವ ಸಮಾಧಿ ಹಾಗೂ ಭಾವೋತ್ಕರ್ಷಗಳನ್ನು ನೋಡನೋಡುತ್ತ, ಅವರ ದಿವ್ಯತೆಯನ್ನು ಮನಗಾಣುತ್ತ, ಭಕ್ತರಲ್ಲಿ ಅವರ ಕುರಿತಾದ ಭಕ್ತಿಶ್ರದ್ಧೆಗಳು ಬೃಹದಾಕಾರ ತಾಳುತ್ತಿವೆ. ಶ್ರೀರಾಮಕೃಷ್ಣರ ಭಕ್ತಿ ಪ್ರೇಮಗಳ ಕಿಡಿ ಭಕ್ತರಲ್ಲೂ ಹೊತ್ತಿಕೊಂಡಿದೆ. ಆದರೆ ವಿಷಾದದ ಸಂಗತಿಯೆಂದರೆ ಹಲವರಲ್ಲಿ ಅದು ಅವರ ಭೋಗಾಭಿಲಾಷೆಯನ್ನು ದಹಿಸುವ ಅಗ್ನಿಯಾಗಿ ಉಳಿಯದೆ, ವಿಚಾರಶಕ್ತಿ, ವಿವೇಕಬುದ್ಧಿ, ಸಾಧನಾನಿಷ್ಠೆಗಳನ್ನು ಭಸ್ಮ ಮಾಡುವ ಕಾಡ್ಗಿಚ್ಚಾಗಿ ಮಾರ್ಪಡುತ್ತಿದೆ! ಭಾವಾವೇಶ ನರ್ತನ ಮೈಮರೆಯುವಿಕೆ ಇವೆಲ್ಲ ಅನೇಕರಿಗೆ ಬಲು ಪ್ರಿಯವಾದ ಸಂಗತಿಗಳಾಗುತ್ತಿವೆ. ಜಪತಪಾದಿಗಳ ನಿಷ್ಠಾಯುತ ಸಾಧನೆಯ ಮೂಲಕ ನೈಜ ತ್ಯಾಗ-ವೈರಾಗ್ಯಗಳನ್ನು ರೂಢಿಸಿಕೊಳ್ಳಬೇಕು ಎಂಬ ಪ್ರಾಮಾಣಿಕ ಪ್ರಯತ್ನಕ್ಕೆ ಬದಲಾಗಿ, ತೋರಾಣಿಕೆಯ ಭಾವಪ್ರದರ್ಶನದ ಮೂಲಕ ತಮ್ಮ ಆಧ್ಯಾತ್ಮಿಕತೆಯನ್ನು ಇತರರ ಗಮನಕ್ಕೆ ತರುವ ಆತುರವೇ ಹೆಚ್ಚಾಗುತ್ತಿದೆ! ಹೀಗೆ, ಶ್ರೀರಾಮಕೃಷ್ಣರು ಯಾವ ಅಪಾಯದ ಬಗ್ಗೆ ಸದಾ ಎಚ್ಚರ ನೀಡುತ್ತಿದ್ದರೋ ಅದಕ್ಕೇ ಈಗ ಕೆಲವರು ಬಲಿಯಾಗುವಂತೆ ತೋರುತ್ತಿದೆ!

ಆದರೆ ಅವರಲ್ಲಿ ಈ ಬಗೆಯ ಮನೋವೃತ್ತಿ ಬೆಳೆದುದರಲ್ಲಿ ಆಶ್ಚರ್ಯವೇನಿಲ್ಲ ಎನ್ನಬೇಕು. ಅನೇಕ ಅಂಶಗಳು ಹೆಣೆದುಕೊಂಡು ಇದಕ್ಕೆ ಕಾರಣವಾಗಿದ್ದುವು. ಮೊದಲನೆಯದಾಗಿ, ಭಾವಾವೇಶದ ಹಿನ್ನೆಲೆಯಲ್ಲಿ ತ್ಯಾಗ, ಆತ್ಮನಿಗ್ರಹಗಳಿಲ್ಲದಿದ್ದಲ್ಲಿ ಅದರಿಂದೇನೂ ಆಧ್ಯಾತ್ಮಿಕ ಲಾಭವಾಗಲಾರದು ಎನ್ನುವುದು ಅವರ್ಯಾರಿಗೂ ಗೊತ್ತಿರಲಿಲ್ಲ. ಎಲ್ಲ ವಿಷಯಗಳಲ್ಲೂ ಬೇಗ ಫಲ ಸಿಗುವಂತಹ ಸುಲಭೋಪಾಯವನ್ನು ಹುಡುಕಿಕೊಂಡು ಹೋಗುವುದೇ ಮನುಷ್ಯನ ಸ್ವಭಾವ. ಆದ್ದರಿಂದ ಅವನು ಧರ್ಮಾನುಷ್ಠಾನ ಮಾಡಲು ಮುಂದಾದರೂ ಏಕಕಾಲದಲ್ಲಿ ಭೋಗ-ತ್ಯಾಗ ಎರಡನ್ನೂ ಅನುಸರಿಸಲು ಪ್ರಯತ್ನಿಸುತ್ತಾನೆ. ಆದರೆ ಅವು ಉತ್ತರ-ದಕ್ಷಿಣ ಧ್ರುವಗಳಂತೆ ಪರಸ್ಪರ ವಿರುದ್ಧವಾದಂಥವು ಎನ್ನುವುದನ್ನು ಅರ್ಥಮಾಡಿಕೊಳ್ಳುವವರು ಬಹಳ ಕಡಿಮೆ. ಈ ಜಗತ್ತು, ಲೌಕಿಕ ಸುಖಭೋಗ ಇವು ನದಿಯ ಒಂದು ದಡವಾದರೆ ದೇವರು ಎನ್ನುವುದು ಆಚೆಯ ದಡ. ದೇವರನ್ನು ಸೇರಬೇಕಾದರೆ ಜಗತ್ತೆಂಬ ಈ ದಡವನ್ನು ಬಿಟ್ಟು ಕ್ರಮೇಣ ದೂರ ಸರಿಯಬೇಕಾಗುತ್ತದೆ. ಆದರೆ ಎರಡೂ ದಡಗಳಿಗೆ ಹತ್ತಿರದಲ್ಲೇ ಇರಬೇಕು ಎಂದು ಬಯಸುವವರು, ತಮ್ಮ ಜೀವನನೌಕೆಯಲ್ಲಿ ಈ ಕಡೆಯಿಂದ ಹೊರಟು, ಸ್ವಲ್ಪ ದೂರ ಮಾತ್ರ ಸಾಗಿ, 'ನಮ್ಮ ಕರ್ತವ್ಯ ಇಷ್ಟೇ' ಎಂದು ಭಾವಿಸಿ ನಿಶ್ಚಿಂತೆಯಿಂದ ಅಲ್ಲೇ ಲಂಗರು ಹಾಕಿ ನಿಂತುಬಿಡುತ್ತಾರೆ! ಶ್ರೀರಾಮಕೃಷ್ಣರಿಗೆ ಮನುಷ್ಯನ ಈ ಸ್ವಭಾವ ಚೆನ್ನಾಗಿಯೇ ತಿಳಿದಿತ್ತು. ಆದ್ದರಿಂದ ಅವರು ತಮ್ಮ ಬಳಿಗೆ ಯಾರೇ ಬಂದರೂ ಪರೀಕ್ಷಿಸಿ ನೋಡುತ್ತಿದ್ದರು—ಇವನು ಈ ರೀತಿಯಲ್ಲಿ ಭದ್ರವಾಗಿ 'ಲಂಗರು' ಹಾಕಿ ನಿಲ್ಲುವವನೋ ಅಥವಾ ಮುಂದೆಮುಂದೆ ಸಾಗಬೇಕೆಂಬ ಇಚ್ಛೆಯುಳ್ಳವನೋ ಎಂದು. ಆತ

ಮೊದಲನೆಯ ವರ್ಗಕ್ಕೆ ಸೇರಿದವನು ಎಂದು ಕಂಡುಬಂದರೆ, ಅವನಿಗೆ ತತ್ಕಾಲಕ್ಕೆ ಎಷ್ಟರಮಟ್ಟಿಗೆ ತ್ಯಾಗ ಮಾಡಲು ಸಾಧ್ಯವೋ ಅಷ್ಟನ್ನು ಮಾತ್ರವೇ ಬೋಧಿಸುತ್ತಿದ್ದರು. ಜಗತ್ತಿನ—ಎಂದರೆ ಕಾಮಕಾಂಚನದ—ಕಿಲುಬಿನ್ನೂ ತಗುಲಿಲ್ಲದ, ಸಾಮರ್ಥ್ಯಶಾಲಿಗಳಾದ ತರುಣರು ಬಂದರೆ ಸರ್ವಸಂಗ ಪರಿತ್ಯಾಗದ, ಸಂನ್ಯಾಸದ ಉಚ್ಚತಮ ಆದರ್ಶವನ್ನು ಬಣ್ಣಿಸಿ, ಅದನ್ನು ಅವರು ಅರಿತುಕೊಳ್ಳಲು ಅನುಕೂಲಿಸುವಂತೆ ಶಿಕ್ಷಣ ಕೊಡುತ್ತಿದ್ದರು. ಹೀಗೆ ಅವರು ಬೇರೆಬೇರೆ ವ್ಯಕ್ತಿಗಳಿಗೆ ನೀಡುತ್ತಿದ್ದ ಬೋಧನೆ ಬೇರೆಬೇರೆಯಾಗಿರುತ್ತಿತ್ತು. ಸಾಮಾನ್ಯರಿಗೆ, ಸಂಸಾರಿಗಳಿಗೆ ಉಪದೇಶಿಸುವಾಗ, "ಕಲಿಗಾಲದಲ್ಲಿ ಕೇವಲ ಹರಿನಾಮ ಸಂಕೀರ್ತನೆ ಮತ್ತು ನಾರದೀಯ ಭಕ್ತಿ—ಇಷ್ಟೇ ಸಾಕು" ಎನ್ನುತ್ತಿದ್ದರು. ಜನರಿಗೆ ಇದು ಬಹಳ ಸುಲಭವಾಗಿ ತೋರುತ್ತಿತ್ತು. ಏಕೆಂದರೆ, 'ನಾರದೀಯ ಭಕ್ತಿ'ಯೆಂದರೆ ನಿಜಕ್ಕೂ ಏನು ಎನ್ನುವ ಕಲ್ಪನೆ ಹೆಚ್ಚಿನವರಿಗೆ ಇರಲಿಲ್ಲ. ಭಗವತ್ಪ್ರೇಮದ ದೆಸೆಯಿಂದ ಒಂದಲ್ಲ ಒಂದು ದಿನ ಸಾಧಕ ತನ್ನೆಲ್ಲವನ್ನೂ ತ್ಯಾಗ ಮಾಡಲು ಸಹಜವಾಗಿಯೇ ಅಣಿಯಾಗುತ್ತಾನೆ ಎಂಬುದು ಆ ಬೋಧನೆಯ ಇಂಗಿತ. ಇದು ಹೆಚ್ಚಿನವರಿಗೆ ತಿಳಿದಿರಲಿಲ್ಲ. ಆದ್ದರಿಂದ ಆಗಾಗ ಭಜನೆ ಕೀರ್ತನೆ ಮಾಡುತ್ತ ಕರತಾಲ ತಟ್ಟುತ್ತ ಕುಣಿದರೆ ಅದೇ ಭಕ್ತಿಯ ಚರಮ ಸ್ಥಿತಿ ಎಂಬ ಭಾವನೆ ಭಕ್ತರ ಒಂದು ವರ್ಗದಲ್ಲಿ ಸಾಂಕ್ರಾಮಿಕ ವಾಗತೊಡಗಿತ್ತು.

ಈ ಭಕ್ತರು ಇಂತಹ ಭ್ರಮೆಗೆ ಗುರಿಯಾದದ್ದಕ್ಕೆ ಇನ್ನೊಂದು ಪ್ರಮುಖ ಕಾರಣವಿತ್ತು. ಅದೇನೆಂದರೆ, ಶ್ರೀರಾಮಕೃಷ್ಣರ ಅಪೂರ್ವ ಭಾವಾವಸ್ಥೆಯನ್ನೂ ಅದ್ಭುತ ಸಮಾಧಿಸ್ಥಿತಿಯನ್ನೂ ಅವರು ನಿತ್ಯವೂ ನೋಡುತ್ತಿದ್ದರಾದರೂ, ಅದಕ್ಕೆ ಆಧಾರವಾಗಿ ಎಂತಹ ಕಠೋರ ತಪಸ್ಸು, ಸಂಯಮ, ಸಾಧನೆಗಳಿವೆ ಎಂಬುದನ್ನು ಅವರಾರೂ ಕಂಡವರಲ್ಲ. ಹೀಗಿರುವಾಗ ತಾವೂ ಅವರನ್ನು 'ಅನುಸರಿಸಿ'ದರೆ ಸಾಕು ಎಂದು ಭಕ್ತರು ನಂಬತೊಡಗಿದ್ದುದರಲ್ಲಿ ಆಶ್ಚರ್ಯವೇನಿದೆ ?

ಆದರೆ ಭಕ್ತರ ಈ ಬಗೆಯ ವಿಚಾರವಿಹೀನವಾದ ಭಾವನೆಗೆ ದೊಡ್ಡ ಉತ್ತೇಜನ ಸಿಗುವಂತಾದದ್ದು ಗಿರೀಶಚಂದ್ರ ಘೋಷ್ ತನ್ನ 'ವಕಾಲತ್ತ'ನ್ನು ಶ್ರೀರಾಮಕೃಷ್ಣರಿಗೆ ಒಪ್ಪಿಸಿದ ಪ್ರಸಂಗವಾದ ಮೇಲೆ. ಈ ವೇಳೆಗೆ ಅವನು ತೀಕ್ಷ್ಣಬುದ್ಧಿಮತ್ತೆ, ಅಸಾಧಾರಣ ಶ್ರದ್ಧೆಗಳ ಬಲದಿಂದ ಶ್ರೀರಾಮಕೃಷ್ಣರ ದಿವ್ಯತೆಯನ್ನು ಗುರುತಿಸಲು ಸಮರ್ಥನಾಗಿದ್ದ. ಅವರು ಈ ಯುಗದ ಅವತಾರಪುರುಷರೇ ನಿಜ ಎಂಬ ಅವಿಚಲ ವಿಶ್ವಾಸ ಕ್ರಮೇಣ ಅವನಲ್ಲುಂಟಾಯಿತು. ತಾನು ಕಂಡುಕೊಂಡ ಈ ಅದ್ಭುತ ಸಂಗತಿಯನ್ನು ಅವನು ಮಹಾ ಸಂತೋಷ ಉತ್ಸಾಹಗಳಿಂದ ಘಂಟಾಘೋಷವಾಗಿ ಸಾರಲಾರಂಭಿಸಿದ. ಹಾಗೆ ನೋಡಿದರೆ ಎಷ್ಟೋ ಜನರಿಗೆ ಈ ಬಗೆಯ ನಂಬಿಕೆ ಆದಾಗಲೇ ಉಂಟಾಗಿತ್ತು; ಕೆಲವರು ಅದನ್ನು ವ್ಯಕ್ತಪಡಿಸಿಯೂ ಇದ್ದರು. ಆದರೆ ಗಿರೀಶನ ಹಾಗೆ ನಿಶ್ಶಂಕೆಯಿಂದ ಪ್ರಚಾರ ಮಾಡಿರಲಿಲ್ಲ. ಅದಕ್ಕೆ ಒಂದು ಕಾರಣ ಇದು: ಯಾವಾಗ ಜನರು ತಮ್ಮನ್ನು ಭಗವದವತಾರ ಎಂದು ಪರಿಗಣಿಸಿ ಬಹು ಸಂಖ್ಯೆಯಲ್ಲಿ ಮುತ್ತಲಾರಂಭಿಸುತ್ತಾರೋ ಆಗ ತಮ್ಮ ಶರೀರ ಇನ್ನು ಹೆಚ್ಚು ಕಾಲ ಉಳಿಯುವುದಿಲ್ಲ ಎಂದು ಶ್ರೀರಾಮಕೃಷ್ಣರು ಎಷ್ಟೋ ಸಲ ಹೇಳಿದ್ದರು. ಆದರೆ ಗಿರೀಶನ ಮನಸ್ಸಿನ ರೀತಿಯೇ ಬೇರೆ. ಯಾವ ಕೆಲಸವನ್ನೇ ಆದರೂ—ಅದು ಒಳ್ಳೆಯದಾದರೂ ಸರಿ, ಕೆಟ್ಟದಾದರೂ ಸರಿ—ಇತರರ ಕಣ್ಮರೆಸಿ ಮಾಡುವ ಅಭ್ಯಾಸವೇ ಅವನಿಗಿರಲಿಲ್ಲ. ತನ್ನ ಪಾಲಿಗೆ ಯಾವುದು ಈಗ

ಶ್ರೇಯಸ್ಕರವೆಂದು ತೋರಿತೋ ಅದನ್ನೇ ಮಾಡುವಂತೆ ಇತರರನ್ನೂ ಪ್ರಚೋದಿಸ ತೊಡಗಿದ. "ನೀವೂ ಶ್ರೀರಾಮಕೃಷ್ಣರಿಗೆ ವಕಾಲತ್ತನ್ನು ಒಪ್ಪಿಸಿ ಅವರಲ್ಲಿ ಸಂಪೂರ್ಣ ಶರಣಾಗತರಾಗಿ ನಿಶ್ಚಿಂತೆಯಿಂದಿದ್ದುಬಿಡಿ!" ಎಂದು ಭೇದಭಾವವಿಲ್ಲದೆ ಎಲ್ಲರಿಗೂ ಹೇಳಿಕೊಟ್ಟ. ಆದರೆ ಸ್ವತಃ ಅವನು ಆತ್ಮಸಮರ್ಪಣ ಮಾಡಬೇಕಾದರೆ ಅದು ಸುಲಭದ ಮಾತಾಗಿತ್ತೇ? ಆತನ ಪ್ರಚಂಡ ಬುದ್ಧಿಶಕ್ತಿ, ಅಪಾರ ಜೀವನಾನುಭವ, ಅತೀವ ಉತ್ಸಾಹ ಶ್ರದ್ಧೆ—ಇವೆಲ್ಲವುಗಳ ಪ್ರಭಾವದಿಂದಾಗಿಯೇ ಅವನಿಗೆ ಶ್ರೀರಾಮಕೃಷ್ಣರ ಮಹಿಮೆಯನ್ನು ಸ್ವಲ್ಪವಾದರೂ ಕಂಡುಕೊಳ್ಳಲು ಸಾಧ್ಯವಾದದ್ದು. ಈ ಮಹತ್ವದ ಅಂಶವನ್ನು ಅವನು ಮರೆತುಬಿಟ್ಟ. ಆದರೆ ಅವನಿಗೆ ಶ್ರೀರಾಮಕೃಷ್ಣರ ಮೇಲಿದ್ದ ಪ್ರೀತಿ, ಕಳಕಳಿ ಅದೆಷ್ಟು! ಅಂತಿರುವಾಗ, ತಾನು ಹೀಗೆಲ್ಲ ಪ್ರಚಾರ ಮಾಡಿದರೆ ಅವರ ಬಳಿ ಜನ ಸಂತೆ ಸೇರಿ, ತಮ್ಮ ದೇಹಾವಸಾನಕಾಲದ ಬಗ್ಗೆ ಅವರೇ ಆಡಿದ್ದ ಮಾತು ಸತ್ಯವಾಗಿ ಪರಿಣಮಿಸೀತು ಎಂಬ ಭೀತಿಯಿಂದಲಾದಲೂ ಅವನು ಸುಮ್ಮನಿರಬೇಕಾಗಿತ್ತಲ್ಲವೆ? ಆದರೆ ಅವನ ಬುದ್ಧಿಗೆ ಈ ವಿಷಯ ಗೋಚರವಾದ ರೀತಿಯೇ ಬೇರೆ. 'ಈ ಯುಗದ ಧರ್ಮಗ್ಲಾನಿಯನ್ನು ತಡೆಗಟ್ಟಿ, ಜನಕೋಟಿಯಲ್ಲಿ ನೂತನ ಆಧ್ಯಾತ್ಮಿಕ ಜಾಗೃತಿಯನ್ನು ಉಂಟುಮಾಡುವುದಕ್ಕಾಗಿಯೇ ಮಾನವದೇಹವನ್ನು ಧರಿಸಿ ಬಂದಿರುವವರು ಶ್ರೀರಾಮ ಕೃಷ್ಣರು. ಅವರು ಈ ವ್ಯಾಧಿಯೇ ಮೊದಲಾದ ಸಂಕಟಗಳನ್ನೆಲ್ಲ ಸ್ವೇಚ್ಛೆಯಿಂದಲೇ, ಉದ್ದೇಶಪೂರ್ವಕವಾಗಿಯೇ, ಅನುಭವಿಸುತ್ತಿದ್ದಾರೆ. ಆದ್ದರಿಂದ ಅವರು ಯಾವ ಲೀಲಾಕಾರ್ಯವನ್ನು ನಡೆಸಲು ಇಷ್ಟಪಟ್ಟಿದ್ದಾರೋ ಅದು ಈಡೇರುವವರೆಗೂ ಅವರ ದೇಹಾವಸಾನವಾಗುವುದಿಲ್ಲ. ಕಷ್ಟಕೋಟಲೆಗಳಿಂದ ತೊಳಲಿ ಬಳಲುತ್ತಿರುವ ಸಕಲ ಜೀವಿಗಳೂ ಅವರ ಚರಣಾಶ್ರಯವನ್ನು ಪಡೆದು ವಿಮುಕ್ತರಾಗಬೇಕಾದ್ದೇ ಸರಿ' ಎಂದು ಅವನು ಭಾವಿಸಿದ. ಆದ್ದರಿಂದ ಇತರರೂ ತನ್ನಂತೆಯೇ ಮಾಡಿ ಶಾಂತಿ-ಆನಂದ ಗಳನ್ನು ಗಳಿಸಲಿ ಎಂಬ ಸದಭಿಲಾಷೆಯಿಂದ ಹಾಗೆ ಪ್ರಚಾರ ಮಾಡಿದ.

ಗಿರೀಶನ ಸಲಹೆ ಅನೇಕರಿಗೆ ಬಹಳ ಆಪ್ಯಾಯಮಾನವಾಗಿ ತೋರಿತು. ತ್ಯಾಗ ಸಾಧನೆ ತಪಸ್ಸು ಇವುಗಳ ಮಹತ್ವವನ್ನು ಮರೆತು, ಗಿರೀಶನ ಶ್ರದ್ಧೆ ನಿಷ್ಠೆಗಳನ್ನೂ ಗಮನಿಸದೆ, 'ನಾನು ಶ್ರೀರಾಮಕೃಷ್ಣರಲ್ಲಿ ಆತ್ಮಸಮರ್ಪಣೆ ಮಾಡಿಬಿಟ್ಟಿದ್ದೇನೆ!' 'ವಕಾ ಲತ್ತು ಕೊಟ್ಟಾಯಿತು, ಇನ್ನೇನು!' ಎಂದು ಸುಮ್ಮನೆ ಹೇಳಿಕೊಂಡು ತಿರುಗಾಡ ಲಾರಂಭಿಸಿದರು. ಭಗವತ್ಸಾಕ್ಷಾತ್ಕಾರವೆಂದರೆ ಬಾಳೇಹಣ್ಣು ನುಂಗಿದಂತೆ ಎನ್ನುವ ಧೋರಣೆ ತಳೆದರು. ಸಾಮಾನ್ಯ ಭಕ್ತರಿರಲಿ, ರಾಮಚಂದ್ರ ದತ್ತನಂತಹ ಅನೇಕ ಹಿರಿಯ ಅನುಭವೀ ಭಕ್ತರೂ ಕೂಡ ಗಿರೀಶನ ಮಾತುಗಳಿಗೆ ಮನಸೋತರು; ಆತನ ತರ್ಕಕ್ಕೆ ತಲೆಬಾಗಿದರು. ನಾವು ಹಿಂದೆಯೇ ನೋಡಿದಂತೆ ರಾಮಚಂದ್ರನು ವೈಷ್ಣವ ಸಂಪ್ರದಾಯದಲ್ಲಿ ಮತ್ತು ಚೈತನ್ಯ ಮಹಾಪ್ರಭುವಿನಲ್ಲಿ ಶ್ರದ್ಧಾಭಕ್ತಿಗಳನ್ನಿರಿಸಿದ್ದವನು. ಶ್ರೀರಾಮಕೃಷ್ಣರಲ್ಲೂ ಅವನು ಚೈತನ್ಯನ ಮತ್ತು ಶ್ರೀಕೃಷ್ಣನ ಅನೇಕ ಗುಣಲಕ್ಷಣಗಳನ್ನು ಕಂಡು, ಅವರಿಬ್ಬರಿಗಿಂತ ಇವರು ಬೇರೆಯಲ್ಲ ಎಂಬ ನಿರ್ಧಾರಕ್ಕೆ ಬಂದಿದ್ದ. ಆದಾಗ್ಯೂ ತನ್ನ ಭಾವನೆಗಳನ್ನು ಯಾರ ಮುಂದೂ ಹೇಳದೆ ತನ್ನೊಳಗೇ ಇಟ್ಟುಕೊಂಡಿದ್ದ. ಆದರೆ ಯಾವಾಗ ಗಿರೀಶ ಶ್ರೀರಾಮಕೃಷ್ಣರ ದೈವತ್ವವನ್ನು ಪ್ರಚಾರ ಮಾಡತೊಡಗಿದನೋ ಆಗ ರಾಮಚಂದ್ರನ ಉತ್ಸಾಹವೂ ಕೆರಳಿತು. ಅವನೀಗ, ಶ್ರೀರಾಮಕೃಷ್ಣರು ಅವತಾರ ಪುರುಷರು ಎಂದಷ್ಟೇ ಹೇಳಿ ಸುಮ್ಮನಾಗಲಿಲ್ಲ; ಭಕ್ತವೃಂದದಲ್ಲಿ ಯಾರ್ಯಾರು ಹಿಂದೆ

ಶ್ರೀಕೃಷ್ಣನ ಮತ್ತು ಶ್ರೀಚೈತನ್ಯನ ಜೀವಿತಾವಧಿಯಲ್ಲಿ ಯಾವಯಾವ ಭಕ್ತರಾಗಿದ್ದವರು ಎನ್ನುವ ವಿಷಯದಲ್ಲಿ 'ಸಂಶೋಧನೆ' ನಡೆಸಿ, ಅದರ ಫಲಿತಾಂಶವನ್ನು ಹೇಳಿಕೊಂಡು ತಿರುಗಲಾರಂಭಿಸಿದ! ಭಕ್ತರ ಪೈಕಿ ಯಾರಿಗೆ 'ಭಾವಾವೇಶ' ತುಂಬ ಗಾಢವಾಗಿರುವಂತೆ ತೋರುತ್ತಿತ್ತೋ, ಯಾರು ಅತಿ ಹೆಚ್ಚಾಗಿ ಕುಣಿದು ಭಕ್ತಿಪ್ರದರ್ಶನ ಮಾಡುತ್ತಿದ್ದರೋ ಅಂಥವರಿಗೆ ರಾಮಚಂದ್ರನ ವಿಶ್ಲೇಷಣೆಯ ಪ್ರಕಾರ ಸಹಜವಾಗಿಯೇ ಉನ್ನತ ಸ್ಥಾನಗಳು ದೊರೆತುವು!

ಈ ನಡುವೆ, ಇವರುಗಳ ಸಡಗರಕ್ಕೆ ಮತ್ತಷ್ಟು ಕುಮ್ಮಕ್ಕು ಸಿಗುವಂತಹ ಘಟನೆ ನಡೆಯಿತು: ಢಾಕಾ ನಗರದಿಂದ ಬಂದ ವಿಜಯಕೃಷ್ಣ ಗೋಸ್ವಾಮಿ, ಧ್ಯಾನಮಗ್ನನಾಗಿದ್ದಾಗ ತನಗೆ ಶ್ರೀರಾಮಕೃಷ್ಣರ ದರ್ಶನವಾದದ್ದನ್ನು ಎಲ್ಲರೆದುರಿಗೂ ಹೇಳಿದ. ಹೇಗೆ ತಾನು ಆ ಮೂರ್ತಿಯ ಅಂಗ ಪ್ರತ್ಯಂಗವನ್ನೂ ಒತ್ತಿ ಒತ್ತಿ ನೋಡಿ ಅವರು ಅಲ್ಲಿ ಪ್ರತ್ಯಕ್ಷವಾಗಿದ್ದುದನ್ನು ದೃಢಪಡಿಸಿಕೊಂಡೆ ಎನ್ನುವುದನ್ನು ಬಣ್ಣಿಸಿದ. (ವಿವರಗಳಿಗೆ ನೋಡಿ: ಸಂಪುಟ ೩, ಪುಟ ೨೭೧.) ಶ್ರೀರಾಮಕೃಷ್ಣರೇನೂ ಇದನ್ನು ಸಮರ್ಥಿಸಲಿಲ್ಲ. "ನೀನು ಯಾರನ್ನು ನೋಡಿದೆಯೋ ಏನೋ!" ಎಂದು ಅವನ ಮಾತನ್ನು ಹಗುರವಾಗಿ ತೇಲಿಸಿಬಿಟ್ಟರು. ಆದರೆ ಅವನು ಮಾತ್ರ ತನ್ನ ಆ ಅನುಭವ ಸುಳ್ಳಾಗಿರಲು ಸಾಧ್ಯವೇ ಇಲ್ಲ ಎಂದು ತಿಳಿದಿದ್ದ. ಮಾತ್ರವಲ್ಲ, ಶಿಷ್ಯರಲ್ಲೆಲ್ಲ ಕಟುತರ ವಿಚಾರವಾದಿಯಾದ ನರೇಂದ್ರನೂ ಸಹ ಅದನ್ನು ಕೇಳಿ "ನನಗೇ ಅಂತಹ ಅನುಭವಗಳೆಷ್ಟೋ ಆಗಿರುವಾಗ ಇದನ್ನು ನಾನು ಹೇಗೆ ಅಲ್ಲಗಳೆದೇನು?" ಎಂದ. ಒಟ್ಟಿನಲ್ಲಿ, ಶ್ರೀರಾಮಕೃಷ್ಣರ ಅಲೌಕಿಕ ಶಕ್ತಿಯ ಬಗ್ಗೆ ಭಕ್ತರ ಒಂದು ಪಂಗಡದಲ್ಲಿ ವಿಶೇಷ ಕುತೂಹಲ ಮೂಡಿತು. ನಂಬಿಕೆ ಇನ್ನಷ್ಟು ದೃಢವಾಯಿತು. ಕೆಲವರಂತೂ, ಶ್ರೀರಾಮಕೃಷ್ಣರ ಇಚ್ಛೆಯಿಂದ ಯಾವಾಗ ಎಂಥ ಪವಾಡ ನಡೆಯುವುದೋ ಎಂದು ಯಾವಾಗಲೂ ಕಾತರತೆಯಿಂದಿರುವುದನ್ನು ರೂಢಿಸಿಕೊಂಡರು. ಹೀಗೆ ನಾನಾ ಕಾರಣಗಳಿಂದ ಭಾವಾವೇಶದ ಪ್ರದರ್ಶನ ಹೆಚ್ಚುತ್ತ ಬಂದಿತು. ಆರೇಳು ಭಕ್ತರಿಗೆ ಭಜನೆ, ಸಂಕೀರ್ತನೆಗಳನ್ನು ಕೇಳಿದರೆ ಭಾಗಶಃ ಬಾಹ್ಯಪ್ರಜ್ಞೆ ತಪ್ಪುವುದೇ ಮೊದಲಾದ ದೈಹಿಕ ವಿಕಾರಗಳು ಉಂಟಾಗತೊಡಗಿದುವು. ಆದರೆ ಲಾಟುವೇ ಮೊದಲಾದ ಪ್ರಾಮಾಣಿಕ ಸಾಧಕರಿಗೆ—ಮುಖ್ಯವಾಗಿ ಕೆಲವು ತರುಣಶಿಷ್ಯರಿಗೆ—ನಿಜವಾಗಿಯೂ ಭಾವಪ್ರಚೋದನೆಯಾಗಿ ಅವರು ಬಾಹ್ಯಜ್ಞಾನಶೂನ್ಯರಾಗುವುದಿತ್ತು. ಅಂಥವರನ್ನು ಶ್ರೀರಾಮಕೃಷ್ಣರು ಪ್ರೋತ್ಸಾಹಿಸುವುದೂ, ಇತರರೆದುರಿನಲ್ಲಿ ಅವರ ಬಗ್ಗೆ ಮೆಚ್ಚುಗೆಯ ಮಾತನಾಡುವುದೂ ಸಾಮಾನ್ಯವಾಗಿತ್ತು. ಇವರ ವಿಷಯ ಬೇರೆ.

ಭಕ್ತರ ಮನೋಭಾವ-ಧೋರಣೆಗಳಲ್ಲಿ ಉಂಟಾಗುತ್ತಿರುವ ಈ ವಿಚಿತ್ರ ಬೆಳವಣಿಗೆಯನ್ನೆಲ್ಲ ಶಿಷ್ಯರ ನಾಯಕನಾದ ನರೇಂದ್ರನಾಥ ವಿಷಾದದಿಂದ ಗಮನಿಸುತ್ತಿದ್ದ. ನಿಜವಾದ ಆಧ್ಯಾತ್ಮಿಕ ಅನುಭವಗಳನ್ನೂ ಅದರ ಸಹಜ ಅಭಿವ್ಯಕ್ತಿಯನ್ನೂ ಗುರುತಿಸಿ ತಲೆಬಾಗುವವನು ಅವನು. ಆದರೆ ಈಗ ಹೆಚ್ಚಿನವರ ಭಾವಪರವಶತೆಯೆಲ್ಲ ಕೇವಲ ಡಾಂಭಿಕತೆ, ಆತ್ಮವಂಚನೆ ಎನ್ನುವುದು ಅವನಿಗೆ ಸ್ಪಷ್ಟವಾಗಿ ತಿಳಿಯುತ್ತಿತ್ತು. ಮೊದಲಿನಿಂದಲೂ ಅವನು ಇಂತಹ ಡಂಭಾಚಾರವನ್ನು ಲೇವಡಿ ಮಾಡಿ ಖಂಡಿಸುತ್ತಿದ್ದವನೇ. ಉದಾಹರಣೆಗೆ, ಹಾಜರನ ಬಕಧ್ಯಾನದ ಬಗ್ಗೆ ಅವನು ಎಷ್ಟೋ ಸಲ ಹಾಸ್ಯ ಮಾಡುತ್ತಿದ್ದ. ಒಮ್ಮೆಯಂತೂ ಕೀರ್ತನೆಯ ಸಮಯದಲ್ಲಿ ಇತರರೊಂದಿಗೆ ಹಾಜರನೂ

ನರ್ತಿಸಿದಾಗ ಅದನ್ನು ಅಪಹಾಸ್ಯ ಮಾಡಿ ಎಲ್ಲರೂ ನಕ್ಕು ಹೊರಳಾಡುವಂತೆ ಮಾಡಿದ್ದ. ಅಲ್ಲದೆ, ಅವನದು ಪೌರುಷಪ್ರಧಾನ ವ್ಯಕ್ತಿತ್ವ. ಪುರುಷರು ಸ್ತ್ರೀಭಾವವನ್ನು ಆರೋಪಿಸಿಕೊಂಡು ಮಧುರಭಾವದ ನಟನೆ ಮಾಡುವುದನ್ನೆಲ್ಲ ಕಂಡರೆ ಬಿಸಿನೆತ್ತರಿನ ಅವನು ಉರಿದು ಬೀಳುತ್ತಿದ್ದ. ಆದರೆ ಶ್ರೀರಾಮಕೃಷ್ಣರಲ್ಲಿ ಅತ್ಯಂತ ಪರಿಶುದ್ಧವಾಗಿ ಪರಿಪೂರ್ಣವಾಗಿ ವಿಕಸನಗೊಂಡಿದ್ದ ಸಕಲಭಾವಗಳನ್ನೂ ಎಲ್ಲರಿಗಿಂತ ಚೆನ್ನಾಗಿ ಅರಿತು ಗೌರವಿಸಬಲ್ಲ ಸಾಮರ್ಥ್ಯವಿದ್ದುದೂ ಅವನಿಗೇ. ಹೀಗಿರುವಾಗ ಸ್ವತಃ ತನ್ನ ಗುರುಭ್ರಾತೃಗಳೇ ಭಾವಪ್ರದರ್ಶನದ ದೌರ್ಬಲ್ಯಕ್ಕೆ ಬಲಿಯಾಗುತ್ತಿರುವುದನ್ನು ನೋಡಿಕೊಂಡು ಸುಮ್ಮನಿರಲು ಅವನಿಗಾದೀತೆ? ಅಂಥವರಿಗೆಲ್ಲ ಆ ವಿಷಯವನ್ನು ಅರ್ಥಪಡಿಸಿ, ತಮ್ಮನ್ನು ತಿದ್ದಿಕೊಳ್ಳುವಂತೆ ಮಾಡುವ ಪ್ರಯತ್ನದಲ್ಲಿ ತೊಡಗಿದ.

ಆದರೆ ಭಕ್ತರೆಲ್ಲ ತಪ್ಪುದಾರಿ ಹಿಡಿಯುತ್ತ ಸ್ವೇಚ್ಛೆಯಿಂದ ವರ್ತಿಸುತ್ತಿದ್ದರೆ ಸ್ವಯಂ ಶ್ರೀರಾಮಕೃಷ್ಣರು ಅದನ್ನು ನೋಡಿಕೊಂಡು ಸುಮ್ಮನಿದ್ದರೇನು?—ಎಂಬ ಪ್ರಶ್ನೆ ಸಹಜವಾಗಿಯೇ ನಮ್ಮೆದುರು ಏಳುತ್ತದೆ. ಇದಕ್ಕೆ ಉತ್ತರವಿಷ್ಟೆ: ಅವರು ಭಕ್ತರನ್ನೆಲ್ಲ ಒಟ್ಟಾಗಿ ಕರೆದು, 'ನೋಡಿ, ನೀವುಗಳು ಹೀಗೆ ಮಾಡಬೇಕು, ಹಾಗೆ ಮಾಡಬಾರದು' ಎಂದು ಬುದ್ಧಿವಾದ ಹೇಳದಿದ್ದುದೇನೋ ನಿಜವೇ. ಆದರೆ ಶ್ರೀರಾಮಕೃಷ್ಣರು ಆ ಬಗ್ಗೆ ಅಲಕ್ಷ್ಯದಿಂದಿದ್ದರು ಎಂದಾಗಲಿ, ಅವರಿಗೆ ಆ ವಿಚಾರ ಗೋಚರವಾಗಿರಲಿಲ್ಲ ಎಂದಾಗಲಿ ಭಾವಿಸಿದರೆ ತಪ್ಪಾಗುತ್ತದೆ. ಭಾವಾವೇಶದ ಇತಿಮಿತಿಗಳ ಬಗ್ಗೆ, ಪ್ರದರ್ಶನದ ಬಗ್ಗೆ ಅವರು ಯಾವಾಗಲೂ ಎಚ್ಚರಿಕೆ ಕೊಡುತ್ತಲೇ ಇದ್ದರು. ಇತರರ ಭಾವಾವೇಶವನ್ನು ಕಂಡು, ತಮಗೆ ಅಂತಹ ಸ್ಥಿತಿಯಿನ್ನೂ ಪ್ರಾಪ್ತವಾಗಲಿಲ್ಲವಲ್ಲಾ ಎಂದು ಕೊರಗುವವರು ಭಕ್ತರಲ್ಲಿ ಅನೇಕರಿದ್ದರು. ಅವರಿಗೆಲ್ಲ ಶ್ರೀರಾಮಕೃಷ್ಣರು ಛೀಮಾರಿ ಹಾಕಿ ಹೀಗೆನ್ನುತ್ತಿದ್ದರು: "ನೋಡಿ, ಒಂದು ಸಣ್ಣ ಕೊಳದೊಳಗೆ ಆನೆ ಇಳಿದರೆ ಕೊಳದ ನೀರೆಲ್ಲ ಛಿಲ್ಲೆಂದು ಹೊರಚಿಮ್ಮುತ್ತದೆ. ಆದರೆ ಒಂದು ದೊಡ್ಡ ಸರೋವರಕ್ಕೆ ಆನೆಗಳ ಹಿಂಡೇ ಪ್ರವೇಶಿಸಿದರೂ ಅಂತಹ ಪರಿಣಾಮವೇನೂ ಕಾಣುವುದಿಲ್ಲ; ನೀರು ಶಾಂತವಾಗಿಯೇ ಇರುತ್ತದೆ. ಹಾಗೆಯೇ ಹೆಚ್ಚು ಅಂತಸ್ಸತ್ವವಿಲ್ಲದ ಮನುಷ್ಯನಲ್ಲಿ ಸ್ವಲ್ಪ ಭಾವವುಂಟಾದರೂ ಅವನು ಅಳುವುದೇನು, ನಗುವುದೇನು, ಕುಣಿಯುವುದೇನು, ಬಿದ್ದು ಹೊರಳಾಡುವುದೇನು—ಬಗೆಬಗೆಯ ಪ್ರದರ್ಶನಗಳೆಲ್ಲ ಕಂಡುಬರುತ್ತವೆ. ಅದೇ, ನಮ್ಮ ನರೇಂದ್ರನನ್ನು ನೋಡಿ. ಅವನ ವಿವೇಕ, ವೈರಾಗ್ಯ, ಜ್ಞಾನ, ಭಕ್ತಿ ಎಲ್ಲವೂ ಎಷ್ಟು ಅದ್ಭುತವಾಗಿವೆ! ಅವನು ಯಾವತ್ತಾದರೂ ಹೀಗೆಲ್ಲ ಭಾವಪ್ರದರ್ಶನ ಮಾಡುತ್ತಾನೆಯೆ? ಯಥಾರ್ಥ ವಿವೇಕ ವೈರಾಗ್ಯಗಳೇ ಅತಿ ಮುಖ್ಯವಾಗಿ ಗಳಿಸಬೇಕಾದ ವಸ್ತುಗಳು."

ಒಮ್ಮೆ ಹಲವಾರು ಭಕ್ತರ ಭಕ್ತಿಭಾವಾವೇಶವನ್ನು ಕಂಡು ಡಾಕ್ಟರ್ ಸರ್ಕಾರ ಹೇಳುತ್ತಾನೆ, "ನನ್ನೊಳಗೂ ಭಾವಪ್ರಚೋದನೆ ಆಗುತ್ತದೆ. ಆದರೆ ಅದು ಹೀಗೆಲ್ಲ ವ್ಯಕ್ತಗೊಳ್ಳದಂತೆ ನಾನು ಸಂಯಮ ತಂದುಕೊಳ್ಳುತ್ತೇನೆ." ಆಗಲೂ ಕೂಡ ಶ್ರೀರಾಮಕೃಷ್ಣರು ಮೇಲಿನ ಸಾಮತಿ ಕೊಟ್ಟು ಅವನನ್ನು ಹೊಗಳಿ, "ನೀನು ವಿಶಾಲ ಸರೋವರದ ಹಾಗೆ" ಎನ್ನುತ್ತಾರೆ.

ಹಿಂದೊಂದು ದಿನ ಸಂಕೀರ್ತನೆಯ ಸಮಯದಲ್ಲಿ ಒಬ್ಬಾತ ಭಾವಾತಿರೇಕವನ್ನು ಪ್ರದರ್ಶಿಸುತ್ತ ಕುಣಿದದ್ದನ್ನು ಕಂಡು ಶ್ರೀರಾಮಕೃಷ್ಣರು ಆಮೇಲೆ ಅವನನ್ನು ಕರೆದು

ಬೈದು ಬುದ್ಧಿ ಹೇಳಿದ್ದರು: "ಹುಚ್ಚ, ನನಗೇ ಭಾವ ತೋರಿಸಲು ಬಂದೆಯಾ? ನಿಜವಾಗಿಯೂ ಭಾವವುಂಟಾದರೆ ಎಲ್ಲಾದರೂ ಹೀಗಾಗುತ್ತದೆಯೆ? ಭಾವದಲ್ಲೇ ಮಗ್ನನಾಗಿ, ಸ್ಥಿರವಾಗಿಬಿಡಬೇಕು. ಇದೆಲ್ಲ ಎಂಥ ಭಾವ! ಸ್ಥಿರನಾಗು, ಶಾಂತನಾಗು. (ಇತರರನ್ನುದ್ದೇಶಿಸಿ) ಇದು ಯಾವ ತೆರನ ಭಾವ ಗೊತ್ತೇನು? ಒಂದು ಚಟಾಕು ಹಾಲನ್ನು ಒಂದು ದೊಡ್ಡ ಹಂಡೆಗೆ ಹಾಕಿ ಕುದಿಸಿದ ಹಾಗೆ. ನೋಡಿದರೆ 'ಆಹಾ ಎಷ್ಟು ದೊಡ್ಡ ಪಾತ್ರೆ!' ಎನ್ನಿಸಬೇಕು. ಆದರೆ ಕೆಳಗಿಳಿಸಿ ನೋಡಿದರೆ ಒಂದು ತೊಟ್ಟೂ ಇಲ್ಲ! ಎಲ್ಲ ಪಾತ್ರೆಗೇ ಅಂಟಿಹೋಗಿದೆ!"

ಮತ್ತೊಂದು ಸಂದರ್ಭ: ಶ್ರೀರಾಮಕೃಷ್ಣರು ಶ್ಯಾಮಪುಕುರದ ವಾಸದ ಬಳಿಕ ಕಾಶೀಪುರದ ತೋಟದ ಮನೆಯಲ್ಲಿದ್ದಾರೆ; ಆಗ ಯಾರೋ ಕೆಲವು ವೈಷ್ಣವರು, ಅರ್ಧಂಬರ್ಧ ಹುಚ್ಚು ಹಿಡಿದಂತಿದ್ದ ಒಬ್ಬ ಯುವಕನನ್ನು ಅವರ ಬಳಿಗೆ ಕರೆತಂದರು. ಅವನಿಗೆ ಇದ್ದಕ್ಕಿದ್ದ ಹಾಗೆ ಈ ಬಗೆಯ 'ದೇವರ ಹುಚ್ಚು' ಹಿಡಿದಿತ್ತಂತೆ. ಅವನನ್ನು ಶ್ರೀರಾಮಕೃಷ್ಣರಿಗೆ ತೋರಿಸಿ, 'ಇವನಿಗೇನಾಗಿದೆ? ಇದು ವಾಸಿಯಾಗುವಂಥದೋ ಹೇಗೆ?' ಎಂದು ಕೇಳಿಕೊಂಡು ಹೋಗಲು ಅವರೆಲ್ಲ ಬಂದಿದ್ದರು.

ಆ ಯುವಕ ಒಳ್ಳೇ ಲಕ್ಷಣವಾಗಿದ್ದ. ಸಾಧಾರಣ ಮೈಕಟ್ಟು. ಮಾಸಿದ ಒಂದು ಪಂಚೆಯಲ್ಲದೆ ಮೈಮೇಲೆ ಬೇರೆ ಬಟ್ಟೆಯಿಲ್ಲ; ಬರಿಗಾಲು. ಶರೀರಪೋಷಣೆಯ ವಿಷಯದಲ್ಲಿ ಸಂಪೂರ್ಣ ನಿರಾಸಕ್ತನಾಗಿರುವುದು ಗೊತ್ತಾಗುತ್ತಿದೆ. ಎದೆಯೂ ಮುಖವೂ ಕೆಂಪೇರಿವೆ. ಭಗವನ್ನಾಮವನ್ನು ಉಚ್ಚರಿಸುತ್ತ ಸದಾ ಕಂಪನ, ಪುಲಕಗಳನ್ನು ಅನುಭವಿಸುತ್ತಿದ್ದಾನೆ. ಅಶ್ರುಧಾರೆ ಹರಿಯುತ್ತಿದ್ದು, ಕಣ್ಣುಗಳು ಊದಿಕೊಂಡು ಕೆಂಪಗಾಗಿವೆ. ಭಕ್ತರನ್ನು ಕಂಡರೆ ನಮ್ರತೆಯಿಂದ ಪಾದಮುಟ್ಟಿ ನಮಸ್ಕರಿಸುತ್ತಿದ್ದಾನೆ. ಹರಿಸಂಕೀರ್ತನೆ ಮಾಡುತ್ತ ಮಾಡುತ್ತ ಕೆಲದಿನಗಳ ಹಿಂದೆ ಹಠಾತ್ತಾಗಿ ಈ ಅವಸ್ಥೆ ಬಂದುಬಿಟ್ಟಿತು ಎಂದು ಜೊತೆಯವರು ತಿಳಿಸಿದರು. ಅಂದಿನಿಂದಲೂ ಆತ ಸರಿಯಾಗಿ ಏನನ್ನೂ ತಿಂದೇ ಇಲ್ಲವೆನ್ನಬೇಕು. ಜೊತೆಗೆ ನಿದ್ರೆಯೂ ಇಲ್ಲ; ಭಗವಂತನಿನ್ನೂ ದರ್ಶನ ಕೊಡಲಿಲ್ಲವಲ್ಲಾ ಎಂದು ಹಗಲಿರುಳು ಅಳುತ್ತ ನೆಲದ ಮೇಲೆ ಹೊರಳಾಡುತ್ತಿದ್ದಾನೆ ಎಂದೂ ಅವರು ಹೇಳಿದರು.

ಅವನನ್ನು ಕಂಡು ಅಲ್ಲಿದ್ದ ಭಕ್ತರಿಗೆಲ್ಲ ಆಶ್ಚರ್ಯ. ಬಹುಶಃ ಕೆಲವರಿಗೆ ಅದು ಉನ್ನತ ಆಧ್ಯಾತ್ಮಿಕ ಸ್ಥಿತಿಯೆಂದೋ ಪರಮಹಂಸಾವಸ್ಥೆಯೆಂದೋ ತೋರಿದ್ದರೂ ಅತಿಶಯವಿಲ್ಲ. ಆದರೆ ಶ್ರೀರಾಮಕೃಷ್ಣರಿಗೆ ಮಾತ್ರ ಅವನನ್ನು ನೋಡುತ್ತಿದ್ದಂತೆಯೇ ಅವನ ಸ್ಥಿತಿಯೆಂಥದು, ಸಾಮರ್ಥ್ಯವೆಷ್ಟು ಎನ್ನುವುದೆಲ್ಲ ನಿಖರವಾಗಿ ತಿಳಿದುಹೋಯಿತು. ಅವರೆಂದರು: "ಇವನದು ಮಧುರಭಾವದ ಪ್ರಾರಂಭದ ಸ್ಥಿತಿ. ಆದರೆ ಇದನ್ನು ಇವನು ಉಳಿಸಿಕೊಳ್ಳಲಾರ. ಏಕೆಂದರೆ ಇದನ್ನು ಉಳಿಸಿಕೊಳ್ಳುವುದು ಬಹಳ ಕಷ್ಟ. ಕಾಮಭಾವನೆಯಿಂದ ಸ್ತ್ರೀಯನ್ನು ಸ್ಪರ್ಶ ಮಾಡಿದನೆಂದರೆ ಇವನ ಈ ಉನ್ನತ ಭಾವ ಒಮ್ಮೆಗೇ ಹೊರಟುಹೋಗುತ್ತದೆ."

ಅದು ಹೇಗಾದರೂ ಇರಲಿ, ಇವನ ತಲೆಯಂತೂ ಕೆಟ್ಟಿಲ್ಲವಲ್ಲ ಎಂದು ಸ್ವಲ್ಪ ಸಮಾಧಾನಗೊಂಡು ಆ ವೈಷ್ಣವ ಭಕ್ತರು ಹೊರಟುಹೋದರು. ಅದಾದ ಕೆಲದಿನಗಳ ಮೇಲೆ ನಿಜಕ್ಕೂ ಆ ನತದೃಷ್ಟ ಯುವಕನಿಗೆ, ಶ್ರೀರಾಮಕೃಷ್ಣರು ಹೇಳಿದಂತೆಯೇ ಆಯಿತು ಎಂಬ ಸುದ್ದಿ ಬಂತು! ತಾತ್ಕಾಲಿಕವಾದ ಭಾವೋದ್ರೇಕದಿಂದ ಅವನು ಎಷ್ಟು

ಮೇಲ್ಮಟ್ಟದ ಸ್ಥಿತಿಗೆ ಏರಿದ್ದನೋ, ಅದು ಇದ್ದಕ್ಕಿದ್ದಂತೆ ಕೊನೆಗೊಂಡಾಗ ಅಷ್ಟೇ ಕೆಳಗೆ ಬಿದ್ದಿದ್ದ.

ಶ್ರೀರಾಮಕೃಷ್ಣರು ತಮ್ಮ ಭಕ್ತರಿಗೆ ಭಾವಾವೇಶದ ಅಪಾಯಗಳನ್ನು ಅನೇಕ ಬಗೆಯಾಗಿ ಮನಗಾಣಿಸುತ್ತಲೇ ಇದ್ದರು. ಆದರೆ ಈಗ—ಶ್ಯಾಮಪುಕುರದಲ್ಲಿ ವಾಸಿಸಿರುವ ಪ್ರಸ್ತುತ ಸಂದರ್ಭದಲ್ಲಿ—ಭಕ್ತರನೇಕರು ಭಾವಾವೇಶದ ಬೆಡಗಿಗೆ ಮನಸೋಲುತ್ತಿದ್ದರೂ ಅವರನ್ನೆಲ್ಲ ಕರೆದು ಬುದ್ಧಿ ಹೇಳದಿದ್ದುದಕ್ಕೆ ಬಹುಶಃ ಒಂದು ಮುಖ್ಯ ಕಾರಣವಿತ್ತು: ಈ ವಿಷಯದಲ್ಲಿ ನರೇಂದ್ರ ತಾನಾಗಿಯೇ ಕೈಹಾಕಿ, ಪರಿಸ್ಥಿತಿಯನ್ನು ಸರಿಪಡಿಸುವ ಪ್ರಯತ್ನದಲ್ಲಿ ತೊಡಗಿದ್ದನ್ನು ಅವರು ಗಮನಿಸಿದ್ದರು. ಶಿಷ್ಯವೃಂದದ ಭವಿಷ್ಯದ ನಾಯಕನಾಗಿ ನಿರ್ಮಾಣಗೊಂಡು, ತನ್ನ ಹೊಣೆಗಾರಿಕೆಯನ್ನು ಸಮರ್ಥವಾಗಿ ನಿರ್ವಹಿಸುವ ಲಕ್ಷಣವನ್ನು ಅವನು—ತನಗೇ ಅರಿವಿಲ್ಲದಂತೆ—ತೋರಿಸಿದ್ದರಿಂದ, ಅವನಿಗೆ ಆ ಕಾರ್ಯಕ್ಕೆ ಇನ್ನಷ್ಟು ಅವಕಾಶ ನೀಡುವುದಕ್ಕಾಗಿಯೇ ಇಲ್ಲಿ ಶ್ರೀರಾಮಕೃಷ್ಣರು ಮೌನ ತಾಳಿದರು ಎಂದು ಸುಲಭವಾಗಿ ಊಹಿಸಬಹುದು. ಅಲ್ಲದೆ, ಎಂಥ ಸಾಧಕನೇ ಆದರೂ ಸರಿಯಾದ ಕಾಲ ಬರದೆ ಏನೂ ಸಿದ್ಧಿಸುವುದಿಲ್ಲ ಎಂಬುದು ಅವರು ಮತ್ತೆಮತ್ತೆ ಹೇಳುತ್ತಿದ್ದ ಮಾತು. ಆದ್ದರಿಂದ ಕಾಲ ಪಕ್ವವಾಗಲಿ ಎಂಬ ಉದ್ದೇಶದಿಂದಲೂ ಅವರು ಕೆಲಕಾಲ ಸುಮ್ಮನಿದ್ದಿರಬಹುದು.

ಶ್ರೀರಾಮಕೃಷ್ಣರು ಮೌನತಾಳಿದ್ದರ ವಿಷಯ ಏನೇ ಇರಲಿ, ನರೇಂದ್ರನೀಗ ನಾನಾ ಬಗೆಯ ತರ್ಕ-ಯುಕ್ತಿಗಳ ಮೂಲಕ ಭಕ್ತರಿಗೆ ಅವರು ಮಾಡುತ್ತಿದ್ದ ತಪ್ಪನ್ನು ತೋರಿಸಿಕೊಡತೊಡಗಿದ. ಮತ್ತು ದೈಹಿಕವಾಗಿಯೂ ಮಾನಸಿಕವಾಗಿಯೂ ಹೆಚ್ಚಿನ ಕಸುವಿನಿಂದ ಹಾಗೂ ಚುರುಕುತನದಿಂದ ಕೂಡಿದವರಾದ ಯುವಕರೇ ತನ್ನ ಮನಸ್ಸನ್ನು ಅರ್ಥ ಮಾಡಿಕೊಳ್ಳಲು ಸಮರ್ಥರು ಎಂದರಿತು, ಅವರ ಕಡೆಗೆ ಗಮನಹರಿಸಿದ. "ಯಾವ ಭಾವಾವೇಶದಿಂದ ನಮ್ಮಲ್ಲೊಂದು ಶಾಶ್ವತವಾದ ಪರಿಣಾಮವುಂಟಾಗುವುದಿಲ್ಲವೋ, ಯಾವುದರ ಪ್ರಭಾವದಿಂದ ನಮ್ಮ ಕಾಮಕಾಂಚನಾಸಕ್ತಿ ಕುಗ್ಗಿ ಭಗವಂತನನ್ನು ಕಾಣಬೇಕೆಂಬ ವ್ಯಾಕುಲತೆ ಹೆಚ್ಚಲಾರದೋ, ಅಂತಹ ಭಾವಾವೇಶ ಸತ್ವಹೀನವಾದದ್ದು. ಅದಕ್ಕೇನೂ ಬೆಲೆಯಿಲ್ಲ" ಎಂದು ಅವರಿಗೆಲ್ಲ ತಿಳಿಯಹೇಳಿದ. ಭಾವಾವೇಶದ ಭರದಲ್ಲಿ ಕಣ್ಣೀರು ಸುರಿಯುವುದು, ಮೈ ನವಿರೇಳುವುದು, ಕೆಲವೊಮ್ಮೆ ಪ್ರಜ್ಞೆ ಕೂಡ ತಪ್ಪುವುದು ಇವೆಲ್ಲ ಹೆಚ್ಚಿನಂಶ ಕೃತಕ; ದೈಹಿಕ ದೌರ್ಬಲ್ಯವೇ ಇದಕ್ಕೆ ಮುಖ್ಯ ಕಾರಣ; ಅಂಥವರು ತಮ್ಮ ಮನಸ್ಸನ್ನು ನಿಗ್ರಹಿಸಿಕೊಳ್ಳಲು ಸಾಧ್ಯವಾಗದಿದ್ದರೆ, ಚೆನ್ನಾಗಿ ಪುಷ್ಟಿಕರ ಆಹಾರ ಸೇವಿಸುವುದು ಅಥವಾ ವೈದ್ಯರ ಸಲಹೆ ಪಡೆಯುವುದು ಕ್ಷೇಮ ಎಂದು ಅವನು ತನ್ನ ನಿಶ್ಚಿತ ಅನಿಸಿಕೆಯನ್ನು ಮುಂದಿಟ್ಟಾಗ ಅವನ ಸಂಗಡಿಗರೆಲ್ಲ ಆಶ್ಚರ್ಯಪಟ್ಟರು. ಕೆಲವರು ಅದನ್ನು ನಂಬಲೂ ಇಲ್ಲ. ಆದರೆ ಕೆಲದಿನಗಳ ಮೇಲೆ ಅಕಸ್ಮಾತ್ತಾಗಿ ಅವರ ಕಣ್ಣಿಗೇ ಕೆಲವು ವಿಚಿತ್ರ ದೃಶ್ಯಗಳು ಬಿದ್ದುವು. ಒಬ್ಬ ಭಕ್ತ ನಿರ್ಜನಪ್ರದೇಶಕ್ಕೆ ಹೋಗಿ ಭಾವೋದ್ದೀಪಕವಾದ ಹಾಡುಗಳನ್ನು ಹಾಡುತ್ತ, ಆ ಭಾವಗಳಿಗೆ ಅನುಗುಣವಾದ ದೈಹಿಕ ಮಾರ್ಪಾಡುಗಳಾಗುವಂತೆ ಅಭ್ಯಾಸ ಮಾಡುತ್ತಿದ್ದ! ಇನ್ನೊಬ್ಬ ಭಕ್ತ ಮೈಮೇಲೆ ಪೂರ್ಣ ಪ್ರಜ್ಞೆ ಇಲ್ಲದವರಂತೆ ನರ್ತನ ಮಾಡಲು ಪ್ರಯತ್ನಿಸುತ್ತಿದ್ದ! ಅಲ್ಲದೆ ಬಹಳವಾಗಿ ಭಾವಾವೇಶಕ್ಕೊಳಗಾಗುತ್ತಿದ್ದ ಒಬ್ಬನಿಗೆ ನರೇಂದ್ರ ಗೋಪ್ಯವಾಗಿ ಬುದ್ಧಿವಾದ ಹೇಳಿ ಸಂಯಮ ತಂದುಕೊಳ್ಳುವಂತೆ ಮತ್ತು

ಪುಷ್ಟಿಕರವಾದ ಆಹಾರ ತೆಗೆದುಕೊಳ್ಳುವಂತೆ ಮಾಡಿದ್ದರಿಂದ ಆತ ಒಂದೆರಡು ವಾರದಲ್ಲೇ ಸಾಮಾನ್ಯಸ್ಥಿತಿಗೆ ಬಂದ. ಇದನ್ನೆಲ್ಲ ನೋಡಿದ ಮೇಲೆ ತರುಣಶಿಷ್ಯರಿಗೆ ನರೇಂದ್ರನ ಮಾತಿನಲ್ಲಿ ಹೆಚ್ಚಿನ ವಿಶ್ವಾಸ ಮೂಡಿತು.

ಅವನು ಇಷ್ಟಕ್ಕೇ ಸುಮ್ಮನಾಗಲಿಲ್ಲ. ಕೇವಲ ಭಾವಾವೇಶವನ್ನು ಅವಲಂಬಿಸಿ ಕೊಂಡಿದ್ದವರು ಅದನ್ನು ತ್ಯಜಿಸಿಬಿಟ್ಟಿದ್ದರಿಂದ ಅವರು ಒಂದು ಬಗೆಯ ಶೂನ್ಯತೆ ಯನ್ನು ಅನುಭವಿಸುವ ಸಂಭವವಿದೆ ಎಂದು ಅವನು ಊಹಿಸಿದ. ಅದನ್ನು ಹೋಗ ಲಾಡಿಸಲು ಅವನು ಅವರ ತೋರಿಕೆಯ ಭಾವಾವೇಶದ ಸ್ಥಾನದಲ್ಲಿ ನಿಜವಾದ ಭಕ್ತಿ-ವೈರಾಗ್ಯಗಳನ್ನು ಪ್ರಚೋದಿಸುವಂತೆ ಅವರನ್ನೆಲ್ಲ ಸೇರಿಸಿ ಮಾತನಾಡುತ್ತಿದ್ದ; ಹೃದಯ ಸ್ಪರ್ಶಿಯಾದ ಹಾಡುಗಳನ್ನು ಹಾಡುತ್ತಿದ್ದ. ಮತ್ತು ಭಕ್ತಿಯೆಂಬುದು ಜ್ಞಾನಮಿಶ್ರಿತ ವಾಗಿರುವುದು ಕ್ಷೇಮ ಎಂದು ತಿಳಿಸಿಕೊಡುತ್ತ, ಶಂಕರಾಚಾರ್ಯರ 'ನಿರ್ವಾಣ ಷಟ್ಕ'ವೇ ಮೊದಲಾದ ಗ್ರಂಥಗಳಿಂದ ಸುಂದರ ಶ್ಲೋಕಗಳನ್ನು ಉದ್ಧರಿಸುತ್ತಿದ್ದ.

ಕೆಲವೊಮ್ಮೆ ಅವನು ಸ್ನೇಹಿತರೆದುರು ಶ್ರೀರಾಮಕೃಷ್ಣರ ಸಾಧನಾವಧಿಯ ಅದ್ಭುತ ಘಟನೆಗಳನ್ನು ವಿಶದವಾಗಿ ತಿಳಿಸಿ, ಸಾಮಾನ್ಯಬುದ್ಧಿಗೆ ಗೋಚರವಾಗದಂತಹ ಅನೇಕ ಮಹತ್ವಪೂರ್ಣ ಸಂಗತಿಗಳನ್ನು ವಿವರಿಸುತ್ತಿದ್ದ. ಆ ಬಣ್ಣನೆಯನ್ನು ಕೇಳುತ್ತ ತರುಣರು ಸ್ತಬ್ಧರಾಗಿಬಿಡುತ್ತಿದ್ದರು.

ಭಕ್ತರ ಪಾಲಿಗೆ ಈ ವರ್ಷದ ನವರಾತ್ರಿ, ಕಾಳೀಪೂಜೆ ಎಲ್ಲವೂ ಅಭೂತಪೂರ್ವ ರೀತಿಯಲ್ಲಿ ನಡೆದುಹೋದುವು. ಆದರೆ ಈ ಅವಧಿಯಲ್ಲಿ ಶ್ರೀರಾಮಕೃಷ್ಣರ ದೇಹಾರೋಗ್ಯ ಮಾತ್ರ ಸುಧಾರಿಸುವ ಬದಲು ಕ್ಷೀಣಿಸುತ್ತಲೇ ಬಂತು. ಮೊದಮೊದಲು ಸಾಕಷ್ಟು ಪರಿಣಾಮಕಾರಿಯಾಗಿ ಕಂಡುಬಂದಿದ್ದ ತನ್ನ ಔಷಧಗಳೆಲ್ಲ ಈಗ ನಿಷ್ಕ್ರಿಯೋಜಕವಾಗುತ್ತಿರುವುದನ್ನು ಕಂಡು ಡಾ. ಸರ್ಕಾರ ಚಿಂತೆಗೀಡಾದ. ಗಾಳಿ ಹೆಚ್ಚಾಗಿ ಬೀಸದ, ಮತ್ತು ಮಲಿನಮಯವಾದ ನಗರದ ಹವಾಗುಣದಿಂದಾಗಿಯೇ ಹೀಗಾಗುತ್ತದೆ ಎಂದು ಅವನಿಗೆ ತೋರಿತು. ಆದ್ದರಿಂದ, ಶ್ರೀರಾಮಕೃಷ್ಣರನ್ನು ಊರ ಹೊರಗಿನ ಯಾವುದಾದರೊಂದು ತೋಟದ ಮನೆಗೆ ಕರೆದೊಯ್ದರೆ ಸ್ವಲ್ಪ ಮೇಲಾದೀತು ಎಂದು ಭಕ್ತರಿಗೆ ಸಲಹೆ ಮಾಡಿದ. ಭಕ್ತರೆಲ್ಲ ಈ ಬಗ್ಗೆ ಸಮಾಲೋಚಿಸಿ, ಸರಿಯೆಂದರು. ಆದರೆ ಅದಾಗಲೇ ಮಾರ್ಗಶಿರ ಮಾಸದ ಅರ್ಧಭಾಗ ಆಗಿಹೋಗಿತ್ತು. ಪುಷ್ಯಮಾಸದಲ್ಲಿ ಮನೆ ಬದಲಾವಣೆ ಮಾಡಲು ಶ್ರೀರಾಮಕೃಷ್ಣರು ಒಪ್ಪಲಾರರು ಎಂದು ತಿಳಿದದ್ದರಿಂದ, ಭಕ್ತರೆಲ್ಲ ಬೇಗ ಬೇಗನೆ ಸರಿಯಾದ ಮನೆಯೊಂದನ್ನು ಹುಡುಕತೊಡಗಿದರು. ಅದೃಷ್ಟವಶಾತ್, ಕೆಲದಿನಗಳಲ್ಲೇ ನಗರದ ಉತ್ತರಕ್ಕಿರುವ ಕಾಶೀಪುರ ಮೊಹಲ್ಲದಲ್ಲಿ ವಿಶಾಲವಾದ ತೋಟದಮನೆಯೊಂದು ಸಿಕ್ಕಿತು. ಬಾಡಿಗೆ, ತಿಂಗಳಿಗೆ ಎಂಬತ್ತು ರೂಪಾಯಿ. ಆರು ತಿಂಗಳ ಬಾಡಿಗೆಯನ್ನು ಮುಂಗಡವಾಗಿ ಕೊಟ್ಟು ಮನೆಯನ್ನು ಗೊತ್ತುಪಡಿಸಲಾಯಿತು.

ಶ್ರೀರಾಮಕೃಷ್ಣರ ಆದೇಶಕ್ಕನುಸಾರ ಒಂದು ಶುಭದಿವಸ ಶ್ಯಾಮಪುಕುರದಿಂದ ಸಾಮಾನುಗಳನ್ನೆಲ್ಲ ಸಾಗಿಸಲಾಯಿತು. ೧೮೮೫ರ ಡಿಸೆಂಬರ್ ೧೧ರಂದು ಭಕ್ತರು ಶ್ರೀರಾಮಕೃಷ್ಣರನ್ನು ಕಾಶೀಪುರದ ತೋಟದ ಮನೆಗೆ ಕರೆತಂದರು.

ಇಲ್ಲಿಂದ ಶ್ರೀರಾಮಕೃಷ್ಣರ ಲೀಲಾನಾಟಕದ ಕೊನೆಯಂಕದ ಪ್ರಾರಂಭ. ಇನ್ನು ಒಂಬತ್ತು ತಿಂಗಳೊಳಗಾಗಿ, ಆಧ್ಯಾತ್ಮಿಕ ಇತಿಹಾಸದಲ್ಲೇ ಅಭೂತಪೂರ್ವವಾದ ಅವರ ಇಹಜೀವನ ಪರ್ಯವಸಾನಗೊಳ್ಳಲಿದೆ. ಕರ್ಪೂರವು ಬೆಳಕನ್ನೂ ಸುಗಂಧವನ್ನೂ ಸೂಸುತ್ತ ಉರಿದು ಮಾಯವಾಗುವಂತೆ ಶ್ರೀರಾಮಕೃಷ್ಣರು ಮಾನವಮಂಗಲಕ್ಕಾಗಿ ತಮ್ಮನ್ನು ಸಂಪೂರ್ಣವಾಗಿ ಸಮರ್ಪಿಸಿಕೊಂಡು ಅಂತರ್ಧಾನರಾಗುವ ದೃಶ್ಯವನ್ನು ನೋಡಲಿದ್ದೇವೆ. ಸಂತೆಗೆ ಹಣ್ಣು ಮಾರಲು ಬಂದಾತ ಮೊದಮೊದಲು ಸಾಕಷ್ಟು ಬೆಲೆಯೇರಿಸಿಯೇ ಮಾರುತ್ತಾನೆ. ಆದರೆ ಸೂರ್ಯ ಮುಳುಗುತ್ತ ಬಂದು ಇನ್ನೇನು ಸಂತೆ ಮುಗಿಯುತ್ತದೆ ಎನ್ನುವಂತಾದಾಗ ಅವನ ಧೋರಣೆ ಬದಲಾಗುತ್ತದೆ. ಉಳಿದ ಹಣ್ಣುಗಳನ್ನು ಆತುರಾತುರದಿಂದ ಕೇಳಕೇಳಿದಷ್ಟು ಬೆಲೆಗೆ ಮಾರಿ ಕೈಬೀಸಿಕೊಂಡು ಹೊರಟುಬಿಡುತ್ತಾನೆ ! ಈ ಮುಂದಿನ ಕೆಲತಿಂಗಳ ಅವಧಿಯಲ್ಲಿ ಶ್ರೀರಾಮಕೃಷ್ಣರ ವರ್ತನೆಯೂ ಹಾಗೆಯೇ ತೋರುತ್ತದೆ. ತಮ್ಮ ದೇಹಾಂತ್ಯಕಾಲ ಸನ್ನಿಹಿತವಾದುದರಿಂದಲೋ ಎಂಬಂತೆ ಇಮ್ಮಡಿ ಉತ್ಸಾಹದಿಂದ, ತಮ್ಮಲ್ಲಿ ಶರಣಾಗಿ ಬಂದವರಿಗೆಲ್ಲ ಅಮೂಲ್ಯ ಆಧ್ಯಾತ್ಮಿಕ ಸಂಪತ್ತನ್ನು ಧಾರಾಳವಾಗಿ ಧಾರೆಯೆರೆದರು. ಅವರ ಆಧ್ಯಾತ್ಮಿಕ ಶಕ್ತಿ

ಯಂತೂ ಹಿಂದೆಂದಿಗಿಂತಲೂ ಹೆಚ್ಚು ಪ್ರಕಾಶಮಾನವಾಗಿ ವ್ಯಕ್ತಗೊಂಡುದನ್ನು ಭಕ್ತರೆಲ್ಲರೂ ಕಂಡು ಅನುಭವಿಸುತ್ತಿದ್ದರು. ತಮ್ಮ ಅವಸಾನಕಾಲದ ಕುರಿತಾಗಿ ಅವರು ಹಿಂದೆಯೇ ಅನೇಕ ಸೂಚನೆಗಳನ್ನಿತ್ತಿದ್ದರು: "ನಾನು ಹೋಗುವ ಮೊದಲು ಎಲ್ಲವನ್ನೂ (ಎಂದರೆ ತಮ್ಮ ದೈವತ್ವವನ್ನು) ಬಹಿರಂಗಪಡಿಸಿ ಹೋಗುತ್ತೇನೆ"; "ಇದರ (ತಮ್ಮ) ಕೊನೆಗಾಲದ ಹೊತ್ತಿಗೆ, ಭಕ್ತರಲ್ಲಿ ಅಂತರಂಗ ವಲಯಕ್ಕೆ ಸೇರಿದವರು, ಬಹಿರಂಗ ವಲಯಕ್ಕೆ ಸೇರಿದವರು ಎಂದು ಎರಡು ಗುಂಪುಗಳಾಗಿ ವಿಂಗಡನೆಯಾಗಿಬಿಡುತ್ತದೆ" ಇತ್ಯಾದಿ. ಇವಲ್ಲದೆ, ತಮ್ಮ ದೇಹಾಂತ್ಯವಾದ ಬಳಿಕ ನರೇಂದ್ರಾದಿ ತರುಣರು ಸರ್ವ ಸಂಗಪರಿತ್ಯಾಗ ಮಾಡಿ ಸಂನ್ಯಾಸಿಗಳಾಗುತ್ತಾರೆ ಎಂಬುದರ ಸೂಚನೆಯನ್ನೂ ಅವರು ಈ ಮುಂದಿನ ದಿನಗಳಲ್ಲಿ ನೀಡಿದರು. ಈ ಎಲ್ಲ ಮಾತುಗಳೂ ಒಂದಾದ ಮೇಲೊಂದರಂತೆ ಸತ್ಯವಾಗಿ ಪರಿಣಮಿಸಿದ್ದನ್ನು ಭಕ್ತರು ನೋಡಿದರು.

ಕಾಶೀಪುರದ ತೋಟದ ಮನೆಯಿರುವುದು ಬಾಗ್‌ಬಜಾರ್ ಮತ್ತು ಬಾರಾನಾಗೋರುಗಳನ್ನು ಕೂಡಿಸುವ ಮುಖ್ಯರಸ್ತೆಯಲ್ಲಿ. ಸುಮಾರು ಐದು ಎಕರೆ ವಿಸ್ತೀರ್ಣದ ಮನೋಹರ ಉದ್ಯಾನದ ನಡುವೆ ಎರಡಂತಸ್ತಿನ ಮನೆ. ತೋಟದ ಸುತ್ತಲೂ ಇದ್ದ ಎತ್ತರದ ಗೋಡೆ ಒಳಗೆ ನಿರ್ಜನತೆ–ಶಾಂತತೆಗಳ ಭಾವನೆಯನ್ನು ಮೂಡಿಸುತ್ತಿತ್ತು. ಮಹಾದ್ವಾರದಿಂದ ಕಟ್ಟಡದವರೆಗಿನ ಹಾದಿಯ ಇಕ್ಕೆಲದಲ್ಲೂ ಭವ್ಯವಾದ ಸಾರುವೆ (ಝಾವುಕ) ಮರಗಳು. ಇದರ ಬಲಕ್ಕೆ ಸ್ವಲ್ಪ ದೂರದಲ್ಲಿ, ಸೋಪಾನಗಳಿಂದ ಕೂಡಿದ ಒಂದು ದೊಡ್ಡ ಕೊಳ. ಕಟ್ಟಡದ ಸಮೀಪದಲ್ಲಿ ಎಡಕ್ಕೆ ಇನ್ನೊಂದು ಚಿಕ್ಕ ಕೊಳ. ಅಲ್ಲಲ್ಲಿ ಮಾವು, ಲೀಚಿ (ಕಣ್ಗುಡ್ಡೆ ಹಣ್ಣು), ಹಲಸು ಮುಂತಾದ ಹಣ್ಣಿನ ಮರಗಳೂ ಹೂವಿನ ಮರಗಳೂ ಬೆಳೆದು ನಿಂತಿದ್ದುವು. ಕೊಳದ ಸಮೀಪ ತರಕಾರಿ ಗಿಡಗಳಿದ್ದುವು. ಅಲ್ಲಲ್ಲಿ ಕಣ್ತಣಿಸುವ ಹಚ್ಚನೆಯ ಹುಲ್ಲುಹಾಸುಗಳು. ಇವುಗಳ ನಡುವೆ ಅಚ್ಚುಕಟ್ಟಾದ ಕಾಲ್ದಾರಿಗಳು. ಮುಖ್ಯ ಕಟ್ಟಡವಲ್ಲದೆ ಹಿಂಬದಿಯಲ್ಲಿ ಒಂದೆರಡು ಮನೆಗಳು ('ಔಟ್‌ಹೌಸು'ಗಳು), ಕುದುರೆಲಾಯ ಇವೆಲ್ಲ ಇದ್ದುವು.

ಆಹ್ಲಾದಕರ ವಾತಾವರಣದಿಂದ ಕೂಡಿದ ಈ ವಿಶಾಲ ಉದ್ಯಾನವನ್ನು ಪ್ರವೇಶಿಸಿದೊಡನೆಯೇ ಶ್ರೀರಾಮಕೃಷ್ಣರು ಅತ್ಯಂತ ಸಂತುಷ್ಟರಾದರು. ಬಳಿಕ ಮಾಳಿಗೆಯನ್ನೇರಿ ನಿಂತು ಸ್ವಲ್ಪ ಹೊತ್ತು ದೃಷ್ಟಿ ಹಾಯಿಸುತ್ತ ಉದ್ಯಾನದ ಶೋಭೆಯನ್ನು ಆಸ್ವಾದಿಸಿದರು. ಶಾರದಾದೇವಿಯವರು ಕೂಡ, ಶ್ಯಾಮಪುಕುರದ ಮನೆಯಂತಲ್ಲದೆ ಇಲ್ಲಿ ಹೆಚ್ಚು ನಿರಾಳವಾಗಿ ಓಡಾಡಿಕೊಂಡು ಮನಸ್ತೃಪ್ತಿಯಾಗುವಂತೆ ಪತಿಸೇವೆ ಮಾಡಬಹುದು ಎಂದು ಸಮಾಧಾನ ತಳೆದರು. ಅವರಿಬ್ಬರ ಸಂತಸವನ್ನು ಕಂಡು ಭಕ್ತರೆಲ್ಲ ಧನ್ಯರಾದೆವೆಂದುಕೊಂಡರು.

ಉದ್ಯಾನಗೃಹದ ಕೆಳ ಅಂತಸ್ತಿನಲ್ಲಿ ನಾಲ್ಕು ಕೋಣೆಗಳೂ ಮೇಲಂತಸ್ತಿನಲ್ಲಿ ನಾಲ್ಕು ಕೋಣೆಗಳೂ ಇದ್ದುವು. ಮೇಲಂತಸ್ತಿನಲ್ಲಿದ್ದ ದೊಡ್ಡ ಕೋಣೆಯನ್ನು ಶ್ರೀರಾಮಕೃಷ್ಣರಿಗಾಗಿ ಸಜ್ಜುಗೊಳಿಸಲಾಯಿತು. ಅವರ ಪರಿಚರ್ಯೆ ಮಾಡುತ್ತಿದ್ದ ಯುವಕರು, ಅದರ ಪಕ್ಕದ ಚಿಕ್ಕ ಕೋಣೆಯನ್ನು ರಾತ್ರಿ ವೇಳೆಯಲ್ಲಿ ಉಪಯೋಗಿಸುತ್ತಿದ್ದರು. ದೊಡ್ಡ ಕೋಣೆಯ ಇನ್ನೊಂದು ಪಕ್ಕದಲ್ಲಿ ಛಾವಣಿಯಿಲ್ಲದ ವಿಶಾಲ ಹಜಾರವಿತ್ತು. ಶ್ರೀರಾಮಕೃಷ್ಣರು ಕೆಲವೊಮ್ಮೆ ಅಲ್ಲಿ ಕುಳಿತುಕೊಳ್ಳುತ್ತಿದ್ದರು, ಅಡ್ಡಾಡುತ್ತಿದ್ದರು. ಕೆಳ ಅಂತಸ್ತಿನ ಎರಡು ಕೋಣೆಗಳನ್ನು ಭಕ್ತರು ಉಳಿದುಕೊಳ್ಳುವುದಕ್ಕಾಗಿ, ಹಾಗೂ ಉಳಿದ

ಒಂದು ಪುಟ್ಟ ಕೋಣೆಯನ್ನು ಶಾರದಾದೇವಿಯವರಿಗಾಗಿ ಸಿದ್ಧಪಡಿಸಲಾಯಿತು.

ಹೊಸ ಜಾಗಕ್ಕೆ ಹೊಂದಿಕೊಳ್ಳಲು ಎಲ್ಲರಿಗೂ ಕೆಲದಿನವೇ ಬೇಕಾಯಿತು. ಕ್ರಮೇಣ ಕೆಲಸಕಾರ್ಯಗಳೆಲ್ಲ ಒಂದು ಕ್ರಮಕ್ಕೆ ಬರತೊಡಗಿದುವು. ಈಗ ಕೆಲವು ಸಮಸ್ಯೆಗಳೆದ್ದುವು. ಶಿಷ್ಯರ ವಾಸಸ್ಥಳಗಳಿದ್ದುದು ಈ ಕಾಶೀಪುರದ ಮನೆಯಿಂದ ಸಾಕಷ್ಟು ದೂರದಲ್ಲಿ. ಅವರು ಅಷ್ಟು ದೂರದಿಂದ ಓಡಾಡಿಕೊಂಡು ಶ್ರೀರಾಮಕೃಷ್ಣರ ಸೇವೆ ಮಾಡಲು ಸಾಧ್ಯವಿರಲಿಲ್ಲ. ಅವರು ಸಮಾಧಾನಕರ ರೀತಿಯಲ್ಲಿ ಸೇವೆ ಸಲ್ಲಿಸಬೇಕೆಂದರೆ ಕಾಶೀಪುರದ ಮನೆಯಲ್ಲೇ ಉಳಿದುಕೊಳ್ಳಬೇಕಾಗುತ್ತದೆ. ಅಲ್ಲದೆ ಈಗ ಪರಿಚಾರಕರು ಇನ್ನೂ ಹೆಚ್ಚಿನ ಸಂಖ್ಯೆಯಲ್ಲಿ ಬೇಕಾಗಿದ್ದರು. ಎಂದ ಮೇಲೆ ಖರ್ಚೂ ಹೆಚ್ಚಾಗುವುದು ಅನಿವಾರ್ಯ. ಈ ಅಂಶಗಳೆಲ್ಲ ಶಿಷ್ಯರ ನಾಯಕ ನರೇಂದ್ರನ ಗಮನಕ್ಕೆ ಬಂದಿದ್ದುವು. ಇವೆರಡು ವಿಷಯಗಳಿಗೂ ಮೊದಲಿನಿಂದಲೇ ಗಮನ ಕೊಡ ದಿದ್ದರೆ ಮುಂದೆ ತೊಂದರೆ ಉದ್ಭವಿಸಬಹುದು ಎಂದು ಅವನು ಊಹಿಸಿದ್ದ. ಹಣ ಕಾಸಿನ ವಿಷಯದಲ್ಲಂತೂ ಅವನೇನೂ ಮಾಡುವಂತಿರಲಿಲ್ಲ; ಅದನ್ನು ಹಿರಿಯ ಗೃಹೀಭಕ್ತರಿಗೆ ಬಿಟ್ಟುಬಿಡುವುದೊಂದೇ ಮಾರ್ಗ. ಆದರೆ ಅವನೀಗ ತನ್ನ ತರುಣ ಗುರು ಭಾಯಿಗಳ ವಿಷಯದಲ್ಲಿ ಮತ್ತಷ್ಟು ಎಚ್ಚರದಿಂದ ಮುಂದುವರಿಯಬೇಕಾಗಿತ್ತು. ಅವರ ನ್ನೆಲ್ಲ ಈಗ ಸರಿಯಾದ ಉಪಾಯದಿಂದ ಹಿಡಿದಿಟ್ಟುಕೊಳ್ಳದಿದ್ದರೆ, ತಾಯ್ತಂದೆಯರ ಒತ್ತಾಯಕ್ಕೆ ಮಣಿದು, ಮತ್ತು ವಿದ್ಯಾಭ್ಯಾಸ–ಉದ್ಯೋಗಗಳ ಚಿಂತೆಯಿಂದ, ಅವರೆಲ್ಲ ಕೈತಪ್ಪಿಹೋಗುವ ಸಂಭವವಿತ್ತು. ಶ್ಯಾಮಪುಕುರದ ಮನೆಯ ದಿನಗಳಿಗಿಂತ ಈಗಿನ ಸಂದರ್ಭ ಇನ್ನಷ್ಟು ಕ್ಲಿಷ್ಟವಾಗಿತ್ತು. ಆದ್ದರಿಂದ ಆ ತರುಣರಿಗೆ ಹೆಚ್ಚಿನ ಸ್ಫೂರ್ತಿ ನೀಡುತ್ತ ಅವರನ್ನು ಒಟ್ಟಾಗಿರಿಸಲು ತಾನು ದಿನದಲ್ಲಿ ಹೆಚ್ಚೆಚ್ಚು ಸಮಯವನ್ನು ಕಾಶೀಪುರದಲ್ಲೇ ಕಳೆಯಲು ಸಿದ್ಧನಾದ ನರೇಂದ್ರ.

ಅವನ ಪಾಲಿಗೆ ಇದೊಂದು ಕಠಿಣ ಸಂಕ್ರಮಣಕಾಲ. ಅತ್ತ ಅವನ ಮನೆಮಂದಿ ತಮ್ಮೆಲ್ಲ ಅಗತ್ಯಗಳಿಗೆ ಅವನ ಸಂಪಾದನೆಯನ್ನೇ ಅವಲಂಬಿಸಿಕೊಂಡು ಕುಳಿತಿದ್ದಾರೆ. ಜೊತೆಗೆ ತಮ್ಮ ಮನೆಯನ್ನು ಮೋಸದಿಂದ ಕಿತ್ತುಕೊಂಡಿರುವ ಬಂಧುಗಳಿಂದ ಅದನ್ನು ಬಿಡಿಸಿಕೊಳ್ಳಲು ಅವನು ಕೋರ್ಟಿಗೆ ಅಲೆದಾಡಬೇಕಾಗಿದೆ. ಅಷ್ಟೇ ಅಲ್ಲ, ಇನ್ನೂ ಬಗೆ ಬಗೆಯ ತೊಂದರೆಗಳ ಹಿಡಿತಕ್ಕೆ ಸಿಕ್ಕಿಕೊಂಡಿದ್ದಾನೆ. ಒಬ್ಬ ಜವಾಬ್ದಾರಿಯುತ ಯುವಕ ನಂತೆ ಅವನೀಗ ತನ್ನ ಗಮನವನ್ನೆಲ್ಲ ಅತ್ತ ಹರಿಸಬೇಕಾದುದೇ ಸಹಜ. ಆದರೆ ಅವನ ಅಂತರಂಗದಲ್ಲಿ ಒಂದು ಧ್ವನಿ ಕೇಳಿಬರುತ್ತಿದೆ—ತಾನು ಅಸಂಖ್ಯಾತ ಸಹಮಾನವರ ಶ್ರೇಯಸ್ಸಿಗಾಗಿ ತನ್ನ ಭವಿಷ್ಯ ಜೀವನವನ್ನೆಲ್ಲ ಸವೆಸಿ ಮುಗಿಸಬೇಕಾಗಿದೆ; ಹಾಗಿರುವಾಗ, ತನ್ನ ಜೀವಮಾನದ ಅತಿ ಮುಖ್ಯವಾದ ವರ್ಷಗಳನ್ನು ಕೇವಲ ಕೆಲವು ರಕ್ತಸಂಬಂಧಿ ಗಳಿಗಾಗಿ ವ್ಯಯಿಸಿ ವ್ಯರ್ಥವಾಗಿಸಲು ಸಾಧ್ಯವೆ? ಆದ್ದರಿಂದ ತನ್ನ ವಕೀಲಿ ಪರೀಕ್ಷೆ ಯನ್ನು ಮುಗಿಸಿ ಎರಡು ಮೂರು ವರ್ಷಗಳ ಕಾಲ ದುಡಿದು ಚೆನ್ನಾಗಿ ಸಂಪಾದಿಸಿ, ತನ್ನ ತಾಯಿಗೂ ಪುಟ್ಟ ತಮ್ಮಂದಿರಿಗೂ ಅಶನ-ವಸನಗಳಿಗಾಗಿ ಒಂದು ವ್ಯವಸ್ಥೆ ಮಾಡಿ, ಬಳಿಕ ಭಗವತ್ಸಾಕ್ಷಾತ್ಕಾರಕ್ಕಾಗಿ ಸಂಸಾರ ತೊರೆದು ಸಂನ್ಯಾಸಿಯಾಗಿಬಿಡಬೇಕು— ಎಂದು ಮೊರೆಯುತ್ತಿದೆ ಆ ಅಂತರ್ವಾಣಿ.

ಇತ್ತ ಯುವಶಿಷ್ಯರೆಲ್ಲ ನರೇಂದ್ರನ ಪ್ರಚೋದನೆಯಿಂದ ಮತ್ತೆ ಒಗ್ಗೂಡಿ ಹೆಚ್ಚಿನ ಶ್ರದ್ಧಾಭಕ್ತಿಗಳಿಂದ ಹಗಲಿರುಳೂ ಶ್ರೀರಾಮಕೃಷ್ಣರ ಸೇವೆಯಲ್ಲಿ ನಿರತರಾದರು. ಬಿಡು

ವಿನ ವೇಳೆಯಲ್ಲೆಲ್ಲ ನರೇಂದ್ರ ಅವರನ್ನು ಸೇರಿಸಿ ಧ್ಯಾನ ಜಪ ಅಧ್ಯಯನ ವಿಚಾರ ವಿನಿಮಯ ಭಜನೆ ಇವುಗಳಲ್ಲಿ, ಅಥವಾ ಇದಾವುದೂ ಇಲ್ಲದಿದ್ದಾಗ ಆತ್ಮೀಯ ಸಂಭಾಷಣೆಯಲ್ಲಿ ತೊಡಗಿಸುತ್ತಿದ್ದ. ಆ ಉತ್ಕಟ ಆನಂದದ ವಾತಾವರಣದಲ್ಲಿ ಮೈಮರೆತು ಅವರಿಗೆ ಗಂಟೆಗಳು, ದಿನಗಳು, ತಿಂಗಳುಗಳು ಉರುಳುತ್ತಿರುವುದರ ಪರಿವೆಯೇ ಇಲ್ಲದಂತಾಗಿತ್ತು. ಒಂದೆಡೆ ಶ್ರೀರಾಮಕೃಷ್ಣರ ಅಲೌಕಿಕ ಆಧ್ಯಾತ್ಮಿಕ ಶಕ್ತಿಯ ಪ್ರಕಾಶ ಮತ್ತು ಅಹೈತುಕ ಪ್ರೇಮದ ಆಕರ್ಷಣೆ; ಇನ್ನೊಂದೆಡೆ ಅದಕ್ಕೆ ಪೂರಕವಾಗಿ ನರೇಂದ್ರನ ಭ್ರಾತೃವಾತ್ಸಲ್ಯದ ಸೆಳೆತ ಹಾಗೂ ಅವನ ನಿರಂತರ ಸ್ಫೂರ್ತಿ-ಪ್ರೋತ್ಸಾಹ. ಇದರಿಂದಾಗಿ ಅವರೆಲ್ಲರ ನಡುವೆ ಒಂದು ಅಪೂರ್ವ ಆತ್ಮೀಯತೆಯ ಬಂಧವುಂಟಾಯಿತು. ಒಡಹುಟ್ಟಿದವರಿಗಿಂತ ಹೆಚ್ಚಿನ ಮಧುರ ಬಾಂಧವ್ಯದಿಂದ ಅವರು ಬಾಳತೊಡಗಿದರು. ಶ್ರೀರಾಮಕೃಷ್ಣರ ಸೇವೆಯನ್ನು ವ್ರತವಾಗಿ ಸ್ವೀಕರಿಸಿ, ಉದ್ಯಾನಗೃಹದಲ್ಲಿ ಹೀಗೆ ನೆಲೆನಿಂತ ಶಿಷ್ಯರೆಂದರೆ ನರೇಂದ್ರ, ರಾಖಾಲ, ಬಾಬುರಾಮ, ನಿರಂಜನ, ಲಾಟು, ತಾರಕನಾಥ, ಹಿರಿಯ ಗೋಪಾಲ (ಶಿಷ್ಯರಲ್ಲಿ ಇವನೊಬ್ಬನೇ ವಯಸ್ಕ), ಕಾಳೀಪ್ರಸಾದ, ಶಶಿಭೂಷಣ, ಶರಚ್ಚಂದ್ರ ಮತ್ತು ಕಿರಿಯ ಗೋಪಾಲ. ಇವರಲ್ಲದೆ ಹರಿನಾಥ, ಗಂಗಾಧರ, ಶಾರದಾಪ್ರಸನ್ನ ಮತ್ತಿತರ ಕೆಲವು ತರುಣರು ಸಾಧ್ಯವಾದಾಗಲೆಲ್ಲ ಬಂದು ಒಂದೆರಡು ದಿನ ಇದ್ದು ಹೋಗುತ್ತಿದ್ದರು.

ಇಲ್ಲಿ ಸ್ವಲ್ಪ ನಿಂತು ಗಮನಿಸಿ ನೋಡಿದರೆ ನಮ್ಮ ಮನದಲ್ಲೊಂದು ಪ್ರಶ್ನೆ ಮೂಡಬಹುದು. ಈ ಶಿಷ್ಯರೂ ಭಕ್ತರೂ ಸೇರಿ ಶ್ರೀರಾಮಕೃಷ್ಣರನ್ನು ನೋಡಿಕೊಳ್ಳುವ 'ಹೊಣೆ'ಯನ್ನು ಸಂಪೂರ್ಣವಾಗಿ ತಾವೇ ಹೊತ್ತುಕೊಂಡುಬಿಟ್ಟಿದ್ದಾರಲ್ಲ! ಎಲ್ಲವೂ ಇವರ ಇಚ್ಛಾನುಸಾರವೇ ನಡೆಯುತ್ತಿರುವಂತಿದೆಯಲ್ಲ! ಶ್ರೀರಾಮಕೃಷ್ಣರು ಕಾಯಿಲೆ ಬಿದ್ದಾಗಿನಿಂದ ಅವರ ಚಿಕಿತ್ಸೆ-ಶುಶ್ರೂಷೆಗಳಿಗೆ ಸಂಬಂಧಿಸಿದಂತೆ ಶಿಷ್ಯರು ಎಷ್ಟೆಲ್ಲ ಶ್ರಮ ವಹಿಸುತ್ತಿದ್ದಾರೆ; ಭಕ್ತರು ಎಷ್ಟೆಲ್ಲ ಖರ್ಚು ಮಾಡುತ್ತಿದ್ದಾರೆ. ಇದನ್ನೆಲ್ಲ ನೋಡಿಕೊಂಡು ಶ್ರೀರಾಮಕೃಷ್ಣರು ಸುಮ್ಮನೆಯೇ ಇದ್ದರೆ ? ದಕ್ಷಿಣೇಶ್ವರದಲ್ಲಿರುವವರೆಗೆ ಅವರು ಪ್ರತಿಯೊಂದು ವಿಷಯದಲ್ಲೂ ಹೇಗೆ ಜಗನ್ಮಾತೆಯ ಇಚ್ಛೆಯನ್ನು ಅವಲಂಬಿಸಿಕೊಂಡಿದ್ದರು ಎಂಬುದನ್ನು ನೋಡಿದ್ದೇವೆ. ಅಂಥವರೀಗ ಅಸಹಾಯಕರಂತೆ ಭಕ್ತವರ್ಗದ ನೆರವನ್ನು ನೆಚ್ಚಿಕೊಂಡು ಜೀವಿಸತೊಡಗಿದರೆ ?. . .

ಇಲ್ಲ! ಶ್ರೀರಾಮಕೃಷ್ಣರ ಮನಸ್ಥಿತಿಯಲ್ಲಾಗಲಿ, ಧೋರಣೆಯಲ್ಲಾಗಲಿ ಯಾವ ವ್ಯತ್ಯಯವೂ ಇರಲಿಲ್ಲ. ಮೇಲ್ನೋಟಕ್ಕೆ ಅವರು ಭಕ್ತವೃಂದದ ನೆರವನ್ನು ನೆಚ್ಚಿಕೊಂಡಿದ್ದಂತೆ ಕಾಣುತ್ತದೆ. ಆದರೆ ನಿಜಕ್ಕೂ ಅವರು ಹಿಂದಿನಂತೆಯೇ ಸಂಪೂರ್ಣವಾಗಿ ಜಗನ್ಮಾತೆಯಲ್ಲಿ ನಿರ್ಭರರಾಗಿ ನಿರಾತಂಕದಿಂದಿದ್ದುಬಿಟ್ಟಿದ್ದರು. ಆಕೆಯ ಇಚ್ಛಾನುಸಾರ ತಾವು ಯಾವಯಾವ ಭಕ್ತನಿಂದ ಎಷ್ಟೆಷ್ಟು ಸೇವೆಯನ್ನು ಸ್ವೀಕರಿಸಬೇಕು ಎನ್ನುವುದು ಅವರಿಗೆ ಸ್ಪಷ್ಟವಾಗಿ ತಿಳಿದಿತ್ತು. ಮತ್ತು ತಾವು ಸ್ವೀಕರಿಸಿದ ಸೇವೆ ಆ ಭಕ್ತರ ಪರಮ ಶ್ರೇಯಸ್ಸಿಗೆ ಕಾರಣವಾಗುತ್ತದೆ ಎನ್ನುವುದರ ಅರಿವೂ ಅವರಿಗಿತ್ತು. ಆದ್ದರಿಂದಲೇ ಅವರು ಭಕ್ತರಿಗೆ ಈ ವಿಷಯದಲ್ಲಿ ಸ್ವಾತಂತ್ರ್ಯಕೊಟ್ಟದ್ದು ಎನ್ನುವುದು ವಾಸ್ತವಾಂಶ.

ಅದೂ ಅಲ್ಲದೆ, ಈ ಭಕ್ತರ-ಶಿಷ್ಯರ ಶಕ್ತಿಯ ಇತಿಮಿತಿಯೇನು, ಇವರು ಏನು ಮಾಡಿದರೆ ಎಷ್ಟು ಮಾಡಿದರೆ ಲೇಸು, ಎನ್ನುವುದರ ಅಸಾಮಾನ್ಯ ಪರಿವೆ ಶ್ರೀರಾಮಕೃಷ್ಣರಿಗಿತ್ತು. ಮತ್ತು ಪ್ರತಿಯೊಂದು ಕಾರ್ಯದ ಯುಕ್ತಾಯುಕ್ತತೆಯನ್ನು ಮೊದಲೇ

ಸೂಕ್ಷ್ಮವಾಗಿ ವಿವೇಚಿಸಿ ಭಕ್ತರಿಗೆ ಮಾರ್ಗದರ್ಶನ ಮಾಡುತ್ತಿದ್ದರು. ಉದಾಹರಣೆಗೆ ಅವರು ಚಿಕಿತ್ಸೆಗಾಗಿ ದಕ್ಷಿಣೇಶ್ವರದಿಂದ ಕಲ್ಕತ್ತಕ್ಕೆ ಬರಬೇಕಾದಾಗ ಬಲರಾಮುನನ್ನು ಕರೆದು ಹೇಳಿದ್ದರು: "ನೋಡು, ಕಲ್ಕತ್ತದಲ್ಲಿ ನಾಲ್ಕಾರು ಜನ ಸೇರಿ ಚಂದಾ ಹಾಕಿ ನನ್ನ ಊಟತಿಂಡಿಯ ವ್ಯವಸ್ಥೆ ಮಾಡುವಂತಾಗಬಾರದು. ಅದು ನನಗೆ ಒಪ್ಪಿಗೆಯಿಲ್ಲ. ಈ ಹಿಂದೆಂದೂ ನಾನು ಹಾಗೆ ಮಾಡಿದವನಲ್ಲ. ನೀನು ಹೇಳಬಹುದು, 'ಆದರೆ ಈಗ ಕಾಳೀದೇವಾಲಯದ ಅಧಿಕಾರ ಅನೇಕರಲ್ಲಿ ಹಂಚಿಹೋಗಿ, ಅವರೆಲ್ಲರೂ ಸೇರಿ ಪೂಜಾದಿಗಳನ್ನು ನಿರ್ವಹಿಸುತ್ತಿದ್ದಾರಲ್ಲ, ಆದರೂ ನೀವು ದೇವಾಲಯದಿಂದ ಸಂಬಳ ವನ್ನೂ ಪ್ರಸಾದವನ್ನೂ ಸ್ವೀಕರಿಸುತ್ತೀರಲ್ಲ, ಇದು ಹೇಗೆ?' ಅಂತ. ಆದರೆ ನಾನು ಈಗಲೂ ವಂತಿಗೆಯನ್ನವಲಂಬಿಸಿ ಊಟ ಮಾಡಬೇಕಾಗಿಲ್ಲ ಎನ್ನುವುದು ಸತ್ಯ. ಏಕೆಂದರೆ ರಾಣಿ ರಾಸಮಣಿಯ ಕಾಲದಲ್ಲೇ ವ್ಯವಸ್ಥೆಯಾಗಿಹೋಗಿತ್ತು—ನಾನು ದಕ್ಷಿಣೇಶ್ವರದಲ್ಲಿರುವವರೆಗೂ ನನಗೆ ಪ್ರತಿದಿನ ತಪ್ಪದೆ ಪ್ರಸಾದವನ್ನೂ ತಿಂಗಳಿಗೆ ಏಳು ರೂಪಾಯಿಗಳನ್ನೂ ಕೊಡಬೇಕು ಅಂತ. ಹೀಗೆ ನಾನೀಗ ಒಂದು ರೀತಿಯಲ್ಲಿ ಪೆನ್ಶನ್ನಿನ ಮೇಲೆ ಜೀವಿಸುತ್ತಿದ್ದೇನೆ ಎನ್ನಬಹುದು. ಆದ್ದರಿಂದ, ನಾನು ದಕ್ಷಿಣೇಶ್ವರದಿಂದ ಹೊರ ಗಿರುವಾಗಲೂ ಈ ರೀತಿಯಲ್ಲೇ—ಎಂದರೆ ಒಬ್ಬನೇ ವ್ಯಕ್ತಿ ನನ್ನ ಖರ್ಚನ್ನು ವಹಿಸಿ ಕೊಳ್ಳುವ ವ್ಯವಸ್ಥೆ—ಮುಂದುವರಿಯಬೇಕು. ಇನ್ನು ಮೇಲೆ ನಾನು ಕಲ್ಕತ್ತದಲ್ಲಿರುವ ವರೆಗೂ ನನ್ನ ಊಟದ ಖರ್ಚನ್ನು ದಯವಿಟ್ಟು ನೀನೊಬ್ಬನೇ ವಹಿಸಿಕೊ." ಬಲರಾಮ ಆತ್ಯಾನಂದದಿಂದ ಇದಕ್ಕೊಪ್ಪಿ ಪ್ರಣಾಮ ಮಾಡಿದ.

ಹೀಗೆಯೇ, ಕಾಶೀಪುರದ ಉದ್ಯಾನಗೃಹಕ್ಕೆ ಹೋಗಬೇಕೆಂಬ ನಿರ್ಧಾರವಾದಾಗ, ಅದರ ಬಾಡಿಗೆಯೆಷ್ಟು ಎಂದು ಶ್ರೀರಾಮಕೃಷ್ಣರು ವಿಚಾರಿಸಿ ತಿಳಿದರು. ಬಾಡಿಗೆ ಸಾಕಷ್ಟು ದುಬಾರಿಯೇ—ತಿಂಗಳಿಗೆ ಎಂಬತ್ತು ರೂಪಾಯಿ. ಅಂಥಾ ದೊಡ್ಡ ಬಂಗಲೆಗೆ ಅಷ್ಟಾಗುವುದೇನೂ ಹೆಚ್ಚಲ್ಲ. ಆದರೆ ಆ ಖರ್ಚನ್ನು ಭರಿಸುವ ಶಕ್ತಿ ಎಷ್ಟು ಭಕ್ತರಿ ಗಿದ್ದೀತು? ಅವರ ಭಕ್ತಿಯೇನೋ ದೊಡ್ಡದೇ, ಸಂಶಯವಿಲ್ಲ. ಆದರೆ ದುಡ್ಡು? ಹೆಚ್ಚಿನವರೆಲ್ಲ ಸಾಕಷ್ಟು ಪ್ರಯಾಸದಿಂದಲೇ ತಮ್ಮ ಸಂಸಾರರಥಗಳನ್ನು ಎಳೆಯುತ್ತಿದ್ದ ವರು. ಹತ್ತು ರೂಪಾಯಿ ದೇಣಿಗೆಯೆಂದರೂ ತಿಂಗಳ ಆದಾಯದಲ್ಲಿ ಶೇಕಡಾ ಹತ್ತ ರಷ್ಟಾಗಿಬಿಡುತ್ತದೆ. ಶ್ರೀರಾಮಕೃಷ್ಣರು ಸ್ವಲ್ಪ ಆಲೋಚಿಸಿ, ಭಕ್ತ ಸುರೇಂದ್ರನಾಥನನ್ನು ಸನಿಹಕ್ಕೆ ಕರೆಸಿಕೊಂಡು ನುಡಿದರು: "ನೋಡು ಸುರೇಂದರ್, ಇವರೆಲ್ಲ ಅಲ್ಪ ಆದಾ ಯದ ಸಾಮಾನ್ಯ ಗುಮಾಸ್ತೆಗಳು, ದೊಡ್ಡ ಸಂಸಾರಗಳುಳ್ಳವರು. ತಮ್ಮತಮ್ಮ ಸಂಸಾರ ನಿಭಾಯಿಸುವುದಕ್ಕೇ ಇವರಿಗೆ ಕಷ್ಟ. ಇನ್ನು ಅಷ್ಟೊಂದು ಹಣವನ್ನು ಇವರು ಹೇಗೆ ತಾನೆ ಕೂಡಿಸಿಯಾರು? ಆದ್ದರಿಂದ ಬಾಡಿಗೆಯಷ್ಟನ್ನೂ ನೀನೇ ಕೊಟ್ಟುಬಿಡು." ಶ್ರೀರಾಮಕೃಷ್ಣರು ತಾವಾಗಿಯೇ ಕರೆದು ತನಗೆ ಸೇವಾವಕಾಶ ನೀಡಿದ್ದನ್ನು ಕಂಡು ಸುರೇಂದ್ರನಿಗಾದ ಸಂತೋಷ ಅಪಾರ. ಕೂಡಲೇ ಆತ ಕೈಜೋಡಿಸಿ, "ತಮ್ಮ ಚಿತ್ತ!" ಎಂದು ತಲೆಬಾಗಿದ.

ಮತ್ತೊಂದು ದಿನ, ತಮ್ಮ ಬಳಿಯಲ್ಲಿದ್ದ ಆಪ್ತಶಿಷ್ಯರೊಂದಿಗೆ ಮಾತನಾಡುತ್ತ ಶ್ರೀರಾಮಕೃಷ್ಣರು, "ಕಾಯಿಲೆ ಹೀಗೇ ಹೆಚ್ಚಾದರೆ ದೇಹಬಾಧೆ ತೀರಿಸಿಕೊಳ್ಳಲೂ ಹೊರಗೆ ಹೋಗಲು ಸಾಧ್ಯವಾಗದಿರಬಹುದು" ಎಂದು ಹೇಳುತ್ತಿದ್ದರು. ಶಿಷ್ಯರೆಲ್ಲ ದುಃಖದಿಂದ ಮೌನವಾಗಿ ಆಲಿಸುತ್ತಿದ್ದಾರೆ; ಆಗ ತರುಣ ಲಾಟು ಒಡನೆಯೇ ತನ್ನ

ಮುರುಕಲು ಬಂಗಾಳೀ ಭಾಷೆಯಲ್ಲಿ ಸರಳ ಗಾಂಭೀರ್ಯದಿಂದ, "ಸ್ವಾಮಿ ! ಇದೋ ನಾನಿದ್ದೇನೆ ನಿಮ್ಮ ತೋಟಿಯಾಗಿ !" ಎಂದು ಉದ್ಗರಿಸಿದ. (ಆತ ಹುಟ್ಟಿನಿಂದ ಬಿಹಾರಿ. ಆದ್ದರಿಂದ ಅವನ ಬಂಗಾಳೀ ಭಾಷೆಯ ಉಚ್ಚಾರಣೆಯಲ್ಲಿ ಏನೋ ಒಂದು ಬಗೆಯ ಸೊಗಸು—ಮಕ್ಕಳ ತೊದಲ್ನುಡಿಯಂತೆ.) ಲಾಟು ಬಾಯ್ಬಿಚ್ಚುತ್ತಿದ್ದುದೇ ಅಪರೂಪ. ಅಂಥವನು ಈಗ, ಮಿಕ್ಕವರೆಲ್ಲ ಮೌನವಾಗಿರುವಾಗ, ಇದ್ದಕ್ಕಿದ್ದಂತೆ ಆಡಿದ ಆ ಮಾತು ಶ್ರೀರಾಮಕೃಷ್ಣರೂ ಸೇರಿದಂತೆ ಎಲ್ಲರ ಮುಖದಲ್ಲೂ ಕಿರುನಗೆ ಮೂಡಿಸಿತು.

ಕಾಶೀಪುರಕ್ಕೆ ಬಂದ ಕೆಲದಿನಗಳ ಮೇಲೆ ಒಂದು ದಿನ ಶ್ರೀರಾಮಕೃಷ್ಣರು ಮಾಳಿಗೆಯಿಂದ ಕೆಳಗಿಳಿದು ಬಂದು ತೋಟದಲ್ಲಿ ಸ್ವಲ್ಪ ಹೊತ್ತು ಅಡ್ಡಾಡಿದರು. ಭಕ್ತರೆಲ್ಲ ಇದನ್ನು ಕಂಡು ಬಹಳ ಸಂತೋಷಪಟ್ಟರು. ಪ್ರತಿದಿನವೂ ಹೀಗೆಯೇ ಹವಾ ಸೇವನೆ ಮಾಡಿದರೆ ಅವರು ಬೇಗ ಆರೋಗ್ಯವಂತರಾಗುತ್ತಾರೆ ಎಂಬ ಆಶಾಭಾವನೆ ಭಕ್ತರದು. ಆದರೆ ದುರದೃಷ್ಟದಿಂದ, ಹಾಗಾಗುವ ಬದಲು ಮರುದಿನ ಇನ್ನಷ್ಟು ನಿಶ್ಶಕ್ತಿಯೇ ತೋರಿತು. ತಂಗಾಳಿಗೆ ಮೈಯೊಡ್ಡಿದ್ದರಿಂದಲೋ ಏನೋ, ಶೀತವೂ ಆಯಿತು. ಮತ್ತೆ ಕೆಲದಿನ ಓಡಾಟ ಸಾಧ್ಯವಾಗಲಿಲ್ಲ. ಡಾಕ್ಟರುಗಳು ಬಂದು ಚಿಕಿತ್ಸೆ ನೀಡಿದ ಮೇಲೆ ಶ್ರೀರಾಮಕೃಷ್ಣರು ಸ್ವಲ್ಪ ಚೇತರಿಸಿಕೊಂಡರು.

ಯುವಕಭಕ್ತರಲ್ಲಿ ಯಾರ್ಯಾರು ಯಾವಯಾವ ಕೆಲಸವನ್ನು ಮಾಡಬೇಕು ಎನ್ನುವುದನ್ನು ನರೇಂದ್ರ ಗೊತ್ತುಪಡಿಸಿದ್ದ. ಪ್ರತಿದಿನವೂ ನಗರಕ್ಕೆ ಹೋಗಿ ಶ್ರೀರಾಮ ಕೃಷ್ಣರ ದೇಹಸ್ಥಿತಿಯ ಬಗ್ಗೆ ಡಾಕ್ಟರಿಗೆ ವರದಿ ಒಪ್ಪಿಸುವುದು, ಹಾಗೆಯೇ ಅಗತ್ಯವಿರುವ ವಸ್ತುಗಳನ್ನು ತರುವುದು, ಮನೆಯನ್ನೆಲ್ಲ ಚೊಕ್ಕಟಗೊಳಿಸುವುದು, ಸರದಿಯ ಪ್ರಕಾರ ನಿರಂತರವೂ ಶ್ರೀರಾಮಕೃಷ್ಣರ ಪರಿಚರ್ಯೆ ಮಾಡುವುದು—ಇವೆಲ್ಲವನ್ನೂ ಯುವ ಕರು ನರೇಂದ್ರನ ಮೇಲ್ವಿಚಾರಣೆಯಲ್ಲಿ ಅಚ್ಚುಕಟ್ಟಾಗಿ ನಡೆಸಿಕೊಂಡು ಬಂದರು.

ಇವರಿಗೆ ಪೂರಕವಾಗಿ ಗೃಹೀಭಕ್ತರೂ ತಮ್ಮ ಕರ್ತವ್ಯವನ್ನು ಶ್ರದ್ಧೆಯಿಂದ ನೆರ ವೇರಿಸುತ್ತಿದ್ದರು. ರಾಮಚಂದ್ರನ ಇಲ್ಲವೆ ಗಿರೀಶನ ಮನೆಯಲ್ಲಿ ಒಟ್ಟಾಗಿ ಸೇರಿ, ಯಾರ್ಯಾರು ಎಷ್ಟೆಷ್ಟು ಖರ್ಚನ್ನು ವಹಿಸಿಕೊಳ್ಳಲು ಸಾಧ್ಯ, ಎಷ್ಟೆಷ್ಟು ಸಮಯವನ್ನು ವಿನಿಯೋಗಿಸಲು ಸಾಧ್ಯ ಎಂದು ಚರ್ಚಿಸಿ, ಅದಕ್ಕನುಸಾರವಾಗಿ ಕೆಲಸಕಾರ್ಯಗಳನ್ನು ಯೋಜಿಸುತ್ತಿದ್ದರು. ಪ್ರತಿ ತಿಂಗಳೂ ಒಂದೇ ಮೊತ್ತದ ಹಣವನ್ನಾಗಲಿ, ಸಮಯವನ್ನಾ ಗಲಿ ವಿನಿಯೋಗಿಸಲು ಯಾರಿಗೂ ಸಾಧ್ಯವಿರಲಿಲ್ಲ. ಆದ್ದರಿಂದ ಹೀಗೆ ಮೊದಲೇ ಸೇರಿ ಯೋಜನೆ ಹೂಡುತ್ತಿದ್ದುದರಿಂದ ಆರ್ಥಿಕ ನಿರ್ವಹಣೆಯೂ ಸುಗಮವಾಗಿ ಸಾಗಿತು. ಇನ್ನು ಶ್ರೀರಾಮಕೃಷ್ಣರ ಪಥ್ಯದಡುಗೆಯನ್ನು ತಯಾರಿಸುವ ಹೊಣೆ, ಸಹಜವಾಗಿಯೇ ಶಾರದಾದೇವಿಯವರದಾಯಿತು. ಅವರಿಗೆ ಜೊತೆಕೊಡಲು ಮತ್ತು ಕೆಲಸದಲ್ಲಿ ನೆರ ವಾಗಲು ಶ್ರೀರಾಮಕೃಷ್ಣರ ಸೋದರಸೊಸೆಯಾದ ಲಕ್ಷ್ಮಿಯನ್ನು ಕರೆಸಿಕೊಳ್ಳಲಾಯಿತು. ಶ್ಯಾಮಪುಕುರದಲ್ಲಿದ್ದಂತೆಯೇ ಇಲ್ಲಿಯೂ ಅವರು ತಮ್ಮ ಕರ್ತವ್ಯವನ್ನು ಶಾಂತವಾಗಿ ನಡೆಸಿಕೊಂಡು ಬರತೊಡಗಿದರು.

ಶ್ರೀರಾಮಕೃಷ್ಣರು ಕಾಶೀಪುರದ ಉದ್ಯಾನಗೃಹಕ್ಕೆ ಬಂದು ಕೆಲದಿನಗಳಾಗಿವೆ. ಈಗ ಅವರು ತಮ್ಮ ತೀವ್ರ ಅನಾರೋಗ್ಯದ ನಡುವೆಯೂ ಹೇಗೆ ಭಕ್ತರ ಮೇಲೆ ಪ್ರೇಮ ವರ್ಷವನ್ನೇ ಕರೆಯುತ್ತಿದ್ದಾರೆ, ಮತ್ತು ಉನ್ನತ ಭಾವದಲ್ಲಿ ನೆಲೆಸಿ ಆತ್ಮಾನಂದಲೀನ ರಾಗಿದ್ದಾರೆ ಎಂಬುದರ ಪರಿಚಯ ಮಾಡಿಕೊಳ್ಳಲು ನಾವು ಮಹೇಂದ್ರನಾಥ ಗುಪ್ತನ 'ವಚನವೇದ'ದ ಪುಟವೊಂದನ್ನು ನೋಡಬೇಕು.

ಅಂದು ಡಿಸೆಂಬರ್ ೨೩. ಆ ದಿನ ಅವರ ಪ್ರೇಮವೆಂಬುದು ಎಲ್ಲ ಕಟ್ಟು ಗಳನ್ನೂ ಹರಿದು ಚಿಮ್ಮುತ್ತಿರುವಂತೆ ತೋರುತ್ತಿತ್ತು. ಅಂದು ನಿರಂಜನ, ಕಾಳೀಪದ, ಹಿರಿಯ ಗೋಪಾಲ, ಇಬ್ಬರು ಭಕ್ತೆಯರು—ಹೀಗೆ ಅನೇಕರನ್ನು ಸ್ಪರ್ಶದ ಮೂಲಕ ಹರಸಿ ವಿಶೇಷ ಕೃಪೆದೋರಿದರು. ಒಬ್ಬಳು ಭಕ್ತೆ ಆನಂದಾತಿಶಯದಿಂದ ಅಳುತ್ತ "ನೀವೆಷ್ಟು ದಯಾಪರರು!" ಎಂದು ಉದ್ಗಾರ ಮಾಡಿದಳು.

ಅದೇ ದಿನ ಸಂಜೆ ಅನೇಕ ಭಕ್ತರು ನೆರೆದಿದ್ದಾರೆ; ಮಹೇಂದ್ರನೊಂದಿಗೆ ಮಾತ ನಾಡುತ್ತ ಶ್ರೀರಾಮಕೃಷ್ಣರು ಇದ್ದಕ್ಕಿದ್ದಂತೆ ಕೇಳಿದರು:

"ಸರಿ, ಈ ಕಾಯಿಲೆ ವಾಸಿಯಾಗುವುದಕ್ಕೆ ಇನ್ನೆಷ್ಟು ದಿನ ಬೇಕು ಎಂದು ಹೇಳ ಬಲ್ಲೆಯಾ?"

ತಾವಿನ್ನು ಹೆಚ್ಚು ಕಾಲ ಈ ಶರೀರದಿಂದಿರುವುದಿಲ್ಲ ಎನ್ನುವುದು ಶ್ರೀರಾಮಕೃಷ್ಣರಿಗೆ ತಿಳಿಯದ ವಿಷಯವೆ! ಆದರೆ ಶಿಷ್ಯನನ್ನು ಪರೀಕ್ಷಿಸಲೆಂದೋ, ಕೀಟಲೆ ಮಾಡಲೆಂದೋ ಈ ಪ್ರಶ್ನೆ ಕೇಳುತ್ತಿರುವಂತಿದೆ.

ಮಹೇಂದ್ರ: "ಕಾಯಿಲೆ ಹೆಚ್ಚಾಗಿಬಿಟ್ಟಿದೆಯಲ್ಲ... ಕೆಲದಿನ ಬೇಕಾಗುತ್ತದೆ."

ಶ್ರೀರಾಮಕೃಷ್ಣರು: "ಎಷ್ಟು ದಿನ?"

ಮಹೇಂದ್ರ: "ಬಹುಶಃ ಒಂದು ಐದಾರು ತಿಂಗಳು..."

ಶ್ರೀರಾಮಕೃಷ್ಣರು (ಮಗುವಿನಂತೆ ಅಸಹನೆಗೊಂಡವರ ಹಾಗೆ): "ಏನು! ಇನ್ನೂ ಅಷ್ಟೊಂದು ದಿನವೆ?"

ಮಹೇಂದ್ರ: "ನಾನು ಹೇಳಿದ್ದು, ಸಂಪೂರ್ಣ ಗುಣಹೊಂದುವುದಕ್ಕೆ."

ಶ್ರೀರಾಮಕೃಷ್ಣರು: "ಓ ಹಾಗೋ, ಸದ್ಯ! ಅದು ಸರಿ, ಒಂದು ವಿಷಯವನ್ನು ವಿವರಿಸಬಲ್ಲೆಯಾ? ನನಗೆ ಇಷ್ಟೆಲ್ಲ ದರ್ಶನಗಳಾಗಿವೆ, ಮತ್ತೆ ಇಷ್ಟೆಲ್ಲ ಭಾವ, ಸಮಾಧಿ ಎಲ್ಲ ಆಗುತ್ತವೆ. ಆದರೂ ನನಗೆ ಇಂಥ ರೋಗ ಬಂದಿದೆಯಲ್ಲ ಏಕಿರಬಹುದು?"

ಮಹೇಂದ್ರ: "ನೀವು ಅಪಾರ ಯಾತನೆ ಅನುಭವಿಸುತ್ತಿರುವುದೇನೋ ನಿಜವೆ. ಆದರೆ ಇವಕ್ಕೂ ಒಂದು ಗೂಢಾರ್ಥವಿದೆ."

ಶ್ರೀರಾಮಕೃಷ್ಣರು: "ಏನದು ಹೇಳು?"

ಮಹೇಂದ್ರ: "ನಿಮ್ಮ ಈಗಿನ ಮಾನಸಿಕ ಸ್ಥಿತಿ ಪರಿವರ್ತನೆ ಹೊಂದುತ್ತ ನಿರಾಕಾರದೆಡೆಗೆ ವಾಲುತ್ತಿದೆ. ನೀವಾಗಿಯೇ ಇರಿಸಿಕೊಂಡಿದ್ದ 'ವಿದ್ಯಾ ಅಹಂ' ಕೂಡ ಲಯಹೊಂದುವುದರಲ್ಲಿದೆ."

ಶ್ರೀರಾಮಕೃಷ್ಣರು: "ಹೌದು ನಿಜ, ನಾನು ಮಾಡುತ್ತಿದ್ದ ಲೋಕಶಿಕ್ಷಣಕಾರ್ಯ ಮುಗಿಯುವುದರಲ್ಲಿದೆ. ಇನ್ನು ನನ್ನ ಕೈಯಲ್ಲಿ ಅದು ಸಾಧ್ಯವಿಲ್ಲ. ಎಲ್ಲವೂ ಭಗವನ್ಮಯವಾಗಿ ಕಂಡುಬರುತ್ತಿದೆ. ಕೆಲವೊಮ್ಮೆ ನನಗೆ ನಾನೇ ಹೇಳಿಕೊಳ್ಳುತ್ತೇನೆ, 'ಇನ್ಯಾರಿಗೆ ತಾನೆ ಉಪದೇಶ ಕೊಡುವುದು?' ಅಂತ. ಆದರೆ, ನೀನೇ ನೋಡುತ್ತಿದ್ದೀಯಲ್ಲ, ನಾನು ಈ ಮನೆಗೆ ಬಂದಮೇಲೆ ಎಷ್ಟೋ ತರಹದ ಭಕ್ತರೆಲ್ಲ ಬರಲಾರಂಭಿಸಿದ್ದಾರೆ. ಸದ್ಯ, ಶಶಧರ ಪಂಡಿತನ ಸಭೆಯ ಹಾಗೆ, 'ಇಂಥ ಸಮಯದಲ್ಲಿ ಇಂಥ ವಿಷಯದ ಮೇಲೆ ಉಪನ್ಯಾಸ' ಅಂತ 'ಸೈನ್ ಬೋರ್ಡು' ಹಾಕಬೇಕಾಗಿ ಬರುವುದಿಲ್ಲ ತಾನೆ!"

ಮಹೇಂದ್ರ ಶ್ರೀರಾಮಕೃಷ್ಣರಿಬ್ಬರೂ ನಕ್ಕರು.

ಮಹೇಂದ್ರ: "ಈ ಕಾಯಿಲೆ ಬಂದಿರುವುದರ ಹಿಂದೆ ಇನ್ನೂ ಒಂದು ಉದ್ದೇಶವಿದೆ—ಅದು ಶಿಷ್ಯರನ್ನು ಅಂತಿಮವಾಗಿ ವಿಂಗಡಣೆ ಮಾಡುವುದಕ್ಕಾಗಿ. ಈ ಭಕ್ತರು ಐದು ವರ್ಷಗಳ ತಪಸ್ಸಿನಿಂದ ಕೂಡ ಯಾವುದನ್ನು ಗಳಿಸಿಕೊಳ್ಳಲು ಸಾಧ್ಯವಿರಲಿಲ್ಲವೋ ಅದನ್ನು ಈ ಕೆಲವು ದಿನಗಳಲ್ಲೇ ಪಡೆದುಕೊಂಡುಬಿಟ್ಟಿದ್ದಾರೆ. ಅವರ ಭಕ್ತಿಯೆಂಬುದು ಬೃಹದಾಕಾರವಾಗಿ ಬೆಳೆಯುತ್ತಿದೆ."

ಶ್ರೀರಾಮಕೃಷ್ಣರು: "ಅದೇನೋ ನಿಜ; ಆದರೆ ನಿರಂಜನನನ್ನು ನೋಡು, ಇವನು ಕೆಲವು ದಿನ ಮನೆಗೆ ವಾಪಸು ಹೋಗಿಬಿಟ್ಟಿದ್ದನಲ್ಲ. (ನಿರಂಜನನಿಗೆ) ಏನಪ್ಪ, ನಿನಗೇನೆನಿಸುತ್ತದೆ, ಹೇಳು?"

ನಿರಂಜನ: "ಹಿಂದೆಯೂ ನಾನು ನಿಮ್ಮನ್ನು ಪ್ರೀತಿಸುತ್ತಿದ್ದೆ, ಖಂಡಿತವಾಗಿಯೂ.

ಆದರೆ ಈಗ ಮಾತ್ರ ನಿಮ್ಮನ್ನು ಬಿಟ್ಟು ಒಂದರೆಘಳಿಗೆಯೂ ಇರಲಾರೆ."

ಮಹೇಂದ್ರ: "ಆಹ! ಆಹ!.... ಈ ಯುವಕರೆಲ್ಲ ಎಂಥ ಅದ್ಭುತ ವ್ಯಕ್ತಿಗಳು ಎನ್ನುವುದನ್ನು ಒಂದು ದಿನ ಕಂಡುಕೊಂಡೆ."

ಶ್ರೀರಾಮಕೃಷ್ಣರು: "ಎಲ್ಲಿ?"

ಮಹೇಂದ್ರ: "ಒಂದು ದಿನ ಹೀಗೇ ಶ್ಯಾಮಪುಕುರದ ಮನೆಯಲ್ಲಿ ಒಂದು ಕಡೆ ನಿಂತು ಭಕ್ತರನ್ನೆಲ್ಲ ಗಮನಿಸಿ ನೋಡುತ್ತಿದ್ದೆ. ಆಗ ಈ ಯುವಕರಲ್ಲಿ ಒಬ್ಬೊಬ್ಬನೂ ಎಷ್ಟೆಷ್ಟು ದುಸ್ತರ ವಿಘ್ನಗಳಿಂದೆಲ್ಲ ಪಾರಾಗಿ ನಿಮ್ಮ ಸೇವೆಯಲ್ಲಿ ನಿರತನಾಗಿದ್ದಾನೆ ಎನ್ನುವುದು ನನ್ನ ಮನಸ್ಸಿಗೆ ಮೂರ್ತಿಮತ್ತಾಗಿ ಗೋಚರವಾಯಿತು."

ಈ ಮಾತುಗಳನ್ನಾಲಿಸುತ್ತ ಶ್ರೀರಾಮಕೃಷ್ಣರು ಭಾವಾವಿಷ್ಟರಾಗತೊಡಗಿದರು; ಕ್ರಮೇಣ ಸಮಾಧಿಸ್ಥರಾಗಿಬಿಟ್ಟರು.

* * * *

ಯುವಕಭಕ್ತರೆಲ್ಲ ತನುಮನಪೂರ್ವಕವಾಗಿ ತಮ್ಮನ್ನು ಗುರುಸೇವೆಗೆ ಸಮರ್ಪಿಸಿಕೊಂಡಿದ್ದುದೇನೋ ನಿಜವೆ. ಆದರೆ, ಮೇಲಿನ ಸಂಭಾಷಣೆಯಲ್ಲಿ ಮಹೇಂದ್ರನಾಥ ಹೇಳುವಂತೆ, ಅವರಲ್ಲಿ ಒಬ್ಬೊಬ್ಬನೂ ಎಷ್ಟೆಷ್ಟೋ ಅಡೆತಡೆಗಳನ್ನೆಲ್ಲ ಎದುರಿಸಿಯೇ ಬಂದಿದ್ದುದು. ಮೊದಮೊದಲು ಅವರ ತಾಯ್ತಂದೆಯರು ಅವರನ್ನು ಬೈದು, ವಾಪಸು ಮನೆಗಳಿಗೆ ಕರೆದೊಯ್ಯಲು ಪ್ರಯತ್ನಿಸಿದರು. ಆದರೆ ಇದರಿಂದ ಮಕ್ಕಳು ತಮಗೆ ಇನ್ನಷ್ಟು ವಿರೋಧವಾದಾರು ಎಂಬ ಶಂಕೆಯುಂಟಾದಾಗ, ನಯವಾದ ಮಾತುಗಳಿಂದ ಮನವೊಲಿಸುವ ಯತ್ನ ಮಾಡಿದರು. ಆದರೆ ಅದರಲ್ಲೂ ವಿಫಲರಾದರು. ಹೀಗಿದ್ದರೂ ಅವರು ತಮ್ಮ ಪ್ರಯತ್ನವನ್ನು ಮಾತ್ರ ಕಡೆಯವರೆಗೂ ಬಿಡದೆ ಮುಂದುವರಿಸಿದರು.

ತನ್ನ ಗುರುಭಾಯಿಗಳೆಲ್ಲ ದೃಢವಾಗಿ ನೆಲೆನಿಂತಿದ್ದಾರೆ, ಇನ್ನು ಕೆಲಸಕಾರ್ಯಗಳು ಸುಗಮವಾಗಿ ಸಾಗುತ್ತವೆ ಎನ್ನುವುದು ಖಚಿತವಾದ ಮೇಲೆ ನರೇಂದ್ರನ ಎದೆ ಸ್ವಲ್ಪ ಹಗುರವಾಯಿತು. ಒಂದೆರಡು ದಿನಗಳ ಕಾಲ ಮನೆಗೆ ಹೋಗಿ ತುರ್ತಿನ ಕೆಲಸಗಳನ್ನು ಮುಗಿಸಿಕೊಂಡು ಬರುವ ಆಲೋಚನೆ ಮಾಡಿದ. ಆದರೆ ಭಗವತ್ಸಾಕ್ಷಾತ್ಕಾರದ ಹಂಬಲ ಅವನೊಳಗೆ ದಾವಾನಲದಂತೆ ಕುದಿಯುತ್ತಿತ್ತು. ತನ್ನ ವಿದ್ಯಾಭ್ಯಾಸ, ಪರೀಕ್ಷೆ, ಕೋರ್ಟು ವ್ಯವಹಾರ ಇವುಗಳ ಕುರಿತಾಗಿ ತೀವ್ರ ಜುಗುಪ್ಸೆಯುಂಟಾಗಿಬಿಟ್ಟಿತ್ತು. ಹೇಗಾದರೂ ಮಾಡಿ ತನ್ನ 'ಕರ್ತವ್ಯ'ಗಳನ್ನೆಲ್ಲ ಮುಗಿಸಿಬಿಡೋಣ ಎಂದು ಎಷ್ಟು ಬಾರಿ ಪ್ರಯತ್ನಿಸಿದರೂ ಅವನ ಮನಸ್ಸು ಇಲ್ಲಿ ನಿಲ್ಲದೆ ಎತ್ತರೆತ್ತರಕ್ಕೆ ಧಾವಿಸುತ್ತಿತ್ತು. ಅತ್ಯುನ್ನತ ಸ್ಥಿತಿಯಾದ ನಿರ್ವಿಕಲ್ಪ ಸಮಾಧಿಯ ಅನುಭವ ಪಡೆಯಬೇಕೆಂಬ ಚಡಪಡಿಕೆ ಹುಟ್ಟಿತ್ತು. ಅವನ ಈ ಮನಃಸ್ಥಿತಿಯನ್ನು ಪ್ರತಿಬಿಂಬಿಸುವ ಒಂದು ಪ್ರಸಂಗವನ್ನಿಲ್ಲಿ ನೋಡಬಹುದು:

ಒಂದು ರಾತ್ರಿ, ಅವನು ಕಾಶೀಪುರದಲ್ಲಿ ಮಲಗಿದ್ದಾನೆ; ಮರುದಿನ ತನ್ನ ಮನೆಗೆ ಹೋಗಿಬರಬೇಕೆಂದು ಸಂಕಲ್ಪಿಸಿದ್ದಾನೆ. ಆದರೆ ನಿದ್ರೆ ಹತ್ತುತ್ತಿಲ್ಲ. ಕಡೆಗೆ ಎದ್ದು ಕುಳಿತ. ಇನ್ನೂ ಎಚ್ಚರವಾಗಿದ್ದ ಶರಚ್ಚಂದ್ರ, ಕಿರಿಯ ಗೋಪಾಲ ಮೊದಲಾದ ಗುರುಬಂಧುಗಳನ್ನು ಕರೆದು, "ತೋಟದಲ್ಲಿ ಸ್ವಲ್ಪ ಹೊತ್ತು ಅಡ್ಡಾಡೋಣ ಬನ್ನಿ" ಎಂದು ಅವರನ್ನೊಡಗೂಡಿಕೊಂಡು ಹೊರಟ.

ಆಗಲೇ ಮಧ್ಯರಾತ್ರಿ ಮೀರಿದೆ. ನಿರ್ಮಲಾಕಾಶದಲ್ಲಿ ನಕ್ಷತ್ರಗಳು ಮಿನುಗುತ್ತ, ಕವಿದಿರುವ ಕಾರ್ಗತ್ತಲಿಗೆ ಶೋಭೆ ತಂದಿವೆ. ಗಾಢವಾದ ನೀರವತೆ ಈ ತರುಣ ಸಾಧಕರ ಮನದಲ್ಲಿ ಆಧ್ಯಾತ್ಮಿಕ ತರಂಗಗಳನ್ನೆಬ್ಬಿಸುತ್ತಿದೆ. ಉನ್ನತ ಭಾವರಂಜಿತನಾಗಿ ನರೇಂದ್ರ ತನ್ನ ಸ್ನೇಹಿತರಿಗೆ ಹೇಳತೊಡಗಿದ:

"ನಮ್ಮ ಗುರುದೇವರ ದೇಹಸ್ಥಿತಿ ನಿಜಕ್ಕೂ ಗಂಭೀರವಾಗಿದೆ. ಅವರು ದೇಹ ತ್ಯಾಗ ಮಾಡಲು ನಿರ್ಧರಿಸಿರುವರೋ ಏನೋ, ಹೇಗೆ ಹೇಳುವುದು ? ಅವರು ಹಾಗೆ ಮಾಡುವಷ್ಟರಲ್ಲೇ ನಾವು ಅವರ ಸೇವೆಯ ಮೂಲಕ ಮತ್ತು ಜಪತಪಾದಿ ಸಾಧನೆಯ ಮೂಲಕ ಆಧ್ಯಾತ್ಮಿಕ ಉನ್ನತಿಗಾಗಿ ಶಕ್ತಿಮೀರಿ ಪ್ರಯತ್ನಿಸಬೇಕು. ಇಲ್ಲದಿದ್ದರೆ, ಅವರು ದೇಹತ್ಯಾಗ ಮಾಡಿಬಿಟ್ಟಮೇಲೆ ವಿಷಾದಿಸುವುದೊಂದೇ ನಮ್ಮ ಪಾಲಿನ ದೌರ್ಭಾಗ್ಯವಾಗಿ ಉಳಿದೀತು ! ಈಗ ನಾವು, 'ಬಾಕಿಯಿರುವ ಕೆಲವೊಂದು ಕೆಲಸಗಳನ್ನು ಮುಗಿಸಿಬಿಟ್ಟು ಆಮೇಲೆ ಸಾಧನೆಯ ಬಗ್ಗೆ ಆಲೋಚಿಸೋಣ' ಅಂತ ಮೂರ್ಖರ ಹಾಗೆ ಭಾವಿಸುತ್ತ, ಅತ್ಯಮೂಲ್ಯವಾದ ಸಮಯವನ್ನು ವ್ಯರ್ಥಗೊಳಿಸುತ್ತಿದ್ದೇವೆ. ಇನ್ನಷ್ಟು ಆಶಾಪಾಶಗಳನ್ನು ಸುತ್ತಿಕೊಳ್ಳುತ್ತಿದ್ದೇವೆ..."

ಮಾತನಾಡುತ್ತ ಅವರೆಲ್ಲ ಒಂದು ಮರದ ಬುಡದಲ್ಲಿ ಕುಳಿತರು. ಅಲ್ಲಿ ಬಿದ್ದಿದ್ದ ಒಣಗಿದ ಕಡ್ಡಿ-ಟೊಂಗೆಗಳ ಗುಪ್ಪೆಯೊಂದು ನರೇಂದ್ರನ ಗಮನ ಸೆಳೆಯಿತು. ಅವನು ಉತ್ಸಾಹಿತನಾಗಿ ನುಡಿದ: "ಇದಕ್ಕೆ ಬೆಂಕಿ ಹೊತ್ತಿಸಿ ಅದರ ಸುತ್ತ ಕುಳಿತುಕೊಳ್ಳೋಣ. ಸಾಧುಗಳು ಧುನಿ ಹೊತ್ತಿಸಿಕೊಂಡು ಧ್ಯಾನಮಗ್ನರಾಗುವುದು ಈ ಸಮಯದಲ್ಲೇ. ನಾವು ಕೂಡ ಹಾಗೆಯೇ ಮಾಡಿ ನಮ್ಮ ಆಶೆ-ಆಕಾಂಕ್ಷೆಗಳನ್ನೆಲ್ಲ ಬೆಂಕಿಯಲ್ಲಿ ಸುಟ್ಟು ಬಿಡೋಣ !" ಎಲ್ಲರಿಗೂ ಈ ಆಲೋಚನೆ ಬಹಳ ಅದ್ಭುತವಾಗಿ ತೋರಿತು. ತಡ ಮಾಡದೆ ಕಡ್ಡಿ ಪುರಲೆಗಳನ್ನೆಲ್ಲ ಸೇರಿಸಿ ಬೆಂಕಿ ಹಚ್ಚಿ, ಸುತ್ತಲೂ ಕುಳಿತರು. ತಮ್ಮ ಮನದಲ್ಲಡಗಿದ್ದ ಎಲ್ಲ ಕಾಮನೆಗಳನ್ನೂ ಒಂದೊಂದಾಗಿ ಅದರೊಳಗೆ ಎಸೆದುಬಿಡುತ್ತಿರುವಂತೆ, ಹಾಗೂ ಅವೆಲ್ಲ ಸುಟ್ಟು ಬೂದಿಯಾಗುತ್ತಿರುವಂತೆ ಭಾವಿಸತೊಡಗಿದರು. ಧಗಧಗಿಸಿ ಉರಿಯುತ್ತಿರುವ ಧುನಿಯನ್ನು ನೋಡನೋಡುತ್ತ ಅಪೂರ್ವ ತೃಪ್ತಿ-ಆನಂದ ಅವರಲ್ಲುಂಟಾಯಿತು. ತಮ್ಮ ಹೃದಯದ ಕಲ್ಮಶಗಳೆಲ್ಲ ತೊಲಗಿಹೋಗುತ್ತಿವೆ, ಭಗವಂತ ತಮಗೆ ಅತ್ಯಂತ ಸಮೀಪದವನಾಗುತ್ತಿದ್ದಾನೆ ಎಂಬ ಭಾವನೆ ಅವರೊಳಗೆ ಒತ್ತರಿಸಿ ಬಂತು. ಈ ಕಾಮದಹನ ಕಾರ್ಯ ಮುಗಿದಾಗ ಮುಂಜಾನೆ ನಾಲ್ಕು ಗಂಟೆ !

ಮಾರನೆಯ ದಿನ ಉಳಿದ ಯುವಕರಿಗೂ ಈ ಧುನಿಯ ವಿಷಯ ತಿಳಿದು, "ಅಯ್ಯೋ ! ನಮ್ಮನ್ನೇಕೆ ಎಬ್ಬಿಸಲಿಲ್ಲ ? ನಾವೂ ಬಂದುಬಿಡುತ್ತಿದ್ದೆವಲ್ಲಾ !" ಎಂದು ಪೇಚಾಡಿದರು. ಆಗ ನರೇಂದ್ರ, "ಅದಕ್ಕೇನಂತೆ ? ಇನ್ನು ಮೇಲೆ ಅನುಕೂಲವಾದಾಗಲೆಲ್ಲ ಹಾಗೇ ಒಟ್ಟಿಗೆ ಸೇರಿ ಧುನಿ ಹೊತ್ತಿಸಿ ಕುಳಿತುಕೊಂಡರಾಯಿತು" ಎಂದು ಸಮಾಧಾನಪಡಿಸಿದ.

ಯುವಕಶಿಷ್ಯರೆಲ್ಲ ಹೀಗೆ ಸೇರಿ, ಸಂನ್ಯಾಸಿಗಳಂತೆ ಧುನಿ ಹಚ್ಚಿಕೊಂಡು ಕುಳಿತದ್ದರಲ್ಲಿ ಮೇಲ್ನೋಟಕ್ಕೆ ವಿಶೇಷವೇನೂ ತೋರದಿರಬಹುದು. ಆದರೆ ನಿಜಕ್ಕೂ ಇದೊಂದು ತುಂಬ ಅರ್ಥಪೂರ್ಣ ಘಟನೆ. ಇದು ಅವರಲ್ಲಿ ಬೆಳೆಯುತ್ತಿದ್ದ ತ್ಯಾಗ-ವೈರಾಗ್ಯಬುದ್ಧಿಯ, ಮತ್ತು ಸ್ವತಂತ್ರವಾಗಿ ಮುನ್ನಡೆಯಬಲ್ಲ ಸಾಮರ್ಥ್ಯದ ಸ್ಪಷ್ಟ ದ್ಯೋತಕ.

ಈ ನಡುವೆ, ತನ್ನ ವಕೀಲಿ ಪರೀಕ್ಷೆಯನ್ನು ಯಶಸ್ವಿಯಾಗಿ ಮುಗಿಸಿಕೊಳ್ಳಬೇಕೆನ್ನುವ ಇಚ್ಛೆ ನರೇಂದ್ರನಿಗಿನ್ನೂ ಇತ್ತು. ಆದ್ದರಿಂದ ಒಂದು ದಿನದ ಮಟ್ಟಿಗೆ ಮನೆಗೆ ಹೋಗಿ ತನ್ನ 'ಲಾ' ಪುಸ್ತಕಗಳೊಂದಿಗೆ ಕಾಶೀಪುರಕ್ಕೆ ಹಿಂದಿರುಗಿದ. ಸಮಯ ಸಿಕ್ಕಾಗಲೆಲ್ಲ ಓದಿಕೊಳ್ಳುತ್ತ ಪರೀಕ್ಷೆಗೆ ಸಿದ್ಧತೆ ನಡೆಸಲಾರಂಭಿಸಿದ.

ಈ ದಿನಗಳಲ್ಲೊಮ್ಮೆ ಶ್ರೀರಾಮಕೃಷ್ಣರು ತೀವ್ರ ರೋಗಗ್ರಸ್ತರಾಗಿರುವ ವಿಷಯ ತಿಳಿದು ಪಂಡಿತ ಶಶಧರ ತರ್ಕಚೂಡಾಮಣಿ ಅವರ ದರ್ಶನಕ್ಕಾಗಿ ಬಂದ. ಶ್ರೀರಾಮಕೃಷ್ಣರ ಮಹಿಮೆ ಮಹಾತ್ಮೆಗಳನ್ನು ಕಂಡು, ಅವರ ಬೋಧನೆಯಿಂದ ಗಾಢವಾಗಿ ಪ್ರಭಾವಿತನಾಗಿದ್ದವನು ಈತ. ಪಂಡಿತನನ್ನು ಶ್ರೀರಾಮಕೃಷ್ಣರು ಪ್ರೀತಿಯಿಂದ ಬರಮಾಡಿಕೊಂಡು ಮಾತನಾಡಿಸಿದರು. ಅವರ ಯಾತನಾಮಯ ಸ್ಥಿತಿಯನ್ನು ಕಂಡು ಶಶಧರ ಬಹಳ ದುಃಖಿತನಾದ. ಜೊತೆಗೆ ಅವನಿಗೆ ಆಶ್ಚರ್ಯಕೂಡ—ಇವರೂ ಸಹ ಎಲ್ಲರಂತೆಯೇ ಈ ಬಗೆಯ ರೋಗರುಜಿನಗಳನ್ನು ಅನುಭವಿಸಬೇಕೆ ? ನಿತ್ಯಮುಕ್ತರಾದ ಮಹಾತ್ಮರಿಗೂ ಇಂತಹ ದುಃಸ್ಥಿತಿಯುಂಟೆ ?

ಅವರನ್ನೇ ಕೇಳಿದ:

"ಸ್ವಾಮಿ, ನಾವು ಶಾಸ್ತ್ರಗಳಲ್ಲಿ ಓದಿ ತಿಳಿದಿದ್ದೇವೆ—ನಿಮ್ಮಂತಹ ಮಹಾತ್ಮರು ಇಚ್ಛಾಮಾತ್ರದಿಂದ ತಮ್ಮ ಕಾಯಿಲೆಗಳನ್ನೆಲ್ಲ ಗುಣಪಡಿಸಿಕೊಳ್ಳಬಲ್ಲರು ಅಂತ. 'ಈ ರೋಗ ವಾಸಿಯಾಗಲಿ' ಅಂತ ಮನಸ್ಸಿನಲ್ಲಿ ದೃಢವಾದ ಸಂಕಲ್ಪ ಮಾಡಿ, ಹಾಗೆ ಏಕಾಗ್ರಗೊಂಡ ಮನಸ್ಸನ್ನು ರೋಗ ತಗುಲಿರುವ ಭಾಗದ ಮೇಲೆ ಸ್ವಲ್ಪ ಹೊತ್ತು ನಿಲ್ಲಿಸಿದರೆ ಸಾಕು, ಅದು ಸಂಪೂರ್ಣವಾಗಿ ವಾಸಿಯಾಗಿಬಿಡುತ್ತದೆ ಅಂತ ಕೇಳಿದ್ದೇವೆ. ನೀವೂ ಕೂಡ ಏಕೆ ಒಂದೇ ಒಂದು ಬಾರಿ ಹಾಗೆ ಮಾಡಬಾರದು ?"

ಅವನ ಈ ಮಾತು ಕೇಳಿ ಶ್ರೀರಾಮಕೃಷ್ಣರು ಅವನಷ್ಟೇ ಆಶ್ಚರ್ಯಪಟ್ಟು ಉದ್ಗರಿಸಿದರು:

"ಆಹಾ ! ಏನಯ್ಯ, ಮಹಾ ಪಂಡಿತ ನೀನು. ಅಂಥವನೀಗ ಎಂಥ ಮಾತನಾಡಿಬಿಟ್ಟೆಯಲ್ಲ ! ಸಚ್ಚಿದಾನಂದ ಭಗವಂತನಿಗೆ ಈ ಮನಸ್ಸನ್ನು ಎಂದೆಂದಿಗೂ ಸಮರ್ಪಿಸಿಬಿಟ್ಟಿರುವವನು ನಾನು. ಈಗ ಅದನ್ನು ಅಲ್ಲಿಂದ ತೆಗೆದು ಈ ಶಿಥಿಲವಾದ ಮೂಳೆ ಮಾಂಸಗಳ ಪಂಜರದ ಮೇಲೆ ನಿಲ್ಲಿಸು ಎನ್ನುತ್ತೀಯಲ್ಲ ! ಅದೆಲ್ಲಾದರೂ ಸಾಧ್ಯವೆ ? ಅಥವಾ ಸಾಧುವೆ ?"

ಶಶಧರನ ಬಾಯಿ ಕಟ್ಟಿಹೋಯಿತು. ಅವನಿಗೆ ಶ್ರೀರಾಮಕೃಷ್ಣರ ಮಾತು ಪೂರ್ತಿ ಒಪ್ಪಿಗೆಯಾಯಿತೋ ಇಲ್ಲವೋ; ಆದರೆ ತನ್ನ 'ತರ್ಕ'ದಿಂದ ಅದಕ್ಕೆ ಇದಿರಾಡಲಂತೂ ಅವನಿಗೆ ಸಾಧ್ಯವಾಗಲಿಲ್ಲ. ಆದರೆ ಅಲ್ಲೇ ಇದ್ದ ನರೇಂದ್ರನೇ ಮೊದಲಾದ ಶಿಷ್ಯರಿಗೆ ಶಶಧರ ಪಂಡಿತನ ಸಲಹೆ ಬಹಳ ಒಪ್ಪಿಗೆಯಾಗಿತ್ತು. ಆತ ಶ್ರೀರಾಮಕೃಷ್ಣರಿಂದ ಬೀಳ್ಕೊಂಡು ಹೊರಡುತ್ತಿದ್ದಂತೆಯೇ ಇವರೆಲ್ಲ ಆತನ ಸಲಹೆಯನ್ನೇ ಹಿಡಿದುಕೊಂಡು, "ನೀವು ಕಾಯಿಲೆಯನ್ನು ಗುಣಪಡಿಸಿಕೊಳ್ಳಲೇಬೇಕು. ನಮಗೋಸ್ಕರವಾದರೂ ಸರಿಯೇ, ನೀವು ಆರೋಗ್ಯವಂತರಾಗಬೇಕು" ಎಂದು ದುಂಬಾಲುಬಿದ್ದರು.

ಶ್ರೀರಾಮಕೃಷ್ಣರು: "ಅಲ್ಲಪ್ಪ, ನನಗಾದರೂ ಇಷ್ಟವಿದೆಯೇ ಕಾಯಿಲೆಯಿಂದ ನರಳಬೇಕು ಅಂತ ! ಈ ರೋಗ ವಾಸಿಯಾಗಲಿ ಅಂತಲೇ ನನಗೂ ಇಷ್ಟ. ಆದರೆ ಅದೇನು ಸುಮ್ಮನೆ ವಾಸಿಯಾಗಿಬಿಡುತ್ತದೆಯೇ ? ರೋಗ ವಾಸಿಯಾಗುವುದು ವಾಸಿ

ಯಾಗದಿರುವುದು ಎರಡೂ ಜಗನ್ಮಾತೆಯ ಕೈಯಲ್ಲಿದೆ."

ನರೇಂದ್ರ: "ಹಾಗಾದರೆ ದಯವಿಟ್ಟು ಜಗನ್ಮಾತೆಯನ್ನೇ ಕೇಳಿಕೊಳ್ಳಿ. ಅವಳು ಖಂಡಿತವಾಗಿಯೂ ನಿಮ್ಮ ಕೋರಿಕೆಯನ್ನು ಈಡೇರಿಸುತ್ತಾಳೆ."

ಶ್ರೀರಾಮಕೃಷ್ಣರು: "ಆಹಾಹಾ, ಹಾಗೆ ಹೇಳುವುದು ನಿನಗೇನೋ ಬಹಳ ಸುಲಭ. ಆದರೆ ಇಂಥ ಕೋರಿಕೆ ನನ್ನ ಬಾಯಿಂದ ಎಂದೂ ಹೊರಬೀಳದು."

ನರೇಂದ್ರ: "ಇಲ್ಲ ಇಲ್ಲ. ಅದೆಲ್ಲ ಆಗುವುದಿಲ್ಲ. ನೀವು ಭಗವತಿಯನ್ನು ಕೇಳಲೇ ಬೇಕು. ನಿಮಗೋಸ್ಕರವಲ್ಲದಿದ್ದರೂ ನಮಗಾಗಿ ಇದೊಂದನ್ನು ಮಾಡಲೇಬೇಕು."

ಹೀಗೆ ಅವನು ಪಟ್ಟುಹಿಡಿದು ಕುಳಿತುಬಿಟ್ಟ. ತಮ್ಮ ಪ್ರಿಯ ನರೇಂದ್ರ ಹೀಗೆ ಹಟ ಮಾಡಿದಾಗ ಶ್ರೀರಾಮಕೃಷ್ಣರು ಸೋತು, ಕಡೆಗೆ ಹೇಳಿದರು:

"ಸರಿ, ಆಕೆಯನ್ನು ಕೇಳಿನೋಡುತ್ತೇನೆ."

ಬಳಿಕ ಯುವಕರೆಲ್ಲ ಚದರಿ, ಬೇರೆ ಬೇರೆ ಕೆಲಸಗಳತ್ತ ಗಮನ ಹರಿಸಿದರು. ಸುಮಾರು ಒಂದೆರಡು ಗಂಟೆಗಳ ಬಳಿಕ ನರೇಂದ್ರ ಮತ್ತೆ ಬಂದ. ಕಾತರದಿಂದ ಕೇಳಿದ: "ಸ್ವಾಮಿ, ತಾಯಿಯನ್ನು ಕೇಳಿದಿರಾ? ಆಕೆ ಏನೆಂದಳು?"

ಏನೋ ತಪ್ಪು ಮಾಡಿ ಸಿಕ್ಕಿಕೊಂಡ ಮಗುವಿನಂತೆ ಮುಖ ಮಾಡಿಕೊಂಡಿದ್ದ ಶ್ರೀರಾಮಕೃಷ್ಣರು ನಸುಮುನಿಸಿನಿಂದ ನುಡಿದರು:

"ನಾನು ತಾಯಿಗೆ ಹೇಳಿದೆ, 'ಅಮ್ಮಾ ನೋಡು. ಇದರ (ಗಂಟಲು ನೋವಿನ) ದೆಸೆಯಿಂದಾಗಿ ನನಗೆ ಏನನ್ನೂ ತಿನ್ನಲು ಸಾಧ್ಯವಾಗುತ್ತಿಲ್ಲ. ಸ್ವಲ್ಪವಾದರೂ ತಿನ್ನಲು ಸಾಧ್ಯವಾಗುವಂತೆ ದಯವಿಟ್ಟು ಏನಾದರೂ ಮಾಡು' ಅಂತ. ಆಗ ಅವಳು ನಿಮ್ಮನ್ನೆಲ್ಲ ತೋರಿಸಿ, 'ಯಾಕೆ! ನೀನು ಈ ಎಲ್ಲ ಬಾಯಿಗಳಿಂದಲೂ ತಿನ್ನುತ್ತಲೇ ಇದ್ದೀಯಲ್ಲ?' ಎಂದುಬಿಟ್ಟಳು! ಆಗ ನನಗೆ ಎಷ್ಟು ನಾಚಿಕೆಯಾಗಿಬಿಟ್ಟಿತೆಂದರೆ ಮತ್ತೆ ಬಾಯಿಂದ ಮಾತೇ ಹೊರಡಲಿಲ್ಲ."

ಏನದ್ಭುತ! ಎಲ್ಲ ಬಾಯಿಗಳಿಂದಲೂ ತಿನ್ನುವವರು ಇವರೇ! ನಿಜ, ತಿನ್ನುವ ಬಾಯಿಗಳು ಅನೇಕವಾದರೂ ಅನುಭವಿಸುವ ಚೈತನ್ಯ ಮಾತ್ರ ಏಕ! ಏಕದಲ್ಲಿ ಅನೇಕವನ್ನೂ ಅನೇಕದಲ್ಲಿ ಏಕವನ್ನೂ ನೋಡುವ ಸಹಜ ಸುಂದರ ಸ್ಥಿತಿಯನ್ನು ಇದಕ್ಕಿಂತ ಸ್ಪಷ್ಟವಾಗಿ ಇನ್ನೆಲ್ಲಿ ಕಾಣಲು ಸಾಧ್ಯ? ಈಗ ಸುಮಾರು ಆರು ತಿಂಗಳಿನಷ್ಟು ದೀರ್ಘ ಕಾಲದಿಂದ ಕೇವಲ ಬಾರ್ಲಿ ನೀರು, ರವೆ ಗಂಜಿ—ಇದರ ಮೇಲೆಯೇ ಜೀವಿಸಿದ್ದವರು ಶ್ರೀರಾಮಕೃಷ್ಣರು. ಭಯಂಕರ ರೋಗದಿಂದ ದೇಹ ಜರ್ಝರಿತವಾಗಿದೆ. ಅಂಥ ಸ್ಥಿತಿಯಲ್ಲೂ ಕೂಡ, ಎಲ್ಲ ಬಾಯಿಗಳಿಂದಲೂ ತಿನ್ನುತ್ತಿರುವವರು ತಾವೇ ಎಂಬ ಸತ್ಯ ಸಂಗತಿಯು ಜಗನ್ಮಾತೆಯ ಮೂಲಕ ಸ್ಮರಣೆಗೆ ಬಂದೊಡನೆ ಲಜ್ಜೆಯಿಂದ ಸ್ತಬ್ಧರಾದರು. ಮತ್ತು, 'ನಾನೆಂಥ ಹೀನಸ್ಥಿತಿಗಿಳಿದುಬಿಟ್ಟೆ! ಈ ಶರೀರವನ್ನೇ "ನಾನು" ಎಂದು ಕರೆದುಬಿಟ್ಟೆನಲ್ಲ!' ಎಂದು ಭಾವಿಸುತ್ತ ತಲೆತಗ್ಗಿಸಿ ಕುಳಿತುಬಿಟ್ಟರು.

ಶ್ರೀರಾಮಕೃಷ್ಣರು ತಮ್ಮ ಮನಸ್ಸನ್ನು ದೇಹದ ಕಡೆಗೆ ಹರಿಸಲಾರರು ಎಂಬುದನ್ನು ಮನಗಂಡ ಶಿಷ್ಯರು ಸುಮ್ಮನಾಗಲೇಬೇಕಾಯಿತು.

ಕಾಶೀಪುರದ ಉದ್ಯಾನಗೃಹದ ವಾಸ ಶ್ರೀರಾಮಕೃಷ್ಣರಿಗೆ ಬಹಳ ಹಿತಕರವಾಗಿತ್ತು ಎನ್ನುವುದು ನಿಜವೇ. ಆದರೆ ಈ ಕೆಲವು ದಿನಗಳಲ್ಲಿ ಅವರ ದೇಹಸ್ಥಿತಿಯಲ್ಲಿ ಮಾತ್ರ ಅಂತಹ ಸುಧಾರಣೆಯೇನೂ ಕಾಣಲಿಲ್ಲ. ತನ್ನಿಂದ ಸಾಧ್ಯವಿದ್ದುದನ್ನೆಲ್ಲ ಮಾಡಿದ

ಡಾಕ್ಟರ್ ಸರ್ಕಾರನೂ ಕೈಚೆಲ್ಲಿ ಕುಳಿತ. ಆತ ಕಲ್ಕತ್ತದಲ್ಲೇ ಅತ್ಯುತ್ತಮ ವೈದ್ಯರಲ್ಲೊಬ್ಬ ನೆನಿಸಿದ್ದವನು. ಆದ್ದರಿಂದ ಈಗ ಅವನ ಬದಲಿಗೆ ಬೇರೆ ವೈದ್ಯರನ್ನು ಕರೆಸುವ ಆಲೋಚನೆ ಯಾರಿಗೂ ಬಂದಿರಲಿಲ್ಲ.

ಈ ವೇಳೆಗೆ ಅನಿರೀಕ್ಷಿತವಾಗಿ ತಾನಾಗಿಯೇ ಹೊಸ ನೆರವು ಒದಗಿ ಬಂತು.

ಡಾಕ್ಟರ್ ರಾಜೇಂದ್ರ ನಾರಾಯಣ ದತ್ತ ಎನ್ನುವವನು ಆ ಕಾಲದ ಮತ್ತೊಬ್ಬ ಶ್ರೇಷ್ಠ ಹೋಮಿಯೋ ವೈದ್ಯ. ಇವನು ಭಾರತದಲ್ಲಿ ಹೋಮಿಯೋಪಥಿಯ ಆದ್ಯ ಪ್ರವರ್ತಕರಲ್ಲೊಬ್ಬ. ಸ್ವಯಂ ಡಾ. ಸರ್ಕಾರ ಕೂಡ ಆ ಪದ್ಧತಿಯನ್ನು ಅನುಸರಿಸತೊಡಗಿದ್ದುದು ಈತನ ಪ್ರಭಾವದಿಂದಲೇ. ಪಾಂಡಿತ್ಯ ಸಂಪತ್ತು ಸಜ್ಜನಿಕೆ ಔದಾರ್ಯ—ಈ ಎಲ್ಲದರಲ್ಲೂ ಇವನು ಅತಿಶಯ, ಅದ್ವಿತೀಯ ಶ್ರೀಮಂತ.

ರಾಜೇಂದ್ರದತ್ತ ಶ್ರೀರಾಮಕೃಷ್ಣರ ಬಗ್ಗೆ ಸಾಕಷ್ಟು ಕೇಳಿ ತಿಳಿದಿದ್ದನಾದರೂ ಅವರನ್ನು ಸಂಧಿಸಿರಲಿಲ್ಲ. ಗೃಹೀಭಕ್ತ ಮನಮೋಹನ ಮಿತ್ರ ಇವನ ಸಂಬಂಧಿಯೇ. ಮತ್ತು ಗಿರೀಶನ ತಮ್ಮ ಅತುಲಚಂದ್ರನ ಪರಿಚಯವೂ ಇವನಿಗಿತ್ತು. ಶ್ರೀರಾಮಕೃಷ್ಣರ ಗಂಟಲ ಕಾಯಿಲೆಯ ವಿಷಯವೂ, ಡಾ. ಸರ್ಕಾರನಿಂದ ಅವರ ಚಿಕಿತ್ಸೆಯ ವಿವರಗಳೂ ಅವನಿಗೆ ತಿಳಿದುಬಂದಿದ್ದುವು. ಆ ವಿವರಗಳ ಆಧಾರದ ಮೇಲೆ ಅವನು ಕಾಯಿಲೆಯ ಬಗ್ಗೆ ಬಹಳ ದಿನಗಳಿಂದಲೂ ಮಂಥನವನ್ನೂ ವಿಶೇಷ ಅಧ್ಯಯನವನ್ನೂ ನಡೆಸುತ್ತಿದ್ದ. ಶ್ರೀರಾಮಕೃಷ್ಣರಿಗೆ ತಾನು ಚಿಕಿತ್ಸೆ ನೀಡಿ ಅವರನ್ನು ರೋಗಮುಕ್ತರನ್ನಾಗಿಸುವ ಪ್ರಯತ್ನ ಮಾಡಬೇಕೆಂಬ ಹಂಬಲ ಅವನಲ್ಲುದಿಸಿತ್ತು. ಮತ್ತು ಈ ಪ್ರಯತ್ನದಲ್ಲಿ ತಾನು ಯಶಸ್ವಿಯಾದರೆ ಹೋಮಿಯೋಪಥಿ ಪದ್ಧತಿಗೆ ಪ್ರಚಂಡ ಜನಾದರಣೆ ದೊರಕುವುದೆಂಬ ಆಶಾಪೂರ್ಣ ನಿರೀಕ್ಷೆ ಅವನದು. ಕಡೆಗೆ, ಯಾವ ಔಷಧ ನೀಡಬೇಕೆಂಬ ವಿಷಯದಲ್ಲಿ ಒಂದು ಇತ್ಯರ್ಥಕ್ಕೆ ಬಂದಮೇಲೆ ಅತುಲಚಂದ್ರನನ್ನು ಕರೆದು, "ದಯವಿಟ್ಟು ಸರ್ಕಾರನಿಗೆ ತಿಳಿಸು, ನಾನು ಬಹಳ ಆಲೋಚನೆ ಮಾಡಿ ಶ್ರೀರಾಮಕೃಷ್ಣರಿಗಾಗಿ ಒಂದು ಔಷಧವನ್ನು ಆರಿಸಿದ್ದೇನೆ ಅಂತ. ಅದರಿಂದ ಉತ್ತಮ ಫಲಿತಾಂಶ ಪಡೆಯುವ ಭರವಸೆ ನನಗಿದೆ. ಅವನ ಒಪ್ಪಿಗೆಯಿರುವುದಾದರೆ ಅದನ್ನು ಪ್ರಯೋಗಿಸಲು ಬಯಸುತ್ತೇನೆ" ಎಂದು ಹೇಳಿಕಳಿಸಿದ. ಅತುಲ ಇದನ್ನು ಡಾ. ಸರ್ಕಾರನಿಗೂ ಭಕ್ತರಿಗೂ ತಿಳಿಸಿದ. ಭಕ್ತರಲ್ಲಿ ಇದಕ್ಕೆ ಯಾರೂ ಆಕ್ಷೇಪಿಸಲಿಲ್ಲ. ಸರ್ಕಾರನೂ ಸಹ ವೃತ್ತಿಮತ್ಸರ ತಾಳದೆ ಕೂಡಲೇ ಸಮ್ಮತಿಸಿದ. ಕೆಲದಿನಗಳಲ್ಲೇ ರಾಜೇಂದ್ರದತ್ತ ಬಂದು ಶ್ರೀರಾಮಕೃಷ್ಣರನ್ನು ಭೇಟಿಯಾದ. ಅವರ ಗಂಟಲನ್ನು ಚೆನ್ನಾಗಿ ಪರೀಕ್ಷೆ ಮಾಡಿ, ರೋಗ ಹೇಗೆ ಪ್ರಾರಂಭವಾಯಿತು, ಇದುವರೆಗೆ ಯಾವಯಾವ ಔಷಧಗಳನ್ನು ನೀಡಲಾಯಿತು ಎಂಬೆಲ್ಲ ವಿವರಗಳನ್ನೂ ಕೇಳಿ ದೃಢಪಡಿಸಿಕೊಂಡ. ಬಳಿಕ, ಲೈಕೋಪೋಡಿಯಂ-೨೦೦ ಎಂಬ ಹೋಮಿಯೋ ಔಷಧವನ್ನು ಕೊಡಲಾರಂಭಿಸಿದ. ಇದರ ಫಲವಾಗಿ ಶೀಘ್ರದಲ್ಲೇ ಶ್ರೀರಾಮಕೃಷ್ಣರ ಆರೋಗ್ಯದಲ್ಲಿ ದೊಡ್ಡ ಸುಧಾರಣೆ ಕಂಡುಬಂದಿತು. ಸುಮಾರು ಎರಡು ವಾರಕ್ಕೂ ಹೆಚ್ಚಿನ ಕಾಲ ಅವರು ಬಹಳಷ್ಟು ಸಮಾಧಾನವನ್ನನುಭವಿಸಿದರು. ಇದನ್ನು ಕಂಡು ಭಕ್ತರೆಲ್ಲ ಬಹಳ ಸಂತೋಷಪಟ್ಟರು. ಬಹುಶಃ ಅವರು ಮತ್ತೆ ಹಿಂದಿನಂತೆ ಆರೋಗ್ಯವಂತರಾದಾರು ಎಂದೂ ಕೆಲವರು ಭಾವಿಸಿದರು.

ಮುಂದೆ ನಡೆಯಲಿರುವ ಅತ್ಯಂತ ಮಹತ್ವಪೂರ್ಣವೂ ಚಿರಸ್ಮರಣೀಯವೂ ಆದ ಮತ್ತೊಂದು ಘಟನೆಗೆ ಇದು ನಾಂದಿಯಂತಿತ್ತು.

೧೮೮೫ನೆಯ ವರ್ಷ ಕಳೆಯಿತು. ಇಂದು ೧೮೮೬ರ ಜನವರಿ ಒಂದನೇ ತಾರೀಕು, ಶುಕ್ರವಾರ. ಕ್ರೈಸ್ತರಿಗೆ ಹೊಸ ವರ್ಷಾರಂಭದ ದಿನವಾದ್ದರಿಂದ ಸರ್ಕಾರೀ ಕಛೇರಿಗಳಿಗೆಲ್ಲ ರಜೆ. ಆದಕಾರಣ ಮಧ್ಯಾಹ್ನದ ವೇಳೆಗೆ ಭಕ್ತರೆಲ್ಲ ಒಬ್ಬೊಬ್ಬರಾಗಿ ಬಂದು ಹೆಚ್ಚಿನ ಸಂಖ್ಯೆಯಲ್ಲಿ ಸೇರಿದರು. ತರುಣಶಿಷ್ಯರಂತೂ ಇದ್ದೇ ಇದ್ದಾರೆ. ಶ್ರೀರಾಮಕೃಷ್ಣರು ಎಂದಿಗಿಂತ ಹೆಚ್ಚು ಶಕ್ತಿಯುತರಾಗಿ ಲವಲವಿಕೆಯಿಂದಿದ್ದರು. ಮತ್ತು ಬಹುದಿನಗಳ ಮೇಲೆ ಇಂದು ಮತ್ತೊಮ್ಮೆ ತೋಟದಲ್ಲಿ ಹವಾಸೇವನೆ ಮಾಡುವ ಇಚ್ಛೆಯಾದ್ದರಿಂದ ಒಂದಿಬ್ಬರು ಭಕ್ತರೊಂದಿಗೆ ಕೆಳಗಿಳಿದು ಬಂದರು.

ಆಗ ಸಮಯ ಅಪರಾಹ್ನ ಮೂರು ಗಂಟೆ. ಮನೆಯ ಒಳಗೂ ಹೊರಗೆ ತೋಟದಲ್ಲೂ ಭಕ್ತರು ಅಲ್ಲಲ್ಲಿ ಗುಂಪುಗುಂಪಾಗಿ ಸೇರಿ ಮಾತುಕತೆಯಲ್ಲಿ ತೊಡಗಿದ್ದರು. ತರುಣಶಿಷ್ಯರೆಲ್ಲ ಹಿಂದಿನ ರಾತ್ರಿ ಶ್ರೀರಾಮಕೃಷ್ಣರ ಸೇವೆಯಲ್ಲೂ ಜಪತಪಗಳಲ್ಲೂ ತೊಡಗಿ ಹೆಚ್ಚಿನ ಸಮಯ ಎಚ್ಚರವಾಗಿಯೇ ಇದ್ದು ಬಳಲಿದ್ದರು. ಆದ್ದರಿಂದ ಈಗ ಅವರಲ್ಲಿ ಒಂದಿಬ್ಬರನ್ನು ಬಿಟ್ಟು ಉಳಿದವರೆಲ್ಲ ಮಲಗಿ ವಿಶ್ರಮಿಸುತ್ತಿದ್ದರು. ಈಗ ಶ್ರೀರಾಮಕೃಷ್ಣರನ್ನು ತೋಟದಲ್ಲಿ ಅನಿರೀಕ್ಷಿತವಾಗಿ ಕಂಡು, ಅಲ್ಲಲ್ಲಿ ಕುಳಿತಿದ್ದ ಭಕ್ತರೆಲ್ಲ ಎದ್ದುನಿಂತು, ಭಕ್ತಿಯಿಂದ ನಡುಬಾಗಿ ನಮಿಸಿದರು. ಪಶ್ಚಿಮದ ಬಾಗಿಲಿನಿಂದ ಹೊರ ಬಂದ ಶ್ರೀರಾಮಕೃಷ್ಣರು ದಕ್ಷಿಣಾಭಿಮುಖವಾಗಿ ದೊಡ್ಡ ಗೇಟಿನ ಕಡೆಗೆ ಹೆಜ್ಜೆಯಿಡಲಾರಂಭಿಸಿದರು. ಇತರ ಭಕ್ತರು ಒಟ್ಟಾಗಿ ಸೇರಿ ಅವರ ಹಿಂದೆಯೇ ಸ್ವಲ್ಪ ದೂರದಲ್ಲಿ ಹಿಂಬಾಲಿಸಿ ನಡೆದರು.

ಈ ಹಾದಿಯಲ್ಲಿ ಅರ್ಧ ದೂರವನ್ನು ಕ್ರಮಿಸಿದ ಮೇಲೆ ಶ್ರೀರಾಮಕೃಷ್ಣರು, ಬಲಕ್ಕೆ ಅನತಿದೂರದಲ್ಲಿ ಗಿರೀಶ, ರಾಮಚಂದ್ರ ದತ್ತ, ಅತುಲ ಮತ್ತಿತರ ಕೆಲವರು ಕುಳಿತಿರುವುದನ್ನು ಕಂಡರು. ಅವರುಗಳೂ ಇವರನ್ನು ನೋಡಿ, ಸಂತಸದಿಂದ ಎದ್ದು ಪ್ರಣಾಮ ಮಾಡಿ ಸನಿಹಕ್ಕೆ ಬಂದರು. ಈಗ ಯಾರಾದರೂ ಒಂದು ಮಾತನ್ನಾದರೂ ಆಡುವುದಕ್ಕೆ ಮೊದಲೇ, ಅತ್ಯಂತ ಅನಿರೀಕ್ಷಿತವಾಗಿ ಶ್ರೀರಾಮಕೃಷ್ಣರು ಗಿರೀಶನನ್ನು ಕೇಳಿದರು:

"ಗಿರೀಶ, ನೀನು 'ಇದರ' ಬಗ್ಗೆ ಎಲ್ಲರ ಮುಂದೂ ಎಷ್ಟೋ ವಿಷಯಗಳನ್ನು (ತಮ್ಮ ಅವತಾರತ್ವವನ್ನು) ಹೇಳುತ್ತ ತಿರುಗಾಡುತ್ತಿದ್ದೀಯಲ್ಲ, ನೀನು ಇಲ್ಲಿ ಅಂಥದೇನು ಕಂಡಿದ್ದೀಯ, ಅಂಥದೇನು ತಿಳಿದಿದ್ದೀಯ ? ಸ್ವಲ್ಪ ಹೇಳು ನೋಡೋಣ ?"

ಎಂಥ ನೇರವಾದ ಪ್ರಶ್ನೆ! ಮಹಿಮೆಯನ್ನು ಎಷ್ಟೇ ಅರಿತವರಾದರೂ ಕೂಡ, ಹೀಗೆ ಇದ್ದಕ್ಕಿದ್ದಂತೆ ಕೇಳಿದರೆ ಬೆಚ್ಚಿ ಅವಾಕ್ಕಾಗಿ ನಿಲ್ಲುವುದೇ ಖಂಡಿತ.

ಆದರೆ ಗಿರೀಶ ಸಾಮಾನ್ಯನಲ್ಲ. ಶ್ರದ್ಧೆಯ ಮೂರ್ತರೂಪವೇ ಆಗಿದ್ದವನು ಆತ. ಅಲ್ಲದೆ ಕವಿ, ನಾಟಕಕಾರ, ಭಾವುಕ! ಅವನು ಒಂದಿನಿತೂ ಅಪ್ರತಿಭನಾಗಲಿಲ್ಲ. ಭಾವಭರಿತನಾಗಿ ಶ್ರೀರಾಮಕೃಷ್ಣರ ಪದತಲದಲ್ಲಿ ಮಂಡಿಯೂರಿ ಕೈಜೋಡಿಸಿ ಗದ್ಗದ ಸ್ವರದಿಂದ ಉದ್ಗರಿಸಿದ:

"ಯಾರ ಮಹಿಮೆಯನ್ನು ಬಣ್ಣಿಸಿ ಮುಗಿಸಲು ವ್ಯಾಸ ವಾಲ್ಮೀಕಿ ಮುನಿಗಳಿಗೂ ಸಾಧ್ಯವಾಗಲಿಲ್ಲವೋ ಅಂಥವರ ಬಗ್ಗೆ ಅಲ್ಪನಾದ ನಾನು ಏನುತಾನೆ ಹೇಳಬಲ್ಲೆ?"

ರಾಮಾಯಣದ ಕರ್ತೃವಾದ ವಾಲ್ಮೀಕಿ ಮಹರ್ಷಿ ಶ್ರೀರಾಮನ ಚರಿತ್ರೆಯನ್ನು ಬಣ್ಣಿಸಿದರೆ, ವ್ಯಾಸರು ಮಹಾಭಾರತದ ಮೂಲಕ ಶ್ರೀಕೃಷ್ಣನ ಗುಣಕಥನ ಮಾಡಲೆತ್ನಿಸಿದರು. ಶ್ರೀರಾಮನೂ ಶ್ರೀಕೃಷ್ಣನೂ ಸ್ವಯಂ ಪರಬ್ರಹ್ಮನ ಅವತಾರರು. ಹಾಗಿರುವಾಗ, 'ಅಂಥವರ' (ಎಂದರೆ ಈಗ ಶ್ರೀರಾಮ–ಶ್ರೀಕೃಷ್ಣರಿಬ್ಬರೂ ಆಗಿ ಅವತರಿಸಿರುವ ಶ್ರೀರಾಮಕೃಷ್ಣರ) ಮಹಿಮೆಯನ್ನು ತನ್ನಂತಹ ಸಾಮಾನ್ಯ ಮರ್ತ್ಯನೊಬ್ಬ ಬಣ್ಣಿಸಲು ಸಾಧ್ಯವೆ?—ಇದು ಗಿರೀಶನ ಭಾವ.

ಅವನ ಅಂತರಾಳದಿಂದ ಬಂದ ಆ ಸರಳ ವಿಶ್ವಾಸದ ಮಾತನ್ನು ಕೇಳಿ ಶ್ರೀರಾಮಕೃಷ್ಣರು ಮುಗ್ಧರಾದರು. ಅವನು ಭಕ್ತರೆಲ್ಲರ ಪ್ರತಿನಿಧಿಯಂತೆ, ವಕ್ತಾರನಂತೆ ಇದ್ದವನು. ಅವನು ಈಗ ಉತ್ತರ ನೀಡಿದ್ದೂ ಎಲ್ಲರ ಪರವಾಗಿಯೇ. ಆದ್ದರಿಂದ ಶ್ರೀರಾಮಕೃಷ್ಣರು ಆ ಎಲ್ಲ ಭಕ್ತರನ್ನುದ್ದೇಶಿಸಿ, ಮಂದಸ್ಮಿತರಾಗಿ, "ನಿಮಗೆ ನಾನಿನ್ನೇನು ತಾನೆ ಹೇಳಲಿ? ನಿಮಗೆಲ್ಲ ಆಧ್ಯಾತ್ಮಿಕ ಜಾಗೃತಿಯುಂಟಾಗಲಿ!" ಎಂದುದ್ಗರಿಸಿದರು. ಹೀಗೆಂದವರೇ ಭಕ್ತರ ಮೇಲಿನ ವಾತ್ಸಲ್ಯ-ಕರುಣೆಗಳಿಂದ ಮೈಮರೆತು ಭಾವಾವಿಷ್ಟರಾಗಿ ನಿಂತರು.

ಶ್ರೀರಾಮಕೃಷ್ಣರು ಉತ್ಕಟ ಭಾವದಲ್ಲಿ ಆಡಿದ ಆ ಮಾತಿನ ಪರಿಣಾಮವಾಗಿ, ಕಣ್ರೆಪ್ಪೆ ಬಡಿಯುವಷ್ಟರಲ್ಲೇ ಅಲ್ಲಿ ಎಂತಹ ಆನಂದದ ಕೋಲಾಹಲ ಉಂಟಾಯಿತು, ಎಂತಹ ಪ್ರಚಂಡ ವಾತಾವರಣ ನಿರ್ಮಾಣಗೊಂಡಿತು ಎಂಬುದನ್ನು ಅಲ್ಲಿದ್ದವರು ಮಾತ್ರ ಬಲ್ಲರು. ಉಳಿದವರ ಊಹೆಗೆ ಅದು ಎಟುಕಲಾರದು. ಶ್ರೀರಾಮಕೃಷ್ಣರ ಆ ಆಶೀರ್ವಚನ ನೇರವಾಗಿ ಭಕ್ತರ ಹೃದಯಾಂತರಾಳವನ್ನು ಹೊಕ್ಕು ಆನಂದದ ಮಹಾತರಂಗಗಳನ್ನೇ ಎಬ್ಬಿಸಿತು. ದೇಶ-ಕಾಲಗಳನ್ನು ಮರವೆಯಾಗಿಸಿತು. ಶ್ರೀರಾಮಕೃಷ್ಣರ ಅನಾರೋಗ್ಯದ ವಿಷಯವೂ, ಅವರು ಆರೋಗ್ಯವಂತರಾಗುವವರೆಗೆ ತಾವು ಅವರ ಪಾದಸ್ಪರ್ಶ ಮಾಡಬಾರದು ಎಂದು ತಾವೇ ಮಾಡಿಕೊಂಡಿದ್ದ ನಿರ್ಧಾರದ ನೆನಪೂ ಭಕ್ತರ ಮನಸ್ಸಿನಿಂದ ಅಳಿಸಿಹೋಯಿತು. "ನಿಮಗೆಲ್ಲ ಆಧ್ಯಾತ್ಮಿಕ ಜಾಗೃತಿಯುಂಟಾಗಲಿ" ಎಂಬ ಆಶೀರ್ವಚನವನ್ನು ಕೇಳಿದೊಡನೆ ಗಿರೀಶ, "ಜೈ ರಾಮಕೃಷ್ಣ! ಜೈ ರಾಮಕೃಷ್ಣ!" ಎಂದು ಉದ್ಘೋಷಿಸುತ್ತ ಅವರ ಪಾದಕ್ಕೆರಗಿದ. ಮರುಕ್ಷಣವೇ ಆ ಜಯಕಾರ ಧ್ವನಿ ಅಲ್ಲಿದ್ದ ಎಲ್ಲ ಕಂಠಗಳಿಂದ ಪ್ರತಿಧ್ವನಿಗೊಂಡಿತು. ಎಲ್ಲರೂ ಆತುರದಿಂದ ಧಾವಿಸಿ ಬಂದು ಸಾಷ್ಟಾಂಗ ಪ್ರಣಾಮ ಮಾಡುತ್ತ ಶ್ರೀರಾಮಕೃಷ್ಣರ ಪಾದರೇಣುವನ್ನು ಸ್ವೀಕರಿಸತೊಡಗಿದರು. ಈಗ ಅವರ ಅಹೈತುಕ ಕರುಣೆಯು ಸಾಗರವೆಂಬುದು ಸೀಮೆಗಳನ್ನು ಮೀರಿ ಉಕ್ಕಿ ಹರಿಯಲಾರಂಭಿಸಿತು. ತಮ್ಮ ಬಳಿಗೆ ಬಂದ ಪ್ರತಿಯೊಬ್ಬ ಭಕ್ತನನ್ನೂ ಸ್ಪರ್ಶಿಸಿ, ಸೂಕ್ತ ಮಂತ್ರವನ್ನುಚ್ಚರಿಸಿ ಹರಸಿದರು. ಹೀಗೆ ಕೃಪೆಗೆ ಪಾತ್ರರಾದವರಲ್ಲಿ ಒಬ್ಬೊಬ್ಬನಿಗೂ ಉನ್ನತ ಸ್ತರಕ್ಕೇರಿಸಲ್ಪಟ್ಟ ಅನುಭವವುಂಟಾಯಿತು! ಹಿಂದೆ ದಕ್ಷಿಣೇಶ್ವರದಲ್ಲಿ ಅವರು ಈ ರೀತಿಯಲ್ಲಿ ಕೃಪೆ ಮಾಡುವುದನ್ನು ಅನೇಕರು ಕಂಡಿದ್ದರು. ಆದರೆ ಆದಕ್ಕೆ ಪಾತ್ರನಾಗುತ್ತಿದ್ದವನು ಎಲ್ಲೋ ಅಪರೂಪಕ್ಕೊಬ್ಬ ಸಾಧಕಮಾತ್ರ. ಇಂದು ಅವರು ಯಾವುದೇ ಭೇದಭಾವವಿಲ್ಲದೆ, ಬಂದಬಂದವರ ಮೇಲೆಲ್ಲ ಅದೇ ಬಗೆಯ ಕೃಪಾವೃಷ್ಟಿ ಕರೆಯುತ್ತಿದ್ದಾರೆ ಎಂಬುದನ್ನರಿತಾಗ ಭಕ್ತರ ಆನಂದಾ

ಶ್ವರ್ಯಗಳಿಗೆ ಪಾರವೆಲ್ಲಿ! 'ಮಲಯಮಾರುತ ಬೀಸಿದರೆ ಎಲ್ಲ ಮರಗಳೂ ಶ್ರೀಗಂಧದ ಮರಗಳಾಗುತ್ತವೆ' ಎಂಬ ಲೋಕೋಕ್ತಿಯನ್ನು ಶ್ರೀರಾಮಕೃಷ್ಣರು ಉದ್ಧರಿಸುವುದಿತ್ತು. ಆ ಮಾತು ಇದೀಗ ಸತ್ಯವಾಗಿ ಪರಿಣಮಿಸುತ್ತಿರುವುದನ್ನು ಅವರೆಲ್ಲ ಕಣ್ಣಾರೆ ಕಾಣುತ್ತಿದ್ದಾರೆ! ಮತ್ತು ಶ್ರೀರಾಮಕೃಷ್ಣರು ತಾವೇ ಅನೇಕ ಬಾರಿ ಹೇಳಿದ್ದಂತೆ, ಈಗ ಮಾನವತ್ವದ ಪರದೆಯನ್ನು ಕಿತ್ತೊಗೆದು ತಮ್ಮ ದೈವತ್ವವನ್ನು ಪ್ರದರ್ಶಿಸುತ್ತಿದ್ದಾರೆ ಎಂಬುದೂ ಸ್ಪಷ್ಟಗೋಚರವಾಗುತ್ತಿದೆ!

ಶ್ರೀರಾಮಕೃಷ್ಣರ ಮಾಂತ್ರಿಕ ಸ್ಪರ್ಶದ ಪರಿಣಾಮ ಹಲವು ಬಗೆಗಳಿಂದ ವ್ಯಕ್ತಗೊಂಡಿತು. ಕೆಲವರು ಭಾವೋದ್ವೇಗಗೊಂಡು ಅತ್ತರೆ ಇನ್ನು ಕೆಲವರು ಆನಂದಾತಿಶಯದಿಂದ ಗಟ್ಟಿಯಾಗಿ ನಗುತ್ತ ಕುಣಿದಾಡಿದರು! ಕೆಲವರು ಏನು ಮಾಡಲೂ ತೋಚದೆ ಮಂತ್ರಮುಗ್ಧರಾದಂತೆ ಸ್ತಬ್ಧರಾಗಿ, ಅಲ್ಲಿನ ಆಗುಹೋಗುಗಳನ್ನೆಲ್ಲ ಬಿರುಗಣ್ಣಿನಿಂದ ವೀಕ್ಷಿಸುತ್ತ ನಿಂತರು! ಕೆಲವರು, ಮನೆಯೊಳಗೇ ಉಳಿದುಕೊಂಡಿರುವ ಭಕ್ತರು ಈ ಭಾಗ್ಯವಿಶೇಷದಿಂದ ವಂಚಿತರಾಗುವರಲ್ಲಾ ಎಂಬ ಕಳಕಳಿಯಿಂದ "ಬನ್ನೀ, ಎಲ್ಲರೂ ಬನ್ನೀ!" ಎಂದು ಅವರನ್ನೆಲ್ಲ ಕೂಗಿ ಕರೆದರು. ಇನ್ನು ಕೆಲವರು ಗಿಡಗಳಿಂದ ಪುಷ್ಪಗಳನ್ನು ಕಿತ್ತು ತಂದು, ಸ್ತೋತ್ರ-ಮಂತ್ರ ಸಮೇತವಾಗಿ ಶ್ರೀರಾಮಕೃಷ್ಣರನ್ನು ಪೂಜಿಸಲಾರಂಭಿಸಿದರು.

ಶ್ರೀರಾಮಕೃಷ್ಣರು ಭಕ್ತರನ್ನೆಲ್ಲ ಸ್ಪರ್ಶಿಸಿ ಹರಸಿದ್ದಲ್ಲದೆ, ಅನೇಕರ ಬಹುದಿನಗಳ ವಿಶಿಷ್ಟ ಹಂಬಲಗಳನ್ನು ಆ ಸಮಯದಲ್ಲಿ ಈಡೇರಿಸಿಕೊಟ್ಟರು. ಅಂದು ಅಕ್ಷಯಕುಮಾರನೂ ಉಪೇಂದ್ರನಾಥನೂ ಹೇಗೆ ಅವರ ಕೃಪೆಗೆ ಪಾತ್ರರಾದರು ಎನ್ನುವುದನ್ನು ಅದಾಗಲೇ ನೋಡಿದ್ದೇವೆ. (ಆದರೆ ಆ ದಿನ ಅಷ್ಟು ಜನ ಭಕ್ತರಲ್ಲಿ ಐಹಿಕ ಸಿರಿಯನ್ನು ಯಾಚಿಸಿದವನು ಉಪೇಂದ್ರನೊಬ್ಬನೇ ಎಂಬಂತೆ ತೋರುತ್ತದೆ. ಆದ್ದರಿಂದ ಅವನ ವಿಷಯವನ್ನು ಬೇರೆಯೇ ವರ್ಗಕ್ಕೆ ಸೇರಿಸಬೇಕಾಗುತ್ತದೆ.) ಹಾರಾಣಚಂದ್ರ ಎಂಬ ಭಕ್ತನ ಭಾಗ್ಯ ಇನ್ನೂ ವಿಶಿಷ್ಟವಾದುದು. ಅವನು ಸಾಷ್ಟಾಂಗವೆರಗಿದಾಗ ಶ್ರೀರಾಮಕೃಷ್ಣರು ಭಾವಸ್ಥಿತಿಯಲ್ಲಿ ಆತನ ಶಿರದ ಮೇಲೆ ತಮ್ಮ ಪಾದವಿರಿಸಿ ಕೃಪೆ ಮಾಡಿದರು. ಈ ಬಗೆಯ ಕೃಪೆ ಅಂದು ಇನ್ನಾರಿಗೂ ದೊರೆಯಲಿಲ್ಲ.*

ಶ್ರೀರಾಮಕೃಷ್ಣರ ಕೃಪಾಮಾತ್ರದಿಂದಲೇ ತಮಗೆ ಆ ಆನಂದಾನುಭವವಾದದ್ದು ಎಂಬ ವಿಷಯದಲ್ಲಿ ಮಾತ್ರ ಯಾರದೂ ಎರಡನೆಯ ಮಾತಿಲ್ಲ. ಅಷ್ಟು ಜನರ ಪೈಕಿ ಇಬ್ಬರಿಗೆ ಮಾತ್ರ ಶ್ರೀರಾಮಕೃಷ್ಣರು "ನಿಮಗೆ ಈಗ ಬೇಡ" ಎಂದು ಹೇಳಿ ಅಂದು ಕೃಪೆ ಮಾಡಲಿಲ್ಲ. ಆದರೆ ಅದಾದ ಕೆಲದಿನಗಳ ಮೇಲೆ ಅವರನ್ನೂ ಅದೇ ರೀತಿಯಲ್ಲಿ ಹರಸಿದರು.

ತನ್ನ ಅನುಭವದ ಬಗ್ಗೆ ರಾಮಲಾಲ ಹೇಳುತ್ತಾನೆ: "ಹಿಂದೆ ನಾನು ಧ್ಯಾನಕ್ಕೆ ಕುಳಿತಾಗ ನನ್ನ ಇಷ್ಟಮೂರ್ತಿಯು ಭಾಗಶಃ ರೂಪ ಮಾತ್ರ ಮನಸ್ಸಿನಲ್ಲಿ ಮೂಡುತ್ತಿತ್ತು—ಕೆಲವೊಮ್ಮೆ ಆತನ ಪಾದಪದ್ಮಗಳು ಮಾತ್ರ ಗೋಚರವಾದರೆ, ಇನ್ನು ಕೆಲವೊಮ್ಮೆ ಆತನ ಶರೀರದ ಮೇಲ್ಭಾಗವನ್ನಷ್ಟೇ ಕಾಣುತ್ತಿದ್ದೆ. ಅಲ್ಲದೆ ಆ ಮೂರ್ತಿ

---

*ತನ್ನ ಜೀವನ ಸಾರ್ಥಕವಾಯಿತೆಂದು ತಿಳಿದ ಹಾರಾಣಚಂದ್ರ, ಮುಂದೆ ಪ್ರತಿವರ್ಷವೂ ಆ ದಿನವನ್ನು ತನ್ನ ಮನೆಯಲ್ಲಿ ವೈಭವದ ಜಯಂತ್ಯುತ್ಸವದಂತೆ ಆಚರಿಸಿಕೊಂಡು ಬರಲಾರಂಭಿಸಿದ.

ಜೀವಂತವಾಗಿರುವಂತೆ ತೋರುತ್ತಿರಲಿಲ್ಲ. ಅಂದು ಠಾಕೂರರು ನನ್ನನ್ನು ಮುಟ್ಟಿದ ಕೂಡಲೇ ನನ್ನ ಇಷ್ಟದೇವತೆ ಇದ್ದಕ್ಕಿದ್ದಂತೆ ನನ್ನ ಹೃತ್ಕಮಲದಲ್ಲಿ ಸರ್ವಾಂಗ ಸಂಪೂರ್ಣವಾಗಿ ಆವಿರ್ಭಾವಗೊಂಡು, ಸ್ಪಂದಿಸುತ್ತ ನನ್ನನ್ನು ಸೆಳೆಯುತ್ತಿರುವಂತಹ ಅನುಭವವಾಯಿತು.''

ತರುಣ ವೈಕುಂಠನಾಥ ಸನ್ಯಾಲನಿಗಾದ ಅನುಭವವಂತೂ ಅದ್ಭುತವಾದುದು. ಅವನು ಈ ಹಿಂದೆಯೇ ಶ್ರೀರಾಮಕೃಷ್ಣರಿಂದ ಮಂತ್ರದೀಕ್ಷೆ ಪಡೆದಿದ್ದ. ಆಗಿನಿಂದಲೂ ಅವನು ತನ್ನ ಇಷ್ಟದೇವನ ದರ್ಶನ ಪಡೆಯಬೇಕೆಂಬ ಹಂಬಲದಿಂದ ಸಾಧನಾನಿರತನಾಗಿದ್ದ. ಮತ್ತು, ಶ್ರೀರಾಮಕೃಷ್ಣರು ಕೃಪೆ ಮಾಡಿದ ಹೊರತು ತನ್ನ ಆ ಇಚ್ಛೆ ಈಡೇರುವುದು ಅಸಂಭವವೆಂದು ತಿಳಿದದ್ದರಿಂದ ಆಗಾಗ ಅವರನ್ನು ಆ ವಿಷಯದಲ್ಲಿ ವ್ಯಾಕುಲತೆಯಿಂದ ಪ್ರಾರ್ಥಿಸಿಕೊಳ್ಳುತ್ತಿದ್ದ. ಅಷ್ಟರಲ್ಲಿ ಶ್ರೀರಾಮಕೃಷ್ಣರಿಗೆ ಗಂಟಲ ಹುಣ್ಣು ತಗಲಿಕೊಂಡಿತು. ವೈಕುಂಠನಾಥ ಅವರನ್ನು ಇನ್ನೂ ಎರಡು ಮೂರು ಬಾರಿ ದರ್ಶನಕ್ಕಾಗಿ ಕಾಡಿದ. ಆಗೆಲ್ಲ ಶ್ರೀರಾಮಕೃಷ್ಣರು—ಬಹುಶಃ ಅವನು ಇನ್ನಷ್ಟು ಸಾಧನೆ ಮಾಡಿಯಾಗಲೆಂಬ ಉದ್ದೇಶದಿಂದ—''ತಾಳು, ನನ್ನ ಈ ರೋಗ ವಾಸಿಯಾಗಿಬಿಡಲಿ, ಆಮೇಲೆ ನಿನ್ನಿಚ್ಛೆಯನ್ನು ಪೂರೈಸೋಣ'' ಎಂದು ಹೇಳಿ ಅವನನ್ನು ಸಾಂತ್ವನಗೊಳಿಸಿದ್ದರು.

ಇದೀಗ ಅದಕ್ಕೆ ಕಾಲ ಕೂಡಿ ಬಂದಿತು. ಶ್ರೀರಾಮಕೃಷ್ಣರು ದಿವ್ಯಭಾವದಲ್ಲಿ ಎಲ್ಲರಿಗೂ ವರಪ್ರದಾನ ಮಾಡುತ್ತಿರುವುದನ್ನು ಕಂಡು ಅವನು ಕೂಡ ಭಕ್ತಿಯಿಂದ ಪ್ರಣಾಮ ಮಾಡಿ, ''ಸ್ವಾಮಿ! ನನ್ನ ಮೇಲೆ ಕೃಪೆ ಮಾಡಿ'' ಎಂದು ಬೇಡಿಕೊಂಡ.

ಶ್ರೀರಾಮಕೃಷ್ಣರು: ''ನಿನಗೆ ದೊರಕಬೇಕಾದ್ದು ಆಗಲೇ ದೊರಕಿಬಿಟ್ಟಿದೆ.''

ವೈಕುಂಠ: ''ನೀವು 'ದೊರಕಿಬಿಟ್ಟಿದೆ' ಎನ್ನುವುದಾದರೆ ದೊರಕಿರುವುದು ಖಂಡಿತ. ಆದರೆ ಅದು ನನ್ನ ಅರಿವಿಗೂ ಬರುವಂತೆ ಅನುಗ್ರಹಿಸಿ.''

ಶ್ರೀರಾಮಕೃಷ್ಣರು ಮುಗುಳ್ನಕ್ಕು ''ಆಗಲಿ'' ಎನ್ನುತ್ತ ಕ್ಷಣಕಾಲ ಅವನ ಎದೆಯನ್ನು ಸ್ಪರ್ಶಿಸಿದರು. ಆಗ ಅವನಲ್ಲೊಂದು ಅಪೂರ್ವ ಭಾವಾಂತರವುಂಟಾಯಿತು. ಆಕಾಶ, ಮನೆ, ಗಿಡಮರಗಳು, ಅಲ್ಲಿರುವ ಇತರ ವ್ಯಕ್ತಿಗಳು—ಹೀಗೆ ಎತ್ತ ನೋಡಿದರತ್ತ ಶ್ರೀರಾಮಕೃಷ್ಣರ ಮಂದಹಾಸಯುಕ್ತವಾದ ಮೂರ್ತಿಯೇ ಕಾಣತೊಡಗಿತು! ಅತ್ಯಾನಂದದಿಂದ ಉದ್ದೀಪನಗೊಂಡ ಆತನಿಗೆ ಇತರ ತರುಣಶಿಷ್ಯರ ನೆನಪಾಯಿತು. ಅತ್ತ ನೋಡಿದ. ಮನೆಯ ಮಹಡಿಯ ಮೇಲೆ ನಿಂತಿದ್ದ ಇಬ್ಬರನ್ನು ಕಂಡು, ''ಏನು ಮಾಡುತ್ತಿದ್ದೀರಲ್ಲಿ ನೀವೆಲ್ಲ? ಓಡಿ ಬನ್ನಿ ಇಲ್ಲಿಗೆ!'' ಎಂದು ಗಟ್ಟಿಯಾಗಿ ಕೂಗಿ ಕರೆದ.

ಮತ್ತೂ ಅಚ್ಚರಿಯ ಸಂಗತಿಯೆಂದರೆ, ಅವನ ಈ ಅದ್ಭುತ ಭಾವ—ಸಮ್ಮೋಹಿನಿಯ ಪ್ರಭಾವದಿಂದ ಉಂಟಾದಂತೆ—ಎಲ್ಲೋ ಸ್ವಲ್ಪ ಹೊತ್ತು ಇದ್ದು ಹೊರಟು ಹೋಗಲಿಲ್ಲ. ಎಷ್ಟೋ ದಿನಗಳವರೆಗೂ ಅದು ಹಾಗೆಯೇ, ಅಷ್ಟೇ ಗಾಢವಾಗಿ ಉಳಿದುಕೊಂಡಿತ್ತು. ಅವನು ಎಲ್ಲಿಗೇ ಹೋಗಲಿ, ಏನೇ ಮಾಡುತ್ತಿರಲಿ, ದೃಷ್ಟಿ ಹರಿದಲ್ಲೆಲ್ಲ ಶ್ರೀರಾಮಕೃಷ್ಣರ ಮುಖಾರವಿಂದವೇ ಗೋಚರವಾಗುತ್ತಿತ್ತು! ಅವನು ದಿಗ್ಭ್ರಾಂತನಾದ. ತನ್ನ ಕಛೇರಿಯ ಕೆಲಸಕ್ಕೆ ಹೋದರೆ ಅಲ್ಲೂ ಅದೇ ದರ್ಶನ, ಅದೇ ಅನುಭವ! ಯಾವ ಕೆಲಸವನ್ನು ಮಾಡಲೂ ಸಾಧ್ಯವಾಗುತ್ತಿಲ್ಲ! ಆಗ 'ಸಾಕಪ್ಪ ಈ ದರ್ಶನ, ಬೇಕಾದಷ್ಟು ಕಂಡೆ' ಎನ್ನಿಸತೊಡಗಿತು. ಮನಸ್ಸನ್ನು ಬಲವಂತವಾಗಿ ಎದುರಿಗಿರುವ

ಕೆಲಸದ ಕಡೆಗೆ ಹರಿಸುವ ಯತ್ನ ಮಾಡಿದ. ಊಹ್ಞೂ, ಆಗುತ್ತಿಲ್ಲ! 'ನನಗೇನಾದರೂ ಹುಚ್ಚುಗಿಚ್ಚು ಹಿಡಿಯುತ್ತಿದೆಯೋ ಹೇಗೆ?' ಎಂಬ ಭಯ ಹತ್ತಿಕೊಂಡಿತು. ಆಗ ಅವನಿಗೆ, ಅರ್ಜುನನೂ ಕೂಡ ವಿಶ್ವರೂಪದರ್ಶನವಾದಾಗ ಏಕೆ ತತ್ತರಿಸಿ, ಅದನ್ನು ಹಿಂದೆಗೆದುಕೊಳ್ಳುವಂತೆ ಕೃಷ್ಣನನ್ನು ಪ್ರಾರ್ಥಿಸಿಕೊಂಡ ಎನ್ನುವುದು ಸ್ವಲ್ಪ ಅರ್ಥವಾದಂತಾಯಿತು. ಕಡೆಗೆ, ಮತ್ತೆ ಶ್ರೀರಾಮಕೃಷ್ಣರಲ್ಲೇ ಶರಣಾಗಿ, "ಪ್ರಭು, ಈ ಭಾವವನ್ನು ಧರಿಸಲು ನಾನು ಸಮರ್ಥನಲ್ಲ. ದಯಮಾಡಿ ಇದನ್ನು ಶಾಂತಗೊಳಿಸಿಬಿಡಿ" ಎಂದು ಮನದಲ್ಲೇ ಮೊರೆಯಿಟ್ಟ. ಬಳಿಕ ಕೆಲಕಾಲದ ಮೇಲೆ ಆ ಭಾವ ಇದ್ದಕ್ಕಿದ್ದಂತೆ ನಿಂತು ಹೋಯಿತು; ಅವನು ಹಿಂದಿನಂತಾದ. ಯಾರಿಂದ ಅದು ತನಗೆ ಲಭ್ಯವಾಗಿತ್ತೋ ಅವರಲ್ಲೇ ಅದು ಲಯಗೊಂಡಿತು ಎಂದು ಅವನು ಅರಿತುಕೊಂಡ.

ಆದರೆ ನಿಜವಾಗಿಯೂ ಅವನಿಗೆ ಅಂತಹ ದುರ್ಲಭವಾದ ಆನಂದಸ್ಥಿತಿಯನ್ನು ದೂರ ಮಾಡಿಕೊಳ್ಳುವ ಇಚ್ಛೆಯೇನೂ ಇರಲಿಲ್ಲ. ಹಠಾತ್ತಾಗಿ ಸಾಮಾನ್ಯ ಸ್ಥಿತಿಗೆ ಇಳಿದುಬಂದ ಮೇಲೆ ಅವನು ಪಶ್ಚಾತ್ತಾಪದಿಂದ ಆಲೋಚಿಸತೊಡಗಿದ: 'ಅಯ್ಯೋ, ನಾನೆಷ್ಟು ದುರ್ಬಲ, ಎಷ್ಟು ಬುದ್ಧಿಗೇಡಿ! ನಾನೇಕೆ ಆ ಉನ್ನತ ಸ್ಥಿತಿಯನ್ನು ಸಾಕು ಮಾಡುವಂತೆ ಪ್ರಾರ್ಥಿಸಿಕೊಂಡೆ? ಠಾಕೂರರ ಮೇಲಿನ ವಿಶ್ವಾಸವನ್ನು ಸ್ಥಿರವಾಗಿಟ್ಟುಕೊಂಡು ಆ ಭಾವದ ಉತ್ಕಟಾವಸ್ಥೆಯನ್ನು ಅನುಭವಿಸುವ ಧೈರ್ಯ ನನಗೇಕೆ ಬಾರದೆ ಹೋಯಿತು! ಹೆಚ್ಚೆಂದರೆ ನನಗೆ ಹುಚ್ಚು ಹಿಡಿಯಬಹುದಾಗಿತ್ತು, ಇಲ್ಲವೆ ಈ ಶರೀರ ಬಿದ್ದುಹೋಗುತ್ತಿತ್ತು, ಅಷ್ಟೇ ಅಲ್ಲವೆ? ಅತ್ಯಂತ ದುರ್ಲಭವಾದ ವಸ್ತು ಕೈಗೆಟುಕಿದರೂ ಮೂರ್ಖನಂತೆ ಕಳೆದುಕೊಂಡೆನಲ್ಲ!'

ಹೀಗೆ ಭಾವಿಸುತ್ತ ಅವನು, ಇನ್ನೊಮ್ಮೆ ಆ ದಿವ್ಯಾನುಭವವನ್ನು ಸವಿಯುವ ಕನಸು ಕಾಣತೊಡಗಿದ. ಪರಮ ಕರುಣಾಮೂರ್ತಿಯಾದ ಶ್ರೀರಾಮಕೃಷ್ಣರ ಕೃಪಾದೃಷ್ಟಿ ಮತ್ತೆ ಅವನ ಮೇಲೆ ಬಿದ್ದಿತು. ಪ್ರತಿದಿನವೂ ಆಗಾಗ ಅವರ ಭಾವೋದ್ದೀಪ್ತವಾದ ಪ್ರಸನ್ನ ಮಂದಹಾಸಯುಕ್ತ ರೂಪವನ್ನು ಅವನು ಕಾಣತೊಡಗಿದ. ಇದು ಅನೇಕ ದಿನಗಳವರೆಗೆ ಮುಂದುವರಿಯಿತು. ಅದರಿಂದ ಎಣೆಯಿಲ್ಲದ ಆನಂದವನ್ನನುಭವಿಸಿ ಧನ್ಯನಾದೆನೆಂದುಕೊಂಡ, ವೈಕುಂಠನಾಥ.

ಆ ದಿನದ (ಜನವರಿ ೧) ಒಂದು ಆಶ್ಚರ್ಯಕರ ಸಂಗತಿಯೆಂದರೆ, ಶ್ರೀರಾಮಕೃಷ್ಣರು ತಮ್ಮ ಭಕ್ತರ ಮೇಲೆ ಅಹೈತುಕ ಕೃಪೆಯನ್ನು ವರ್ಷಿಸಿದಾಗ ಆ ಸ್ಥಳದಲ್ಲಿ, ಮುಂದೆ ಸಂನ್ಯಾಸಿಗಳಾಗಿ ಸಂಘನಿರ್ಮಾಣ ಮಾಡಿಕೊಂಡ ಅವರ ಯುವಶಿಷ್ಯರಲ್ಲಿ ಒಬ್ಬನೂ ಇಲ್ಲದಿದ್ದುದು. ಹಿಂದೆಯೇ ಹೇಳಿದಂತೆ, ಅವರೆಲ್ಲ ಆ ಸಮಯದಲ್ಲಿ ಮಲಗಿಬಿಟ್ಟಿದ್ದರು. ಲಾಟು, ಶರಚ್ಚಂದ್ರ ಇವರಿಬ್ಬರು ಮಾತ್ರ ಎದ್ದಿದ್ದರು. ಶ್ರೀರಾಮಕೃಷ್ಣರು ಹೊರಗೆ ಹೋಗಿರುವಾಗಲೇ ಅವರ ಹಾಸಿಗೆ ಬಟ್ಟೆಗಳನ್ನೆಲ್ಲ ಕೊಡವಿ, ಕೋಣೆಯನ್ನು ಸ್ವಚ್ಛಗೊಳಿಸಿಬಿಡೋಣ ಎಂದು ಕಾರ್ಯನಿರತರಾಗಿದ್ದರು. ಅಲ್ಲದೆ ಇವರು ಮಾಳಿಗೆಯ ಮೇಲೆ ನಿಂತು, ಉದ್ಯಾನದಲ್ಲಿ ನಡೆಯುತ್ತಿದ್ದ ಪರಮಾದ್ಭುತ ವಿದ್ಯಮಾನಗಳನ್ನೆಲ್ಲ ಸ್ಪಷ್ಟವಾಗಿ ಕಾಣುತ್ತಲೂ ಇದ್ದರು. ಆದರೆ ಮಾಡುತ್ತಿರುವ ಕೆಲಸವನ್ನು ಅರ್ಧಕ್ಕೆ ಬಿಟ್ಟು ಹೋದರೆ ಶ್ರೀರಾಮಕೃಷ್ಣರಿಗೆ ಅನನುಕೂಲವಾಗುವುದೆಂಬ ಕಾರಣದಿಂದ, ಬೇಕೆಂದೇ ಅಲ್ಲಿಗೆ ಹೋಗಲಿಲ್ಲ. ಅವರ ಗುರುಭಕ್ತಿಗೂ ಕರ್ತವ್ಯನಿಷ್ಠೆಗೂ ಇದಕ್ಕಿಂತ ಒಳ್ಳೆಯ ನಿದರ್ಶನ ಬೇಕೆ?

ಆದರೆ, ಈ ಎಲ್ಲ ಯುವಕರೂ ಎಡೆಬಿಡದೆ ಕಾಶೀಪುರದ ಉದ್ಯಾನಗೃಹದಲ್ಲೇ ವಾಸಿಸಿದ್ದೂ, ಆ ಘಟನೆ ನಡೆದಾಗ ಅಲ್ಲೇ ಇದ್ದೂ, ಇತರ ಭಕ್ತರಿಗೆ ಲಭ್ಯವಾದ ಭಾಗ್ಯ ಇವರಿಗೆ ಮಾತ್ರ ಇಲ್ಲದಂತಾಯಿತಲ್ಲಾ!—ಎಂದೆನಿಸಬಹುದು ನಮಗೆ. ಇದು ಕೇವಲ ಒಂದು ಆಕಸ್ಮಿಕವೆ? ಅಥವಾ ಇದಕ್ಕೇನಾದರೂ ಸಂಕೇತಾರ್ಥವಿರಬಹುದೆ?—ಎಂಬ ಪ್ರಶ್ನೆಯೇಳುವುದೂ ಸಹಜವೇ. 'ನನ್ನ ಇಹಜೀವನದ ಅಂತ್ಯದ ವೇಳೆಗೆ ಭಕ್ತರಲ್ಲಿ ಅಂತರಂಗ ವಲಯಕ್ಕೆ ಸೇರಿದವರು ಮತ್ತು ಬಹಿರಂಗ ವಲಯಕ್ಕೆ ಸೇರಿದವರು ಎಂದು ವಿಂಗಡನೆಯಾಗುತ್ತದೆ' ಎಂದು ಶ್ರೀರಾಮಕೃಷ್ಣರೇ ಹೇಳಿದ್ದರು. ಮತ್ತು ಈ 'ಅಂತರಂಗ ವಲಯ'ಕ್ಕೆ ಸೇರಿದವರಾದ ಭಾವೀ ಯತಿಗಳಿಗೆ ಅವರು ಅತ್ಯುನ್ನತ ಸ್ಥಾನ ನೀಡಿದ್ದರು. ಮತ್ತು ಅವರ ಆಧ್ಯಾತ್ಮಿಕ ಶ್ರೇಯಸ್ಸಿನ ಹೊಣೆಯನ್ನು ತಾವು ಹೊತ್ತು, ಅವರಿಗೆ ಪ್ರತ್ಯೇಕ ಶಿಕ್ಷಣ ನೀಡಿ ಹೆಚ್ಚಿನ ಕೃಪೆ ಮಾಡಿದ್ದರು. ಆದ್ದರಿಂದ ಅವರು ಇತರರೊಂದಿಗೆ ಈ ಸಂದರ್ಭದಲ್ಲಿ ಬಂದು ಪಡೆಯಬೇಕಾದುದೇನಿಲ್ಲ ಎನ್ನುವುದೇ ಶ್ರೀರಾಮಕೃಷ್ಣರ ಅಭಿಪ್ರಾಯವಾಗಿತ್ತೆಂಬಂತೆ ತೋರುತ್ತದೆ.

ಅಂದಿನ ಅದ್ಭುತ ಪ್ರಸಂಗದಲ್ಲಿ ಭಾಗಿಗಳಾಗಿದ್ದ ಭಕ್ತರಲ್ಲನೇಕರು ಸಾಮಾನ್ಯ ಸ್ಥಿತಿಗೆ ಮರಳಿದ ಮೇಲೆ, ಶ್ರೀರಾಮಕೃಷ್ಣರ ಆ ಅಪೂರ್ವ ಭಾವದ ಕುರಿತಾಗಿ ವಿಚಾರ ಮಾಡಿದರು. ಅವರು ಆಗ ಉಕ್ಕಿ ಹರಿವ ಕರುಣಾಸಾಗರರಾದುದನ್ನು, ಭಕ್ತರ ಅರ್ಹತೆಗೂ ಮೀರಿ ಕೃಪೆ ಮಾಡಿದ್ದನ್ನು ಕಂಡಾಗ, ಆ ಮುಹೂರ್ತದಲ್ಲಿ ಅವರೊಂದು ಕಲ್ಪವೃಕ್ಷವೇ ಆಗಿಬಿಟ್ಟಿದ್ದರು ಎನ್ನಲಡ್ಡಿಯಿಲ್ಲ! ರಾಮಚಂದ್ರ ದತ್ತನೇ ಮೊದಲಾದ ಭಾವುಕ ಭಕ್ತರಿಂದ ಈ ಭಾವನೆ ಬಹು ಬೇಗ ಪ್ರಚಾರವಾಗಿ ಭಕ್ತಸಮೂಹದಲ್ಲಿ ಸ್ಥಿರವಾಗಿ ನಿಂತುಬಿಟ್ಟಿತು. ಮತ್ತು ಜನವರಿ ಒಂದನೇ ದಿನವೆಂಬುದು 'ಕಲ್ಪತರು ದಿನ'ವೆಂದೇ ಪ್ರಸಿದ್ಧವಾಯಿತು.*

ಆದರೆ ಶ್ರೀರಾಮಕೃಷ್ಣರ ಅಗ್ರಗಣ್ಯ ಸಂನ್ಯಾಸಿಶಿಷ್ಯರಲ್ಲೊಬ್ಬರೂ, ಅವರ ಜೀವನ-ಸಂದೇಶಗಳ ವಿಚಾರದಲ್ಲಿ ಅಗಾಧ ಜ್ಞಾನ ಹೊಂದಿದ್ದವರೂ ಆದ ಸ್ವಾಮಿ ಶಾರದಾನಂದರು ಈ ವಿಚಾರದಲ್ಲಿ ಆಡುವ ಮಾತು ಅತ್ಯಂತ ಸೂಕ್ತವೂ ಯುಕ್ತವೂ ಆಗಿದೆ. 'ಶ್ರೀರಾಮಕೃಷ್ಣ ಲೀಲಾಪ್ರಸಂಗ'ದಲ್ಲಿ ಅವರೆನ್ನುತ್ತಾರೆ: "ಕಲ್ಪವೃಕ್ಷದ ಗುಣವೇನೆಂದರೆ ಯಾರು ಏನನ್ನೇ ಬೇಡಲಿ, ಅದನ್ನು ಅವನಿಗೆ ಕೊಡುವುದು. ಅದರಿಂದ ಅವನಿಗೆ ಹಿತವಾಗಬಹುದೆ, ಶ್ರೇಯಸ್ಸಾಗಬಹುದೆ ಎನ್ನುವುದನ್ನು ಅದು ವಿವೇಚಿಸ ಹೋಗುವುದಿಲ್ಲ. ಆದ್ದರಿಂದ ಒಬ್ಬನು ಕಲ್ಪವೃಕ್ಷದಿಂದ ತನಗೆ ಬೇಕೆನಿಸಿದ್ದನ್ನು ಪಡೆದುಕೊಂಡರೂ ಕೊನೆಗೆ ಅದರಿಂದ ಅವನಿಗೆ ಕೆಡುಕೇ ಆಗಬಹುದು. ಆದರೆ ಆ ದಿನ ಶ್ರೀರಾಮಕೃಷ್ಣರು ಹಾಗೆ ಮಾಡದೆ, ಅಲೌಕಿಕ ಸುಖಪ್ರಾಪ್ತಿಯ ದಾರಿಯನ್ನೇ ಸುಗಮಗೊಳಿಸಿದರು. ನಿಜಕ್ಕೂ, ಅವರು ಅಂದು ತಮ್ಮ ದೈವತ್ವವನ್ನು, ಅಥವಾ ದೇವಮಾನವತ್ವವನ್ನು ಬಹಿರಂಗಪಡಿಸಿದರು. ತನ್ಮೂಲಕ, ತಮ್ಮಲ್ಲಿ ಶರಣಾಗಿ ಬಂದ ಸರ್ವರಿಗೂ ಪಕ್ಷಪಾತವಿಲ್ಲದೆ ಅಭಯವನ್ನೂ ಆಶ್ರಯವನ್ನೂ ನೀಡಿದರು."

ಪರಮಾತ್ಮನ ಅಗಣಿತ ಕಲ್ಯಾಣಗುಣಗಳಲ್ಲಿ ಕರುಣೆಯೇ ಪ್ರಧಾನವಾದುದು ಎಂದು ಪರಿಗಣಿಸಲಾಗಿದೆ. ಸಕಲ ಸದ್ಗುಣಗಳೂ ರತ್ನಸದೃಶವಾದವುಗಳೆಂಬುದು ನಿಜ

---

*ನೋಡಿ: ಅನುಬಂಧ ೨.

ವಾದರೂ ಕರುಣೆಯ ಕುಂದಣವಿಲ್ಲದೆ ಅವು ಶೋಭಿಸಲಾರವು. ಪಂಡಿತ-ಪಾಮರ, ಬಡವ-ಬಲ್ಲಿದ, ಪುಣ್ಯಾತ್ಮ-ಪಾಪಾತ್ಮರೆಂಬ ಯಾವ ಭೇದವೂ ಇಲ್ಲದಂತೆ ಸರ್ವರಿಗೂ ಸಮಾನವಾಗಿ ಜೀವನಾಧಾರವಾದ ಗಾಳಿ ನೀರು ಬೆಳಕುಗಳು ದೊರೆಯುತ್ತಿರುವುದರ ಹಿನ್ನೆಲೆಯಲ್ಲಿ ಪರಮಾತ್ಮನ ಕರುಣೆಯನ್ನೇ ಕಾಣಬಹುದಾಗಿದೆ. ಪರಮಾತ್ಮನು ಮಾನವರೂಪ ಧರಿಸಿ, ಮಾನವರ ನಡುವೆಯೇ ಓಡಾಡುತ್ತ ಮಾನವಮಂಗಲವನ್ನು ಸಾಧಿಸುವ ಅವನ ಕಾರ್ಯಪ್ರಣಾಳಿಯಲ್ಲೂ ವ್ಯಕ್ತವಾಗುವುದು ಅದೇ ಕರುಣೆಯೇ. ಈಗ ಶ್ರೀರಾಮಕೃಷ್ಣರ ದೈವತ್ವವೆಂಬುದು ಮಾನವತ್ವದ ಪರದೆಯನ್ನು ಹರಿದು ಕಾಣಿಸಿಕೊಂಡ ಸಂದರ್ಭದಲ್ಲಿ ಭಕ್ತರೆಲ್ಲ ಕಂಡು ಅನುಭವಿಸಿದುದು ಅದೇ ಅಲೌಕಿಕ ಪ್ರೇಮ-ಕರುಣೆಗಳನ್ನೇ.

* * * *

ಈ ಘಟನೆಯಾದ ಮೇಲೆ ಶ್ರೀರಾಮಕೃಷ್ಣರಿಗೆ ದೇಹದಲ್ಲೆಲ್ಲ ಉರಿತದ ಅನುಭವವಾಗತೊಡಗಿತು. ತಾವೆಲ್ಲರೂ ಸಂಯಮ ಮೀರಿ ಅವರ ಪವಿತ್ರ ಪಾದಗಳನ್ನು ಸ್ಪರ್ಶ ಮಾಡಿದ್ದರಿಂದಲೇ ಹೀಗಾಗಿದೆ ಎಂದು ಭಕ್ತರು ಪಶ್ಚಾತ್ತಾಪಪಟ್ಟರು. ಶ್ರೀರಾಮಕೃಷ್ಣರು ಸ್ವಲ್ಪ ಗಂಗಾಜಲವನ್ನು ತರಿಸಿ ಮೈಮೇಲೆ ಪ್ರೋಕ್ಷಿಸಿಕೊಂಡ ಬಳಿಕವೇ ಉರಿತ ಕಡಿಮೆಯಾಯಿತು.

ಶ್ರೀರಾಮಕೃಷ್ಣರ ಲೀಲಾ ಪರ್ಯವಸಾನ ಕಾಲ ವೇಗವಾಗಿ ಸಮೀಪಿಸುತ್ತಿದ್ದಂತೆ, ಯುವಶಿಷ್ಯರ ಸಾಧನೋತ್ಸಾಹವೂ ಭುಗಿಲೆದ್ದುಬಿಟ್ಟಿತ್ತು. ಈ ವಿಷಯದಲ್ಲಿ ನರೇಂದ್ರನೇ ಅಗ್ರಗಣ್ಯ ಮತ್ತು ಎಲ್ಲರಿಗೂ ಅವನೇ ಮಾದರಿ. ಸಾಕ್ಷಾತ್ಕಾರದ ಹಂಬಲ ಅವನೊಳಗೆ ದಾವಾನಲದಂತೆ ಕುದಿಯುತ್ತಿತ್ತು. ಅವನೂ ಅವನ ಗುರುಬಂಧುಗಳೂ ಹೇಗೆ ದಾಪು ಗಾಲು ಹಾಕುತ್ತ ಆಧ್ಯಾತ್ಮಿಕ ಶಿಖರಾರೋಹಣಪಥದಲ್ಲಿ ಮುನ್ನಡೆಯುತ್ತಿದ್ದರು ಎಂಬುದನ್ನು ಗಮನಿಸಲು ಬಹಳ ಸ್ವಾರಸ್ಯವಾಗಿದೆ.

ಕಾಶೀಪುರದ ಉದ್ಯಾನಗೃಹಕ್ಕೆ ಬಂದ ಕೆಲದಿನಗಳ ಮೇಲೆ ಶ್ರೀರಾಮಕೃಷ್ಣರು ನರೇಂದ್ರನಿಗೆ ವಿಧಿಯುಕ್ತವಾಗಿ ಮಂತ್ರದೀಕ್ಷೆ ನೀಡಿದರು. ಅವನಿಗೆ ಶ್ರೀರಾಮಮಂತ್ರವನ್ನು ಉಪದೇಶಿಸುತ್ತ "ಇದು ನಿನ್ನ ಇಷ್ಟಮಂತ್ರ; ಮತ್ತು ಇದು ನನಗೆ ನನ್ನ ಗುರುವಿನಿಂದ ದೊರಕಿದ ಮಂತ್ರ" ಎಂದು ತಿಳಿಸಿಕೊಟ್ಟರು.

ಶ್ರೀರಾಮಕೃಷ್ಣರು ನರೇಂದ್ರನಿಗೆ ಇಷ್ಟದೇವತಾಮಂತ್ರವನ್ನು—ಶ್ರೀರಾಮಮಂತ್ರವನ್ನು—ಉಪದೇಶಿಸಿದ್ದು ನಮಗೆ ಆಶ್ಚರ್ಯಕರವಾಗಿ ತೋರಬಹುದು. ಏಕೆಂದರೆ, ನರೇಂದ್ರನದು ಜ್ಞಾನಮಾರ್ಗವಲ್ಲವೆ? ಅವನಿಗೆ ಶ್ರೀರಾಮಕೃಷ್ಣರು ಅದ್ವೈತಜ್ಞಾನದ ಬೋಧನೆಯನ್ನಲ್ಲವೆ ನೀಡುತ್ತಿದ್ದುದು? ಆದರೆ, ಅವನದು ಶ್ರೀರಾಮಕೃಷ್ಣರಂತೆಯೇ ಬಹುಮುಖ ವ್ಯಕ್ತಿತ್ವ. ಭಕ್ತಿ ಜ್ಞಾನ ಕರ್ಮ ಧ್ಯಾನ—ಈ ಎಲ್ಲ ಯೋಗಗಳೂ ಅವನಲ್ಲಿ ಪರಿಪೂರ್ಣವಾಗಿ ಅಭಿವ್ಯಕ್ತಿ ಪಡೆಯುವ ರೀತಿಯಲ್ಲಿ ಶ್ರೀರಾಮಕೃಷ್ಣರು ಅವನನ್ನು ರೂಪಿಸುತ್ತಿದ್ದರು. ಅಲ್ಲದೆ, ಅವನು ಶಿವಾಂಶಸಂಭೂತ ಎಂದು ಅವರೇ ಹೇಳುತ್ತಿದ್ದರು. ಶಿವನ ಇಷ್ಟದೇವತೆ ರಾಮ, ರಾಮನ ಇಷ್ಟದೇವತೆ ಶಿವ ಎಂಬುದು ಶಾಸ್ತ್ರೋಕ್ತಿ. ನರೇಂದ್ರನಿಗೆ ಅವರು ರಾಮಮಂತ್ರೋಪದೇಶವಿತ್ತುದನ್ನು ನಾವು ಈ ದೃಷ್ಟಿಯಿಂದಲೂ ಅರ್ಥೈಸಿಕೊಳ್ಳಬಹುದು.

ಈ ಮಂತ್ರೋಪದೇಶದಿಂದ ನರೇಂದ್ರನ ಮೇಲಾದ ಪರಿಣಾಮ ಅತ್ಯದ್ಭುತ. ಶ್ರೀರಾಮಕೃಷ್ಣರು ಪರಮಹಂಸ ತೋತಾಪುರಿಯಿಂದ ಅದ್ವೈತ ಸಾಧನೆಯಲ್ಲಿ ದೀಕ್ಷೆ ಪಡೆದ ಸಂದರ್ಭವನ್ನು ನೆನಪಿಗೆ ತರುವಂತಿದೆ ಅದು. ರಾಮಮಂತ್ರವನ್ನು ಪಡೆದುಕೊಂಡೊಡನೆಯೇ ನರೇಂದ್ರನಲ್ಲೊಂದು ಹೊಸ ಭಾವಪ್ರಚೋದನೆಯಾಯಿತು. ಆ ದಿನ ಸಂಜೆ ಅವನು ಗಟ್ಟಿಯಾಗಿ "ರಾಮ! ರಾಮ! ರಾಮ!" ಎಂದು ಉಚ್ಚರಿಸುತ್ತ, ಆನಂದೋತ್ಸಾಹಭರಿತನಾಗಿ ಉದ್ಯಾನಗೃಹಕ್ಕೆ ಮತ್ತೆಮತ್ತೆ ಸುತ್ತುಬರುತ್ತಿರುವುದನ್ನು ಕಂಡು ಶಿಷ್ಯರು ಆಶ್ಚರ್ಯಚಕಿತರಾದರು. ಅವನ ಆವೇಶವನ್ನು ಕಂಡು, ಹತ್ತಿರ ಹೋಗಲೂ ಅವರಿಗೆ ಧೈರ್ಯ ಬರಲಿಲ್ಲ. ಅವನಿಗೆ ಬಾಹ್ಯಜಗತ್ತಿನ ಪರಿವೆಯೇ ಇದ್ದಂತಿರಲಿಲ್ಲ! ಶಿಷ್ಯರಿಂದ ಈ ವಿಷಯ ತಿಳಿದಾಗ ಶ್ರೀರಾಮಕೃಷ್ಣರು, "ಇರಲಿ ಬಿಡಿ, ಅವನು ತಾನಾಗಿಯೇ ಯಥಾಸ್ಥಿತಿಗೆ ಬರುತ್ತಾನೆ" ಎಂದರು. ನರೇಂದ್ರ ಇನ್ನೂ ಒಂದೆರಡು ತಾಸುಗಳ ಕಾಲ ಅದೇ ಆನಂದಭರಿತ ಸ್ಥಿತಿಯಲ್ಲಿ ರಾಮನಾಮವನ್ನುಚ್ಚರಿಸುತ್ತ ಪ್ರದಕ್ಷಿಣೆ ಹಾಕುತ್ತಿದ್ದು, ಕ್ರಮೇಣ ಭಾವದಿಂದಿಳಿದು ಸಾಮಾನ್ಯ ಸ್ಥಿತಿಗೆ ಮರಳಿದ.

ಆದರೆ ಇಂತಹ ಅಸಾಮಾನ್ಯ ಅನುಭವಗಳಿಂದಲೂ ನರೇಂದ್ರನಿಗೆ ತೃಪ್ತಿಯಿಲ್ಲ, ಸಮಾಧಾನವಿಲ್ಲ. ಒಂದು ದಿನ ಅವನು ತನ್ನ ಚಡಪಡಿಕೆಯನ್ನು ತನ್ನ ಆಪ್ತನೂ ಹಿರಿಯನೂ ಆದ ಮಹೇಂದ್ರನಾಥನ ಮುಂದೆ ಏಕಾಂತದಲ್ಲಿ ತೋಡಿಕೊಳ್ಳುತ್ತಾನೆ—ಆ ವಿಷಯಗಳನ್ನು ಬಹಿರಂಗಪಡಿಸುವುದಿಲ್ಲವೆಂಬ ಆಶ್ವಾಸನೆಯ ಮೇಲೆ. ಆ ಸಂಭಾಷಣೆಯನ್ನು 'ಶ್ರೀರಾಮಕೃಷ್ಣ ವಚನವೇದ'ದಲ್ಲಿ ನೋಡಬಹುದು.

ಜನವರಿ ೨ರಂದು ತಾನು ಧ್ಯಾನ ಮಾಡುತ್ತಿದ್ದಾಗ ತನ್ನ ಎದೆಯಲ್ಲಿ ಏನೋ ಒಂದು ವಿಚಿತ್ರ ಸಂವೇದನೆಯುಂಟಾಯಿತು ಎಂಬ ಆಶ್ಚರ್ಯಕರ ವಿಚಾರವನ್ನು ನರೇಂದ್ರ ಹೊರಗೆಡಹುತ್ತಾನೆ. ಮಹೇಂದ್ರನಾಥ ಆತನ ಆಧ್ಯಾತ್ಮಿಕ ಪ್ರಗತಿಯನ್ನು ಕಣ್ಣಾರೆ ಕಾಣುತ್ತಿದ್ದವನು; ಮತ್ತು ಶ್ರೀರಾಮಕೃಷ್ಣರ ಸ್ವಾನುಭವವಾಣಿಯನ್ನೂ ಉಪದೇಶಗಳನ್ನೂ ಬಹಳಷ್ಟು ಕೇಳಿದ್ದವನು. ಆದ್ದರಿಂದ ಅವನು ಕೂಡಲೇ ಹೇಳಿದ, "ಅದು ಕುಂಡಲಿನಿ ಜಾಗ್ರತವಾದದ್ದರ ಲಕ್ಷಣವಿರಬಹುದು."

ನರೇಂದ್ರ: "ಇರಬಹುದೇನೋ. ನಾನು ಇಡಾ-ಪಿಂಗಳಾ ನಾಡಿಗಳ ತುಡಿತವನ್ನು ಸ್ಪಷ್ಟವಾಗಿ ಅನುಭವಿಸಿದೆ. ಮತ್ತು ನನ್ನ ಎದೆಯನ್ನು ಮುಟ್ಟಿನೋಡುವಂತೆ ಬಳಿಯಲ್ಲಿದ್ದ ಹಾಜರನಿಗೆ ಹೇಳಿದೆ. ನಿನ್ನೆ ಠಾಕೂರರಿಗೂ ಈ ವಿಷಯವನ್ನು ತಿಳಿಸಿದೆ. ಆಮೇಲೆ, 'ಅವೊತ್ತು (ಒಂದನೇ ತಾರೀಕಿನಂದು) ಎಲ್ಲರಿಗೂ ಸಾಕ್ಷಾತ್ಕಾರದ ಅನುಭವ ಮಾಡಿಸಿಕೊಟ್ಟಿರಿ. ನನಗೆ ಮಾತ್ರ ಏನೂ ಇಲ್ಲವೆ ?' ಅಂತ ಗೋಗರೆದೆ. ಅದಕ್ಕವರು, 'ನೀನು ಮೊದಲು ನಿನ್ನ ಮನೆಯವರಿಗೆಲ್ಲ ಒಂದು ಸರಿಯಾದ ವ್ಯವಸ್ಥೆ ಮಾಡಿ ಬಾ. ಆಮೇಲೆ ಎಲ್ಲವೂ ದೊರೆಯುತ್ತದೆ. ಈಗ ನಿನಗೇನು ತಾನೆ ಬೇಕು ಹೇಳು ?' ಎಂದರು. ನಾನೆಂದೆ, 'ಒಟ್ಟಿಗೆ ಮೂರುಮೂರು ನಾಲ್ನಾಲ್ಕು ದಿನಗಳ ಕಾಲ ಎಡೆಬಿಡದೆ ಸಮಾಧಿಯಲ್ಲಿ ಮುಳುಗಿದ್ದುಬಿಡಬೇಕು, ಯಾವಾಗಲಾದರೂ ಒಂದೊಂದು ಸಲ ಸ್ವಲ್ಪ ಆಹಾರವನ್ನು ಹೊಟ್ಟೆಗೆ ಹಾಕಿಕೊಳ್ಳುವುದಕ್ಕಾಗಿ ಮಾತ್ರ ಸಾಮಾನ್ಯಸ್ಥಿತಿಗೆ ಇಳಿದು ಬರಬೇಕು ಅಷ್ಟೆ ಅಂತನ್ನುವ ಆಸೆ ನನಗೆ.' ಅದಕ್ಕವರು, 'ಛೆ ! ನಿನ್ನದೆಂಥ ಸಣ್ಣ ಬುದ್ಧಿ ! ಅದಕ್ಕಿಂತಲೂ ಉನ್ನತವಾದ ಸ್ಥಿತಿ ಇದೆಯಯ್ಯಾ ! "ಈ ಜಗದಲ್ಲಿ ಏನೇನಿದೆಯೋ ಎಲ್ಲವೂ ನೀನೇ" ಎನ್ನುವ ಹಾಡನ್ನು ನೀನೇ ಹೇಳುತ್ತಿರುತ್ತೀಯ, ಅಂಥವನು ಈಗ ಬಂದು ಕೇವಲ ಸಮಾಧಿ ಸುಖಕ್ಕಾಗಿ ಆಸೆ ಪಡುತ್ತೀಯಲ್ಲ !... ಹೋಗು, ನಿನ್ನ ಮನೆ ಮಂದಿಗೆ ಏನಾದರೊಂದು ವ್ಯವಸ್ಥೆ ಮಾಡಿಟ್ಟು ಬಾ. ಆಮೇಲೆ ಸಮಾಧಿಗಿಂತಲೂ ಎತ್ತರದ ಸ್ಥಿತಿಗೇರುವೆಯಂತೆ' ಅಂತ ಬೈದು ಬುದ್ಧಿ ಹೇಳಿದರು. ಇವೊತ್ತು ಬೆಳಗ್ಗೆ ನಾನು ಮನೆಗೆ ಹೋಗಿದ್ದೆ. 'ನಿನ್ನ ಲಾ ಪರೀಕ್ಷೆ ಹತ್ತಿರ ಬರುತ್ತಿದೆ. ನೀನು ಮಾತ್ರ ಅಯೋಗ್ಯನ ಹಾಗೆ ಅಲೆದಾಡುತ್ತಿದ್ದೀಯಲ್ಲ !' ಅಂತ ಮನೆಯಲ್ಲಿ ಎಲ್ಲರೂ ಬೈದರು. ಪುಸ್ತಕಗಳನ್ನು ತೆಗೆದುಕೊಂಡು, ಓದಿಕೊಳ್ಳಲೆಂದು ಅಜ್ಜಿಯ ಮನೆಗೆ ಹೋದೆ. ಪುಸ್ತಕ ತೆರೆದು ಓದಲು ಪ್ರಯತ್ನಪಟ್ಟೆ. ಆದರೆ ಯಾಕೋ ನನ್ನನ್ನೊಂದು ವಿಚಿತ್ರ ಭೀತಿ ಆವರಿಸಿಕೊಂಡುಬಿಟ್ಟಿತು. ಈ ಪುಸ್ತಕಗಳನ್ನು ಓದುವುದೇ ಒಂದು ಭಯಂಕರ ದೋಷ ಎಂಬ ಭಾವನೆ ಒತ್ತರಿಸಿಬಂತು. ನನ್ನ ಎದೆಯೊಳಗೆ ದೊಡ್ಡ ಹೋರಾಟ ಶುರುವಾಯಿತು. ಒಂದೇ ಸಮನೆ ಅಳತೊಡಗಿದೆ. ನನ್ನ ಜೀವಮಾನದಲ್ಲೇ ನಾನೆಂದೂ ಹಾಗೆ ಅತ್ತವನಲ್ಲ. ಒಮ್ಮೆಗೇ ಆ ಪುಸ್ತಕಗಳನ್ನೆಲ್ಲ ಬಿಸಾಡಿ ಎದ್ದೋಡಲಾರಂಭಿಸಿದೆ. ಚಪ್ಪಲಿಗಳೆಲ್ಲ ಎಲ್ಲೋ ಕಳಚಿ ಬಿದ್ದುಹೋದುವು. ದಾರಿಯಲ್ಲಿದ್ದ ಹುಲ್ಲಿನ ಬಣವೆಯ

ಸಂದಿಯಲ್ಲೇ ನುಗ್ಗಿದೆ. ಮೈಕೈಗೆಲ್ಲ ಹುಲ್ಲುಕಡ್ಡಿಗಳು ಅಂಟಿಕೊಂಡುವು. ಹಾಗೇ ಓಡುತ್ತ ಓಡುತ್ತ ಇಲ್ಲಿಗೆ ಬಂದು ನಿಂತೆ...''

ಅವನ ಈ ಬಗೆಯ ವ್ಯಾಕುಲತೆಯನ್ನು ಗಮನಿಸಿ, ಶ್ರೀರಾಮಕೃಷ್ಣರು ಇತರ ಶಿಷ್ಯರ ಮುಂದೆ ಮೆಚ್ಚುಗೆಯ ಮಾತಾಡುತ್ತಿದ್ದರು. ಅವರ ನಿರ್ದೇಶನದಲ್ಲಿ ಅವನು ಅನೇಕ ಆಧ್ಯಾತ್ಮಿಕ ಸಾಧನೆಗಳನ್ನು ನಡೆಸುತ್ತ ಯಶಸ್ವಿಯಾಗಿ ಮುನ್ನಡೆಯುತ್ತಿದ್ದ. ತಮ್ಮೀ ಪ್ರಮುಖ ಶಿಷ್ಯನನ್ನು ಅವರು ಮುಂದಿನ ಮಹಾಕಾರ್ಯಕ್ಕಾಗಿ ಸಜ್ಜುಗೊಳಿಸುತ್ತಿದ್ದರು. ಮತ್ತು ಅವನ ಹಾಗೂ ಇತರ ಶಿಷ್ಯರ ಭವಿಷ್ಯದ ಕರ್ತವ್ಯಗಳ ಬಗ್ಗೆ ಸೂಚನೆ ನೀಡುತ್ತಿದ್ದರು. ತಾವೆಲ್ಲರೂ ಭವ್ಯ ಆಧ್ಯಾತ್ಮಿಕ ವ್ಯಕ್ತಿತ್ವವನ್ನು ರೂಪಿಸಿಕೊಂಡು, ಸಂಸಾರ ತ್ಯಾಗ ಮಾಡಿ, ಶ್ರೀರಾಮಕೃಷ್ಣರ ದಿವ್ಯ ಸಂದೇಶಗಳನ್ನು ಜಗತ್ತಿನಲ್ಲಿ ಪ್ರಸಾರ ಮಾಡಬೇಕಾಗಿದೆ ಎನ್ನುವುದರ ಕಲ್ಪನೆ ಆಗ ಅವರಾರಿಗೂ ಇರಲಿಲ್ಲ ಎನ್ನಬೇಕು. ಶ್ರೀರಾಮಕೃಷ್ಣರ ದಿವ್ಯದೃಷ್ಟಿಗೆ ಭವಿಷ್ಯತ್ತೆಲ್ಲ ಸೂರ್ಯಸ್ಪಷ್ಟ. ಆದರೆ ಮುಂದೆ ಆ ಯುವಕಶಿಷ್ಯರು ಒಂದು ವೇಳೆ ಹರಿಹಂಚಿಹೋದರೆಂದರೆ, ಆಮೇಲೆ ಅವರು ತಮ್ಮತಮ್ಮಷ್ಟಕ್ಕೆ ಸಾಧನೆ ಮಾಡಿ ಮಹಾತ್ಮರೇ ಆದರೂ ಅವರಿಂದ ಲೋಕಕಲ್ಯಾಣಕಾರ್ಯ ಸಾಧ್ಯವಾಗುವುದಿಲ್ಲ; ಅವರುಗಳು ಒಗ್ಗಟ್ಟಿನಿಂದಿರಬೇಕಾದರೆ, ಅವರೆಲ್ಲರ ಮನವರಿತು ನಡೆಸಿಕೊಂಡು ಹೋಗಬಲ್ಲ ನಾಯಕನೊಬ್ಬ ಬೇಕೇಬೇಕು; ಮತ್ತು ಈ ಸಾಮರ್ಥ್ಯವುಳ್ಳವನು ನರೇಂದ್ರನೊಬ್ಬನೇ ಎಂಬುದನ್ನು ಶ್ರೀರಾಮಕೃಷ್ಣರು ಅರಿತಿದ್ದರು. ಆದ್ದರಿಂದ ಅವರು ಒಂದು ದಿನ ಅವನನ್ನು ಕರೆಸಿ, ''ನೋಡು, ಈ ಯುವಕರನ್ನೆಲ್ಲ ನಾನು ನಿನ್ನ ರಕ್ಷಣೆಯಲ್ಲಿ ಬಿಟ್ಟುಹೋಗುತ್ತಿದ್ದೇನೆ. ನಾನು ಶರೀರತ್ಯಾಗ ಮಾಡಿದ ಮೇಲೂ ಇವರುಗಳು ಆಧ್ಯಾತ್ಮಿಕ ಸಾಧನೆಯನ್ನು ಮುಂದುವರಿಸುವಂತೆ, ಮತ್ತು ಮನೆಗಳಿಗೆ ಹಿಂದಿರುಗದೆ ಒಟ್ಟಾಗಿರುವಂತೆ ನೋಡಿಕೊ'' ಎಂದು ಸ್ಪಷ್ಟ ಸೂಚನೆಯಿತ್ತರು. ಮುಂದೆ ಈ ಶಿಷ್ಯರೆಲ್ಲ ಒಟ್ಟಾಗಿ ಸಂನ್ಯಾಸಜೀವನ ನಡೆಸುತ್ತ, ಆತ್ಮಸಾಕ್ಷಾತ್ಕಾರದ ಪರಮೋದ್ದೇಶವನ್ನು ಸಿದ್ಧಿಸಿಕೊಳ್ಳಬೇಕು ಎನ್ನುವುದರೊಂದಿಗೆ ಲೋಕಕಲ್ಯಾಣವೂ ನಡೆಯುವಂತೆ ತಮ್ಮ ಜೀವನಗಳನ್ನು ನಡೆಸಬೇಕು ಎಂಬುದು ಶ್ರೀರಾಮಕೃಷ್ಣರ ಉದ್ದೇಶವಾಗಿತ್ತು. ಅದರಲ್ಲೂ ನರೇಂದ್ರನ ಹೊಣೆಗಾರಿಕೆ ಹೆಚ್ಚಿನದು; ಅವನು ಮುಂದೆ ಧರ್ಮಪ್ರಚಾರ ಮಾಡುತ್ತ ಲೋಕಶಿಕ್ಷಣ ಮಾಡಬೇಕಾಗುತ್ತದೆ ಎಂಬುದರ ಸೂಚನೆಯನ್ನೂ ಅವರು ಆಗಾಗ ಅನೇಕ ಬಾರಿ ಕೊಟ್ಟಿದ್ದರು. ತಮಗೆ ಹೆಚ್ಚು ಮಾತನಾಡಲು ಸಾಧ್ಯವಿಲ್ಲದಿದ್ದಾಗಲೂ ಒಮ್ಮೆ (ಫೆಬ್ರುವರಿ ೧೧ನೇ ತಾರೀಕಿನಂದು) ಅದನ್ನು ಬರಹದ ಮೂಲಕ ಸೂಚಿಸಿದರು. ಒಂದು ಕಾಗದದ ಮೇಲೆ ಸಾಂಕೇತಿಕವಾಗಿ ನರೇಂದ್ರನನ್ನೂ ತಮ್ಮನ್ನೂ ಚಿತ್ರಿಸಿ, ''ನರೇಂದ್ರನು ಸ್ವದೇಶ-ವಿದೇಶಗಳಲ್ಲಿ ಧರ್ಮಪ್ರಚಾರ ಮಾಡುತ್ತಾನೆ'' ಎಂದು ಬರೆದು ತೋರಿಸಿದರು. ಆಗ ನರೇಂದ್ರ ವಿನಯದಿಂದ, ''ಅದು ನನ್ನಿಂದಾಗದು'' ಎಂದುತ್ತರಿಸಿದ. ಶ್ರೀರಾಮಕೃಷ್ಣರು ನಕ್ಕು, ''ನೀನು ಮಾಡಲೇಬೇಕಾಗುತ್ತದೆ. ನಿನ್ನ ಮೂಳೆಮಜ್ಜೆಗಳೇ ನಿನ್ನಿಂದ ಅದನ್ನು ಮಾಡಿಸುತ್ತವೆ'' ಎಂದರು. 'ಭಗವಂತನಿಂದ ಅಧಿಕಾರ ಪಡೆದಿದ್ದರೆ ಮಾತ್ರ ಒಬ್ಬ ಮನುಷ್ಯನ ಧರ್ಮಬೋಧನೆ ಫಲಿಸುತ್ತದೆ' ಎಂದು ಅವರೇ ಹೇಳುತ್ತಿದ್ದುದನ್ನು ನಾವು ಅನೇಕ ಬಾರಿ ನೋಡಿದ್ದೇವೆ. ಇದೀಗ ಅವರು ನರೇಂದ್ರನನ್ನು ಧರ್ಮಬೋಧಕನನ್ನಾಗಿ, ಆಚಾರ್ಯನನ್ನಾಗಿ ತಾವಾಗಿಯೇ ಪ್ರತಿಷ್ಠಾಪಿಸುತ್ತಿದ್ದಾರೆ.

ಈ ದಿನಗಳಲ್ಲಿ ಧ್ಯಾನ ಜಪ ತಪಾದಿ ಸಾಧನೆಗಳ ಫಲವಾಗಿ ತನ್ನೊಳಗೆ

ಅಸಾಮಾನ್ಯ ಶಕ್ತಿಯೊಂದು ಉಕ್ಕುತ್ತಿರುವುದನ್ನು ನರೇಂದ್ರ ಸ್ಪಷ್ಟವಾಗಿ ಅನುಭವಿಸುತ್ತಿದ್ದ. ಅದರ ಸ್ವರೂಪವನ್ನು ಪರೀಕ್ಷಿಸಿ ಅರಿತುಕೊಳ್ಳಬೇಕೆಂಬ ಸಹಜ ಕುತೂಹಲ ಒಮ್ಮೆ ಅವನಲ್ಲಿ ಉದ್ಭವಿಸಿತು.

ಒಂದು ದಿನ (ಅಂದು ಶಿವರಾತ್ರಿ) ಅವನು ಧ್ಯಾನಕ್ಕೆ ಕುಳಿತುಕೊಳ್ಳುವ ಮುನ್ನ, ತನ್ನ ಗೆಳೆಯ ಕಾಳೀಪ್ರಸಾದನಿಗೆ, "ಇನ್ನು ಸ್ವಲ್ಪ ಹೊತ್ತಿಗೆ ನನ್ನನ್ನು ಮುಟ್ಟು" ಎಂದು ಹೇಳಿ ಸ್ಥಿರವಾಗಿ ಕುಳಿತ. ಅದರಂತೆ ಅವನು ನರೇಂದ್ರನ ಮೊಣಕಾಲನ್ನು ಸ್ಪರ್ಶಿಸುತ್ತ ಬದಿಯಲ್ಲೇ ಕುಳಿತುಕೊಂಡ. ಏನಾಶ್ಚರ್ಯ! ಕಾಳೀಪ್ರಸಾದನಿಗೆ ವಿದ್ಯುತ್ ತಂತಿಯನ್ನು ಮುಟ್ಟುತ್ತಿರುವ ಅನುಭವವಾಯಿತು. ಅವನು ನರೇಂದ್ರನನ್ನು ಸ್ಪರ್ಶಿಸುತ್ತಿರುವವರೆಗೂ ಅವನ ಕೈ ಒಂದೇ ಸಮನೆ ಅದುರುತ್ತಿತ್ತು. ಸ್ವಲ್ಪ ಹೊತ್ತಿಗೆ ಧ್ಯಾನವನ್ನು ನಿಲ್ಲಿಸಿದ ನರೇಂದ್ರ, ತನ್ನನ್ನು ಸ್ಪರ್ಶಿಸಿದಾಗ ಗೆಳೆಯನಿಗೆ ಎಂತಹ ಅನುಭವವಾಯಿತು ಎಂದು ಕೇಳಿ ತಿಳಿದುಕೊಂಡ. ಅದನ್ನು ಕೇಳಿದಾಗ ಬಹುಶಃ ಅವನಿಗೂ ಆಶ್ಚರ್ಯವಾಗಿರಬೇಕು.

ಇದಾದ ತುಸು ಸಮಯದ ಮೇಲೆ ಯುವ ಸಾಧಕರೆಲ್ಲ ಸೇರಿ ಶಿವನ ಪೂಜೆಯನ್ನು ನೆರವೇರಿಸಿ ಧ್ಯಾನಕ್ಕೆ ಕುಳಿತರು. ಆಗ ಕಾಳೀಪ್ರಸಾದ ಗಾಢ ಧ್ಯಾನದಲ್ಲಿ ಮುಳುಗಿಹೋದ. ಹಿಂದೆಂದೂ ಅವನು ಅಷ್ಟು ಗಾಢ ಧ್ಯಾನವನ್ನು ಅನುಭವಿಸಿದವನಲ್ಲ. ಅವನ ಶರೀರವೆಲ್ಲ ಜಡವಾಗಿಬಿಟ್ಟಿತ್ತು. ಇದನ್ನು ಕಂಡವರೆಲ್ಲ ಆಶ್ಚರ್ಯಪಟ್ಟು, ಇದು ನರೇಂದ್ರನ ಸ್ಪರ್ಶದ ಪರಿಣಾಮವೇ ಎಂದು ಸುಲಭವಾಗಿ ಊಹಿಸಿದರು. ಪೂಜೆ, ಭಜನೆ, ಧ್ಯಾನಗಳಲ್ಲೇ ಆ ರಾತ್ರಿಯೆಲ್ಲ ಕಳೆಯಿತು.

ಮರುದಿನ ನಸುಕಿನಲ್ಲೇ ಶ್ರೀರಾಮಕೃಷ್ಣರು ನರೇಂದ್ರನನ್ನು ತಮ್ಮ ಬಳಿಗೆ ಕರೆಸಿಕೊಂಡರು. ಯಾರೂ ಹೇಳದೆಯೇ ಅವರಿಗೆ ಹಿಂದಿನ ದಿನ ನಡೆದ ಘಟನೆಯ ವಿಷಯವೆಲ್ಲ ಗೊತ್ತಾಗಿಹೋಗಿತ್ತು! ನರೇಂದ್ರ ಬಂದೊಡನೆ ತರಾಟೆಗೆ ತೆಗೆದುಕೊಂಡರು: "ಏನಿದು! ಸಂಪಾದಿಸುವುದಕ್ಕೆ ಮೊದಲೇ ಖರ್ಚು ಮಾಡಲು ಶುರುಮಾಡಿಬಿಟ್ಟೆಯಾ? ಎಂಥ ಅವಿವೇಕ! ಆಧ್ಯಾತ್ಮಿಕ ಶಕ್ತಿಯನ್ನು ಮೊದಲು ಚೆನ್ನಾಗಿ ಸಂಪಾದಿಸಿ ಶೇಖರಿಸು. ಆಮೇಲೆ ಅದನ್ನು ಹೇಗೆ ವಿನಿಯೋಗಿಸಬೇಕು, ಅದರಿಂದ ಏನು ಮಾಡಬೇಕು, ಎನ್ನುವುದನ್ನು ಸ್ವಯಂ ಜಗನ್ಮಾತೆಯೇ ತಿಳಿಸಿಕೊಡುತ್ತಾಳೆ. ಅಲ್ಲದೆ ನೀನು ನಿನ್ನ ಆಧ್ಯಾತ್ಮಿಕ ಭಾವವನ್ನು ಕಾಳೀಪ್ರಸಾದನಲ್ಲಿ ಪ್ರಚೋದಿಸಿದ್ದರಿಂದ ಅವನಿಗೆ ಎಂತಹ ಹಾನಿಯಾಗಿದೆ ಅಂತ ನಿನಗೆ ಗೊತ್ತೆ? ಇಲ್ಲಿಯವರೆಗೆ ಅವನಲ್ಲಿ ಒಂದು ನಿರ್ದಿಷ್ಟ ಕ್ರಮದಲ್ಲಿ ಬೆಳೆದುಕೊಂಡು ಬರುತ್ತಿದ್ದ ಭಾವಕ್ಕೆ ಅದರಿಂದ ಒಂದು ದೊಡ್ಡ ಆಘಾತ ತಟ್ಟಿತು."

ಇದನ್ನೆಲ್ಲ ಕೇಳಿ ನರೇಂದ್ರ ಗರಬಡಿದಂತೆ ನಿಂತುಬಿಟ್ಟ. ಅವನ ಬಾಯಿಂದ ಒಂದು ಮಾತೂ ಹೊರಡಲಿಲ್ಲ. ತಾನು ತಿಳಿವಳಿಕೆಯಿಲ್ಲದೆ ಮಾಡಿದ ಪ್ರಯೋಗದಿಂದ ಅಷ್ಟು ಅನಾಹುತವಾಗಬಹುದು ಎಂದು ಅವನು ಊಹಿಸಿರಲಿಲ್ಲ. ಆಧ್ಯಾತ್ಮಿಕ ಜಗತ್ತಿನ ಅನೇಕ ಸೂಕ್ಷ್ಮ ವಿಚಾರಗಳನ್ನು ಈಗ ಮನಗಂಡು ಅವನು ಬೆರಗಾಗಿಹೋದ. ಅಲ್ಲದೆ ಅದಕ್ಕಿಂತ ಆಶ್ಚರ್ಯದ ಸಂಗತಿಯೆಂದರೆ, ತಾವು ಏನೇನು ಮಾಡಿದೆವೋ ಎಲ್ಲವೂ ಶ್ರೀರಾಮಕೃಷ್ಣರಿಗೆ ಆದಾಗಲೇ ತಿಳಿದುಹೋಗಿದೆ! ಇನ್ನು, ಅವರಿಗೆ ತಿಳಿಯದಿರುವುದಾದರೂ ಏನಿರಬಹುದು?

ಈಗ ಶ್ರೀರಾಮಕೃಷ್ಣರು ತಮ್ಮ ಮಾತನ್ನು ಮುಂದುವರಿಸುತ್ತ ಹೇಳಿದರು, "ಹೋಗಲಿ, ಆದದ್ದಾಯಿತು. ಇನ್ನುಮೇಲಾದರೂ ಇಂಥ ಅವಿವೇಕದ ಕೆಲಸ ಮಾಡಬೇಡ. ಹುಡುಗನ ಅದೃಷ್ಟ ಚೆನ್ನಾಗಿತ್ತು. ಆದ್ದರಿಂದ ಹೆಚ್ಚು ಅನರ್ಥವಾಗಲಿಲ್ಲ." ನಿಜಕ್ಕೂ ಆ ವಿಪತ್ತು ನಿವಾರಣೆಯಾದದ್ದು ಅವರ ಕೃಪಾಬಲದಿಂದಾಗಿಯೇ ಎಂಬುದರ ಸೂಚನೆಯನ್ನು ನಾವಿಲ್ಲಿ ಕಾಣಬಹುದಾಗಿದೆ.

ನರೇಂದ್ರನೀಗ ಎಲ್ಲ ಯುವಶಿಷ್ಯರ ನೆಚ್ಚಿನ ನಾಯಕನಾಗಿ ರೂಪುಗೊಂಡಿದ್ದ. ಧೀಶಕ್ತಿ ವಾಕ್‌ಶಕ್ತಿ ವಿಚಾರಶಕ್ತಿಗಳಲ್ಲೇ ಆಗಲಿ, ಜ್ಞಾನ ಭಕ್ತಿ ವಿವೇಕ ವೈರಾಗ್ಯಗಳಲ್ಲೇ ಆಗಲಿ, ಗುರುಪ್ರೇಮ ಬಂಧುಪ್ರೇಮ ನಿಸ್ವಾರ್ಥತೆಗಳಲ್ಲೇ ಆಗಲಿ ಅವನು ತಮ್ಮೆಲ್ಲರಿಗಿಂತ ಶ್ರೇಷ್ಠನಾದವನು ಎಂಬುದು ಯುವಕರಿಗೆ ವೇದ್ಯವಾಗಿತ್ತು. 'ತಾವೆಲ್ಲ ಒಂದು, ತಮ್ಮ ಆದರ್ಶ ಬಲು ಹಿರಿದು' ಎಂಬ ಭಾವ ಅವರ ಮನದಲ್ಲಿ ಅಚ್ಚೊತ್ತುವಂತೆ ಮಾಡಿದ್ದ ನರೇಂದ್ರ. ಆ ಯುವಕರ ವೈರಾಗ್ಯಬುದ್ಧಿಯನ್ನಾಗಲಿ, ಶ್ರೀರಾಮಕೃಷ್ಣರ ಬೋಧನೆಗಳನ್ನಾಗಲಿ ಯಾರಾದರೂ ಟೀಕಿಸಿದರೆ ಅವನು ತನ್ನ ಪ್ರಚಂಡ ವಾಕ್ ಸಾಮರ್ಥ್ಯದಿಂದ ಅವರ ಬಾಯ್ಮುಚ್ಚಿಸಿಬಿಡುತ್ತಿದ್ದ. ತನ್ನ ಉಜ್ವಲ ವ್ಯಕ್ತಿತ್ವದಿಂದ ಸಹಶಿಷ್ಯರಲ್ಲೂ ಆಧ್ಯಾತ್ಮಿಕ ಜ್ವಾಲೆಯನ್ನು ಪ್ರಖರಗೊಳಿಸುತ್ತಿದ್ದ.

ಶ್ರೀರಾಮಕೃಷ್ಣರೂ ಅವನ ನಾಯಕತ್ವವನ್ನು ನಾನಾ ಬಗೆಯಲ್ಲಿ ಪ್ರೋತ್ಸಾಹಿಸಿ ಬಲಪಡಿಸುತ್ತಿದ್ದರು. "ನರೇಂದ್ರನೇ ನಿಮ್ಮ ನಾಯಕ. ಮುಂದೆ ಅವನ ಆಧ್ಯಾತ್ಮಿಕ ಶಕ್ತಿಯೇ ನಿಮಗೆ ಬೆಂಬಲವಾಗಿ, ಮಾರ್ಗದರ್ಶಕವಾಗಿ ನಿಲ್ಲುತ್ತದೆ" ಎಂದು ತರುಣ ಶಿಷ್ಯರಿಗೆ ತಿಳಿಸಿಕೊಡುತ್ತಿದ್ದರು. ಅಲ್ಲದೆ ಆ ತರುಣರೆಲ್ಲ ಶ್ರೀರಾಮಕೃಷ್ಣರನ್ನು ಸರಿಯಾಗಿ ಅರ್ಥಮಾಡಿಕೊಳ್ಳಲು ಸಾಧ್ಯವಾದದ್ದೂ ನರೇಂದ್ರನ ಮೂಲಕವೇ.

ಈ ನಡುವೆ, ನರೇಂದ್ರನ ಗುರುಭಕ್ತಿಗೂ, ಆತ್ಮಾರ್ಪಣ ಬುದ್ಧಿಗೂ ದ್ಯೋತಕವಾದ ಒಂದು ಪ್ರಸಂಗ ನಡೆಯಿತು. ಒಮ್ಮೆ ಭಕ್ತಮಂಡಲಿಯಲ್ಲಿ ಇದ್ದಕ್ಕಿದ್ದಂತೆ, 'ಶ್ರೀರಾಮಕೃಷ್ಣರ ವ್ಯಾಧಿ ಸಾಂಕ್ರಾಮಿಕವಾದದ್ದು' ಎಂಬ ವದಂತಿಯೊಂದು, ಹೇಗೋ ಏನೋ, ಹುಟ್ಟಿಕೊಂಡುಬಿಟ್ಟಿತು. ನಿಜಕ್ಕೂ ಆ ರೋಗದ ಉಗಮದ ಬಗ್ಗೆಯಾಗಲಿ, ನಿವಾರಣೋಪಾಯದ ಬಗ್ಗೆಯಾಗಲಿ ಸರಿಯಾದ ತಿಳುವಳಿಕೆಯಿಲ್ಲದ್ದರಿಂದ ಭಕ್ತರಲ್ಲಿ ಕೆಲವರು ಆ ವದಂತಿಯನ್ನು ನಂಬಿದ್ದರಲ್ಲೂ ಆಶ್ಚರ್ಯವಿಲ್ಲ. ಇದರ ಪರಿಣಾಮ ಮಾತ್ರ ವಿಪರೀತವಾಗಿತ್ತು. ತಮ್ಮ ಪ್ರಿಯ ಗುರುದೇವನ ಕಾಯಿಲೆ ವಾಸಿಯಾಗುವುದಿರಲಿ, ತಮಗೇ ಅದು ಅಂಟಿಕೊಂಡರೇನು ಗತಿ ಎಂದು ಆ ಭಕ್ತರು ಹೆದರಿ ಹಿಂಜರಿಯತೊಡಗಿದರು. ಇದನ್ನು ತಿಳಿದಾಗ ನರೇಂದ್ರ ವ್ಯಗ್ರನಾದ. ತಡಮಾಡದೆ ತನ್ನ ಜೊತೆಗಾರರನ್ನೆಲ್ಲ ಕರೆದುಕೊಂಡು ಶ್ರೀರಾಮಕೃಷ್ಣರ ಕೋಣೆಗೆ ಧಾವಿಸಿದ. ಅಲ್ಲಿ ಶ್ರೀರಾಮಕೃಷ್ಣರು ಕುಡಿದು ಮಿಕ್ಕಿದ್ದ, ಹಾಗೂ ಅವರ ಎಂಜಲು ಬೆರೆತಿದ್ದ ಗಂಜಿಯ ಲೋಟವಿತ್ತು. ನರೇಂದ್ರ ಒಂದು ಮಾತನ್ನೂ ಆಡದೆ ಅದನ್ನೆತ್ತಿ ಗಟಗಟನೆ ಕುಡಿದುಬಿಟ್ಟ! 'ಶ್ರೀರಾಮಕೃಷ್ಣರ ಕಾಯಿಲೆ ಸಾಂಕ್ರಾಮಿಕ ಎನ್ನುವುದು ಸುಳ್ಳು' ಎಂಬುದನ್ನೂ, 'ಒಂದು ವೇಳೆ ಅದು ಸಾಂಕ್ರಾಮಿಕವೇ ಆದರೆ, ನಾವೂ ಸಂತೋಷದಿಂದ ಅವರ ಸೇವೆಯಲ್ಲೇ ಪ್ರಾಣ ನೀಗೋಣ' ಎಂದೂ ಅವನು ಈ ಮೂಲಕ ಸಹಶಿಷ್ಯರಿಗೆ ಮನವರಿಕೆ ಮಾಡಿಸಿದ. ಅದನ್ನು ಕಂಡವರೆಲ್ಲ ಸ್ತಂಭಿತರಾದರು. ಪಶ್ಚಾತ್ತಾಪದಿಂದ ತಲೆತಗ್ಗಿಸಿದರು. ಅವರ ಮನದ ಶಂಕೆ ಒಮ್ಮೆಗೇ ಅಳಿದುಹೋಯಿತು.

## ಮಹಾಪ್ರಸ್ಥಾನಕ್ಕೆ ಮೊದಲು... ೪೦

ವರ್ಷಾರಂಭದ ವೇಳೆಗೆ ಶ್ರೀರಾಮಕೃಷ್ಣರ ಆರೋಗ್ಯದಲ್ಲಿ ಕಂಡುಬಂದಿದ್ದ ಕಿಂಚಿತ್ ಸುಧಾರಣೆಯೂ ಕ್ರಮೇಣ ಮಾಯವಾಗಿದೆ. ಈಗ ಅವರ ಶರೀರ ದಿನ ದಿನಕ್ಕೂ ಇಂಗಿಹೋಗುತ್ತಿದೆ. ಆಹಾರವಂತೂ ಅತಿ ಕಡಿಮೆ. ಅವರ ಸುಂದರ ತನುವೀಗ ಕೇವಲ ಅಸ್ಥಿಪಂಜರದಂತಾಗಿಬಿಟ್ಟದೆ. ಎಲ್ಲಿಗೆ ಹೋಯಿತು ಹಿಂದಿನ ಆ ಕೋಕಿಲ ಗಾಯನ? ಎತ್ತ ಹೋಯಿತು ಆ ಸಿಂಹನರ್ತನ? ಅವರನ್ನು ನೋಡಿದರೆ ಭಕ್ತರಿಗೆ ಕರುಳು ಕಿತ್ತುಬರುವಂತಾಗುತ್ತಿದೆ. ಆಗಾಗ ಗಂಟಲಿನಿಂದ ರಕ್ತಸ್ರಾವವಾಗುವುದನ್ನು ಕಂಡರಂತೂ ತಮಗೇ ಆ ಯಾತನೆ ಆಗುತ್ತಿದೆಯೋ ಎಂಬಂತೆ ಸಂಕಟಪಡುತ್ತಾರೆ. ತಮ್ಮ ಪ್ರಾಣದ ಪ್ರಾಣ, ತಮ್ಮ ಜೀವನಾಧಾರ, ತಮ್ಮಿಂದ ದೂರವಾಗಲಿದೆ ಎಂಬ ಕಟುಸತ್ಯದ ಅರಿವು ಮತ್ತೆಮತ್ತೆ ಮೂಡುತ್ತಿದೆ. ಆದರೆ ಇಂತಹ ವೇದನೆಯಲ್ಲೂ ಶ್ರೀರಾಮಕೃಷ್ಣರ ಮುಖದಲ್ಲಿ ಮಾತ್ರ ಸದಾ ಅದೇ ಮಂದಹಾಸ; ಮನಸ್ಸು ಅಷ್ಟೇ ಪ್ರಶಾಂತ. ನೋವು ತೀರಾ ಅಸಹನೀಯವಾದಾಗ ಉಸುರುತ್ತಿದ್ದರು: "ಓ ಮನಸ್ಸೇ, ಈ ಶರೀರವೂ ನೋವೂ ಒಂದನ್ನೊಂದು ನೋಡಿಕೊಳ್ಳಲಿ. ನೀನು ಮಾತ್ರ ಸದಾ ಆನಂದದಿಂದಿದ್ದುಬಿಡು !"

ನಿಜಕ್ಕೂ ಅವರ ಮನಸ್ಸು ಎಷ್ಟು ಉಲ್ಲಾಸಮಯವಾಗಿತ್ತು, ಹೇಗೆ ಅವರಲ್ಲಿ ಹಿಂದಿನ ಹಾಸ್ಯಪ್ರವೃತ್ತಿ ಇನ್ನೂ ಚುರುಕಾಗಿತ್ತು ಎನ್ನುವುದಕ್ಕೊಂದು ಉದಾಹರಣೆ ಯನ್ನು ನೋಡಬಹುದು.

ಒಂದು ದಿನ ಶಾರದಾದೇವಿಯವರು ಪತಿದೇವನಿಗಾಗಿ ಒಂದು ಬಟ್ಟಲು ಹಾಲನ್ನು ಹಿಡಿದುಕೊಂಡು ಮೆಟ್ಟಿಲು ಹತ್ತಿ ಬರುತ್ತಿದ್ದರು. ಆ ಮಹಡಿಯ ಮೆಟ್ಟಿಲು ಗಳು ಬಹಳ ಎತ್ತರೆತ್ತರದವು. ಅವನ್ನು ಹತ್ತಬೇಕೆಂದರೆ ತುಂಬ ಪ್ರಯಾಸ ಪಡ ಬೇಕಾಗುತ್ತಿತ್ತು. ಆ ದಿನ ಅವರಿಗೆ ಇದ್ದಕ್ಕಿದ್ದಂತೆ ತಲೆಸುತ್ತು ಬಂದಂತಾಗಿ ಕೆಳಕ್ಕೆ ಬಿದ್ದು ಬಿಟ್ಟರು. ಪರಿಣಾಮವಾಗಿ ಕಾಲಿನ ಮಣಿಕಟ್ಟು ಉಳುಕಿ ಊದಿಕೊಂಡು ಮಹಡಿಯ ನ್ನೇರಲು ಸಾಧ್ಯವಿಲ್ಲದಂತಾಯಿತು. ಸತಿಗೆ ಪೆಟ್ಟಾದುದನ್ನು ತಿಳಿದು ಶ್ರೀರಾಮಕೃಷ್ಣರು ಮರುಗಿದರು. ಅಲ್ಲದೆ ತಮ್ಮ ಪಥ್ಯ ಪಾನಗಳಿಗೆ ಸತಿಯ ನೆರವನ್ನೇ ಅವಲಂಬಿಸಿ ಕೊಂಡಿದ್ದ ಅವರಿಗೀಗ ಆ ಬಗ್ಗೆಯೂ ಆತಂಕವಾಯಿತು. ಸಮೀಪದಲ್ಲಿದ್ದ ಬಾಬು ರಾಮನನ್ನು ನೋಡುತ್ತ ಉದ್ಗರಿಸಿದರು: "ಏನಪ್ಪಾ ಮಾಡುವುದೀಗ, ಹೀಗಾಗಿ ಹೋಯಿತಲ್ಲ! ಇನ್ನು ನನಗೆ ಉಣಿಸುವವರು ಯಾರು?... ಹೋಗಲಿ, ಒಂದು ಕೆಲಸಮಾಡುತ್ತೀಯಾ?" ಹೀಗೆಂದು, ತಮ್ಮ ತೋರ್ಬೆರಳನ್ನು ಮೂಗಿನ ಬದಿಯಲ್ಲಿ ದುಂಡಗೆ ಸುತ್ತಿ ತೋರಿಸುತ್ತ* ನುಡಿದರು: "'ಅವಳನ್ನು' ಒಂದು ಬುಟ್ಟಿಯಲ್ಲಿ ಕೂಡಿಸಿಕೊಂಡು ಇಲ್ಲಿಗೆ ಎತ್ತಿಕೊಂಡು ಬರುತ್ತೀಯಾ?" ಆಗ ನರೇಂದ್ರನೂ ಅಲ್ಲಿದ್ದ.

---

*ಆ ದಿನಗಳಲ್ಲಿ ಶಾರದಾದೇವಿಯವರು ಬಳೆಯಾಕಾರದ ಮೂಗುತಿಯನ್ನು ಧರಿಸುತ್ತಿದ್ದರು. ಅದನ್ನೇ ಶ್ರೀರಾಮಕೃಷ್ಣರು ಹೀಗೆ ಸಾಂಕೇತಿಕವಾಗಿ ತೋರಿಸುತ್ತಿದ್ದಾರೆ.

ಶ್ರೀರಾಮಕೃಷ್ಣರ ತಮಾಷೆಯ ಮಾತನ್ನು ಕೇಳಿ ಬಾಬುರಾಮ-ನರೇಂದ್ರ ಇಬ್ಬರೂ ನಕ್ಕು ಹೊರಳಾಡಿದರು.

ಶಾರದಾದೇವಿಯವರ ಕಾಲಿನ ನೋವು ಮೂರು ದಿನಗಳ ಕಾಲ ಬಹಳವಾಗಿದ್ದು, ಆಮೇಲೆ ಕ್ರಮೇಣ ದೂರವಾಯಿತು. ಆ ಮೂರು ದಿನಗಳಲ್ಲಿ ಪಥ್ಯದಡುಗೆಯ ಕೆಲಸವನ್ನು ಗೋಲಾಪ್ ಮಾ ನಿರ್ವಹಿಸಿದಳು.

ಬರಿಗಣ್ಣಿಗೆ ಶ್ರೀರಾಮಕೃಷ್ಣರ ಶರೀರವು ಮೃತ್ಯುಮುಖನಾದ ಸಾಮಾನ್ಯ ರೋಗಿಯೊಬ್ಬನ ಶರೀರದಂತೆಯೇ ನಿತ್ರಾಣವಾಗಿ ಕಂಡರೂ, ಒಳಗೆ ಯೋಗಶಕ್ತಿಯೆಂಬುದು ಉಜ್ವಲವಾಗಿತ್ತು. ಆ ಶಕ್ತಿಗೆ ಅಸಾಧ್ಯವಾದುದೇ ಇಲ್ಲ. ಅದು ಭೌತಿಕ ನಿಯಮಗಳನ್ನೆಲ್ಲ ಮೀರಿದ್ದು. ಇದನ್ನು ಶಾರದಾದೇವಿಯವರು ಒಂದು ದಿನ ಅತಿಮಾನುಷ ಘಟನೆಯೊಂದರಲ್ಲಿ ಸ್ಪಷ್ಟವಾಗಿ ಕಂಡರು.

ಕಾಶೀಪುರದ ಉದ್ಯಾನದಲ್ಲಿ ಒಂದೆಡೆ ಕೆಲವು ಖರ್ಜೂರದ ಮರಗಳಿದ್ದುವು. ಈ ಖರ್ಜೂರದ ಮರಗಳಿಂದ ರಸ ತೆಗೆದು ಕುಡಿಯುವುದುಂಟು. ಅದು ರುಚಿಕರವಾದ, ಮಾದಕವಲ್ಲದ ಪಾನೀಯ. ಒಮ್ಮೆ ಕೆಲವು ತರುಣಶಿಷ್ಯರು ಬಿಡುವಿನ ವೇಳೆಯಲ್ಲಿ ಈ ರಸವನ್ನು ಸಂಗ್ರಹಿಸಲು ಹೋದರು. ಆ ಸಮಯದಲ್ಲಿ ಮನೆಯೊಳಗಿದ್ದ ಶಾರದಾದೇವಿಯವರು ಒಂದು ಅತಿ ವಿಚಿತ್ರ ದೃಶ್ಯವನ್ನು ಕಂಡರು: ಇದ್ದಕ್ಕಿದ್ದಂತೆ ಶ್ರೀರಾಮಕೃಷ್ಣರು ತಮ್ಮ ಕೋಣೆಯಿಂದ ಸರ್ರನೆ ಹೊರಬಂದು, ಮೆಟ್ಟಿಲಿಳಿದು ಬಾಣದಂತೆ ಓಡುತ್ತಿದ್ದಾರೆ! ಶಾರದಾದೇವಿಯವರು ದಿಗ್ಭ್ರಾಂತರಾಗಿ ಅವರು ಹೋದ ದಿಕ್ಕನ್ನೇ ನೋಡುತ್ತ ನಿಂತರು. 'ಇದೆಲ್ಲಾದರೂ ಸಾಧ್ಯವೆ? ಹಾಸಿಗೆಯಿಂದೇಳುವುದಿರಲಿ, ಮಗ್ಗುಲು ತಿರುಗುವುದಕ್ಕೂ ಅವರಿಗೆ ಶಕ್ತಿಯಿಲ್ಲ. ಅಂಥವರು ಹೀಗೆ ಓಡಿದರೆಂದರೆ ಹೇಗೆ ನಂಬಲಿ?... ಅಥವಾ ನಾನು ಕಂಡದ್ದು ಕೇವಲ ಭ್ರಮೆಯೆ?' ಹೀಗೆಂದುಕೊಳ್ಳುತ್ತ ಕೋಣೆಯೊಳಗೆ ಹೋಗಿ ನೋಡುತ್ತಾರೆ—ಶ್ರೀರಾಮಕೃಷ್ಣರು ಅಲ್ಲಿಲ್ಲ! ಕೋಣೆ ಖಾಲಿ! 'ಅವರೆಲ್ಲಿಗೆತಾನೆ ಹೋಗಿರಬಹುದು? ಏತಕ್ಕಾಗಿ ಹೋಗಿರಬಹುದು?' ಎಂದು ಅತೀವ ಕಳವಳ ಪಡುತ್ತ ಶಾರದಾದೇವಿಯವರು ತಮ್ಮ ಕೋಣೆಗೆ ಬಂದರು. ಅವರಿಗೇನೂ ಅರ್ಥವಾಗಲಿಲ್ಲ. ಕೆಲವೇ ನಿಮಿಷಗಳ ಮೇಲೆ ನೋಡುತ್ತಾರೆ—ಶ್ರೀರಾಮಕೃಷ್ಣರು ಪುನಃ ಓಡಿಬರುತ್ತಿದ್ದಾರೆ! ಅತ್ತಿತ್ತ ನೋಡದೆ, ಹೋದಷ್ಟೇ ವೇಗವಾಗಿ ಓಡಿ ಬಂದು ಮೆಟ್ಟಿಲೇರಿ ಕೋಣೆಯೊಳಹೊಕ್ಕರು! ಶಾರದಾದೇವಿಯವರ ಅಚ್ಚರಿಗೆ ಮಿತಿಯೇ ಇಲ್ಲ. ಹೋಗಲಿ, ಬೇರೆ ಯಾರಿಗಾದರೂ ಹೇಳಿದರೆ ಇದನ್ನು ನಂಬಲು ಸಾಧ್ಯವೆ? ತಾವು ಕಂಡದ್ದೆಲ್ಲ ನಿಜವೋ ತಮ್ಮ ಭ್ರಮೆಯೋ ಎಂದು ಸ್ಪಷ್ಟಪಡಿಸಿಕೊಳ್ಳಲು ಅಲ್ಲಿಗೇ ಹೋದರು. ಶ್ರೀರಾಮಕೃಷ್ಣರು ಎಂದಿನಂತೆ ಹಾಸಿಗೆಯ ಮೇಲೆ ಮಲಗಿರುವುದನ್ನು ಕಂಡು, ಕೇಳಿದರು: "ಪ್ರಭು, ಇದೇನು ನಿಮ್ಮ ಲೀಲೆ! ನೀವು ಕೆಳಗಿಳಿದು ಓಡಿದಂತೆ, ಮತ್ತೆ ವಾಪಸು ಓಡಿಬಂದಂತೆ ನಾನೀಗ ಕಂಡೆನಲ್ಲ! ಅದೆಲ್ಲ ನಿಜವೆ? ಅಥವಾ ನನ್ನ ಚಿತ್ತಭ್ರಮೆಯೆ?"

ಆಗ ಶ್ರೀರಾಮಕೃಷ್ಣರೆಂದರು, "ಓ, ನೀನದನ್ನು ನೋಡಿಬಿಟ್ಟೆಯಾ?... ನೋಡು, ಲಾಟು ನಿರಂಜನ ಈ ಹುಡುಗರೆಲ್ಲ ಖರ್ಜೂರದ ಮರದ ರಸ ಕುಡಿಯೋಣ ಅಂತ ಆ ಕಡೆ ಹೋಗುತ್ತಿದ್ದರು. ಆದರೆ ಅಲ್ಲೊಂದು ಭಯಂಕರ ಕಾಳಿಂಗ ಸರ್ಪ ಇತ್ತು. ಹುಡುಗರು ಹತ್ತಿರ ಬಂದಿದ್ದರೆ ಅದು ಅವರನ್ನು ಕಚ್ಚಿ ಸಾಯಿಸಿಬಿಡು

ತ್ತಿತ್ತು. ಪಾಪ, ಹುಡುಗರಿಗೆ ಮಾತ್ರ ಅದು ಅಲ್ಲಿರುವುದರ ಪರಿವೆಯೇ ಇಲ್ಲ. ಅದಕ್ಕೇ ನಾನು ಬೇರೆ ದಾರಿಯಿಂದ ಹೋಗಿ ಆ ಹಾವಿಗೆ, 'ಇಲ್ಲಿಂದ ಹೊರಟುಹೋಗು, ಪುನಃ ಇಲ್ಲಿಗೆ ಬರಬೇಡ ತಿಳಿಯಿತೆ ?' ಅಂತ ಹೇಳಿ ಅದನ್ನು ಓಡಿಸಿ ಬಂದುಬಿಟ್ಟೆ." ಹೀಗೆಂದ ಶ್ರೀರಾಮಕೃಷ್ಣರು, "ನೋಡು, ಈ ವಿಷಯವನ್ನು ನೀನು ಯಾರ ಮುಂದೂ ಹೇಳ ಬಾರದು" ಎಂದು ಎಚ್ಚರಿಸಿದರು. ಇದನ್ನೆಲ್ಲ ಕೇಳಿದ ಶಾರದಾದೇವಿಯವರು ತುಂಬ ಉದ್ವಿಗ್ನರಾದರು. ಅವರು ಇದನ್ನು ಬಯಲುಪಡಿಸಿದುದು ಎಷ್ಟೋ ವರ್ಷಗಳ ಮೇಲೆಯೆ.

ನಿಜಕ್ಕೂ ಇದೊಂದು ಅತಿ ವಿಚಿತ್ರ ಘಟನೆ. ಶ್ರೀರಾಮಕೃಷ್ಣರ ಸಾಧನಾಜೀವನ ಮುಕ್ತಾಯಗೊಂಡ ಮೇಲೆ ಇಂಥದೊಂದು ಘಟನೆಯನ್ನು ನಾವೆಲ್ಲೂ ನೋಡಲಿಲ್ಲ. ಅಲುಗಾಡಲೂ ಶಕ್ತಿಯಿಲ್ಲದಂತಾಗಿ ಅಸಹನೀಯ ವೇದನೆಯನ್ನನುಭವಿಸುತ್ತ ಮಲ ಗಿದ್ದ ಶ್ರೀರಾಮಕೃಷ್ಣರು ಎದ್ದು ಓಡಿಹೋಗಿ ಓಡಿಬಂದರು ಎಂದರೇನು !! ತಾವು ಮಲಗಿದ್ದಲ್ಲೇ ಆ ಹಾವಿನ ಇರವನ್ನು ಕಂಡುಕೊಂಡರು ಎಂದರೇನು !! ಸಾಲದ್ದಕ್ಕೆ ಆ ಹಾವನ್ನು ಮಾತಾಡಿಸಿದರು ಎಂದರೇನು !! ಎಲ್ಲಕ್ಕಿಂತ ಮಿಗಿಲಾಗಿ ಅವರು ಅಷ್ಟು ದೂರಕ್ಕೆ ಹೋಗಿಬಂದರೂ ಅದು ಶಾರದಾದೇವಿಯವರಲ್ಲದೆ ಬೇರೆ ಯಾರ ಕಣ್ಣಿಗೂ ಬೀಳಲಿಲ್ಲ ಎಂದರೇನು ! ಇದನ್ನೆಲ್ಲ ನಂಬಲು ಸಾಧ್ಯವೆ ? ಇಲ್ಲಿ ನಾವು ಶ್ರೀರಾಮಕೃಷ್ಣರ ಅಸಂಖ್ಯಾತ ಸಾಧನೆ-ಸಿದ್ಧಿಗಳನ್ನು ನೆನಪಿಸಿಕೊಳ್ಳಬೇಕು. ಅಣಿಮಾ ಮಹಿಮಾ ಲಘಿಮಾ ಗರಿಮಾ ಮುಂತಾದ ಅಷ್ಟಸಿದ್ಧಿಗಳು (ಎಂದರೆ, ಅತಿ ಸೂಕ್ಷ್ಮರೂಪ ತಾಳಬಲ್ಲ, ದೈತ್ಯಾಕಾರ ತಾಳಬಲ್ಲ, ಅತ್ಯಂತ ಹಗುರವಾಗಿ ಹಾರಾಡಬಲ್ಲ—ಇತ್ಯಾದಿ ಎಂಟು ಅಲೌಕಿಕ ಶಕ್ತಿಗಳು) ಅವರಿಗೆ ಲಭ್ಯವಾಗಿದ್ದುವು ಎಂದು ಹಿಂದೆ ನೋಡಿದ್ದೇವೆ. ಆ ಶಕ್ತಿಗಳು ಈ ಒಂದು ವಿಶೇಷ ಸಂದರ್ಭದಲ್ಲಿ ವ್ಯಕ್ತಗೊಂಡಿವೆ ಎಂದು ನಾವು ಅರ್ಥ ಮಾಡಿಕೊಳ್ಳಬೇಕಾಗುತ್ತದೆ. ಮತ್ತು ತಮ್ಮ ಈ ಶಕ್ತಿ ಬೇರೆ ಯಾರಿಗೂ ತಿಳಿಯ ಬಾರದು ಎನ್ನುವುದೇ ಅವರ ಉದ್ದೇಶವಾಗಿತ್ತು; ಹಾಗೂ ಶಾರದಾದೇವಿಯವರಿಗೆ ಮಾತ್ರ ಅದನ್ನು ತಿಳಿಯುವ, ಕಾಣುವ ಸಾಮರ್ಥ್ಯವಿತ್ತು ಎಂದೂ ನಾವು ಊಹಿಸ ಬೇಕಾಗುತ್ತದೆ. ಮತ್ತು ನಮಗೆ ಈ ವಿಷಯ ತಿಳಿದುಬಂದಿರುವುದು ಸ್ವಯಂ ಶಾರದಾ ದೇವಿಯವರಿಂದಲೇ ಎನ್ನುವುದೇ ಅದರ ಸತ್ಯತೆಗೆ ಸಾಕ್ಷ್ಯ.

ಮಹಾಪ್ರಸ್ಥಾನದ ದಿನ ಸಮೀಪಿಸಿದಂತೆಲ್ಲ ಶ್ರೀರಾಮಕೃಷ್ಣರ ಮನಸ್ಸು ಎತ್ತರೆತ್ತ ರಕ್ಕೆ ಏರುತ್ತ ಬ್ರಹ್ಮಭಾವದಲ್ಲಿ ಲೀನವಾಗಲು ಹವಣಿಸುತ್ತಿರುವಂತೆ ತೋರುತ್ತಿತ್ತು. ಇದಕ್ಕೆ, ಮಾರ್ಚ್ ಹದಿನೈದನೆಯ ದಿನದಂದು ಅವರು ಭಕ್ತರೊಡನೆ ನಡೆಸುವ ಸಂಭಾ ಷಣೆಯನ್ನು ಉದಾಹರಣೆಯಾಗಿ ನೋಡಬಹುದು. ಅವರ ಮಾತೆಲ್ಲ ಪಿಸುದನಿಯಲ್ಲಿ, ಇಲ್ಲವೆ ಸಂಜ್ಞೆಗಳ ಮೂಲಕ ಮಾತ್ರವೇ.

ಶ್ರೀರಾಮಕೃಷ್ಣರು (ಸುತ್ತಲೂ ಕುಳಿತಿರುವ ಯುವಶಿಷ್ಯರನ್ನು ನೋಡುತ್ತ): "ಈ ಕ್ಷಣದಲ್ಲಿ ನಾನು ಏನು ಕಾಣುತ್ತಿದ್ದೇನೆ ಗೊತ್ತೆ? ಸಕಲವೂ ಭಗವಂತನೇ ಆಗಿದ್ದಾನೆ ಎಂಬಂತೆ. ಮನುಷ್ಯರು, ಜೀವಜಂತುಗಳೆಲ್ಲ ಕೇವಲ ಚರ್ಮದ ಚೀಲಗಳು, ಭಗವಂತನೇ ಒಳಗಿದ್ದುಕೊಂಡು ಕೈ ಕಾಲು ತಲೆಗಳನ್ನೆಲ್ಲ ಆಡಿಸುತ್ತಿದ್ದಾನೆ ಎಂಬಂತೆ ಕಾಣುತ್ತಿದೆ...

"ಗಲ್ಲುಗಂಬವೂ ಭಗವಂತನೇ, ಶಿಕ್ಷೆವಿಧಿಸುವ ನ್ಯಾಯಾಧೀಶನೂ ಅವನೇ, ಮತ್ತು ಮರಣದಂಡನೆಗೊಳಗಾಗುವ ವ್ಯಕ್ತಿಯೂ ಅವನೇ ಆಗಿರುವುದನ್ನು ನಾನು ಸ್ಫುಟವಾಗಿ ಕಾಣುತ್ತಿದ್ದೇನೆ!"

ಈ ಉತ್ಕಟ ಅನುಭವವನ್ನು ಹೊಂದುತ್ತ, ಅದನ್ನು ಬಣ್ಣಿಸುತ್ತ, ಶ್ರೀರಾಮಕೃಷ್ಣರ ಮನಸ್ಸು ಅದೇ ಭಾವದಲ್ಲಿ ಲೀನವಾಯಿತು. "ಆಹ್! ಎಂಥ ದರ್ಶನ!" ಎಂದು ದ್ಗರಿಸಿ ಗಾಢಸಮಾಧಿಯಲ್ಲಿ ಮುಳುಗಿಹೋದರು. ಈಗ ಅವರಿಗೆ ಬಾಹ್ಯಜಗತ್ತಿನ ಪರಿವೆಯೇ ಇಲ್ಲ. ಭಕ್ತರೆಲ್ಲ ಈ ಅದ್ಭುತವನ್ನು ಕಂಡು ದಿಙ್ಮೂಢರಾಗಿ ಕುಳಿತರು.

ಸ್ವಲ್ಪ ಹೊತ್ತಿಗೆ ಶ್ರೀರಾಮಕೃಷ್ಣರು ಅರ್ಧಪ್ರಜ್ಞಾವಸ್ಥೆಗೆ ಹಿಂದಿರುಗಿ ನುಡಿದರು: "ಈಗ ನನಗೆ ಸ್ವಲ್ಪವೂ ನೋವಿಲ್ಲ... ನಾನೀಗ ಹಿಂದಿನಂತೆಯೇ ಆಗಿಬಿಟ್ಟೆ..."

"ಅಲ್ಲಿ ನೋಡಿ, ಲಾಟು ತಲೆಗೆ ಕೈಕಟ್ಟಿಕೊಂಡು ಕುಳಿತಿದ್ದಾನೆ. ಹಾಗೆ ಕುಳಿತಿರುವವನು ಸ್ವಯಂ ಪರಮಾತ್ಮನೇ ಎಂಬಂತೆ ಕಾಣುತ್ತಿದ್ದೇನೆ."

ಶ್ರೀರಾಮಕೃಷ್ಣರ ಕೃಪಾಪೂರ್ಣ ನಯನಗಳು ಎಲ್ಲ ಭಕ್ತರನ್ನು ಅವಲೋಕಿಸಿದುವು. ಆ ನೋಟದಲ್ಲಿ ಪ್ರೇಮದ ಹೊನಲೇ ಹರಿದುಬರುತ್ತಿತ್ತು. ಮೆಲ್ಲನೆ ಕೈಚಾಚಿ, ಹೆತ್ತ ತಾಯಿಯಂತೆ, ಸನಿಹದಲ್ಲೇ ನಿಂತಿದ್ದ ನರೇಂದ್ರ-ರಾಖಾಲರ ಮುಖಗಳನ್ನು ವಾತ್ಸಲ್ಯದಿಂದ ನೇವರಿಸಿದರು. ಕೆಲನಿಮಿಷಗಳ ಮೇಲೆ ಮಹೇಂದ್ರನಾಥ ಗುಪ್ತನ ಕಡೆಗೆ ತಿರುಗಿ ಹೇಳಿದರು:

"ಈ ಶರೀರ ಇನ್ನೂ ಹೆಚ್ಚು ಕಾಲ ಉಳಿದುಕೊಳ್ಳುವಂತಾಗಿದ್ದರೆ, ಇನ್ನೂ ಹಲವಾರು ಜನರು ಇದರ ಮೂಲಕ ಆಧ್ಯಾತ್ಮಿಕ ಜಾಗೃತಿ ಮಾಡಿಕೊಳ್ಳಬಹುದಾಗಿತ್ತು..." (ಕ್ಷಣಕಾಲದ ಮೌನದ ಬಳಿಕ:) "ಆದರೆ ಅದು ಹಾಗಾಗುವುದಿಲ್ಲ. ಈ ಸಲ ಇನ್ನು ಈ ಶರೀರ ಉಳಿಯುವುದಿಲ್ಲ."

ಶ್ರೀರಾಮಕೃಷ್ಣರ ಮುಂದಿನ ಮಾತನ್ನಾಲಿಸಲು ಎಲ್ಲರೂ ಉಸಿರು ಬಿಗಿಹಿಡಿದು ಕುಳಿತಿದ್ದಾರೆ.

"ಇಲ್ಲ, ಇಲ್ಲ. ಈ ದೇಹ ಉಳಿಯುವುದು ಭಗವಂತನಿಗೆ ಇಷ್ಟವಿಲ್ಲ. ಇನ್ನವನು ಇದನ್ನು ಉಳಿಯಗೊಡುವುದಿಲ್ಲ. ಏಕೆಂದರೆ, ನಾನು ನನ್ನ ಭೋಳೆತನದಿಂದಾಗಿ ಯಾರೆಂದರವರಿಗೆ ಎಲ್ಲವನ್ನೂ ಕೊಟ್ಟುಬಿಡುತ್ತೇನೆ. ಇದನ್ನು ಎಲ್ಲರೂ ಸದುಪಯೋಗಪಡಿಸಿಕೊಂಡಾರು ಎನ್ನುವಂತಿಲ್ಲ. ಈ ಅಪಾಯವನ್ನು ತಪ್ಪಿಸುವುದಕ್ಕಾಗಿ ಭಗವಂತ ಈ ಶರೀರವನ್ನು ಹಿಂದೆಗೆದುಕೊಂಡುಬಿಡುತ್ತಾನೆ."

ಭಕ್ತರ ಮೌನವನ್ನು ಮುರಿದು ರಾಖಾಲ ಕಾತರದಿಂದ ನುಡಿದ:

"ದಯವಿಟ್ಟು ಭಗವಂತನಿಗೆ ಹೇಳಿ ನಿಮ್ಮ ಶರೀರ ಇನ್ನೂ ಕೆಲವು ಕಾಲ ಉಳಿದುಕೊಳ್ಳುವಂತೆ ಮಾಡಿ."

ಶ್ರೀರಾಮಕೃಷ್ಣರು: "ಅದು ಉಳಿಯುವುದು ಬಿಡುವುದೆಲ್ಲ ಆತನ ಇಚ್ಛೆ. ಅದರಲ್ಲಿ ನನ್ನದೇನಿಲ್ಲ."

ನರೇಂದ್ರ: "ಆದರೆ ನಿಮ್ಮಿಚ್ಛೆಯೂ ಆತನ ಇಚ್ಛೆಯೂ ಒಂದೇ ಆಗಿಬಿಟ್ಟಿದೆ."

ಶ್ರೀರಾಮಕೃಷ್ಣರು ಅರೆಘಳಿಗೆ ಮೌನ ತಾಳಿದರು. ಅವರು ಏನೋ ಆಲೋಚಿಸುತ್ತಿದ್ದಂತಿತ್ತು. ಈಗ ಮಾತನಾಡಿದರು:

"ನಾನು ಭಗವಂತನಲ್ಲಿ ಹೇಳಿಕೊಂಡರೂ ಪ್ರಯೋಜನವಾಗುವಂತಿಲ್ಲ. ಏಕೆಂದರೆ

ನಾನೂ ಆತನೂ ಒಂದೇ ಆಗಿಬಿಟ್ಟಿರುವುದನ್ನು ಕಾಣುತ್ತಿದ್ದೇನೆ..."

ಹೀಗೆಂದಾಗ, ಎಂದರೆ 'ತಾವಿಬ್ಬರೂ ಒಂದೇ' ಎಂದಾಗ, ಭಗವಂತನಿಗೆ ತಮ್ಮ ಶರೀರವನ್ನು ಉಳಿಸುವ ಇಚ್ಛೆಯಿಲ್ಲವೆಂದರೆ, ತಮಗೂ ಇಚ್ಛೆಯಿಲ್ಲ ಎಂದಂತೆಯೇ ಆಯಿತು !

ಮತ್ತೆ ಸ್ವಲ್ಪ ಹೊತ್ತು ಮೌನ. ಅವರು ಇನ್ನೇನು ಹೇಳಿಯಾರು ಎಂದು ಎಲ್ಲರೂ ತಮ್ಮ ಕಣ್ಣು-ಕಿವಿಗಳನ್ನು ಅವರಲ್ಲೇ ಕೀಲಿಸಿ, ಕಾಯುತ್ತಿದ್ದಾರೆ.

ಶ್ರೀರಾಮಕೃಷ್ಣರು: "ಈ ಶರೀರದೊಳಗೆ ಇಬ್ಬರು ವ್ಯಕ್ತಿಗಳಿದ್ದಾರೆ. ಒಬ್ಬಳು ಜಗನ್ಮಾತೆ— (ಸ್ವಲ್ಪ ತಡೆದು) ಹೌದು, ಒಬ್ಬಳು ಆಕೆ; ಮತ್ತೊಬ್ಬ ಆಕೆಯ ಭಕ್ತ. ಹಿಂದೆ ಕೈಮುರಿದುಕೊಂಡಿದ್ದವನು ಈ 'ಭಕ್ತ'ನೇ. ಮತ್ತು ಈಗ ಕಾಯಿಲೆ ಅನುಭವಿಸುತ್ತಿರುವುದೂ ಅವನೇ. ಏನು, ಅರ್ಥವಾಯಿತೆ ?"

ತಮ್ಮೊಳಗೆ ಮಾನವತ್ವ-ದೈವತ್ವ ಬೆರೆತುಕೊಂಡಿದೆ ಎಂಬುದನ್ನು, ತಮ್ಮ ಅವತಾರತ್ವವನ್ನು, ಶ್ರೀರಾಮಕೃಷ್ಣರು ಇಷ್ಟು ಸ್ಪಷ್ಟವಾಗಿ ತಿಳಿಸಿಕೊಡುತ್ತಿರುವಾಗ ಯಾರಿಗೆ ತಾನೆ ಮಧ್ಯೆ ಸೊಲ್ಲೆತ್ತುವ ಇಚ್ಛೆಯಾದೀತು ?

ಶ್ರೀರಾಮಕೃಷ್ಣರು: "ಆಹಾ, ನಾನು ಇದನ್ನೆಲ್ಲ ಇನ್ನು ಯಾರ ಹತ್ತಿರ ಹೇಳಲಿ ? ಯಾರು ನನ್ನನ್ನು ಅರ್ಥಮಾಡಿಕೊಳ್ಳಬಲ್ಲರು ?"

ತಕ್ಷಣವೇ ರಾಖಾಲನೆಂದ: "ಅದಕ್ಕೇ ನಾವು ಕೇಳಿಕೊಳ್ಳುತ್ತಿರುವುದು—ನಮ್ಮನ್ನೆಲ್ಲ ಬಿಟ್ಟು ನೀವು ಹೊರಟುಹೋಗಬಾರದು ಅಂತ."

ಶ್ರೀರಾಮಕೃಷ್ಣರು (ಮುಗುಳ್ನಕ್ಕು): "ಇದ್ದಕ್ಕಿದ್ದ ಹಾಗೆ ಎಲ್ಲಿಂದಲೋ ಒಂದು ಗಾಯಕ-ನರ್ತಕರ ಮೇಳದವರು ಕಾಣಿಸಿಕೊಂಡರು, ಹಾಡಿದರು, ಕುಣಿದರು; ಬಳಿಕ ಹೇಗೆ ಬಂದರೋ ಹಾಗೇ ಮಾಯವಾಗಿಬಿಟ್ಟರು ! ಅವರು ಬಂದು ಹೋದರೂ ಅವರು ಯಾರೆಂಬುದು ಒಬ್ಬರಿಗೂ ತಿಳಿಯಲೇ ಇಲ್ಲ."

ಈ ದೃಷ್ಟಾಂತವನ್ನು ಕೇಳಿ ಭಕ್ತರು ಮುಗುಳ್ನಕ್ಕರು.

ಹೀಗೇ ಇನ್ನೂ ಸ್ವಲ್ಪ ಹೊತ್ತು ಸಂಭಾಷಣೆ ನಡೆಯಿತು. ಶ್ರೀರಾಮಕೃಷ್ಣರು ನರೇಂದ್ರನನ್ನು ವಾತ್ಸಲ್ಯದಿಂದ ದಿಟ್ಟಿಸಿದರು; ಬಳಿಕ ಇತರರೆಡೆಗೆ ತಿರುಗಿ ಉದ್ಗರಿಸಿದರು: "ಅದ್ಭುತ !"

ನರೇಂದ್ರ (ಮುಗುಳ್ನಗುತ್ತ): "ಯಾವುದು ಅದ್ಭುತ ?"

ಶ್ರೀರಾಮಕೃಷ್ಣರು (ಮುಗುಳ್ನಗುತ್ತ): "ಮಹಾ ತ್ಯಾಗಕ್ಕೆ ಭರದಿಂದ ಸಿದ್ಧತೆ ನಡೆಯುತ್ತಿದೆ."

ರಾಖಾಲ: "ಈಗೀಗ ನರೇಂದ್ರ ನಿಮ್ಮನ್ನು ಬಹಳ ಚೆನ್ನಾಗಿ ಅರ್ಥಮಾಡಿಕೊಳ್ಳುತ್ತಿದ್ದಾನೆ."

ಶ್ರೀರಾಮಕೃಷ್ಣರು (ನಗುತ್ತ): "ಹೌದ್ಹೌದು ! ಅವನು ಮಾತ್ರವಲ್ಲ, ಇನ್ನೂ ಅನೇಕರು ಅರ್ಥಮಾಡಿಕೊಳ್ಳಲಾರಂಭಿಸಿದ್ದಾರೆ."

ನರೇಂದ್ರ ಶ್ರೀರಾಮಕೃಷ್ಣರನ್ನು ಅರ್ಥಮಾಡಿಕೊಳ್ಳುತ್ತಿದ್ದುದೇನೋ ನಿಜ. ಆದರೆ ಅವನೊಳಗಿನ ಸಂಶಯಗಳ ತುಮುಲಗಳಿನ್ನೂ ಶಾಂತಗೊಂಡಿಲ್ಲ. ಭಗವಂತನ ಸ್ವರೂಪ-ಸ್ವಭಾವಗಳ ಬಗ್ಗೆ, ಆತ ಮನುಷ್ಯರೂಪದಲ್ಲಿ ಅವತರಿಸುತ್ತಾನೆ ಎಂಬುದರ ಸಾಧ್ಯಾಸಾಧ್ಯತೆಯ ಬಗ್ಗೆ—ಮುಖ್ಯವಾಗಿ, ಶ್ರೀರಾಮಕೃಷ್ಣರ ಸ್ವರೂಪವೇನು, ಅವರು

ಅವತಾರಪುರುಷರು ಹೌದೋ ಅಲ್ಲವೋ ಎನ್ನುವ ವಿಷಯದಲ್ಲಿ—ಅವನ ಅಂತರಂಗ ದಲ್ಲಿ ತೀವ್ರ ಜಿಜ್ಞಾಸೆ ನಡೆಯುತ್ತಿತ್ತು. ತನ್ನ ಈ ಎಲ್ಲ ಸಂದೇಹಗಳಿಗೂ ಅಂತಿಮ ಪರಿಹಾರವಾದ ಸತ್ಯಸಾಕ್ಷಾತ್ಕಾರವನ್ನು ಮಾಡಿಕೊಳ್ಳಬೇಕೆಂಬ ಹಂಬಲ ಅವನನ್ನು ಕಾಡುತ್ತಿತ್ತು.

ಈ ದಿನಗಳಲ್ಲಿ ಅವನ ಮನಸ್ಸಿನ ಒಂದು ಭಾಗವನ್ನು ಆಕ್ರಮಿಸಿಬಿಟ್ಟಿದ್ದ ಮಹಾಪುರುಷನೆಂದರೆ ಬುದ್ಧ ಭಗವಂತ. ಅನ್ಯಾದೃಶ ತ್ಯಾಗ, ಮುಮುಕ್ಷುತ್ವ, ಕರುಣೆ, ಮತ್ತು ಮಾನವಪ್ರೇಮಗಳನ್ನು ಬಿಂಬಿಸುವ ಆತನ ಜೀವನ-ಸಂದೇಶಗಳು ನರೇಂದ್ರನ ಮೇಲೆ ಪ್ರಚಂಡ ಪ್ರಭಾವ ಬೀರಿದ್ದುವು. ಅವುಗಳನ್ನು ಮತ್ತೆಮತ್ತೆ ಚಿಂತಿಸುತ್ತ ಧ್ಯಾನಿಸುತ್ತ ಅವನ ವ್ಯಕ್ತಿತ್ವವೆಲ್ಲ ಬುದ್ಧಮಯವೇ ಆಗುತ್ತಿರುವಂತೆ ತೋರಿತು! ಬಹುದಿನಗಳಿಂದಲೂ ಅವನಿಗೆ, ಬುದ್ಧನು ಸತ್ಯಸಾಕ್ಷಾತ್ಕಾರ ಮಾಡಿಕೊಂಡ ಸ್ಥಳವಾದ ಬುದ್ಧಗಯೆಗೆ ಹೋಗಬೇಕು, ಅಲ್ಲಿನ ಬೋಧಿವೃಕ್ಷದಡಿಯಲ್ಲಿ ಕುಳಿತು ಕೆಲಕಾಲ ವಾದರೂ ಧ್ಯಾನಲೀನನಾಗಬೇಕು ಎನ್ನುವ ಆಸೆಯಿತ್ತು. ಆದೀಗ ಒಮ್ಮೆಗೇ ಭುಗಿ ಲೆದ್ದಿತು. ತನ್ನ ಗುರುಭಾಯಿಗಳ ಪೈಕಿ ತಾರಕ, ಕಾಳೀಪ್ರಸಾದ ಇವರಿಬ್ಬರನ್ನು ಜೊತೆ ಮಾಡಿಕೊಂಡು, ಕಾಷಾಯಾಂಬರಧಾರಿಯಾಗಿ, ತಮ್ಮ ಯಾತ್ರೆಯ ಸುದ್ದಿಯನ್ನು ಬೇರೆ ಯಾರ ಮುಂದೆಯೂ ಹೇಳದೆ, ಏಪ್ರಿಲ್ ತಿಂಗಳಿನಲ್ಲೊಂದು ದಿನ ಇದ್ದಕ್ಕಿದ್ದಂತೆ ಹೊರಟುಬಿಟ್ಟ.

ಬುದ್ಧಗಯೆಯನ್ನು ತಲುಪಿದ ನರೇಂದ್ರ, ಆ ಸ್ಥಳವನ್ನೆಲ್ಲ ಕಣ್ತುಂಬ ನೋಡಿದ; ಅಲ್ಲಿನ ಪಾವಿತ್ರ್ಯವನ್ನು ಹೀರಿ ಪುಳಕಿತಗೊಂಡ. ಬೋಧಿವೃಕ್ಷದ ಕೆಳಗೆ ಕುಳಿತು ಧ್ಯಾನ ಮಾಡುವಾಗಲಂತೂ ತನ್ನೊಳಗೆ ಉಕ್ಕಿಬಂದ ಪ್ರಚಂಡ ಭಾವದಲೆಗಳ ರಭಸವನ್ನು ತಾಳಲಾರದೆ, ಗೆಳೆಯ ತಾರಕನನ್ನು ತಬ್ಬಿಕೊಂಡು ಅತ್ತುಬಿಟ್ಟ! ಹೀಗೆ ಅಲ್ಲಿ ಹೊಸ ದೊಂದು ಅನುಭವ ಪಡೆಯುತ್ತ ಕೆಲದಿನಗಳನ್ನು ಕಳೆದ.

ಇತ್ತ ಕಾಶೀಪುರದಲ್ಲಿ ಇತರ ತರುಣರು ತಮ್ಮ ಪ್ರಾಣಪ್ರಿಯನಾದ ನರೇಂದ್ರನಿಲ್ಲ ದಿರುವುದನ್ನು ಕಂಡು ಕಳವಳಗೊಂಡಿದ್ದರು. ಒಂದು ಕ್ಷಣವಾದರೂ ಅವನನ್ನು ಅಗ ಲಿರುವುದು ಅವರಿಗೆ ಅಸಹನೀಯವಾಗಿತ್ತು. ಅವನೂ ತಮ್ಮ ಇನ್ನಿಬ್ಬರು ಗೆಳೆಯರೂ ಕಾವಿ ತೊಟ್ಟು ಬುದ್ಧಗಯೆಗೆ ಹೋದರು ಎನ್ನುವ ಸುದ್ದಿ ಅವರಿಗೆ ಯಾರಿಂದಲೋ ತಿಳಿದುಬಂತು. ಅದನ್ನು ಕೇಳಿದಮೇಲಂತೂ, 'ಅವರು ಪರಿವ್ರಾಜಕರಾಗಿ ಹೊರಟು ಬಿಟ್ಟಿದ್ದಾರೆ! ಬಹುಶಃ ನರೇಂದ್ರ ಇನ್ನು ಹಿಂದಿರುಗಿ ಬರುವುದೇ ಇಲ್ಲ' ಎಂದು ಹೆದರಿ ದರು. ಕೆಲವರಂತೂ ತಾವೂ ಅವರನ್ನು ಹಿಂಬಾಲಿಸಿ ಹೋಗುವ ಯೋಚನೆ ಮಾಡಿ ದರು! ನರೇಂದ್ರನ ಮನದ ಉದ್ದೇಶವನ್ನು ಬೇರೊಂದು ರೀತಿಯಲ್ಲಿ ಊಹಿಸಿದ ಸುರೇಂದ್ರ ಸಿಟ್ಟಿಗೆದ್ದು, "ಅವನು ಠಾಕೂರರಿಗಿಂತಲೂ ದೊಡ್ಡ ಸಾಧುಮಹಾಪುರುಷ ರನ್ನು ಹುಡುಕಿಕೊಂಡು ಹೋಗಿದ್ದಾನೆ!" ಎಂದು ತಿರಸ್ಕಾರದಿಂದ ನುಡಿದ. ಇನ್ನು ಶ್ರೀರಾಮಕೃಷ್ಣರಂತೂ ನರೇಂದ್ರನನ್ನು ಬಿಟ್ಟಿರಲಾರದೆ ತಲ್ಲಣಿಸಿರಬೇಕಲ್ಲವೆ? ಇಲ್ಲ, ಹಾಗಾಗಲಿಲ್ಲ. ಅವರು ಸ್ವಲ್ಪವೂ ಕ್ಷೋಭೆಗೊಳ್ಳದೆ ಶಿಷ್ಯರನ್ನೆಲ್ಲ ಕರೆದು, "ಏನೂ ಹೆದರ ಬೇಡಿ, ಅವನು ಎಲ್ಲಿಗೆ ತಾನೆ ಹೋದಾನು? ನೋಡುತ್ತಿರಿ, ಅವನು ಬೇಗನೆ ಬಂದು ಬಿಡುತ್ತಾನೆ" ಎಂದು ಸಮಾಧಾನ ಮಾಡಿದರು. ಬಳಿಕ ನಗುತ್ತ ಹೀಗೆಂದರು: "ಬೇಕಾ ದರೆ ಜಗತ್ತಿನ ನಾಲ್ಕು ಮೂಲೆಗೂ ಹೋಗಿಬನ್ನಿ, ಎಲ್ಲೂ ಏನೂ (ನಿಜವಾದ ಆಧ್ಯಾತ್ಮಿ

ಕತೆ) ಇಲ್ಲ. ಇರುವುದೆಲ್ಲ (ತಮ್ಮನ್ನು ತೋರಿಸುತ್ತ) ಇಲ್ಲೇ." ಅವರು 'ಇಲ್ಲೇ' ಎಂದುದಕ್ಕೆ ಎರಡು ಅರ್ಥಗಳನ್ನು ಕಾಣಬಹುದು: ಮೊದಲನೆಯದಾಗಿ, ತಮ್ಮಲ್ಲಿ ಯಾವ ವಿಶೇಷವಾದ ದಿವ್ಯತೆಯ ಪ್ರಕಾಶ ವ್ಯಕ್ತವಾಗಿದೆಯೋ ಅದು ಈಗ ಆ ಪ್ರಮಾಣದಲ್ಲಿ ಇನ್ನೆಲ್ಲೂ ಕಾಣಸಿಗಲಾರದು ಎಂಬರ್ಥ. ಎರಡನೆಯದಾಗಿ, ಪ್ರತಿಯೊಬ್ಬನಲ್ಲೂ ಭಗವಂತನು ಅಂತರ್ಯಾಮಿಯಾಗಿರುವಾಗ, ನಮ್ಮೊಳಗೇ ಭಕ್ತಿಯನ್ನು ಉದ್ದೀಪನಗೊಳಿಸಿಕೊಳ್ಳದಿದ್ದರೆ ಬೇರೆಲ್ಲಿ ಅಲೆದಾಡಿಯೂ ಪ್ರಯೋಜನವಿಲ್ಲ ಎಂಬ ಅರ್ಥ. ಶಿಷ್ಯರು ಶ್ರೀರಾಮಕೃಷ್ಣರ ಮಾತನ್ನು ಮೊದಲ ಅರ್ಥದಲ್ಲಿ ಗ್ರಹಿಸಿದರು. ಅವರಲ್ಲಿ ಬೆಳಗುತ್ತಿರುವಂತಹ ಆಧ್ಯಾತ್ಮಿಕ ಶಕ್ತಿಯ ಪ್ರಭೆಯನ್ನು ಬೇರೆಲ್ಲೂ ಕಾಣಲಾಗದೆ ನರೇಂದ್ರ ಮರಳಿ ಬರುವುದು ಖಂಡಿತ ಎಂದರಿತು ಶಾಂತರಾದರು.

ಆದರೆ ಇನ್ನೂ ಎರಡು ಮೂರು ದಿನ ಅವನು ಕಾಣದಿದ್ದಾಗ ಇತರ ಕೆಲವರು ವ್ಯಾಕುಲರಾಗಿ, ಶ್ರೀರಾಮಕೃಷ್ಣರ ಬಳಿಗೆ ಬಂದು, "ನರೇಂದ್ರ ಬೇಗ ಹಿಂದಿರುಗುವಂತೆ ಮಾಡಿ" ಎಂದು ಮೊರೆಯಿಟ್ಟರು. ಆಗ ಅವರು ನೆಲದ ಮೇಲೆ ವೃತ್ತಾಕಾರವಾಗಿ ಗೆರೆಯೆಳೆದು, "ನೋಡಿ, ನರೇಂದ್ರ ಇದರಿಂದಾಚೆ ಹೋಗಲಾರ" ಎಂದು ನಿರ್ಧಾರಾತ್ಮಕವಾಗಿ ನುಡಿದರು. ಶ್ರೀರಾಮಕೃಷ್ಣರು ಇಷ್ಟು ಸ್ಪಷ್ಟವಾಗಿ ಹೇಳಿದಾಗ, 'ಅವರ ಇಚ್ಛಾಶಕ್ತಿಯೇ ಅವನನ್ನು ಹಿಂದಕ್ಕೆ ಎಳೆದು ತರುತ್ತದೆ, ಇನ್ನು ನಾವು ಚಿಂತಿಸಬೇಕಾಗಿಲ್ಲ' ಎಂದು ಶಿಷ್ಯರು ಸಮಾಧಾನಗೊಂಡರು. ಮತ್ತು ನಿಜಕ್ಕೂ ಹಾಗೆಯೇ ನಡೆದು ಹೋಯಿತು. ಅತ್ತ ಬುದ್ಧಗಯೆಯಲ್ಲಿ ಕೆಲದಿನಗಳನ್ನು ಕಳೆದ ಮೇಲೆ, ನರೇಂದ್ರನಿಗೂ ಅವನ ಗುರುಭಾಯಿಗಳಿಗೂ ಇದ್ದಕ್ಕಿದ್ದಹಾಗೆ ಶ್ರೀರಾಮಕೃಷ್ಣರನ್ನು ನೋಡಬೇಕೆಂಬ ಕಾತರವುಂಟಾಗಿ, ತಡಮಾಡದೆ ಹೊರಟು ಬಂದುಬಿಟ್ಟರು. ಅವರನ್ನು ಕಂಡು ಶ್ರೀರಾಮಕೃಷ್ಣರಿಗೂ ಗುರುಭಾಯಿಗಳಿಗೂ ಆದ ಸಂತಸ ಅಷ್ಟಿಷ್ಟಲ್ಲ.

'ಮಹಾತ್ಯಾಗಕ್ಕೆ ಸಿದ್ಧತೆ ನಡೆಯುತ್ತಿದೆ' ಎಂದು ಶ್ರೀರಾಮಕೃಷ್ಣರು, ಮುಂದೆ ಸಂಭವಿಸಲಿರುವ ಮಹತ್ತರ ಘಟನೆಯೊಂದನ್ನು ಸೂಚ್ಯವಾಗಿ ತಿಳಿಸಿದ್ದನ್ನು ನೋಡಿದೆವು. ಆದರೆ ಅವರು ತಮ್ಮ ಶಿಷ್ಯರಲ್ಲಿ ಯಾರನ್ನೇ ಆದರೂ ಕರೆದು, 'ನೀನು ಮುಂದೆ ಸಂಸಾರತ್ಯಾಗ ಮಾಡಬೇಕು, ಸಂನ್ಯಾಸಿಯಾಗಬೇಕು' ಎಂದು ತಾವಾಗಿಯೇ ಹೇಳಿದವರಲ್ಲ. ಏಕೆಂದರೆ ತ್ಯಾಗವೈರಾಗ್ಯಗಳು ಅಂತರಂಗದಿಂದ ಸ್ಫುರಣೆಯಾಗಬೇಕೇ ಹೊರತು, ಮತ್ತೊಬ್ಬರ ಪ್ರಚೋದನೆಯಿಂದಲ್ಲ. ಹಾಗೆ ಮತ್ತೊಬ್ಬ ವ್ಯಕ್ತಿಯ ಮೇಲಿನ ಗೌರವದಿಂದಲೋ ಪ್ರೀತಿಯಿಂದಲೋ ಆತ ವೈರಾಗ್ಯ ತಳೆದರೂ ಅದು ಸ್ಥಿರವಾಗಿ ನಿಲ್ಲುವ ಸಂಭವ ಕಡಿಮೆ. ಆದ್ದರಿಂದ, ತಮ್ಮ ಸಂಸರ್ಗದಿಂದಾಗಿ ಅದಾಗಲೇ ತ್ಯಾಗಶೀಲತೆಯನ್ನು ಬೆಳೆಸಿಕೊಂಡಿರುವ ತರುಣರು ತಮ್ಮ ನಿರ್ಯಾಣಾನಂತರವೂ ಪಥಭ್ರಷ್ಟರಾಗದೆ ಛಲದಿಂದ ಮುಂದುವರಿಯಬೇಕು ಎನ್ನುವ ಇಚ್ಛೆಯನ್ನು ಶ್ರೀರಾಮಕೃಷ್ಣರು ವ್ಯಕ್ತಪಡಿಸಿದರಾದರೂ ಅದನ್ನು ಶಿಷ್ಯರ ಮೇಲೆ ಹೇರಲಿಲ್ಲ. ಅಥವಾ ವಿಧಿಯುಕ್ತವಾಗಿ ಸಂನ್ಯಾಸ ದೀಕ್ಷೆ ನೀಡಲಿಲ್ಲ. ಆದರೆ, ಇನ್ನೂ ಕೆಲವು ಸೂಚನೆಗಳ ಮೂಲಕ ಅವರು ತಮ್ಮ ಇಂಗಿತವನ್ನು ಸ್ಪಷ್ಟಗೊಳಿಸಿದರು.

ಒಂದು ದಿನ ಅವರು ತಮ್ಮ ಯುವಶಿಷ್ಯರನ್ನು ಕರೆದು, ಸಂನ್ಯಾಸಿಗಳಂತೆ ಮನೆ ಮನೆಗೆ ಹೋಗಿ ಭಿಕ್ಷೆಯೆತ್ತಿ ತರುವಂತೆ ಹೇಳಿದರು. ಆ ಯುವಕರೋ ಸತ್ಕುಲವಂತರು, ಸುಶಿಕ್ಷಿತರು. ಆದರೂ, ಅವರು ಶ್ರೀರಾಮಕೃಷ್ಣರ ಭಾವವನ್ನು ಗ್ರಹಿಸಿ, ಅಭಿಮಾನವನ್ನು

ತ್ಯಜಿಸಿ ಸಂತೋಷದಿಂದ ಭಿಕ್ಷಾಪಾತ್ರೆ ಹಿಡಿದು ಹೋಗಿ, "ನಾರಾಯಣ ಹರಿ!" ಎನ್ನುತ್ತ ಭಿಕ್ಷೆ ಬೇಡಿದರು. (ಇದಕ್ಕೆ ಶಾಸ್ತ್ರದಲ್ಲಿ 'ಮಧುಕರ ವೃತ್ತಿ' ಅಥವಾ 'ಮಾಧುಕರೀ ಭಿಕ್ಷೆ' ಎಂಬ ಹೆಸರಿದೆ.*) ಆಗ ಅವರಿಗೆ ಅನೇಕ ಬಗೆಯ ಅಮೂಲ್ಯ ಅನುಭವಗಳಾದುವು. ಅವರ ಅಂತರ್ಯದಲ್ಲಿ ವೈರಾಗ್ಯವಿರುವುದೇನೋ ನಿಜವೇ. ಆದರೆ ಮೈಮೇಲೆ ಕಾವಿ ಇಲ್ಲವಲ್ಲ! ಹೋಗಲಿ, ಬಡ ವಟುಗಳೆನ್ನೋಣವೇ? ನೋಡುವುದಕ್ಕೆ ಒಳ್ಳೇ ಕಟ್ಟುಮಸ್ತಾಗಿದ್ದಾರೆ! ಆದರೂ ಕೆಲವರು ಮರುಕದಿಂದಲೋ ಎಂಬಂತೆ ಭಿಕ್ಷೆ ಹಾಕಿದರು. ಅಕ್ಕಿ, ಬೇಳೆ ಮುಂತಾದ ಧಾನ್ಯಗಳೆಲ್ಲ ಸಂಗ್ರಹವಾದುವು. ಅವನ್ನು ತಂದು ಅಡಿಗೆ ಮಾಡಿ ಮೊದಲು ಶ್ರೀರಾಮಕೃಷ್ಣರಿಗೆ ನಿವೇದಿಸಿದರು. ಅವರು ಅದರಲ್ಲಿ ಒಂದೆರಡು ಅಗುಳನ್ನು ಬಾಯಿಗೆ ಹಾಕಿಕೊಂಡು "ಆಹ್, ಇದು ಅತ್ಯಂತ ಪರಿಶುದ್ಧವಾದ ಆಹಾರ, ಭೇಷ್!" ಎಂದುದ್ಗರಿಸಿದರು. ಬಳಿಕ ಶಿಷ್ಯರು ತಮ್ಮ ಪ್ರಥಮ ಭಿಕ್ಷೆಯನ್ನು ಆನಂದದಿಂದ ಭುಜಿಸಿದರು.

ಈ ಶಿಷ್ಯರಿಗೆ ಸಂನ್ಯಾಸದ ಮುಖ್ಯ ಚಿಹ್ನೆಯಾದ ಕಾಷಾಯವಸ್ತ್ರವನ್ನು ಶ್ರೀರಾಮಕೃಷ್ಣರು ತಮ್ಮ ಕೈಯಿಂದಲೇ ನೀಡಲೂ ಒಂದು ಸಂದರ್ಭ ತಾನಾಗಿಯೇ ಒದಗಿ ಬಂತು. ಒಮ್ಮೆ, ಕಲ್ಕತ್ತದ ಮೂಲಕ ಗಂಗಾಸಾಗರ ಕ್ಷೇತ್ರಕ್ಕೆ ಹೋಗುವ ಕೆಲವು ಸಾಧುಸಂನ್ಯಾಸಿಗಳಿಗೆ ಹೊಸ ಕಾಷಾಯವಸ್ತ್ರವನ್ನೂ ರುದ್ರಾಕ್ಷಿಮಾಲೆಯನ್ನೂ ದಾನಮಾಡುವ ಇಚ್ಛೆ ವ್ಯಕ್ತಪಡಿಸಿದ ಹಿರಿಯ ಗೋಪಾಲ. ಆಗ ಶ್ರೀರಾಮಕೃಷ್ಣರು ನರೇಂದ್ರ ಮೊದಲಾದ ತರುಣರನ್ನು ತೋರಿಸಿ ಅವನಿಗೆಂದರು, "ಇಲ್ಲಿದ್ದಾರೆ ನೋಡು ತ್ಯಾಗಿಗಳಾದ ಹುಡುಗರು! ಇವರಿಗಿಂತ ಪರಿಶುದ್ಧರಾದ ವ್ಯಕ್ತಿಗಳನ್ನು ಹುಡುಕಿಕೊಂಡು ಇನ್ನೆಲ್ಲಿಗೆ ಹೋಗುತ್ತಿ? ಆ ವಸ್ತುಗಳನ್ನು ಇವರಿಗೇ ಕೊಡು, ನಿನಗೆ ಶ್ರೇಯಸ್ಸಾಗುತ್ತದೆ."

ಇದನ್ನು ಕೇಳಿ ಹಿರಿಯ ಗೋಪಾಲ ಬಹಳ ಸಂತೋಷಪಟ್ಟು ಹನ್ನೆರಡು ಜೊತೆ ಪಂಚೆ ಶಲ್ಯಗಳನ್ನು ಮತ್ತು ರುದ್ರಾಕ್ಷಿಮಾಲೆಗಳನ್ನು ತಂದು ಶ್ರೀರಾಮಕೃಷ್ಣರ ಮುಂದಿಟ್ಟ. ಅವುಗಳನ್ನು ಅವರು ನರೇಂದ್ರ, ರಾಖಾಲ, ಬಾಬುರಾಮ, ನಿರಂಜನ, ಯೋಗೀಂದ್ರ, ತಾರಕ, ಶಶಿ, ಶರಚ್ಚಂದ್ರ, ಕಾಳೀಪ್ರಸಾದ ಮತ್ತು ಲಾಟು—ಈ ಯುವಕರಿಗೆ ಆಶೀರ್ವಾದಪೂರ್ವಕವಾಗಿ ನೀಡಿದರು. ಒಂದನ್ನು ಹಿರಿಯಗೋಪಾಲನಿಗೇ ಕೊಟ್ಟು ಅವನಿಗೂ ಸಂನ್ಯಾಸದ ಮಾರ್ಗವನ್ನು ಸುಗಮಗೊಳಿಸಿದರು. ಉಳಿದ ಮತ್ತೊಂದು ಜೊತೆಯನ್ನು ಗಿರೀಶನಿಗಾಗಿ ಎತ್ತಿರಿಸಿದರು. ಹೀಗೆ ಭವಿಷ್ಯದಲ್ಲಿ ಅತಿ ದೊಡ್ಡ ಸಂನ್ಯಾಸೀಸಂಘವಾಗಿ ಬೆಳೆದ ವಟವೃಕ್ಷದ ಬೀಜವನ್ನು ಶ್ರೀರಾಮಕೃಷ್ಣರು ತಮ್ಮ ಕೈಯಾರೆ ನೆಟ್ಟರು.

ಹಗಲಿರುಳೂ ಶ್ರೀರಾಮಕೃಷ್ಣರ ದಿವ್ಯ ಸಾನ್ನಿಧ್ಯದಲ್ಲೇ ಇರುತ್ತ ನಿರಂತರವಾಗಿ ಭಗವದ್ವಿಚಾರ-ಧ್ಯಾನ-ಅಧ್ಯಯನಗಳಲ್ಲೇ ತೊಡಗಿದ್ದ ಈ ತರುಣರ ವ್ಯಕ್ತಿತ್ವ ಬಹುವೇಗದಲ್ಲಿ ವಿಕಸನಗೊಳ್ಳುತ್ತಲಿತ್ತು. ಅವರಲ್ಲಿ ಒಬ್ಬೊಬ್ಬರ ಸ್ವಭಾವವೂ ವಿಶಿಷ್ಟ. ಗುರುಭಕ್ತಿಯಲ್ಲಂತೂ ಅವರೆಲ್ಲರೂ ಅಸಾಮಾನ್ಯರೇ ಸರಿ. ಆದರೆ ಸಮಸ್ತ ಭಕ್ತ-ಶಿಷ್ಯರ ಪೈಕಿ ಶಶಿಭೂಷಣನ ಗುರುಪ್ರೇಮ-ಗುರುಭಕ್ತಿಗಳು ಅಪೂರ್ವ, ಅತುಲನೀಯ. ಸೇವಾ

---

*ವಿವರಗಳಿಗೆ ಇದೇ ಲೇಖಕರ 'ವೀರಸಂನ್ಯಾಸಿ ವಿವೇಕಾನಂದ' ಗ್ರಂಥದ ಅನುಬಂಧವನ್ನು ನೋಡಬಹುದು.

ಭಾವದ ಮೂರ್ತರೂಪವೇ ಅವನಾಗಿಬಿಟ್ಟಿದ್ದ. ಗುರುಸೇವೆಯೇ ಅವನಿಗೆ ಅತ್ಯುಚ್ಚ ಧರ್ಮ, ಆಧ್ಯಾತ್ಮಿಕ ಜೀವನದ ಪರಮಾದರ್ಶ. ಗುರುವಿನ ಗುಲಾಮನಾಗಿರುವುದೊಂದೇ ಇಹಪರಗಳಲ್ಲೂ ಅವನ ಪಾಲಿನ ಪರಮ ಭಾಗಧೇಯ. ಉಳಿದೆಲ್ಲ ಸಾಧನೆಗಳೂ ಸಾಧನಗಳೂ ಅವನಿಗೆ ಗೌಣ. ಆಹಾರ ವಿಶ್ರಾಂತಿಗಳನ್ನೂ ಮರೆತು, ಸ್ವಂತ ಸುಖದ ಪರಿವೆಯೇ ಇಲ್ಲದೆ ಅವನು ಶ್ರೀರಾಮಕೃಷ್ಣರ ಸೇವೆಯಲ್ಲಿ ನಿರತನಾಗಿರುತ್ತಿದ್ದ. ಇಂಥದೊಂದು ಕಾರ್ಯ ತನ್ನಿಂದ ಸಾಧ್ಯವಿಲ್ಲ ಎನ್ನುವ ಮಾತೇ ಅವನಲ್ಲಿಲ್ಲ! ಅವರ ದೈಹಿಕ ಯಾತನೆಯನ್ನು ಕಿಂಚಿತ್ತಾದರೂ ಪರಿಹರಿಸುವುದಕ್ಕಾಗಿ ಅವನು ಏನು ಮಾಡಲೂ ಸಿದ್ಧ. ಶ್ರೀರಾಮಕೃಷ್ಣರು ಅವನಿಗೆ ಪ್ರಾಣಪ್ರಿಯರೆಂದು ಹೇಳಿದರೆ ತಪ್ಪಾಗುತ್ತದೆ; ಅವರು ತನ್ನ ಪ್ರಾಣಕ್ಕಿಂತಲೂ ಬಹುಪಾಲು ಹೆಚ್ಚು ಪ್ರಿಯರು! ಇಂತಹ ನಿಸ್ವಾರ್ಥ ಸೇವೆಯೇ ಅವನಿಗೆ ಶ್ರೀಗುರುವಿನ ಅನುಗ್ರಹವನ್ನೂ ತನ್ಮೂಲಕ ಪರಿಪೂರ್ಣತೆಯನ್ನೂ ಗಳಿಸಿಕೊಟ್ಟುದರಲ್ಲಿ ಆಚ್ಚರಿಯೇನಿದೆ?

ಈ ದಿನಗಳಲ್ಲೇ ನರೇಂದ್ರನ ಆಧ್ಯಾತ್ಮಿಕ ಸಾಧನೆಯ ತೀವ್ರತೆ ಹೆಚ್ಚುತ್ತ ಅದು ಪರಾಕಾಷ್ಠೆಯನ್ನು ಮುಟ್ಟುತ್ತಿತ್ತು. ಈಗ ಒಂದು ಬಯಕೆ ಅವನೊಳಗೆ ಭೂತದಂತೆ ಹೊಕ್ಕುಬಿಟ್ಟಿದೆ; ಹಗಲಿರುಳೂ ಕಾಳ್ಗಿಚ್ಚಿನಂತೆ ಉರಿಯುತ್ತಿದೆ. ಏನದು? ಅದ್ವೈತ ಸಾಧನೆಯ ಅತ್ಯುನ್ನತ ಸ್ಥಿತಿಯಾದ ನಿರ್ವಿಕಲ್ಪ ಸಮಾಧಿಯ ಆನಂದವನ್ನು ಅನುಭವಿಸಬೇಕೆಂಬ ಹಂಬಲ! ಈ ಜಗತ್ತು, ತನ್ನ ದೇಹ, ಮನಸ್ಸು, ಬುದ್ಧಿಗಳೆಲ್ಲವನ್ನೂ ಮರೆತು, ಆತ್ಮದಲ್ಲಿ ಲೀನನಾಗಿ ಸುಖಿಸುತ್ತಿರಬೇಕೆಂಬ ಆಸೆ! ಮತ್ತು ಚಿರಮುಕ್ತನಾಗಿಬಿಡಬೇಕು ಎನ್ನುವ ಕಾತರ! ತನಗೆ ಅದನ್ನು ಶ್ರೀರಾಮಕೃಷ್ಣರು ಸಂಕಲ್ಪಮಾತ್ರದಿಂದ ಕೊಡಿಸಬಲ್ಲರು ಮತ್ತು ಆ ಶಕ್ತಿಯಿರುವುದು ಅವರೊಬ್ಬರಿಗೇ ಎಂಬ ಅರಿವು ಅವನಿಗೆ ಚೆನ್ನಾಗಿತ್ತು. ಅವರ ಮುಂದೆ ಎಷ್ಟೋ ಸಲ ತನ್ನ ಬಯಕೆಯನ್ನು ತೋಡಿಕೊಂಡಿದ್ದ. ಆಗೆಲ್ಲ ಅವರು ನಾನಾ ಬಗೆಯಿಂದ ಸಮಾಧಾನ ನೀಡಿ ಸುಮ್ಮನಾಗಿಸಿದ್ದರು. ಆದರೆ ಇನ್ನು ಅವನಿಗೆ ತಡೆಯಲು ಸಾಧ್ಯವಿಲ್ಲವಾಯಿತು. ಒಂದು ದಿನ ಇದ್ದಕ್ಕಿದ್ದಂತೆ ಶ್ರೀರಾಮಕೃಷ್ಣರ ಕೋಣೆಯೊಳಕ್ಕೆ ನುಗ್ಗಿ, ಅವರೆದುರು ನಿಂತು ನುಡಿದ:

"ಸ್ವಾಮಿ, ನೀವು ನನಗೆ ನಿರ್ವಿಕಲ್ಪ ಸಮಾಧಿಯನ್ನು ಕೊಡಿಸಲೇಬೇಕು."

ಶ್ರೀರಾಮಕೃಷ್ಣರು ಒಂದು ಕ್ಷಣ ವಿಚಲಿತರಾದರೂ ಶಾಂತವಾಗಿಯೇ ನುಡಿದರು: "ಆಗಲಿ, ನಾನು ಗುಣ ಹೊಂದಿದ ಮೇಲೆ ನೀನೇನು ಕೇಳುತ್ತೀಯೋ ಅದನ್ನು ಕೊಡಿಸುತ್ತೇನೆ."

ಆದರೆ ಅವನು ಹಟ ಬಿಡದೆ ಮತ್ತೆಮತ್ತೆ ಕಾಡಿದ. ನಿರಂತರವಾಗಿ ಸಮಾಧಿಯಲ್ಲಿ ಮುಳುಗಿದ್ದು, ಎಲ್ಲೋ ಆಗೊಮ್ಮೆ ಈಗೊಮ್ಮೆ ಮಾತ್ರ, ದೇಹರಕ್ಷಣೆಗಾಗಿ ಪ್ರಕೃತಿಸ್ಥನಾಗಬೇಕು ಎಂಬ ತನ್ನ ಬಯಕೆಯನ್ನು ಪುನರುಚ್ಚರಿಸಿದ. ಆಗ ಶ್ರೀರಾಮಕೃಷ್ಣರು ಅಸಹನೆಗೊಂಡು ಅವನಿಗೆ ಛೀಮಾರಿ ಹಾಕಿದರು:

"ಛಿ! ನಾಚಿಕೆಗೇಡು! ನೀನೊಂದು ಮಹಾ ಆಶ್ರಯಸ್ಥಾನವಾಗಿ ಇರಬೇಕಾದವನು. ನಿನ್ನ ಯೋಗ್ಯತೆಗೆ ಇಂಥ ಮಾತು ಒಪ್ಪುತ್ತದೆಯೆ? ನಾನೆಣಿಸಿದ್ದೆ—ನೀನೊಂದು ದೊಡ್ಡ ಆಲದ ಮರದ ಹಾಗಾಗುತ್ತೀ ಮತ್ತು ಅಸಂಖ್ಯಾತ ದೀನಾರ್ತರಿಗೆ ನಿನ್ನ ನೆರಳಿನಲ್ಲಿ ಆಶ್ರಯ ಕೊಡುತ್ತೀ ಅಂತ. ಈಗ ನೋಡಿದರೆ ನೀನು ನಿನ್ನ ಸ್ವಂತ ಸುಖವನ್ನು, ಸ್ವಂತ ಮುಕ್ತಿಯನ್ನು ಬಯಸುತ್ತಿದ್ದೀಯಲ್ಲ!.. ಮಗು, ಈ ಮುಕ್ತಿ ಎನ್ನುವುದು

ಅತ್ಯಂತ ಕ್ಷುದ್ರವಾದುದು. ಬೇಡ, ಇಂತಹ ಸಂಕುಚಿತ ದೃಷ್ಟಿಯಿಟ್ಟುಕೊಳ್ಳಬೇಡ. ಭಗವಂತನನ್ನು ಎಲ್ಲೆಡೆಗಳಲ್ಲೂ, ಎಲ್ಲ ಬಗೆಗಳಿಂದಲೂ ನೋಡುವುದೇ ನನ್ನ ವೈಶಿಷ್ಟ್ಯ. ಯಾವ ಭಗವಂತನನ್ನು ನಾನು ಸಮಾಧಿಸ್ಥಿತಿಯಲ್ಲಿ ಪರಬ್ರಹ್ಮನಂತೆ ಕಾಣುತ್ತೇನೋ, ಅದೇ ಭಗವಂತನೇ ವಿವಿಧ ಮಾನವರೂಪಗಳಲ್ಲಿ ವಿರಾಜಿಸುತ್ತಿರುವುದನ್ನು ಜಾಗೃತ ಸ್ಥಿತಿಯಲ್ಲಿ ಕಂಡು ಆನಂದಿಸುತ್ತೇನೆ. ಇಂತಹ ಅತ್ಯುನ್ನತ ಅನುಭವವನ್ನು ನಿನಗೆ ಕೊಡಲು ನಾನು ಸಿದ್ಧನಿರುವಾಗ, ನೀನು ಅಂತಹ ಕ್ಷುದ್ರ ವಸ್ತುವಿಗಾಗಿ ಹಾತೊರೆಯುತ್ತಿದ್ದೀಯಲ್ಲ !"

ಏನೇ ಹೇಳಿದರೂ ನರೇಂದ್ರನಿಗೆ ಪೂರ್ತಿ ಒಪ್ಪಿಗೆಯಾಗಲಿಲ್ಲ.

ಇದಾಗಿ ಕೆಲದಿನಗಳಾಗಿರಬಹುದು. ಒಂದು ಅಪರಾಹ್ನ ಅವನು ಎಂದಿನಂತೆ ಮಲಗಿರುವ ಸ್ಥಿತಿಯಲ್ಲೇ ಧ್ಯಾನಮಗ್ನನಾಗಿದ್ದ. ಆಗ ಅವನಿಗೆ ಅತ್ಯಂತ ಅನಿರೀಕ್ಷಿತವಾಗಿ ಒಂದು ಅನಿರ್ವಚನೀಯ ಅನುಭವವಾಯಿತು. ಮೊದಲು ಅವನು ತನ್ನ ತಲೆಯ ಹಿಂಭಾಗದಲ್ಲಿ ಉಜ್ವಲ ಜ್ಯೋತಿಯೊಂದನ್ನು ಕಂಡ. ಒಡನೆಯೇ ಅವನನ್ನು ಭೌತಿಕ ಪ್ರಪಂಚಕ್ಕೆ ಬಂಧಿಸಿದ್ದ ಕಟ್ಟುಗಳೆಲ್ಲ ಹರಿದುಹೋದಂತಾಗಿ, ಅವನ ಮನಸ್ಸು ಅತ್ಯುನ್ನತ ಸ್ಥಿತಿಗೆ ಏರಿಹೋಯಿತು. ಆ ಅನುಭವವನ್ನು ಅವನಿಂದಲೇ ಕೇಳಿ ತಿಳಿದ ಗೆಳೆಯ ಶರಚ್ಚಂದ್ರ ಮುಂದೆ ಅದನ್ನು ಬಣ್ಣಿಸುತ್ತಾನೆ:

"ನರೇಂದ್ರನ ಆತ್ಮ ಪ್ರಚಂಡ ಭಾವಾವೇಶದ ಬಿರುಗಾಳಿಗೆ ಸಿಲುಕಿಕೊಂಡಿತು. ಅಲ್ಲಿಂದ ಅದು ಒಂದು ವಿಧವಾದ ದಿಗ್ಭ್ರಮೆಯ ದಿವ್ಯಾವಸ್ಥೆಯನ್ನು ಮುಟ್ಟಿತು. ಆ ಅವಸ್ಥೆಯಲ್ಲಿ ಸಕಲ ನಾಮರೂಪಗಳೂ ಭಾವನೆಗಳೂ ತನ್ನ ಮನಸ್ಸಿನಿಂದ ಕಳಚಿ ಬೀಳುತ್ತಿರುವಂತೆ ಅವನಿಗೆ ಭಾಸವಾಯಿತು. ಬಳಿಕ ಅವನ ಆತ್ಮ ಆ ಸ್ಥಿತಿಯಿಂದಲೂ ಮೇಲೇರಿ ಅತ್ಯಾನಂದದ ಹಂತವೊಂದನ್ನು ತಲುಪಿತು. ಆಗ ತನ್ನ ಸಂಪೂರ್ಣ ವ್ಯಕ್ತಿತ್ವವೇ ದಿವ್ಯತೆಯ ದೀಪ್ತಿಯಿಂದ ತುಂಬಿಹೋದಂತಹ ಅನುಭವವಾಯಿತು. ಕಡೆಗೆ ಆ ವ್ಯಕ್ತಿತ್ವವೂ ಕರಗಿಹೋಗಿ ದಿವ್ಯತೆಯೊಂದೇ ಉಳಿಯಿತು. ಈ ಎಲ್ಲ ಅನುಭವಗಳ ಪರಾಕಾಷ್ಠೆಯೆಂಬಂತೆ ಅವನ ಆತ್ಮ ಒಂದು ಮಹಾಜ್ಯೋತಿರೂಪದಿಂದ ಆ ಉತ್ಕಟ ಆನಂದದ ಸ್ಥಿತಿಯನ್ನು ಅತಿಕ್ರಮಿಸಿ ಅನಂತ ಶಾಂತಿಯ ನೀರವತೆಯನ್ನು ಪ್ರವೇಶಿಸಿತು."

ಶ್ರೀರಾಮಕೃಷ್ಣರ ಇಚ್ಛಾಮಾತ್ರದಿಂದ ನರೇಂದ್ರ ಇಂತಹ ಅತ್ಯಪೂರ್ವ ನಿರ್ವಿಕಲ್ಪ ಸಮಾಧಿಯ ಅನುಭವವನ್ನು ಹೊಂದಿ ಬೇರೆಯೇ ಲೋಕದಲ್ಲಿ ವಿಹರಿಸುತ್ತಿದ್ದಾನೆ. ಆದರೆ ಇತರರಿಗೆ ಮಾತ್ರ, ಅವನು ಅಂಗಾತ ಮಲಗಿದ್ದಾನೆ ಎನ್ನುವುದಲ್ಲದೆ ಬೇರೇನೂ ತಿಳಿಯುವಂತಿಲ್ಲ. ಆ ಕೋಣೆಯಲ್ಲಿ ಹಿರಿಯ ಗೋಪಾಲನೊಬ್ಬನೇ ಧ್ಯಾನನಿರತನಾಗಿ ಕುಳಿತಿದ್ದಾನೆ. ಉಳಿದವರು ಅಲ್ಲಿ ಇಲ್ಲಿ ಬೇರೆಬೇರೆ ಕೆಲಸಕಾರ್ಯಗಳಲ್ಲಿ ತೊಡಗಿದ್ದಾರೆ. ಬಹಳ ಹೊತ್ತಿನ ಮೇಲೆ ಈಗ ಶ್ರೀರಾಮಕೃಷ್ಣರ ಸಂಕಲ್ಪದಿಂದ ಮತ್ತೆ ನರೇಂದ್ರನ ಪ್ರಜ್ಞೆ ಕೆಳಸ್ತರಕ್ಕೆ ಇಳಿದು ಬರಲಾರಂಭಿಸಿತು. ಸ್ವಲ್ಪ ಎಚ್ಚರಗೊಂಡ ನರೇಂದ್ರ ಮೆಲ್ಲನೆ ಕಣ್ದೆರೆದು ನೋಡಿದ; ಇಂದ್ರಿಯ ಪ್ರಪಂಚಕ್ಕೆ ಹೊಂದಿಕೊಳ್ಳುವ ಪ್ರಯತ್ನ ಮಾಡಿದ. ಆದರೆ ಅವನಿಗೆ ತನ್ನ ಮುಖದ ಅಸ್ತಿತ್ವ ಮಾತ್ರ ಗೊತ್ತಾಗುತ್ತಿದೆ; ಇತರ ಅವಯವಗಳ ಮೇಲಿನ ಪ್ರಜ್ಞೆ ಮರಳಿಲ್ಲ. ಎಂಥಾ ಭಯಂಕರ ಸ್ಥಿತಿ ! ಸ್ವಲ್ಪ ದೂರದಲ್ಲಿ ಕುಳಿತಿದ್ದ ಹಿರಿಯ ಗೋಪಾಲನನ್ನು ಕಂಡು, ಜೋರಾಗಿ ಕೂಗಿಕೊಳ್ಳುವ ಪ್ರಯತ್ನ ಮಾಡಿದ,

"ಓ ಗೋಪಾಲ್ ದಾ! ನನ್ನ ದೇಹ ಎಲ್ಲಿ? ನನ್ನ ದೇಹ ಎಲ್ಲಿ?" ಎಂದು. ಆದರೆ ಸ್ವರ ಮಾತ್ರ ಗುಹೆಯೊಳಗಿಂದ ಬಂದಂತೆ ಕ್ಷೀಣವಾಗಿತ್ತು. ಗೋಪಾಲನಿಗೆ ಆಶ್ಚರ್ಯ ವಾಯಿತು. ಆತ ಕೂಡಲೇ ಎದ್ದು ಬಂದು, "ಯಾಕೆ ನರೇನ್, ಇಲ್ಲೇ ಇದೆಯಲ್ಲ!" ಎಂದು ಗಟ್ಟಿಯಾಗಿ ಹೇಳುತ್ತ, ಅವನ ಮೈಮುಟ್ಟಿ ನೋಡುತ್ತಾನೆ—ಅದು ಮರದ ಕೊರಡಿನಂತಾಗಿಬಿಟ್ಟಿದೆ! ಒಂದೆರಡು ಬಾರಿ ಮಾತನಾಡಿದ ನರೇಂದ್ರ ಮತ್ತೆ ಪ್ರಜ್ಞೆ ಕಳೆದುಕೊಂಡುಬಿಟ್ಟ. ಗೋಪಾಲ ಕಂಗಾಲಾದ. "ಬೇಗ ಬನ್ನಿ, ಬೇಗ ಬನ್ನಿ! ನರೇಂದ್ರ ನಿಗೆ ಏನೋ ಆಗಿಬಿಟ್ಟಿದೆ!" ಎಂದು ಕೂಗಿಕೊಂಡ. ಗುರುಭಾಯಿಗಳೆಲ್ಲ ಓಡೋಡಿ ಬಂದರು. ನರೇಂದ್ರ ನಿಶ್ಚೇಷ್ಟಿತನಾಗಿ ಬಿದ್ದಿದ್ದಾನೆ; ಉಸಿರಾಟವಿಲ್ಲ, ಅಂಗಾಂಗಗಳ ಮೇಲೆ ನಿಯಂತ್ರಣವಿಲ್ಲ! ಎಲ್ಲೋ ಕುಟುಕು ಜೀವ ಮಾತ್ರ ಇದ್ದಂತಿದೆ. ಆ ಅವಸ್ಥೆಯನ್ನು ನೋಡಿ ಎಲ್ಲರೂ ಭಯವಿಹ್ವಲರಾದರು. ಕೆಲವರು ಅವನ ಕೈಕಾಲುಗಳನ್ನು ತಿಕ್ಕಿದರು; ಕೃತಕ ಉಸಿರಾಟದ ಪ್ರಯೋಗದ ಮೂಲಕ ಶರೀರವನ್ನು ಚೇತನಗೊಳಿಸುವ ಪ್ರಯತ್ನ ಮಾಡಿದರು. ಏನೂ ಪ್ರಯೋಜನವಾಗಲಿಲ್ಲ. ಆತಂಕ ಮಿತಿಮೀರಿತು. "ನನಗೆ ಯಾಕೋ ಭಯವಾಗುತ್ತಿದೆ..." ಎಂದೊಬ್ಬ ಪಿಸುಗುಟ್ಟಿದ. ಇನ್ನೊಬ್ಬನೆಂದ, "ಬನ್ನಿ, ಠಾಕೂರರಿಗೆ ಹೇಳೋಣ!" ತಕ್ಷಣವೇ ಒಂದಿಬ್ಬರನ್ನು ಬಿಟ್ಟು ಉಳಿದವರೆಲ್ಲ ಮೇಲ ಕ್ಕೋಡಿದರು.

ಅಲ್ಲಿ ಹೋಗಿ ನೋಡಿದರೆ, ಶ್ರೀರಾಮಕೃಷ್ಣರು ತಮಗೆ ಎಲ್ಲ ವಿಷಯವೂ ತಿಳಿದೇ ಇದೆ ಎನ್ನುವಂತೆ ಗಂಭೀರ ಮುಖಮುದ್ರೆ ಧರಿಸಿ ಕುಳಿತಿದ್ದಾರೆ! ಯುವಕರು ಕಳವಳ ದಿಂದ 'ನರೇಂದ್ರನಿಗೆ ಏನೋ ಆಗಿಬಿಟ್ಟಿರುವುದನ್ನು' ಬಣ್ಣಿಸಿದಾಗ ಅವರು, "ಇರಲಿ ಇರಲಿ, ಸ್ವಲ್ಪ ಹೊತ್ತು ಹಾಗೇ ಇರಲಿ. ಅದಕ್ಕಾಗಿ ಅವನು ನನಗೆ ಸಾಕಷ್ಟು ತೊಂದರೆ ಕೊಟ್ಟಿದ್ದಾನೆ" ಎಂದು ಶಾಂತವಾಗಿ ನುಡಿದರು.

ಈ ಮಾತನ್ನು ಕೇಳಿದ ಮೇಲೆ ಶಿಷ್ಯರಿಗೆ ಎಷ್ಟೋ ಸಮಾಧಾನವಾಯಿತು. ನರೇಂದ್ರನಿದ್ದ ಕೋಣೆಗೆ ಮರಳಿ ಬಂದು, ಅವನನ್ನೇ ಗಮನಿಸತೊಡಗಿದರು. ಸುಮಾರು ಒಂದೆರಡು ಗಂಟೆಗಳ ಬಳಿಕ ಅವನಿಗೆ ಮೆಲ್ಲಗೆ ಪ್ರಜ್ಞೆ ಮರಳತೊಡಗಿತು. ಕಡೆಗೆ ಯಾವುದೋ ಒಂದು ಶಕ್ತಿ ತನ್ನನ್ನು ಬಲವಾಗಿ ಹೊರದೂಡಿದಂತಾಗಿ ಇದ್ದ ಕ್ಕಿದ್ದಂತೆ ಎಚ್ಚರಗೊಂಡ. ಆದರೆ ಇನ್ನೂ ಮಬ್ಬು ಕವಿದಂತಿತ್ತು. ಬಳಿಕ ನಿಧಾನವಾಗಿ ತಾನು ಸವಿದ ದಿವ್ಯಾನಂದದ ಮಧುರ ಸ್ಮೃತಿ ಮರುಕಳಿಸಲಾರಂಭಿಸಿತು. ಒಳಗೆ ತುಂಬಿಕೊಂಡಿದ್ದ ಪ್ರಚಂಡ ಭಾವೋದ್ವೇಗ ಸ್ಫೋಟಗೊಂಡಂತಾಗಿ ಧನ್ಯತೆಯ ಕಣ್ಣೀರು ಸುರಿಸುತ್ತ, "ಆಹಾ! ಏನಾಗಿಹೋಯಿತು!" ಎಂದುದ್ಗರಿಸಿದ.

ಈಗ ಅವನು ಮೇಲೆದ್ದ; ತನಗರಿವಿಲ್ಲದಂತೆಯೇ ಮಹಡಿಯ ಮೇಲಕ್ಕೆ ಹೋಗಿ, ಮೌನವಾಗಿ ಶ್ರೀರಾಮಕೃಷ್ಣರ ಮುಂದೆ ನಿಂತ. ಅವನ ಕಂಗಳಲ್ಲಿ ತಮ್ಮ ದೃಷ್ಟಿ ನೆಟ್ಟು ಶ್ರೀರಾಮಕೃಷ್ಣರು ಗಂಭೀರವಾಗಿ ನುಡಿದರು:

"ಜಗನ್ಮಾತೆ ನಿನಗೆ ಎಲ್ಲವನ್ನೂ ತೋರಿಸಿದಳಷ್ಟೆ? ಆದರೆ ನೋಡು, ಅಮೂಲ್ಯ ವಸ್ತುವೊಂದನ್ನು ಸಂದೂಕದಲ್ಲಿಟ್ಟು ಭದ್ರಪಡಿಸಿದಂತೆ, ನಿನ್ನ ಈ ಅನುಭವಕ್ಕೆ ಬೀಗ ಮುದ್ರೆ ಹಾಕಿಡಲಾಗುತ್ತದೆ. ಮತ್ತು ಅದರ ಕೀಲಿಕೈ ನನ್ನ ಬಳಿಯಿರುತ್ತದೆ. ನೀನು ಸಾಧಿಸಬೇಕಾದ ಕೆಲಸಗಳು ಇನ್ನೂ ಬಹಳಷ್ಟಿವೆ. ಅವುಗಳನ್ನೆಲ್ಲ ನೀನು ಮಾಡಿ ಮುಗಿ ಸಿದ ಮೇಲೆ ಮತ್ತೆ ಆ ಬೀಗವನ್ನು ತೆರೆಯಲಾಗುತ್ತದೆ. ಆಗ ಆ ನಿಧಿ ಮತ್ತೆ ನಿನ್ನದಾಗು

ತ್ತದೆ. ಎಲ್ಲವೂ ಪುನಃ ನಿನಗೆ ಈಗ ಕಂಡಂತೆಯೇ ಅನುಭವಕ್ಕೆ ಬರುತ್ತದೆ.''

ಆದರೆ ತಾನು ಒಮ್ಮೆ ಸವಿದ ಆನಂದವನ್ನು ಮೆಲುಕು ಹಾಕುತ್ತ ನರೇಂದ್ರ ಗೋಗರೆದ: ''ನಾನು ಸಮಾಧಿಯಲ್ಲಿ ತುಂಬ ಆನಂದದಿಂದಿದ್ದೆ. ನನ್ನನ್ನು ಅದೇ ಸ್ಥಿತಿಯಲ್ಲಿರಿಸುವ ಕೃಪೆ ಮಾಡಬೇಕು.''

ಅವನ ಸ್ವಾರ್ಥಬುದ್ಧಿಯನ್ನು ಶ್ರೀರಾಮಕೃಷ್ಣರು ಪುನಃ ಖಂಡಿಸಿದರು. ಆದರೆ ಬಳಿಕ ಅತಿ ಮಹತ್ವಪೂರ್ಣವಾದ ಈ ಮಾತುಗಳನ್ನು ನುಡಿದರು:

''ಜಗನ್ಮಾತೆಯ ಕೃಪೆಯಿಂದ, ಮುಂದೆ ನಿನಗೆ ಈ ಅನುಭವ ಎಷ್ಟು ಸಹಜವಾಗಿಬಿಡುತ್ತದೆಯೆಂದರೆ, ಜಾಗೃದವಸ್ಥೆಯಲ್ಲೇ ನೀನು ಸಕಲ ಜೀವಿಗಳಲ್ಲೂ ಆ ದಿವ್ಯತೆಯನ್ನು ಕಾಣಲು ಸಮರ್ಥನಾಗುವೆ. ಜಗತ್ತಿನಲ್ಲಿ ನೀನು ಮಹಾಕಾರ್ಯಗಳನ್ನು ಸಾಧಿಸುತ್ತೀಯೆ. ಜನಕೋಟಿಯಲ್ಲಿ ಆಧ್ಯಾತ್ಮಿಕ ಜಾಗೃತಿಯನ್ನುಂಟುಮಾಡಿ ದೀನದರಿದ್ರರ ಕಷ್ಟಕೋಟಲೆಗಳನ್ನು ದೂರಮಾಡುವೆ.''

ಬಳಿಕ, ಸಕಲ ಆಧ್ಯಾತ್ಮಿಕ ರಹಸ್ಯಗಳಲ್ಲೂ ಪರಿಣತರಾದ ಶ್ರೀರಾಮಕೃಷ್ಣರು ಅವನಿಗೆ, ಇನ್ನು ಕೆಲವು ಕಾಲ ತನ್ನ ಶರೀರದ ಕಡೆಗೆ ಎಚ್ಚರದಿಂದಿರುವಂತೆ ಮತ್ತು ಮನೆಯಲ್ಲೇ ತಯಾರಾದ ಪರಿಶುದ್ಧ ಆಹಾರವನ್ನು ಮಾತ್ರ ಸೇವಿಸುವಂತೆ ಸೂಚನೆಯಿತ್ತರು.

ತರುವಾಯ ಅವರು ಇತರ ಆಪ್ತ ಶಿಷ್ಯರೆದುರು ನರೇಂದ್ರನ ಬಗೆಗಿನ ಅನೇಕ ಗುಪ್ತ ವಿಚಾರಗಳನ್ನು ಬಯಲುಪಡಿಸುತ್ತಾರೆ:

''ಅವನು ಇಚ್ಛಾಮರಣಿ—ಯಾವಾಗ ತನ್ನ ನಿಜಸ್ವರೂಪವನ್ನು ಕಂಡುಕೊಳ್ಳುತ್ತಾನೋ ಆಮೇಲೆ ಕ್ಷಣಕಾಲವೂ ಶರೀರದಲ್ಲಿರಲು ಇಷ್ಟಪಡದೆ ಸ್ವೇಚ್ಛೆಯಿಂದ ದೇಹವನ್ನು ಬಿಟ್ಟುಬಿಡುತ್ತಾನೆ. ಮುಂದೊಂದು ಕಾಲ ಬರುತ್ತದೆ, ಆಗ ಅವನು ತನ್ನ ಅಪರಿಮಿತ ಬುದ್ಧಿಶಕ್ತಿ, ಆಧ್ಯಾತ್ಮಿಕ ಶಕ್ತಿಗಳಿಂದ ಜಗತ್ತನ್ನೇ ಬುಡಸಹಿತ ಅಲುಗಾಡಿಸಿಬಿಡುತ್ತಾನೆ! ಅವನಿಂದ ಬೇಕಾದಷ್ಟು ಕೆಲಸವಾಗಬೇಕಾದ್ದಿದೆ. ಆದ್ದರಿಂದ ಅವನ ಅದ್ವೈತ ಸಾಕ್ಷಾತ್ಕಾರದ ಮೇಲೆ ಪರದೆಯನ್ನು ಎಳೆದುಬಿಡುವಂತೆ ಜಗನ್ಮಾತೆಯನ್ನು ಬಹಳವಾಗಿ ಪ್ರಾರ್ಥಿಸಿಕೊಂಡಿದ್ದೇನೆ. ಆದರೆ ಆ ಪರದೆ ತುಂಬ ಸೂಕ್ಷ್ಮ; ಎಷ್ಟರ ಮಟ್ಟಿಗೆಂದರೆ ಅದು ಯಾವಾಗ ಬೇಕಾದರೂ ಹರಿದುಹೋಗಬಹುದು.''

ತಮ್ಮ ಸಂಗಡಿಗನೂ ಪ್ರಿಯ ನಾಯಕನೂ ಆದ ನರೇಂದ್ರನ ಕುರಿತಾಗಿ ಶ್ರೀರಾಮಕೃಷ್ಣರ ಬಾಯಿಂದ ಇಂಥ ಪರಮಾದ್ಭುತ ಭವಿಷ್ಯವಾಣಿಯನ್ನು ಆಲಿಸಿದ ಶಿಷ್ಯರೆಲ್ಲ ಮೂಕವಿಸ್ಮಿತರಾದರು. ಆದರೆ ಅನೇಕ ವರ್ಷಗಳ ಬಳಿಕ ಆ ಪ್ರತಿಯೊಂದು ಮಾತೂ ಅಕ್ಷರಶಃ ಸತ್ಯವಾಗಿ ಪರಿಣಮಿಸಿದ್ದುದನ್ನು ಕಣ್ಣಾರೆ ನೋಡುವವರೆಗೂ ಅವುಗಳ ಬಗ್ಗೆ ಅವರ ಶಂಕೆ ಪೂರ್ಣವಾಗಿ ದೂರವಾಗಿರಲಿಲ್ಲ.

ತಮ್ಮ ಅಂತರಂಗ ವಲಯಕ್ಕೆ ಸೇರಿದವರಾದ ತರುಣಶಿಷ್ಯರ ಮೇಲೆ, ಅದರಲ್ಲೂ ಮುಖ್ಯವಾಗಿ ನರೇಂದ್ರನ ಮೇಲೆ, ಶ್ರೀರಾಮಕೃಷ್ಣರಿಗಿದ್ದ ಅಭಿಮಾನ ವಿಶ್ವಾಸಗಳಿಗೆ ಎಣೆಯೇ ಇಲ್ಲ. ನಿಜಕ್ಕೂ ಗೃಹಸ್ಥಭಕ್ತರ ಭಕ್ತಿ ಸಾಮಾನ್ಯವೇನಲ್ಲ. ಅವರ ಔದಾರ್ಯ ದಿಂದಾಗಿಯೇ ಅಲ್ಲವೆ ಈಗ ಅಷ್ಟೆಲ್ಲ ಖರ್ಚುಗಳಿಗೆ ಹಣ ಒದಗಿಬರುತ್ತಿರುವುದು? ಆದರೂ ಕೂಡ ಶ್ರೀರಾಮಕೃಷ್ಣರ ವಿಶೇಷ ಒಲವು ಭಾವೀ ಸಂನ್ಯಾಸಿಗಳಾದ ತರುಣ ಶಿಷ್ಯರ ಮೇಲೆಯೇ!

ಭಕ್ತರ ಪೈಕಿ ಹೆಚ್ಚಿನ ವಂತಿಗೆ ನೀಡುತ್ತಿದ್ದವರೆಂದರೆ ರಾಮಚಂದ್ರ, ಸುರೇಂದ್ರ ಮತ್ತು ಕಾಳೀಪದ. ಯುವಕಶಿಷ್ಯರು ಆ ಹಣವನ್ನು ಸಾಕಷ್ಟು ಎಚ್ಚರಿಕೆಯಿಂದ ಖರ್ಚು ಮಾಡುತ್ತ, ಅದಕ್ಕೆ ಸರಿಯಾಗಿ ಲೆಕ್ಕವನ್ನೂ ಇಡುತ್ತಿದ್ದರು. ಆಗಾಗ ರಾಮಚಂದ್ರ ಆ ಲೆಕ್ಕವನ್ನು ಪರಿಶೀಲಿಸುತ್ತಿದ್ದ. ಒಂದು ಸಲ ಖರ್ಚು ಸ್ವಲ್ಪ ಹೆಚ್ಚಾಯಿತು ಎಂದು ತೋರಿದ್ದರಿಂದ ಗೃಹೀಭಕ್ತರು ಈ ಯುವಕರ ಮುಂದೆ ರೇಗಿಬಿಟ್ಟರು. ಸ್ವಾಭಿಮಾನಿ ಗಳಾದ ಯುವಕರಿಗೆ ಈ ಮಾತು ಸ್ವಲ್ಪ ಹೆಚ್ಚಾಯಿತು. ಅವರೇನು ತಮ್ಮ ಸ್ವಾರ್ಥ ಕ್ಕೋಸ್ಕರ ಖರ್ಚುಮಾಡಿಕೊಳ್ಳುತ್ತಿದ್ದಾರೆಯೆ? ಮಾತಿಗೆ ಪ್ರತಿಮಾತು ಬೆಳೆಯಿತು. ಕಡೆಗೆ ನರೇಂದ್ರ ಬೇರೆ ದಾರಿಗಾಣದೆ ಶ್ರೀರಾಮಕೃಷ್ಣರ ಬಳಿಗೇ ಹೋಗಿ ವಿಷಯವನ್ನೆಲ್ಲ ತಿಳಿಸಿದ. ಶ್ರೀರಾಮಕೃಷ್ಣರಿಗೆ ಅವನ ಆಕ್ರೋಶ ಅರ್ಥವಾಯಿತು. ಅಂಥ ದುರ್ಭರ ಸ್ಥಿತಿ ಯಲ್ಲೂ ಅವರು ಶಾಂತರಾಗಿ ನುಡಿಯುತ್ತಾರೆ: "ನರೇನ್, ನೀನು ನನ್ನನ್ನು ನಿನ್ನ ಹೆಗಲ ಮೇಲೆ ಹೊತ್ತು ಎಲ್ಲಿಗೆ ಕರೆದೊಯ್ಯುತ್ತೀಯೋ ಅಲ್ಲಿಗೆ ಬರುತ್ತೇನೆ. ಹೇಗಿರಿ ಸಿದರೆ ಹಾಗೆ ಇರುತ್ತೇನೆ."

ಈ ಮಾತಿನಲ್ಲಿ ಎಂಥ ಪ್ರೀತಿಯುತ ವಿಶ್ವಾಸ! ಎಂತಹ ದೃಢತೆ! ಆದರೆ ಇದ ರಿಂದ ನರೇಂದ್ರನಿಗೂ ಅವನ ಗುರುಭಾಯಿಗಳಿಗೂ ಉಂಟಾದದ್ದು ಹೆಮ್ಮೆಯಲ್ಲ, ಕಳ ವಳ. ಶ್ರೀರಾಮಕೃಷ್ಣರನ್ನು ಅವರು ಎಲ್ಲಿಗೆ ತಾನೆ ಕರೆದೊಯ್ದಾರು? ಅಷ್ಟೊಂದು ಖರ್ಚನ್ನು ಹೇಗೆ ನಿಭಾಯಿಸಿಯಾರು? ಈ ವಿಚಾರವೆಲ್ಲ ಕಲ್ಕತ್ತದ ಶ್ರೀಮಂತ ವರ್ತಕ ನಾದ ಲಕ್ಷ್ಮೀನಾರಾಯಣ ಮಾರ್ವಾಡಿಯ ಕಿವಿಗೆ ಬಿತ್ತು. ಕೂಡಲೇ ಅವನು ಧನ ಸಹಾಯ ನೀಡಲು ಮುಂದಾದ. ಹಿಂದೆ ಶ್ರೀರಾಮಕೃಷ್ಣರ ಹೆಸರಿನಲ್ಲಿ ಹತ್ತು ಸಾವಿರ ರೂಪಾಯಿಗಳನ್ನಿಡಲು ಬಂದಿದ್ದವನು ಇವನೇ. ನಿಜಕ್ಕೂ ಇವನ ಔದಾರ್ಯವನ್ನು ಮೆಚ್ಚಬೇಕಾದ್ದೇ. ಆದರೆ ಶ್ರೀರಾಮಕೃಷ್ಣರು ಅವನ ನೆರವನ್ನು ನಿರಾಕರಿಸಿದರು. ಬದ ಲಾಗಿ ಪರಮವಿಶ್ವಾಸೀ ಭಕ್ತನಾದ ಗಿರೀಶನನ್ನು ಕರೆದು, "ಗಿರೀಶ್, ಎಲ್ಲ ಖರ್ಚನ್ನೂ ನೀನೊಬ್ಬನೇ ವಹಿಸಿಕೋ" ಎಂದುಬಿಟ್ಟರು. ಶ್ರೀರಾಮಕೃಷ್ಣರು ಕೇವಲ ಹಣವನ್ನು ನೋಡುವವರಲ್ಲ; ಆದರೊಂದಿಗೆ ಭಕ್ತಿವಿಶ್ವಾಸ ಕೂಡ ಬೇಕು ಅವರಿಗೆ. ಆದ್ದರಿಂದ ಗಿರೀಶ ಏನು ಕೊಟ್ಟರೆ ಅವರಿಗೆ ಅಷ್ಟೇ ಸಾಕು. ಇಂತಹ ಪರಿಸ್ಥಿತಿಯಲ್ಲಿ ಶ್ರೀರಾಮ ಕೃಷ್ಣರು ತನ್ನ ಮೇಲೆ ವಿಶ್ವಾಸವಿರಿಸಿ ಈ ಅಪೂರ್ವ ಕೃಪೆದೋರಿದರಲ್ಲ ಎಂದು ಭಾವ ಭರಿತನಾಗಿ ಗಿರೀಶ, "ಅಗತ್ಯಬಿದ್ದರೆ ನನ್ನ ಮನೆ-ಆಸ್ತಿಯನ್ನೆಲ್ಲ ಮಾರಿಬಿಡುತ್ತೇನೆ"

ಎಂದು ನುಡಿದ. ಅದೃಷ್ಟವಶಾತ್, ಅಂತಹ ಪರಿಸ್ಥಿತಿ ಒದಗಲಿಲ್ಲ. ಆದರೆ ಯುವ ಶಿಷ್ಯರು ಆ ಮೂವರು ಭಕ್ತರಿಂದ ವಂತಿಗೆ ಸ್ವೀಕರಿಸುವುದನ್ನು ನಿಲ್ಲಿಸಿಬಿಟ್ಟರು. ಅಷ್ಟೇ ಅಲ್ಲ, ಕೆಲವು ದಿನ ಅವರಿಗೆ ಶ್ರೀರಾಮಕೃಷ್ಣರ ದರ್ಶನ ಮಾಡಲೂ ಬಿಡಲಿಲ್ಲ! ಆದರೆ ಹಿರಿ-ಕಿರಿಯ ಭಕ್ತರ ನಡುವಿನ ವಿರಸ ಹೆಚ್ಚು ದಿನ ಉಳಿಯಲಿಲ್ಲ. ಶ್ರೀರಾಮಕೃಷ್ಣರೇ ಎರಡು ಕಡೆಯವರನ್ನೂ ಕರೆದು ಸಮಾಧಾನಗೊಳಿಸಿ ಸೌಹಾರ್ದವೇರ್ಪಡಿಸಿದರು.

ಈ ನಡುವೆ ಸಂದರ್ಶಕರ ಪ್ರವಾಹ ನಿರಂತರವಾಗಿ ಸಾಗಿತ್ತು. ಶ್ರೀರಾಮಕೃಷ್ಣರು ಕಠಿಣರೋಗಕ್ಕೆ ಈಡಾಗಿದ್ದಾರೆಂಬ ಸುದ್ದಿ ಕೇಳಿ ದೂರದೂರದ ಸ್ಥಳಗಳಿಂದಲೂ ಜನ ಬರುತ್ತಿದ್ದರು. ಇಂಥವರಲ್ಲಿ ಹೀರಾನಂದ ಎಂಬ ಯುವಕನನ್ನು ಉದಾಹರಣೆಯಾಗಿ ಹೇಳಬಹುದು. ಇವನು ಹಿಂದೆ ಕಲ್ಕತ್ತದಲ್ಲೇ ಇದ್ದವನು; ಕೇಶವಚಂದ್ರಸೇನನ ಅನುಯಾಯಿ. ಶ್ರೀರಾಮಕೃಷ್ಣರಿಗೂ ಪರಿಚಿತ. ಹೀರಾನಂದ ತನ್ನ ಪರಿಶುದ್ಧ ಚಾರಿತ್ರ್ಯ, ಸರಳತೆಗಳಿಂದ ಅವರಿಗೆ ಬಹಳ ಪ್ರಿಯನಾಗಿದ್ದ. ಕೆಲವು ವರ್ಷಗಳಿಂದಲೂ (ಈಗಿನ ಪಾಕಿಸ್ತಾನದಲ್ಲಿರುವ) ಸಿಂಧ್ ಪ್ರದೇಶದಲ್ಲಿ ಆತನ ವಾಸ. ಅಲ್ಲಿ ಅವನು ಎರಡು ಪತ್ರಿಕೆಗಳ ಸಂಪಾದಕ. ಶ್ರೀರಾಮಕೃಷ್ಣರಿಗೆ ತುಂಬ ಅನಾರೋಗ್ಯವಾಗಿದೆಯೆಂದು ಕೇಳಿ, ಅವರ ದರ್ಶನಕ್ಕಾಗಿ ಹಾತೊರೆದು, ಮೂರೂವರೆ ಸಾವಿರ ಕಿಲೋಮೀಟರ್ ದೂರವನ್ನು ಕ್ರಮಿಸಿ ಬಂದಿದ್ದ. ಅವನನ್ನು ಕಂಡು ಶ್ರೀರಾಮಕೃಷ್ಣರು ತುಂಬ ಸಂತೋಷಪಟ್ಟು ಬಹಳ ಹೊತ್ತಿನವರೆಗೆ ಅವನೊಂದಿಗೆ ಸಂಭಾಷಿಸಿದರು. (ಆ ಸನ್ನಿವೇಶದ ವಿವರಪೂರ್ಣ ಚಿತ್ರಣವನ್ನು 'ಶ್ರೀರಾಮಕೃಷ್ಣ ವಚನವೇದ'ದಲ್ಲಿ ಕಾಣಬಹುದು.)

ಭಕ್ತವರೇಣ್ಯರಾದ ನಾಗಮಹಾಶಯರು, ಶ್ರೀರಾಮಕೃಷ್ಣರ ಕಾಶೀಪುರವಾಸದ ಸಮಯದಲ್ಲಿ ಕೆಲವು ಬಾರಿ ಅವರ ದರ್ಶನ ಪಡೆಯಲು ಬಂದಿದ್ದರು. ಶ್ರೀರಾಮಕೃಷ್ಣರ ಯಾತನಾಮಯ ಸ್ಥಿತಿಯನ್ನು ನೋಡಿ ಅವರಿಗೆ ಸಹಿಸಲು ಸಾಧ್ಯವೇ ಇರಲಿಲ್ಲ. ಆದ್ದರಿಂದಲೇ ಅವರು ಅಷ್ಟು ಹೆಚ್ಚಾಗಿ ಬರುತ್ತಿರಲಿಲ್ಲ. "ಪರಮಹಂಸರ ವೇದನೆಯನ್ನು ನೆನೆಸಿಕೊಂಡರೇ ಸಾಕು, ಹೃದಯ ಒಡೆದುಹೋಗುತ್ತದೆ. ಅವರು ಬೇಕೆಂದೇ ದೇಹದಲ್ಲಿ ರೋಗವನ್ನು ಉಳಿಸಿಕೊಂಡಿದ್ದು, ಆ ನೋವನ್ನು ನಾನು ಯಾವ ರೀತಿಯಲ್ಲೂ ಕಡಿಮೆ ಮಾಡಲು ಸಾಧ್ಯವಿಲ್ಲದ ಮೇಲೆ, ಅಲ್ಲಿಗೆ ನಾನು ಹೇಗೆ ಹೋಗಲಿ ?" ಎನ್ನುತ್ತಿದ್ದರು. ಒಮ್ಮೆ ಅವರು ಬಂದದ್ದನ್ನು ಕಂಡು ಶ್ರೀರಾಮಕೃಷ್ಣರು, "ಇಲ್ಲಿ ಬನ್ನಿ, ಹತ್ತಿರ ಕುಳಿತುಕೊಳ್ಳಿ, ನಿಮ್ಮ ತಂಪಾದ ದೇಹವನ್ನು ಮುಟ್ಟುತ್ತಿದ್ದರೆ ನನಗೂ ತಣ್ಣಗಿರುತ್ತದೆ" ಎಂದು ಹೇಳಿ, ಬಹಳ ಹೊತ್ತು ಅವರನ್ನು ಆಲಿಂಗಿಸಿಕೊಂಡಿದ್ದು, ಅವರ ಮೇಲಿನ ತಮ್ಮ ಪ್ರೀತಿಯನ್ನು ವ್ಯಕ್ತಪಡಿಸಿದರು. ಒಮ್ಮೆ ನಾಗಮಹಾಶಯರ ಸ್ನೇಹಿತ ಸುರೇಶಬಾಬು ವೊಬ್ಬನೇ ಶ್ರೀರಾಮಕೃಷ್ಣರ ಬಳಿಗೆ ಹೋದ. ಆಗ ಅವರು, "ಆ ಡಾಕ್ಟರು (ನಾಗಮಹಾಶಯರು) ಎಲ್ಲಿ? ಅವರಿಗೆ ತುಂಬ ವೈದ್ಯ ಗೊತ್ತಲ್ಲವೆ ? ಒಮ್ಮೆ ಅವರನ್ನು ಬರಹೇಳು ಮತ್ತೆ!" ಎಂದರು. ಈ ಸುದ್ದಿ ತಿಳಿದು ನಾಗಮಹಾಶಯರು ಬರುತ್ತಿದ್ದಂತೆ ಶ್ರೀರಾಮಕೃಷ್ಣರು, "ಓಹೋ, ಬಂದಿರಾ! ಬಹಳ ಒಳ್ಳೆಯದಾಯಿತು. ಇಲ್ಲಿ ನೋಡಿ, ಡಾಕ್ಟರುಗಳು, ಕವಿರಾಜರು (ವೈದ್ಯರು) ಎಲ್ಲರೂ ಕೈಬಿಟ್ಟಿದ್ದಾರೆ. ನಿಮಗೇನಾದರೂ ಮಂತ್ರತಂತ್ರ ಗೊತ್ತಿದೆಯೇನು ? ಗೊತ್ತಿದ್ದರೆ ಅದರಿಂದೇನಾದರೂ ಉಪಕಾರವಾಗುತ್ತದೋ ನೋಡಿ" ಎಂದರು. ತಮ್ಮನ್ನು ಪರೀಕ್ಷಿಸುವುದಕ್ಕಾಗಿಯೇ ಇವರು ಹೀಗೆನ್ನುತ್ತಿದ್ದಾರೆ ಎಂದು ಅರ್ಥಮಾಡಿಕೊಂಡ ನಾಗಮಹಾಶಯರು, ತಲೆಬಗ್ಗಿಸಿಕೊಂಡು ಸ್ವಲ್ಪ

ಯೋಚಿಸಿದರು. ಶ್ರೀರಾಮಕೃಷ್ಣರ ವ್ಯಾಧಿಯನ್ನು ಮನಶ್ಶಕ್ತಿಯಿಂದ ತಮ್ಮ ದೇಹದೊಳಕ್ಕೆ ಸೆಳೆದುಕೊಂಡುಬಿಡಬೇಕು ಎಂದು ನಿಶ್ಚಯಿಸಿದರು. ಇದ್ದಕ್ಕಿದ್ದಂತೆ ಅವರಲ್ಲೇನೋ ಒಂದು ಅಪೂರ್ವ ಹುಮ್ಮಸ್ಸು ಕಂಡುಬಂದಿತು. "ಹೂಂ, ಗೊತ್ತಿದೆ! ತಮ್ಮ ಕೃಪೆಯಿಂದ ಗೊತ್ತಿದೆ! ರೋಗವನ್ನು ಈಗ ವಾಸಿ ಮಾಡಿಬಿಡುತ್ತೇನೆ" ಎನ್ನುತ್ತ ಮುನ್ನುಗ್ಗಿದರು. ಮಹಾ ಸಂಯಮಿಯೂ ಸಾಧಕರೂ ಆದ ಅವರಿಂದ ಹಾಗೆ ಮಾಡಲು ಸಾಧ್ಯವಾಗಿದ್ದಿದ್ದರೆ ಆಶ್ಚರ್ಯವೇನಿಲ್ಲ. ಆದರೆ ಅವರ ಉದ್ದೇಶವನ್ನು ಗ್ರಹಿಸಿದ ಶ್ರೀರಾಮಕೃಷ್ಣರು ಮುಗುಳ್ನಗುತ್ತ, "ಹೌದು ಹೌದು! ನಿಮ್ಮಿಂದ ಸಾಧ್ಯ, ನಿಮ್ಮಿಂದ ಸಾಧ್ಯ!" ಎಂದು ಉದ್ಗರಿಸಿ ಅವರನ್ನು ಕೈಯಿಂದ ಅಲ್ಲೇ ತಡೆದುಬಿಟ್ಟರು.

ಮೇ ಜೂನ್ ಜುಲೈ ತಿಂಗಳುಗಳು ಕಳೆದುಹೋದುವು.* ಶ್ರೀರಾಮಕೃಷ್ಣರ ದೇಹ ಇನ್ನಷ್ಟು ಮತ್ತಷ್ಟು ಕ್ಷೀಣಿಸಿತು. ಅವರು ತಮ್ಮ ಭೌತಿಕ ಶರೀರದ ಬಂಧನವನ್ನು ಬಿಡಿಸಿಕೊಳ್ಳುವ ದಿನ ಹೆಚ್ಚು ದೂರವಿಲ್ಲ ಎಂಬುದನ್ನು ನೆನೆಸಿಕೊಂಡಾಗಲೆಲ್ಲ ಭಕ್ತರ ಹೃದಯ ಬಿರಿಯುತ್ತಿತ್ತು. ಆದರೆ ವಿಧಿಯಿಚ್ಛೆಗೆ ಮೌನವಾಗಿ ಶರಣಾಗುವ ಯತ್ನ ಮಾಡಿದರು.

ತಾವು ದೇಹದಿಂದ ದೂರವಾದರೂ, ಧರ್ಮೋತ್ಥಾನ-ಪ್ರೇಮವಿತರಣೆಯೇ ಮೊದಲಾದ ತಮ್ಮ ಅವತಾರೋದ್ದೇಶಗಳು ನಡೆದುಕೊಂಡು ಬರುವಂತಾಗಲು, ತಮ್ಮ ಕರ್ತವ್ಯಗಳು ಇನ್ನೇನೇನು ಉಳಿದಿದ್ದುವೋ ಅವನ್ನೆಲ್ಲ ಈಗ ಶ್ರೀರಾಮಕೃಷ್ಣರು ಜತನದಿಂದ ಮಾಡಿ ಮುಗಿಸುತ್ತಿದ್ದರು. ಬೆಳೆದುನಿಂತ ಆಲದಮರ ಬಿಳಲುಗಳನ್ನು ಬಿಟ್ಟು ಮತ್ತಷ್ಟು ವಿಶಾಲವಾಗಿ ಹಬ್ಬುವಂತೆ ಮತ್ತು ಇನ್ನಷ್ಟು ನೆರಳನ್ನೂ ಜೀವಜಂತುಗಳಿಗೆ ಆಶ್ರಯವನ್ನೂ ನೀಡುವಂತೆ ಶ್ರೀರಾಮಕೃಷ್ಣರು ಒಂದೆಡೆ ನರೇಂದ್ರನೇ ಮೊದಲಾದ ತ್ಯಾಗೀಶಿಷ್ಯರ ಸಂಘವನ್ನು, ಮತ್ತೊಂದೆಡೆ ಲೀಲಾ ಸಹಚಾರಿಣಿ ಶಾರದಾದೇವಿಯವರನ್ನು ತಮ್ಮ ಎರಡು 'ಬಿಳಲು'ಗಳನ್ನಾಗಿ ನಿರ್ಮಿಸಿದ್ದರು. ಈಗ ಆ ಬಿಳಲುಗಳು ಬೇರು ಬಿಡಬೇಕಾಗಿದೆ; ಹೊಣೆಹೊತ್ತು ಕಾರ್ಯವನ್ನು ಮುಂದುವರಿಸುತ್ತ ವಿಸ್ತರಿಸಬೇಕಾಗಿದೆ.

ಶ್ರೀರಾಮಕೃಷ್ಣರು ತಮ್ಮ ಸತಿಗೆ ಅವರ ಬಾಲ್ಯದಿಂದಲೂ ಲೌಕಿಕ-ಆಧ್ಯಾತ್ಮಿಕ ವಿಚಾರಗಳಲ್ಲಿ ಶಿಕ್ಷಣ ನೀಡಿ ಪರಿಪೂರ್ಣರನ್ನಾಗಿಸಿದ ಪರಿಯನ್ನು ಹಿಂದೆಯೇ ನೋಡಿದ್ದೇವೆ. ಅದೆಲ್ಲ ಕೇವಲ ಅವರ ಸ್ವಂತ ಮುಕ್ತಿಗಾಗಿ ಅಲ್ಲ. "ಅವಳು ಜಗದ ಜನರಿಗೆ ಜ್ಞಾನ ನೀಡುವುದಕ್ಕಾಗಿ ಬಂದ ಸ್ವಯಂ ಸರಸ್ವತಿ" ಎಂದು ಶ್ರೀರಾಮಕೃಷ್ಣರೇ ಘೋಷಿಸಿದ್ದರು. ಇದೀಗ ಪತಿಯ ವಿಯೋಗವಾದ ಮೇಲೆ ಅವರು ತಮ್ಮ ಲಜ್ಜೆಯ ಆವರಣದಿಂದ ಸ್ವಲ್ಪ ಹೊರಬಂದು, ದೈವತ್ವದ ದೀಪ್ತಿಯನ್ನು ಚೆಲ್ಲಬೇಕಾಗಿದೆ. (ಈಗ ಅವರಿಗಿನ್ನೂ ಮೂವತ್ತೆರಡು ವರ್ಷವಷ್ಟೇ.)

ಮೆಟ್ಟಿಲ ಮೇಲಿಂದ ಜಾರಿಬಿದ್ದು ಶಾರದಾದೇವಿಯವರ ಕಾಲಿಗೆ ಪೆಟ್ಟಾದ ವಿಷಯವನ್ನು ಹಿಂದೆ ನೋಡಿದೆವಲ್ಲವೆ? ಆದಾದ ಮೇಲೆ ಅವರು ಮೂರುದಿನ ಸುಧಾರಿಸಿಕೊಂಡು ನಾಲ್ಕನೆಯ ದಿನವೇ ಕಷ್ಟಪಟ್ಟು ಶ್ರೀರಾಮಕೃಷ್ಣರ ಊಟ ತೆಗೆದು

---

*ಶ್ರೀರಾಮಕೃಷ್ಣರ ಜೀವನಚರಿತ್ರೆಯ ಮುಖ್ಯ ಆಕರಗ್ರಂಥಗಳೆಂದರೆ 'ಶ್ರೀರಾಮಕೃಷ್ಣ ಲೀಲಾ ಪ್ರಸಂಗ' ಮತ್ತು ಮಹೇಂದ್ರನಾಥ ಗುಪ್ತನ ದಿನಚರಿ ಪುಸ್ತಕವಾದ 'ಶ್ರೀರಾಮಕೃಷ್ಣ ವಚನವೇದ'. ಆದರೆ ಈ ಎರಡೂ ಗ್ರಂಥಗಳಲ್ಲಿ, ಕೊನೆಯ ಕೆಲವು ತಿಂಗಳ ಆಗುಹೋಗುಗಳನ್ನು ಬರೆಯದೆ ಬಿಟ್ಟುಬಿಟ್ಟಿರುವುದರಿಂದ, ಈ ಅವಧಿಯ ಅನೇಕ ಅಮೂಲ್ಯ ವಿಚಾರಗಳು, ಸಂಭಾಷಣೆಗಳು ನಮಗೆ ಅಲಭ್ಯವಾಗಿವೆ.

ಕೊಂಡು ಬಂದರು. ಪತಿದರ್ಶನ ಮಾಡುವ, ಅವರ ಸೇವೆಯನ್ನು ಪುನಃ ಕೈಗೆತ್ತಿಕೊಳ್ಳುವ ಕಾತರ ಅವರಿಗೆ. ಶ್ರೀರಾಮಕೃಷ್ಣರು ದಿಂಬಿಗೊರಗಿಕೊಂಡಿದ್ದರು; ಕಣ್ಣುಗಳು ಮುಚ್ಚಿಕೊಂಡಿದ್ದುವು. ಶಾರದಾದೇವಿಯವರು ಮೆಲುದನಿಯಿಂದ "ಊಟದ ಹೊತ್ತಾಯಿತು, ಏಳುತ್ತೀರಾ" ಎಂದು ಕರೆದರು. ಶ್ರೀರಾಮಕೃಷ್ಣರು ಮೆಲ್ಲನೆ ಕಣ್ತೆರೆದರು; ಅವರು ಯಾವುದೋ ದೂರದ ಭಾವಲೋಕದಿಂದ ಮರಳಿ ಬರುತ್ತಿರುವಂತಿತ್ತು. ತಟ್ಟೆ ಹಿಡಿದು ನಿಂತ ಸತಿಯನ್ನು ದಿಟ್ಟಿಸುತ್ತ ನುಡಿದರು:

"ನೋಡು, ಕಲ್ಕತ್ತದ ಜನಗಳು ಕ್ರಿಮಿಕೀಟಗಳ ಹಾಗೆ ಕತ್ತಲಲ್ಲಿ ತೊಳಲಾಡುತ್ತಿದ್ದಾರೆ. ನೀನು ಅವರನ್ನೆಲ್ಲ ನೋಡಿಕೊಳ್ಳಬೇಕು."

ಶಾರದಾದೇವಿ: "ಅದು ಹೇಗೆ ಸಾಧ್ಯ. . . ನಾನೆಷ್ಟಾದರೂ ಹೆಣ್ಣಲ್ಲವೆ ?"

ಶ್ರೀರಾಮಕೃಷ್ಣರು: "ನಾನೊಬ್ಬನೇ ಎಷ್ಟು ಮಾಡಿಯೇನು ಹೇಳು ? ನೀನು ಬಹಳಷ್ಟು ಮಾಡಬೇಕಾದ್ದಿದೆ. ಮಾಡಲೇ ಬೇಕು !"

ಅದಕ್ಕೆ ಶಾರದಾದೇವಿಯವರು ಸ್ವಲ್ಪ ಗಂಭೀರವಾಗಿಯೇ ಉತ್ತರಿಸಿದರು:

"ಅದೆಲ್ಲ ಯಾವಾಗ ಆಗಬೇಕೋ ಆಗ ಆಗುತ್ತದೆ. ಈಗ ಊಟ ಮಾಡಿ."

ಶ್ರೀರಾಮಕೃಷ್ಣರು ಊಟಕ್ಕೆ ಕುಳಿತರೂ ಮತ್ತೆ ಮತ್ತೆ ಆ ಮಾತನ್ನೇ ಬೇರೆ ಬೇರೆ ರೀತಿಯಲ್ಲಿ ಆಡುತ್ತಿದ್ದರು. ಹೇಳುತ್ತಾರೆ: "ಈ ಲೋಕಕ್ಕೆ ಬಂದು ನಾನು ಎಷ್ಟು ಯಾತನೆ ಪಟ್ಟೆ ಗೊತ್ತೆ ? ಅದನ್ನೆಲ್ಲ ಯಾರ ಹತ್ತಿರ ಅಂತ ಹೇಳಿಕೊಳ್ಳಲಿ ! ಆದರೆ ಆ ಯಾತನೆಯೆಲ್ಲ ನನಗೊಬ್ಬನಿಗೇ ಅಲ್ಲ; ನಿನಗೂ ಅದರಲ್ಲಿ ಪಾಲಿದೆ !"

ಇಷ್ಟೆಲ್ಲ ಹೇಳಿದರೂ ಶ್ರೀರಾಮಕೃಷ್ಣರಿಗಿನ್ನೂ ಸಮಾಧಾನವಿಲ್ಲ. ಇನ್ನಷ್ಟು ಸತಿಯ ಮನವೊಲಿಸಬೇಕಾದ ಅಗತ್ಯವಿದೆಯೇನೋ ಎಂಬ ಶಂಕೆ ಅವರಿಗೆ. ಒಂದು ದಿನ ಶಾರದಾದೇವಿಯವರು ಪತಿಯ ಪಕ್ಕದಲ್ಲಿ ಕುಳಿತಿದ್ದಾರೆ. ಬಹಳ ಹೊತ್ತಿನಿಂದಲೂ ಶ್ರೀರಾಮಕೃಷ್ಣರು ನೆಟ್ಟನೋಟದಿಂದ ಸತಿಯನ್ನೇ ನೋಡುತ್ತಿದ್ದಾರೆ. ಏನನ್ನೋ ಹೇಳುವ ಇಚ್ಛೆ, ಆದರೆ ಮಾತು ನಾಲಿಗೆಯ ತುದಿಯಲ್ಲೇ ನಿಂತುಬಿಟ್ಟಿದೆ. ಕಡೆಗೆ ಶಾರದಾದೇವಿಯವರೇ ಮೌನ ಮುರಿದು ಕೇಳಿದರು: "ಏನು ಹೇಳಬೇಕು ಅಂತ ಇದ್ದೀರೋ ಹೇಳಿಬಿಡಬಾರದೆ ?"

ಶ್ರೀರಾಮಕೃಷ್ಣರು (ಭಾರವಾದ ದನಿಯಲ್ಲಿ): "ಏನು, ನೀನೇನೂ ಮಾಡುವುದಿಲ್ಲವೆ ? ಎಲ್ಲವನ್ನೂ ಇದೊಂದೇ (ತಾವೊಬ್ಬರೇ) ಮಾಡಬೇಕೆ ?"

ಶಾರದಾದೇವಿಯವರು ಮೌನವಾಗಿ ಕುಳಿತರು. ಆದರೆ ಶ್ರೀರಾಮಕೃಷ್ಣರು ತಮ್ಮ ಶರೀರವನ್ನು ಬಿಸುಟು ಹೊರಟುಬಿಡಲು ತೋರುತ್ತಿರುವ ಆತುರವನ್ನು ಕಂಡು ಅವರ ತಳಮಳ ಎಷ್ಟೆಂದು ಹೇಳೋಣ ! ಅವರನ್ನೀಗ ಸಾಂತ್ವನಗೊಳಿಸಬಲ್ಲವರಾರು ? ಅವರು ಆಲೋಚಿಸುತ್ತಿದ್ದಾರೆ—ಶ್ರೀರಾಮಕೃಷ್ಣರ ಅದ್ಭುತ ಲೀಲೆಯೆಲ್ಲ ಹೀಗೆ ನಿಂತು ಹೋಗಬೇಕೆ ? ಅದು ಇನ್ನಷ್ಟು ಕಾಲ ಮುಂದುವರಿಯಬಾರದೆ ? ಭಗವಂತ ಇಚ್ಛೆಪಟ್ಟರೆ ಶ್ರೀರಾಮಕೃಷ್ಣರನ್ನು ಮತ್ತೂ ಕೆಲಕಾಲ ಉಳಿಸಿಕೊಳ್ಳಲಾರನೆ ? ತಮ್ಮನ್ನು ಈ ಹಿಂದೆ ಅತ್ಯಂತ ದುರ್ಭರ ಪರಿಸ್ಥಿತಿಗಳಲ್ಲೂ ಕಾಪಾಡಿದ ಕೃಪಾಮಯ ಅವನು. ಈಗ ತಮ್ಮ ಹೃದಯದ ಮೊರೆತಕ್ಕೆ ಅವನು ಓಗೊಡಲಾರನೆ ? ಶಾರದಾದೇವಿಯವರು ಚೆನ್ನಾಗಿ ಆಲೋಚಿಸಿ, ಈ ದಿಸೆಯಲ್ಲೂ ತಮ್ಮಿಂದ ಸಾಧ್ಯವಿರುವುದನ್ನೆಲ್ಲ ಮಾಡಿಬಿಡಲು ನಿರ್ಧರಿಸಿದರು.

ಕಲ್ಕತ್ತಕ್ಕೆ ಸಮೀಪದಲ್ಲೇ ತಾರಕೇಶ್ವರ ಶಿವನ ದೇವಾಲಯ. ಕಷ್ಟಪರಿಹಾರ ಮಾಡುವಲ್ಲಿ ಈತ ನಿಷ್ಣಾತ ಎನ್ನುವುದು ಜನಜನಿತ ಸಂಗತಿ. ಈಗ ಅವನಲ್ಲೇ ಮರೆ ಹೊಕ್ಕು, ಆತನ ಕೃಪೆಗಾಗಿ ನಿರಶನ ವ್ರತ ಕೈಗೊಳ್ಳುವ ಇಚ್ಛೆ ಅವರಲ್ಲುದಿಸಿತು. ಶ್ರೀರಾಮಕೃಷ್ಣರ ಮುಂದೆ ಅದನ್ನು ನಿವೇದಿಸಿಕೊಂಡರು. ಶ್ರೀರಾಮಕೃಷ್ಣರು ಮನ ದಲ್ಲೇ ನಕ್ಕಿರಬೇಕು. ಎದುರಿಗಂತೂ ಏನೂ ತೋರ್ಪಡಿಸದೆ, "ಓ ಹಾಗೇನು! ಸರಿ, ಹೋಗಿ ಬಾ" ಎಂದು ಹೇಳಿ ಕಳಿಸಿಕೊಟ್ಟರು.

ಶಾರದಾದೇವಿಯವರು ಲಕ್ಷ್ಮಿಯನ್ನೂ ಒಬ್ಬಳು ಸೇವಕಿಯನ್ನೂ ಜೊತೆ ಮಾಡಿ ಕೊಂಡು ತಾರಕೇಶ್ವರನ ಸನ್ನಿಧಿಗೆ ಹೋದರು. ಸಂಕಷ್ಟನಾಶಕ ಶಿವನಿಗೆ ಭಕ್ತಿಯಿಂದ ಪ್ರಣಾಮ ಮಾಡಿ ಅವನೆದುರು ಕತ್ತಲಲ್ಲಿ ಒಬ್ಬರೇ ಒರಗಿ ಕುಳಿತರು. ಆಹಾರ-ವಿಶ್ರಾಂತಿ ಗಳ ಗೊಡವೆಯೇ ಇಲ್ಲದೆ, ಮೌನಪ್ರಾರ್ಥನೆ ಸಲ್ಲಿಸುತ್ತ ಎರಡು ಹಗಲು ಎರಡು ರಾತ್ರಿಗಳನ್ನು ಕಳೆದರು. ಯಾವ ಮಹತ್ವಪೂರ್ಣ ಘಟನೆಯೂ ಸಂಭವಿಸಲಿಲ್ಲ; ಯಾವ ಆಶ್ವಾಸನೆಯೂ ಲಭಿಸಲಿಲ್ಲ. ಆದರೂ ಅವರು ನಿಶ್ಚಲಮನಸ್ಕರಾಗಿ ಕುಳಿತಂತೆಯೇ ಕುಳಿತಿದ್ದಾರೆ. ಆಗ ಇದ್ದಕ್ಕಿದ್ದಂತೆ ಅವರ ಅಂತರಂಗಕ್ಕೆ ಏನೋ ವಿಚಿತ್ರ ಶಬ್ದ ಕೇಳಿಸಿತು! ಏನದು? ಮಣ್ಣಿನ ಮಡಕೆಗಳನ್ನು ಒಂದರ ಮೇಲೊಂದು ಪೇರಿಸಿ ದೊಣ್ಣೆಯಿಂದ ಬಡಿದು ಒಡೆದು ಚೂರು ಮಾಡುತ್ತಿರುವಂಥ ಶಬ್ದ! ಘಟ ಎನ್ನುವುದು ಮಾನವ ದೇಹದ ಸಂಕೇತ. ಆದ್ದರಿಂದ ಮಡಕೆ ಒಡೆದ ಶಬ್ದ ಕೇಳಿದೊಡನೆ ಶಾರದಾದೇವಿಯವ ರಿಗೆ 'ಹುಟ್ಟಿದವರಿಗೆ ಮರಣ ಕಟ್ಟಿಟ್ಟದ್ದು' ಎಂಬ ತತ್ತ್ವದ ನೆನಪು ಒತ್ತರಿಸಿ ಬಂತು; ಆಶ್ಚರ್ಯಚಕಿತರಾಗಿ ಎದ್ದುನಿಂತರು. ಅವರ ಮನಸ್ಸಿನಲ್ಲಿ ಇದ್ದಕ್ಕಿದ್ದಂತೆ ಬೇರೊಂದು ಬಗೆಯ ಆಲೋಚನೆ ಮೂಡಿ ನಿಂತಿತು: 'ಪತಿಯಂತೆ, ಪತ್ನಿಯಂತೆ! ಈ ನಶ್ವರ ಜಗತ್ತಿನಲ್ಲಿ ಯಾವ ಸಂಬಂಧ ತಾನೆ ಶಾಶ್ವತ? ಯಾರಿಗಾಗಿ ಅಂತ ನಾನಿಲ್ಲಿ ಪ್ರಾಯೋಪ ವೇಶ ಮಾಡುತ್ತ ಕುಳಿತಿದ್ದೇನೆ? ಇದು ಕೇವಲ ವ್ಯಾಮೋಹಜನ್ಯವಾದುದಲ್ಲವೆ?' ಹೀಗೆಂದುಕೊಳ್ಳುತ್ತ ಅವರು ಕತ್ತಲಲ್ಲಿ ಕೈಯಿಂದ ತಡವರಿಸಿಕೊಂಡು ದೇವಸ್ಥಾನದ ಹಿಂಭಾಗಕ್ಕೆ ಹೋದರು. ಅಲ್ಲಿ ಶಿವನಿಗೆ ಅಭಿಷೇಕ ಮಾಡಿದ್ದ ತೀರ್ಥ ಸಂಗ್ರಹವಾಗಿತ್ತು. ಅದನ್ನೊಂದು ಬೊಗಸೆ ಕುಡಿದರು. ಒಣಗಿದ್ದ ಗಂಟಲು ಸ್ವಲ್ಪ ತಣಿಯಿತು. ಮೆಲ್ಲನೆ ಹೊರಬಂದರು. ತಮ್ಮ ವ್ರತ ನಿಷ್ಫಲವಾಯಿತಾದರೂ ದುಃಖವೆನಿಸಲಿಲ್ಲ. ಆದರೆ ಅಂತ ರಂಗದಲ್ಲಿ ಒಂದು ರೀತಿಯ ಶೂನ್ಯತೆಯ ಭಾವ; ಶರಣಾಗತಿ ಭಾವ.

ಶಾರದಾದೇವಿಯವರು ತಮ್ಮೆದುರು ಬಂದು ನಿಂತಾಗ ಶ್ರೀರಾಮಕೃಷ್ಣರು ಅರ್ಥ ಗರ್ಭಿತವಾದ ಮುಗುಳ್ನಗೆ ಬೀರಿದರು. ಅವರಿಗೆ ಎಲ್ಲವೂ ತಿಳಿದಿದೆ ಎನ್ನುವುದು ಆ ನೋಟದಲ್ಲೇ ಕಾಣುತ್ತಿತ್ತು. ಹಾಸ್ಯದ ದನಿಯಲ್ಲಿ ಕೇಳಿದರು, "ಏನು, ಏನಾದರೂ ಆಯಿತೋ... ಅಥವಾ ಏನೂ ಇಲ್ಲವೋ?" ಶಾರದಾದೇವಿಯವರು ಇದಕ್ಕೇನೆಂದು ಉತ್ತರಿಸಿಯಾರು?

ಈ ದಿನಗಳಲ್ಲೇ ಶಾರದಾದೇವಿಯವರಿಗೊಂದು ವಿಚಿತ್ರ ಸ್ವಪ್ನವಾಯಿತು. ಅದರಲ್ಲಿ ಕಾಳಿಕಾ ಮಾತೆ ತನ್ನ ಕತ್ತನ್ನು ಒಂದು ಬದಿಗೆ ಬಗ್ಗಿಸಿಕೊಂಡು ನಿಂತಿರುವಂತೆ ಕಂಡರು. "ಅಮ್ಮಾ, ಆದೇಕೆ ಹಾಗೆ ನಿಂತಿದ್ದೀ?" ಎಂದು ಕೇಳಿದಾಗ, ಆಕೆ ಶ್ರೀರಾಮ ಕೃಷ್ಣರನ್ನು ತೋರಿಸಿ ಹೇಳುತ್ತಾಳೆ, "ಅವನ ಗಂಟಲಲ್ಲಿ ಆ ನೋವಿದೆಯಲ್ಲ, ಅದು ನನ್ನ ಗಂಟಲಲ್ಲೂ ಇದೆ, ಅದಕ್ಕೇ." ಈ ಕನಸಿನ ಮರ್ಮವೇನೆಂದು ಹೊಳೆದಾಗ

ಶಾರದಾದೇವಿಯವರಿಗೆ ಆಶ್ಚರ್ಯವಾಯಿತು. ಸರ್ವಶಕ್ತಿಶಾಲಿನಿಯಾದ ಜಗನ್ಮಾತೆಗೂ ಅದೇ 'ನೋವು' ಇದೆಯಂತೆ! ಎಂದರೆ ಅದು ಗುಣವಾಗುವುದು ಆಕೆಯ ಇಚ್ಛೆಯಲ್ಲ! ಇನ್ನು ಮನುಷ್ಯಮಾತ್ರದಿಂದ ಆ ಕಾಯಿಲೆಯನ್ನು ವಾಸಿಮಾಡಲು ಸಾಧ್ಯವೆ? ಈ ಭಾವನೆ ಕೂಡ ಅವರಿಗೆ ಸ್ವಲ್ಪ ಸಮಾಧಾನಕೊಟ್ಟಿತು.

೧೮೮೬ ರ ಆಗಸ್ಟ್ ತಿಂಗಳು ಒಂದಿದೆ. ಶ್ರೀರಾಮಕೃಷ್ಣರ ಶರೀರ ಸಂಪೂರ್ಣ ಜರ್ಝರಿತವಾಗಿದೆ. ಆದರೆ ಅವರ ಮಾನಸಿಕ ಶಕ್ತಿಯಲ್ಲಾಗಲಿ, ಮಾತು ವರ್ತನೆ ಭಾವನೆಗಳ ಮಾಧುರ್ಯದಲ್ಲಾಗಲಿ ಕಿಂಚಿತ್ತೂ ಲೋಪ ಕಾಣುತ್ತಿಲ್ಲ. ಅಷ್ಟೇ ಅಲ್ಲ, ತಾವಿನ್ನೂ ಮಾಡದೆ ಉಳಿಸಿಕೊಂಡಿದ್ದ ಕೆಲವು ಅತಿ ಮುಖ್ಯ ಕಾರ್ಯಗಳನ್ನು ಅವರು ನೆರವೇರಿಸಿದ್ದು ಈಗಲೇ. ತಮ್ಮ ಜೀವಿತಾವಧಿಯ ಈ ಕೊನೆಯ ಕೆಲವು ದಿನಗಳಲ್ಲಿ ಅವರು ಶಿಷ್ಯರನ್ನು ಕರೆದು ಅನೇಕ ವಿಷಯಗಳಲ್ಲಿ ಮಾರ್ಗದರ್ಶನ ನೀಡಿದರು; ಅವರ ಆಧ್ಯಾತ್ಮಿಕ ಜೀವನವನ್ನು ಸಮೃದ್ಧಗೊಳಿಸಿದರು. ಅದರಲ್ಲೂ ಮುಖ್ಯವಾಗಿ ನರೇಂದ್ರನನ್ನು ಪ್ರತಿದಿನವೂ ಸಂಜೆ ಎರಡು ಮೂರು ಗಂಟೆಗಳ ಕಾಲ ಒಬ್ಬನನ್ನೇ ಕುಳ್ಳಿರಿಸಿಕೊಂಡು ಅವನ ವೈಯಕ್ತಿಕ ಸಾಧನೆಗೆ ಸಂಬಂಧಿಸಿದಂತೆಯೂ, ಇತರ ಶಿಷ್ಯರನ್ನು ಒಟ್ಟಾಗಿರಿಸಿ ಅವರಿಗೆ ಸಮರ್ಥ ನಾಯಕನಾಗಿ ಅವರನ್ನು ಮುನ್ನಡೆಸಿಕೊಂಡುಹೋಗುವ ವಿಚಾರಗಳಲ್ಲೂ ಅನೇಕ ಅಮೂಲ್ಯ ಬೋಧನೆಗಳನ್ನೀಯುತ್ತಿದ್ದರು.

ಒಂದು ದಿನ ಅವರು ನರೇಂದ್ರನನ್ನುಳಿದು ಮಿಕ್ಕೆಲ್ಲ ಶಿಷ್ಯರನ್ನು ಕರೆಸಿಕೊಂಡು, "ಮುಂದೆ ನೀವೆಲ್ಲ ನರೇಂದ್ರನ ಕಡೆಗೆ ವಿಶೇಷ ಗಮನ ಕೊಡಬೇಕು; ಅವನ ಆರೋಗ್ಯಕ್ಕೆ, ಅನುಕೂಲತೆಗೆ ನಿಮ್ಮಿಂದ ಸಾಧ್ಯವಿರುವುದನ್ನೆಲ್ಲ ಮಾಡಬೇಕು" ಎಂದು ಒತ್ತಿ ಹೇಳಿದರು. ತರುವಾಯ ನರೇಂದ್ರನೊಬ್ಬನನ್ನೇ ಬರಮಾಡಿಕೊಂಡು, "ಅಪ್ಪಾ, ನಾನು ಈ ಹುಡುಗರನ್ನೆಲ್ಲ ನಿನ್ನ ವಶಕ್ಕೆ ಬಿಟ್ಟುಹೋಗುತ್ತಿದ್ದೇನೆ. ಅವರನ್ನೆಲ್ಲ ರಕ್ಷಿಸುವ ಜವಾಬ್ದಾರಿ ನಿನ್ನದು" ಎಂದು ಮತ್ತೊಮ್ಮೆ ಸ್ಪಷ್ಟವಾಗಿ ತಿಳಿಸಿದರು. ಅವನೇ ಶಿಷ್ಯರೆಲ್ಲರ ನಾಯಕ ಎಂಬ ಮಾತನ್ನು ಶ್ರೀರಾಮಕೃಷ್ಣರು ಹಿಂದೆಯೇ ಅನೇಕ ರೀತಿಯಲ್ಲಿ ಹೇಳಿದ್ದರೇನೋ ನಿಜವೇ. ಅದನ್ನೇ ಮತ್ತೀಗ ಒತ್ತಿ ಹೇಳಿದ್ದಕ್ಕೊಂದು ವಿಶೇಷ ಕಾರಣವಿದೆ. ಒಂದನೆಯದಾಗಿ ಅವಸಾನಕಾಲದಲ್ಲಿ ಆಡಿದ ಮಾತುಗಳು ಕೇಳುಗರ ಮನಸ್ಸಿನಲ್ಲಿ ಅಚ್ಚಳಿಯದೆ ಉಳಿಯುತ್ತದೆ. ಎರಡನೆಯದಾಗಿ, ವ್ಯಕ್ತಿಗಳು ಎಷ್ಟೇ ಸದ್ಗುಣಶಾಲಿಗಳಾದರೂ ಅವರನ್ನು ಒಟ್ಟುಗೂಡಿಸಿ ಕೆಲಸ ಮಾಡಿಸುವುದು ಸುಲಭವಲ್ಲ. ಬುದ್ಧಿವಂತರೂ ಸ್ವತಂತ್ರ ಮನೋವೃತ್ತಿಯವರೂ ಆದವರು ಒಟ್ಟಾಗಿರುವುದು ಮತ್ತೂ ಕಷ್ಟ. ಅದರಲ್ಲೂ ಸಂನ್ಯಾಸಿಗಳಂತೂ ಜಗತ್ತಿನಲ್ಲೇ ಯಾರ ಹಂಗಿಗೂ ಕಟ್ಟುಬೀಳುವವರಲ್ಲ! 'ಕರತಲ ಭಿಕ್ಷಾ, ತರುತಲ ವಾಸ' ಇಷ್ಟಿದ್ದರೆ ಅವರ ಜೀವನ ನಡೆದುಹೋಗುತ್ತದೆ. ಇಂಥವರನ್ನು ಸಂಘಜೀವನದ ಕಟ್ಟಲೆಗೊಳಪಡಿಸಿ, ಒಂದು ಸಾಮಾನ್ಯ ಆದರ್ಶದ ಅನುಷ್ಠಾನಕ್ಕಾಗಿ ಜೀವಿಸುವಂತೆ ಮಾಡುವುದೆಂದರೆ ಸುಲಭದ ಹೊಣೆಗಾರಿಕೆಯಲ್ಲ. ಇದನ್ನೆಲ್ಲ ಮನಗಂಡಿದ್ದರಿಂದಲೇ ಶ್ರೀರಾಮಕೃಷ್ಣರು ಈಗ, ನರೇಂದ್ರನೇ ತಮ್ಮ ಉತ್ತರಾಧಿಕಾರಿ ಎಂಬ ಅಂಶವನ್ನು ಸ್ಪಷ್ಟಪಡಿಸಿದುದು. ಇದು ಮುಂದೆ ತುಂಬ ಪರಿಣಾಮಕಾರಿಯಾಗಿ ಕೆಲಸ ಮಾಡಿತು.

ಆಗಸ್ಟ್ ತಿಂಗಳ ಮೊದಲ ವಾರದಲ್ಲೊಂದು ದಿನ ಶ್ರೀರಾಮಕೃಷ್ಣರು ಯೋಗೀಂದ್ರನನ್ನು ಕರೆದು, ಬಂಗಾಳೀ ಪಂಚಾಂಗದಿಂದ ಮುಂದಿನ ಕೆಲವು ದಿನಗಳ ವಿವರಗಳನ್ನು ಓದುವಂತೆ ಹೇಳಿದರು. ಅವನು ಶ್ರಾವಣ ಮಾಸದ ಇಪ್ಪತ್ತೈದನೇ ತೇದಿಯಿಂದಾರಂಭಿಸಿ (೯ನೇ ಆಗಸ್ಟ್) ತಿಥಿ ವಾರ ನಕ್ಷತ್ರಾದಿ ವಿವರಗಳನ್ನು ಓದ ಲಾರಂಭಿಸಿದ. ಅವನು ಮೂವತ್ತನೇ ತೇದಿಗೆ (೧೪ನೇ ಆಗಸ್ಟ್) ಬಂದಾಗ, 'ಇನ್ನು ಸಾಕು' ಎಂದು ಶ್ರೀರಾಮಕೃಷ್ಣರು ಸಂಜ್ಞೆಯಿಂದ ತಿಳಿಸಿದರು. ಯಾವುದೋ ಮಹತ್ತರ ಕಾರ್ಯಕ್ಕೆ ಅವರು ಮುಹೂರ್ತವನ್ನು ನಿಶ್ಚಯಿಸಿದಂತಿತ್ತು. . .

ಇದಾಗಿ ನಾಲ್ಕೈದು ದಿನಗಳ ಮೇಲೆ ಒಂದು ದಿನ ಅವರು ನರೇಂದ್ರನನ್ನು ಕರೆಸಿ ಏಕಾಂತದಲ್ಲಿ ತಮ್ಮೆದುರು ಕುಳ್ಳಿರಿಸಿಕೊಂಡರು. ಮಾತನ್ನೇನೂ ಆಡಲಿಲ್ಲ. ಆದರೆ ಅವ ನನ್ನೇ ನೆಟ್ಟ ನೋಟದಿಂದ ದಿಟ್ಟಿಸಲಾರಂಭಿಸಿದರು. ಹಾಗೆ ನೋಡುತ್ತಲೇ ಗಾಢ ಸಮಾಧಿಯಲ್ಲಿ ಮುಳುಗಿಹೋದರು. ವಿದ್ಯುತ್ಪ್ರವಾಹದಂತಹ ಶಕ್ತಿಯೊಂದು ತನ್ನನ್ನು ಪ್ರವೇಶಿಸುತ್ತಿದೆ ಎಂಬುದರ ಅರಿವು ನರೇಂದ್ರನಿಗಾಯಿತು. ಕೆಲಕ್ಷಣಗಳಲ್ಲೇ ಅವನೂ ಪ್ರಜ್ಞಾಶೂನ್ಯನಾಗಿ ಕುಸಿದುಬಿಟ್ಟ. ಹೀಗೆ ಎಷ್ಟು ಹೊತ್ತು ಕಳೆಯಿತು ಎನ್ನುವುದು ಅವ ನಿಗೆ ತಿಳಿಯಲಿಲ್ಲ. ಪ್ರಜ್ಞೆ ಮರಳಿದಾಗ ನೋಡುತ್ತಾನೆ—ಶ್ರೀರಾಮಕೃಷ್ಣರು ಕಣ್ಣೀ ರ್ಗರೆಯುತ್ತಿದ್ದಾರೆ! ಆದರದು ದುಃಖಾಶ್ರುವಲ್ಲ; ಕೃತಕೃತ್ಯತೆಯ ಭಾವದಿಂದ ಉದು ರಿದ ಕಣ್ಣೀರು. ನರೇಂದ್ರ ಆಶ್ಚರ್ಯಪಡುತ್ತ ಕಣ್ಣೀರಿಗೆ ಕಾರಣವೇನೆಂದು ಕೇಳಿದ. ಆಗ ಅವರೆನ್ನುತ್ತಾರೆ: "ನರೇನ್, ಇಂದು ನಾನು ನಿನಗೆ ನನ್ನ ಸರ್ವಸ್ವವನ್ನೂ ಕೊಟ್ಟುಬಿಟ್ಟೆ ನಪ್ಪಾ. ಈಗ ನಾನೊಬ್ಬ ಬಡ ಫಕೀರನಾಗಿಬಿಟ್ಟೆ! . . ಇರಲಿ, ನಾನು ನಿನ್ನೊಳಗೆ ಹರಿಸಿದ ಶಕ್ತಿಯಿಂದ ಮುಂದೆ ನಿನ್ನ ಮೂಲಕ ಅದ್ಭುತ ಜಗದ್ಧಿತಕಾರ್ಯಗಳು ನಡೆಯಲಿವೆ. ಅವನ್ನೆಲ್ಲ ಮಾಡಿ ಮುಗಿಸಿದ ಮೇಲಷ್ಟೇ ನೀನು ನಿನ್ನ ಸ್ವಸ್ಥಳಕ್ಕೆ ಹಿಂದಿರುಗುವುದು."

ಆ ಮಾತುಗಳ ಮರ್ಮವನ್ನು ಪೂರ್ಣವಾಗಿ ಗ್ರಹಿಸಲಾರದೆ ನರೇಂದ್ರ ಆಶ್ಚರ್ಯಚಕಿತನಾದ.

ಈ ಘಟನೆಯನ್ನು ನೋಡಿದಾಗ ಶ್ರೀರಾಮಕೃಷ್ಣರ ಲೀಲಾಕಾರ್ಯದ ಮುಕ್ತಾ ಯವೂ ಕೂಡ ಪೂರ್ವನಿಯೋಜಿತವೆಂಬಂತೆ ಎಷ್ಟು ಕ್ರಮಬದ್ಧವಾಗಿ ನಡೆಯುತ್ತಿದೆ ಎನ್ನುವುದನ್ನು ಗಮನಿಸಿ ನಾವು ಬೆರಗಾಗದಿರುವಂತಿಲ್ಲ.

ಈ ದಿನಗಳಲ್ಲೇ ಒಮ್ಮೆ ನಾಗಮಹಾಶಯರು ಕಾಶೀಪುರದ ಉದ್ಯಾನಗೃಹಕ್ಕೆ ಬಂದರು. ಅವರು ಒಳ ಪ್ರವೇಶಿಸುತ್ತಿದ್ದಂತೆಯೇ, ಶ್ರೀರಾಮಕೃಷ್ಣರು ಭಕ್ತನೊಬ್ಬನ ಹತ್ತಿರ, "ಏನಪ್ಪಾ, ಎಲ್ಲಾದರೂ ಒಂದಿಷ್ಟು ನೆಲ್ಲಿಕಾಯಿ ಸಿಕ್ಕೀತೆ? ಬಾಯೆಲ್ಲ ಕೆಟ್ಟು ಹೋಗಿದೆ. ನೆಲ್ಲಿಕಾಯಿ ತಿಂದರೆ ಸ್ವಲ್ಪ ಸರಿಹೋಗುತ್ತದೆ" ಎನ್ನುತ್ತಿದ್ದುದು ಅವರ ಕಿವಿಗೆ ಬಿತ್ತು. ಆಗ ಆ ಭಕ್ತ, "ಮಹಾಶಯರೆ, ಈಗ ನೆಲ್ಲಿಕಾಯಿಯ ಕಾಲ ಅಲ್ಲವಲ್ಲ! ಅದೆಲ್ಲೂ ಸಿಗಲಾರದು" ಎಂದುತ್ತರಿಸಿದ. ಆದರೆ, ಶ್ರೀರಾಮಕೃಷ್ಣರು ಬೇಕೆಂದು ಕೇಳಿದ ಮೇಲೆ ಅದು ಎಲ್ಲಾದರೂ ಸಿಗಲೇಬೇಕು ಎಂದು ನಾಗಮಹಾಶಯರಿಗೆ ತೋರಿತು.

ಅವರು ಯಾರಿಗೂ ಏನೂ ಹೇಳದೆ ಕೂಡಲೇ ಅಲ್ಲಿಂದ ಹೊರಟುಬಿಟ್ಟರು. ನೆಲ್ಲಿ ಕಾಯನ್ನು ಹುಡುಕಿಕೊಂಡು, ತೋಟದಿಂದ ತೋಟಕ್ಕೆ ಸುತ್ತಾಡಿದರು. ಎರಡು ದಿನ ಕಳೆದುಹೋಯಿತು. ಅಂತೂ ಮೂರನೇ ದಿನ ಯಾವುದೋ ತೋಟದಿಂದ ಅವನ್ನು ಸಂಪಾದಿಸಿಕೊಂಡು, ಕಾಶೀಪುರಕ್ಕೆ ಓಡಿಬಂದರು. ಆ ಕಾಯಿಗಳನ್ನು ಕಂಡು ಶ್ರೀರಾಮ ಕೃಷ್ಣರು ಬಾಲಕನಂತೆ ಹಿಗ್ಗಿದರು. ಒಂದನ್ನು ಬಾಯಿಗೆ ಹಾಕಿಕೊಂಡು ಬಲು ಸಂತೋಷ ದಿಂದ ಚಪ್ಪರಿಸುತ್ತ, "ಆಹಾ, ಎಲ್ಲಿಂದ ತಂದಿರಿ ಇಷ್ಟು ಸೊಗಸಾದ ನೆಲ್ಲೀಕಾಯನ್ನು!" ಎಂದು ಉದ್ಗರಿಸಿದರು. ಶ್ರೀರಾಮಕೃಷ್ಣರ ಆ ಸರಳಭಾವವನ್ನು ಕಂಡು ಅಲ್ಲಿದ್ದವರೆಲ್ಲರ ಕಂಗಳು ಅಪ್ರಯತ್ನವಾಗಿ ಹನಿಗೂಡಿದುವು.

ಬಳಿಕ ಅವರು ಸತಿ ಶಾರದಾದೇವಿಯವರನ್ನು ಕರೆದು, "ನೋಡು, ನಾಗಮಹಾ ಶಯರು ಬಂದಿದ್ದಾರೆ. ಇವತ್ತು ಇಲ್ಲೇ ಊಟ ಮಾಡುತ್ತಾರೆ. ಇವರಿಗೋಸ್ಕರ ಸ್ವಲ್ಪ ಖಾರವಾದ ಸಾರು ಮಾಡು" ಎಂದರು. ನಾಗಮಹಾಶಯರು ಪೂರ್ವ ಬಂಗಾಳ ದವರು; ಆ ಕಡೆ ಅಡಿಗೆಗೆ ಮಸಾಲೆ-ಖಾರ ಜೋರು. ಆದ್ದರಿಂದಲೇ ಶ್ರೀರಾಮಕೃಷ್ಣರ ಆ ವಿಶೇಷ ಸೂಚನೆ! ಅಡಿಗೆ ತಯಾರಾಯಿತು. ಆದರೆ ಅದು ತಮಗೆ ನೈವೇದ್ಯವಾದ ಹೊರತು ನಾಗಮಹಾಶಯರು ಅದನ್ನು ಸ್ವೀಕರಿಸುವುದಿಲ್ಲ ಎಂದು ತಿಳಿದದ್ದರಿಂದ, ಶ್ರೀರಾಮಕೃಷ್ಣರು ಎಲ್ಲ ವ್ಯಂಜನಗಳಿಂದಲೂ ಒಂದೊಂದು ತುಣುಕನ್ನು ಪರಿಗ್ರಹಿ ಸಿದರು. ಅಂಥ ದುರ್ಭರ ಸ್ಥಿತಿಯಲ್ಲೂ ಅವರ ಮನಸ್ಸು ಇತರರ ಭಾವನೆಗಳ ಬಗ್ಗೆ, ಅಗತ್ಯಗಳ ಬಗ್ಗೆ ಅಷ್ಟು ಸಂವೇದನಾಶೀಲವಾಗಿತ್ತು.

ತಮ್ಮ ಸಾಧನಾವಧಿ ಮುಗಿದಾಗಿನಿಂದಲೂ, ಜಗನ್ಮಾತೆಯ ಆದೇಶದಂತೆ 'ಭಾವಮುಖ'ದಲ್ಲೇ ನೆಲಸಿದ್ದವರು ಶ್ರೀರಾಮಕೃಷ್ಣರು. ಆದರೆ ಅವರ ಲೀಲಾಕಾರ್ಯ ಮುಕ್ತಾಯವಾಗುತ್ತ ಬಂದಂತೆ ಈಗ ಅವರ ಮನಸ್ಸು ಮತ್ತೆ ತನ್ನ ಸಹಜನೆಲೆಯತ್ತ ಧಾವಿಸತೊಡಗಿತ್ತು; ಅವಿಚ್ಛಿನ್ನ ಸಮಾಧಿಯಲ್ಲಿ ಮುಳುಗಿಬಿಡಲು ಹವಣಿಸುತ್ತಿತ್ತು. ಒಂದು ದಿನ ಸನಿಹದಲ್ಲಿದ್ದ ದೇವೇಂದ್ರನಾಥನ ಮುಂದೆ ಅದನ್ನು ಬಹಿರಂಗ ಪಡಿಸುತ್ತಾರೆ: "ನೋಡು, ಸಮಾಧಿಮಗ್ನನಾಗಿದ್ದುಬಿಡಬೇಕು ಎಂಬ ತೀವ್ರತರ ಇಚ್ಛೆ ನನ್ನನ್ನು ಆವರಿಸಿಬಿಟ್ಟಿದೆ..." ಮತ್ತೊಂದು ದಿನ ಶಶಿಯನ್ನು ಕರೆದು ನುಡಿದರು: "ಅವಳನ್ನು (ಶಾರದಾದೇವಿಯವರನ್ನು) ಇಲ್ಲಿಗೆ ಬರಹೇಳು. ಅವಳು ಬಹಳ ಬುದ್ಧಿ ವಂತೆ. ನನ್ನ ಸ್ಥಿತಿಯನ್ನು ಚೆನ್ನಾಗಿ ಅರ್ಥಮಾಡಿಕೊಳ್ಳಬಲ್ಲಳು." ಶಾರದಾದೇವಿ ಯವರು ಬಂದಾಗ, ಪಿಸುದನಿಯಲ್ಲಿ ಅವರೆನ್ನುತ್ತಾರೆ: "ನೋಡು, ಯಾಕೋ ಏನೋ, ಈಚೆಗೆ ನನ್ನ ಮನಸ್ಸಿನಲ್ಲಿ ಸದಾ ಬ್ರಹ್ಮಭಾವ ಉದ್ದೀಪನವಾಗುತ್ತಿದೆ." ಶಾರದಾದೇವಿ ಯವರಿಗೆ ಆ ಮಾತಿನ ಅರ್ಥ ಚೆನ್ನಾಗಿಯೇ ಆಯಿತು. ಏನೋ ಮರುಮಾತಾಡಲು ಹೊರಟರು. ಆದರೆ ದುಃಖ ಒತ್ತರಿಸಿ ಬಂದು ದನಿಯೇ ಹೊರಡಲಿಲ್ಲ. ಕೂಡಲೇ ಮುಖ ತಿರುಗಿಸಿ ಕಣ್ಣೀರು ಒರಸಿಕೊಂಡರು.

ಆಗಸ್ಟ್ ೧೫ನೇ ದಿನ. ಶ್ರೀರಾಮಕೃಷ್ಣರು ನಿಶ್ಚಲರಾಗಿ ಮಲಗಿದ್ದಾರೆ. ಅಲು ಗಾಡಲೂ ತ್ರಾಣವಿದ್ದಂತಿಲ್ಲ. ನರೇಂದ್ರನೂ ಇತರ ಅನೇಕ ಭಕ್ತರೂ ಸುತ್ತ ಮೌನವಾಗಿ ನಿಂತಿದ್ದಾರೆ. ಶ್ರೀರಾಮಕೃಷ್ಣರ ದೇಹಾಂತ್ಯಕಾಲ ದಿನದಿನಕ್ಕೂ ಗಂಟೆಗಂಟೆಗೂ ಹತ್ತಿರ ವಾಗುತ್ತಿದೆ ಎಂಬ ಅರಿವೊಂದೇ ಭಕ್ತರ ಮನಸ್ಸನ್ನೆಲ್ಲ ಆವರಿಸಿಬಿಟ್ಟಿದೆ. ಬೇರಾವ ಆಲೋಚನೆಯೂ ಅಲ್ಲಿ ಸುಳಿಯುವಂತಿಲ್ಲ. ಆದರೆ ಆ ರುದ್ರ-ಗಂಭೀರ ಮುಹೂರ್ತ

ದಲ್ಲೂ ನರೇಂದ್ರನ ಮನದಲ್ಲಿ ಮಾತ್ರ ಮಂಥನ ನಡೆಯುತ್ತಿದೆ. ಕೇವಲ ಅಸ್ಥಿ-ಚರ್ಮದ ಗೂಡಿನಂತಾಗಿರುವ ಶ್ರೀರಾಮಕೃಷ್ಣರ ಶರೀರವನ್ನು ದಿಟ್ಟಿಸುತ್ತ ಕುಳಿತಿದ್ದ ಅವನ ಮನದಲ್ಲೊಂದು ಭಾವನೆ ಸುಳಿಯಿತು: 'ಇವರು ನಿಜಕ್ಕೂ ಅವತಾರಪುರುಷರೆ? ತಾವು ಅವತಾರ ಎಂದು ಇವರೇ ಎಷ್ಟೋ ಬಾರಿ ಸಾರಿದ್ದಾರೆ. ಇನ್ನೆಷ್ಟೆಷ್ಟೋ ಜನರೆಲ್ಲ ಹಾಗೆಯೇ ಹೇಳಿದ್ದಾರೆ. ಆದರೂ ನನಗಿನ್ನೂ ಪೂರ್ತಿ ಒಪ್ಪಿಗೆಯಾಗಲಿಲ್ಲ. ಆದರೆ ಈಗ—ತಮ್ಮ ಶರೀರ ಯಾವ ಕ್ಷಣದಲ್ಲಾದರೂ ಬಿದ್ದುಹೋಗಬಹುದು ಎನ್ನುವ ಈ ಅವಸ್ಥೆಯಲ್ಲಿ—ಇವರು ಹೇಳಲಿ, "ನಾನು ಸ್ವಯಂ ಭಗವಂತನ ಅವತಾರವೇ" ಅಂತ, ಆಗ ನಾನದನ್ನು ನಂಬುತ್ತೇನೆ.'

ಪರಮಾಶ್ಚರ್ಯ! ನರೇಂದ್ರನ ಮನದಲ್ಲಿ ಈ ಭಾವನೆ ಸುಳಿಯಿತೋ ಇಲ್ಲವೋ, ಶ್ರೀರಾಮಕೃಷ್ಣರು ತಮ್ಮ ಶಕ್ತಿಯನ್ನೆಲ್ಲ ಒಗ್ಗೂಡಿಸಿಕೊಂಡು ಅವನೆಡೆಗೆ ತಿರುಗಿ, ದೃಢ ಸ್ವರದಿಂದ ನುಡಿದರು:

"ನರೇನ್, ನಿನಗಿನ್ನೂ ನಂಬಿಕೆಯಾಗಲಿಲ್ಲವೆ? ಇಗೊ ಹೇಳುತ್ತೇನೆ ಕೇಳು, ಹಿಂದೆ ಯಾರು ರಾಮನಾಗಿದ್ದನೋ ಯಾರು ಕೃಷ್ಣನಾಗಿದ್ದನೋ ಅವನೇ ಈಗ ಈ ಶರೀರದಲ್ಲಿ ರಾಮಕೃಷ್ಣನಾಗಿ ಅವತರಿಸಿದ್ದಾನೆ. ಆದರೆ ಇದು ಕೇವಲ ನಿನ್ನ ವೇದಾಂತದ ದೃಷ್ಟಿಯಿಂದಲ್ಲ, ನಿಜವಾಗಿಯೂ."

ನರೇಂದ್ರ ಸಿಡಿಲು ಬಡಿದವನಂತೆ ಬೆಚ್ಚಿಬಿದ್ದ. ಶ್ರೀರಾಮಕೃಷ್ಣರ ಈ ಹಠಾತ್ ಉದ್ಗಾರವನ್ನು ಕೇಳಿ ಅಲ್ಲಿದ್ದ ಇನ್ನಿತರರೂ ಆಶ್ಚರ್ಯಗೊಂಡರು. ಆದರೆ ಅದು ನರೇಂದ್ರನ ಮನದಾಳದಲ್ಲೆದ್ದಿದ್ದ ಪ್ರಶ್ನೆಗೆ ಉತ್ತರ ಎನ್ನುವುದನ್ನು ಅವರು ಹೇಗೆ ಊಹಿಸಿಯಾರು? ನರೇಂದ್ರನಿಗೆ ಅತ್ಯಾಶ್ಚರ್ಯ, ಜೊತೆಗೆ ಅಷ್ಟೇ ನಾಚಿಕೆ. ಇಲ್ಲಿಯವರೆಗೂ ತಾನು ಶ್ರೀರಾಮಕೃಷ್ಣರನ್ನು ಪರೀಕ್ಷಿಸಿದ ಪರಿಗಳೆಷ್ಟು! ಅವರು ತನಗೆ ಮಾಡಿಸಿಕೊಟ್ಟ ಅಪೂರ್ವ ಅನುಭವಗಳೆಷ್ಟು! ದರ್ಶನಗಳೆಷ್ಟು! ಇಷ್ಟೆಲ್ಲ ಆದಮೇಲೂ, ಈ ಘಳಿಗೆಯಲ್ಲಿ ತಾನು ಅವರ ದೈವತ್ವವನ್ನು ಸಂದೇಹಿಸಿದೆನಲ್ಲ—ಎಂಬ ಪರಿತಾಪ. ಆದರೆ ಅವರು ತನ್ನ ಸಂದೇಹಕ್ಕೆ, ದ್ವಂದ್ವಕ್ಕೆಡೆಯಿಲ್ಲದಂತಹ ಉತ್ತರ ನೀಡಿದ್ದರಿಂದ ಅಷ್ಟೇ ಸಮಾಧಾನ ಮತ್ತು ಸಂತೋಷ ಕೂಡ.

ಒಂದು ದೃಷ್ಟಿಯಲ್ಲಿ ನರೇಂದ್ರನ ಮನಸ್ಸಿನಲ್ಲಿ ಅಂತಹ ಸಂಶಯವೆದ್ದುದು ನಿರರ್ಥಕವೇನಲ್ಲ. ಆದರಿಂದಾಗಿಯೇ ಈ ಸಂದರ್ಭದಲ್ಲಿ ಶ್ರೀರಾಮಕೃಷ್ಣರು ತಮ್ಮ ಅವತಾರತ್ವವನ್ನು ಘಂಟಾಘೋಷವಾಗಿ ಬಹಿರಂಗಪಡಿಸುವಂತಾಯಿತಲ್ಲವೆ? ವೀರಾಧಿವೀರನಾದ ಅರ್ಜುನ ಯುದ್ಧಭೂಮಿಯಲ್ಲಿ ಸಂದೇಹದಿಂದ ಗಲಿಬಿಲಿಗೊಳಗಾಗದಿದ್ದರೆ, ಶ್ರೀಕೃಷ್ಣನು ಗೀತಾಮೃತವನ್ನು ವರ್ಷಿಸಲು ಅವಕಾಶವೆಲ್ಲಿರುತ್ತಿತ್ತು!

ಅಲ್ಲದೆ, ಇಲ್ಲಿ ಶ್ರೀರಾಮಕೃಷ್ಣರಾಡುವ ಮಾತು ತುಂಬ ಗಹನವಾದ ಅರ್ಥದಿಂದ ಕೂಡಿದೆ. ಅವರು "ನಾನೊಬ್ಬ ಅವತಾರಪುರುಷ" ಎಂದಷ್ಟೇ ಹೇಳಲಿಲ್ಲ. ಅಥವಾ, "ಹೇಗೆ ರಾಮನೂ ಕೃಷ್ಣನೂ ಅವತಾರಪುರುಷರೋ ಹಾಗೆಯೇ ನಾನೂ ಒಬ್ಬ ಅವತಾರ ಪುರುಷ" ಎಂದೂ ಹೇಳಲಿಲ್ಲ. ಬದಲಾಗಿ, "ಹಿಂದೆ ಯಾರು ರಾಮನಾಗಿದ್ದನೋ, ಯಾರು ಕೃಷ್ಣನಾಗಿದ್ದನೋ ಅವನೇ ಈಗ ರಾಮಕೃಷ್ಣನಾಗಿ ಅವತರಿಸಿದ್ದಾನೆ" ಎಂದು ಸಂಶಯಕ್ಕೆಡೆಯಿಲ್ಲದಂತೆ ಹೇಳುತ್ತಿದ್ದಾರೆ. ಜೊತೆಗೆ, ಮತ್ತೆ ಸ್ಪಷ್ಟಪಡಿಸುತ್ತಿದ್ದಾರೆ—"ಇದು ಕೇವಲ ನಿನ್ನ ವೇದಾಂತ ದೃಷ್ಟಿಯಿಂದಲ್ಲ" ಎಂದು. ಇದು ಕೂಡ

ಅಷ್ಟೇ ಅರ್ಥಪೂರ್ಣವಾದದ್ದು. ಹೇಗೆಂದರೆ, ಅದ್ವೈತವೇದಾಂತದ ಪ್ರಕಾರ, ಎಲ್ಲ ಜೀವಿಗಳೂ ಸತ್-ಚಿತ್-ಆನಂದಸ್ವರೂಪನಾದ ಪರಬ್ರಹ್ಮನ ಆವಿರ್ಭಾವಗಳೇ. ಎಂದರೆ, ಮನುಷ್ಯರೆಲ್ಲರೂ ಭಗವತ್ ಸ್ವರೂಪಿಗಳೇ, ಅವತಾರರೇ. ಆದರೆ ತಾವು ಅವತಾರವೆಂಬುದು ಈ ಅರ್ಥದಲ್ಲಲ್ಲ ಎಂಬುದನ್ನು ಅವರು ತಾವಾಗಿಯೇ ಸ್ಪಷ್ಟಪಡಿಸುತ್ತಿದ್ದಾರೆ.

ಇನ್ನೊಂದು ಗಮನಾರ್ಹ ಅಂಶವಿದೆ ಇಲ್ಲಿ. ಶ್ರೀರಾಮಕೃಷ್ಣರು ಸಾಮಾನ್ಯ ಭಾವದಲ್ಲಿದ್ದಾಗ, ಇತರರು ತಮ್ಮನ್ನು 'ಗುರು' 'ಭಗವಾನ್' ಇತ್ಯಾದಿ ವಿಶೇಷಣಗಳಿಂದ ಸಂಬೋಧಿಸುವುದನ್ನು ಸಹಿಸುತ್ತಿರಲಿಲ್ಲ. ತಾವೊಬ್ಬ ಅತಿ ಸಾಮಾನ್ಯ ವ್ಯಕ್ತಿ ಎಂಬಂತೆಯೇ ಅವರ ಪ್ರತಿಯೊಂದು ನಡೆನುಡಿಯೂ ಕೂಡ. ಆದ್ದರಿಂದ ಉನ್ನತ ದೈವೀಭಾವದಲ್ಲಿರುವಾಗಲಲ್ಲದೆ ಬೇರೆ ಸಮಯದಲ್ಲಿ ಅವರ ಬಾಯಿಂದ ಇಂತಹ ಅದ್ಭುತ ನುಡಿಗಳು ಹೊರಬರಲು ಸಾಧ್ಯವಿರಲಿಲ್ಲ. ಆಗಿನ ಅವರ ಸ್ಥಿತಿಯೋ, ಕರುಣಾಜನಕ! ಪ್ರಾಣೋತ್ಕ್ರಮಣಕಾಲ ಸನ್ನಿಹಿತವಾಗಿದೆ. ಶರೀರವೆಲ್ಲ ಸೊರಗಿಹೋಗಿದೆ. ಗಂಟಲಲ್ಲಿ ಅಪಾರ ವೇದನೆ. ಇನ್ನೆರಡೇ ದಿನಗಳಲ್ಲಿ ಅವರ ಶರೀರ ಒಬ್ಬ ಸಾಧಾರಣ ಮರ್ತ್ಯನ ಶರೀರದಂತೆ ಭಸ್ಮವಾಗಲಿದೆ. ಇಂಥ ಸ್ಥಿತಿಯಲ್ಲಿ ಅವರು ತಮ್ಮ ಅವತಾರತ್ವವನ್ನು ಘೋಷಿಸುತ್ತಿದ್ದಾರೆ! ಮತ್ತೂ ಕುತೂಹಲದ ಸಂಗತಿಯೆಂದರೆ, ಇತರರ ದೃಷ್ಟಿಗೆ ಅತ್ಯಂತ ಅಸಹಾಯಕ ಸ್ಥಿತಿಯಲ್ಲಿರುವಂತೆ ಕಾಣುತ್ತಿದ್ದ ಅವರು ಆ ಕ್ಷಣದಲ್ಲೂ ನರೇಂದ್ರನ ಮನದಲ್ಲಿ ಹಾದುಹೋದ ಭಾವನೆಯನ್ನು ಪತ್ತೆಹಚ್ಚಿ, ಒಡನೆಯೇ ಸಂದೇಹ ನಿವಾರಣೆ ಮಾಡಲು ಸಮರ್ಥರಾಗಿದ್ದುದು!

* * * *

ಮಾರನೇ ದಿನ ೧೪ನೇ ಆಗಸ್ಟ್, ಶನಿವಾರ. ಬೆಳಗ್ಗೆ ಶ್ರೀರಾಮಕೃಷ್ಣರು ಮೊದಲ ಮಹಡಿಯ ವಿಶಾಲ ಕೊಠಡಿಯಲ್ಲಿ ಮಲಗಿದ್ದರು. ಬಲರಾಮ, ಕವಿರಾಜನೆಂಬ ಭಕ್ತ ಮತ್ತು ರಾಮಲಾಲ ಪಕ್ಕದಲ್ಲಿದ್ದರು. ಈ ದಿನಗಳಲ್ಲಿ, ಅತ್ಯಲ್ಪ ಪ್ರಚೋದನೆಯಿಂದಲೇ ಶ್ರೀರಾಮಕೃಷ್ಣರ ಮನಸ್ಸು ಮೇಲೇರಿ ಗಾಢ ಸಮಾಧಿಯಲ್ಲಿ ಮುಳುಗಿಹೋಗುತ್ತಿತ್ತು. ಇಂದೂ ಹಾಗೆಯೇ ಆಯಿತು. ನೋಡನೋಡುತ್ತಿದ್ದಂತೆಯೇ ಅವರು ಬಾಹ್ಯಜ್ಞಾನ ವಿಸ್ಮರಣೆ ಹೊಂದಿದರು. ಸ್ವಲ್ಪ ಹೊತ್ತಿನ ಮೇಲೆ ಪ್ರಕೃತಿಸ್ಥರಾಗಿ, ಬಲರಾಮನನ್ನುದ್ದೇಶಿಸಿ ನುಡಿದರು: "ನಾನೇನು ಕಾಣುತ್ತಿದ್ದೇನೆ ಗೊತ್ತೆ? ಪರಮ ಪ್ರಶಾಂತವಾದ ಮಿಂಚಿನ ಸಾಗರ. ವಿಶಾಲವಾಗಿ ಹರಡಿಕೊಂಡಿದೆ. ಎಲ್ಲೋ ಅಲ್ಲೊಂದು ಇಲ್ಲೊಂದು ಜಾಗದಲ್ಲಿ ಮಾತ್ರ ತೆರವಾಗಿದೆ... ಇದು ಕೂಡ ಪರಬ್ರಹ್ಮನ ದರ್ಶನವೇನು? ಭಾವಣೆಗೆ ಬೆಳ್ಳಿಯ ತಗಡು ಹೊದಿಸಿದಂತೆ ಕಾಣುತ್ತದೆ!"

ತುಸು ಸಮಯವಾಯಿತು. ಬಾಗ್‌ಬಜಾರಿನ ರಾಖಾಲ ಮುಖರ್ಜಿ ಎಂಬವನು ಬಂದ. ಶ್ರೀರಾಮಕೃಷ್ಣರು ಮತ್ತೆ ಸಮಾಧಿಮಗ್ನರಾದರು. ಬಾಹ್ಯಪ್ರಜ್ಞೆ ಬಂದ ಮೇಲೆ, ಮೆಲ್ಲನೆ ಉದ್ಗರಿಸುತ್ತಾರೆ: "ಪಾದರಸದ ದೊಡ್ಡ ಸರೋವರವನ್ನು ಕಾಣುತ್ತಿದ್ದೇನೆ... ಅದರ ನಡುವೆ ನಾನೊಂದು ಪುಟ್ಟ ಸೀಸದ ಗೊಂಬೆ..."

ಅಂದು ಆಗಸದಲ್ಲಿ ಮೋಡ ಮುಸುಕಿದ ವಾತಾವರಣ. ಭಕ್ತರ ಹೃದಯಗಳಲ್ಲೂ ಅಷ್ಟೆ. ಮಧ್ಯಾಹ್ನದ ಹೊತ್ತಿಗೆ ಸಮೀಪದಲ್ಲೇ ಭಾರೀ ಸಿಡಿಲೊಂದು ಬಡಿದ

ಸದ್ದಾಯಿತು. ಮೊದಲೇ ಕಳವಳದಿಂದಿದ್ದ ಲಕ್ಷ್ಮಿಯೂ ಶಾರದಾದೇವಿಯವರೂ ತಲ್ಲಣಗೊಂಡು ಶ್ರೀರಾಮಕೃಷ್ಣರ ಕೋಣೆಗೆ ಧಾವಿಸಿಬಂದರು. ಲಕ್ಷ್ಮಿಯ ಮುಖ ಪೂರ್ತಿ ಕಳೆಗುಂದಿತ್ತು. ಅದನ್ನು ಕಂಡು ಶ್ರೀರಾಮಕೃಷ್ಣರು ಛೇಡಿಸಿದರು, "ನೋಡು ಅವಳ! ಜೋಲುಮೋರೆ ಹಾಕಿಕೊಂಡಿರುವವರು ನನಗೆ ಇಷ್ಟವಾಗುವುದಿಲ್ಲ ಅಂತ ನಿನಗೆ ಗೊತ್ತಿಲ್ಲವೇನು?" ಎಂದು. ಆಗ ಅವಳು ಸಮಾಧಾನ ತಂದುಕೊಳ್ಳಬೇಕಾಯಿತು.

ಮರುದಿನ ಭಾನುವಾರ, ಆಗಸ್ಟ್ ೧೫ ನೇ ತಾರೀಕು.

ಶ್ರೀರಾಮಕೃಷ್ಣರ ಐಹಿಕ ಜೀವನದ ಕಟ್ಟಕಡೆಯ ದಿನ.

ಅಂದೂ ಬೆಳಗ್ಗೆ ಅವರು ಕೆಲವರೊಂದಿಗೆ ಸಂಭಾಷಿಸಿದರು. ಮಧ್ಯಾಹ್ನದ ವೇಳೆಗೆ ಲಕ್ಷ್ಮಿಯೂ ಶಾರದಾದೇವಿಯವರೂ ಅವರನ್ನು ನೋಡಲು ಬಂದರು. ಬಹಳ ಹೊತ್ತಿನಿಂದಲೂ ಶ್ರೀರಾಮಕೃಷ್ಣರು, ಹಾಸಿಗೆಯ ಮೇಲೆ ಪೇರಿಸಿದ್ದ ದಿಂಬುಗಳಿಗೆ ಸುಮ್ಮನೆ ಒರಗಿಕೊಂಡಿದ್ದರು. ಅವರು ಮೌನ ತಾಳಿರುವುದನ್ನು ನೋಡಿ, ಅವರ ಮಾತಿನ ಶಕ್ತಿ ಬಿದ್ದುಹೋಗಿರಬಹುದೆ ಎಂದೂ ಕೆಲವರು ಭಯಪಟ್ಟಿದ್ದರು. ಆದರೆ ಶಾರದಾದೇವಿಯವರನ್ನು ಕಂಡಾಗ ಶ್ರೀರಾಮಕೃಷ್ಣರು ಕ್ಷೀಣದನಿಯಲ್ಲಿ ನುಡಿದರು: "ಓ, ಬಂದೆಯಾ. ನೋಡು, ನಾನು ಸಾಗರದಾಚೆಗಿನ ಯಾವುದೋ ಜಾಗಕ್ಕೆ—ಬಹುದೂರಕ್ಕೆ—ಹೋಗುತ್ತಿರುವಂತೆ ನನಗೆ ಅನ್ನಿಸುತ್ತಿದೆ." ಶಾರದಾದೇವಿಯವರಿಗೆ ಉಕ್ಕಿ ಬಂದ ಕಣ್ಣೀರನ್ನು ತಡೆದುಕೊಳ್ಳಲಾಗಲಿಲ್ಲ. ತಕ್ಷಣ ಶ್ರೀರಾಮಕೃಷ್ಣರೆಂದರು, "ಯಾಕೆ ಚಿಂತಿಸುತ್ತಿ? ನಿನ್ನ ಜೀವನ ಇಷ್ಟು ದಿನ ಹೇಗೆ ನಡೆಯಿತೋ ಇನ್ನು ಮೇಲೆಯೂ ಹಾಗೆಯೇ ನಡೆಯುತ್ತದೆ. ನರೇಂದ್ರಾದಿಗಳೆಲ್ಲ ನನ್ನನ್ನು ಹೇಗೆ ನೋಡಿಕೊಳ್ಳುತ್ತಿರುವರೋ ಹಾಗೆಯೇ ನಿನ್ನನ್ನೂ ನೋಡಿಕೊಳ್ಳುತ್ತಾರೆ. ಲಕ್ಷ್ಮಿಯ ಬಗ್ಗೆ ಗಮನವಿರಲಿ. ಅವಳನ್ನು ನಿನ್ನ ಜೊತೆಯಲ್ಲೇ ಇಟ್ಟುಕೊ."

ಈ ದಿನ ಶ್ರೀರಾಮಕೃಷ್ಣರ ದೇಹಸ್ಥಿತಿ ತೀರಾ ಹದಗೆಟ್ಟಿತ್ತು. ಯಾತನೆಯಂತೂ ಎಷ್ಟು ಹೆಚ್ಚಾಗಿಬಿಟ್ಟಿತ್ತೆಂದರೆ, "ನನ್ನ ಧಮನಿಗಳಲ್ಲೆಲ್ಲ ಕುದಿಯುವ ನೀರು ಹರಿಯುತ್ತಿರುವಂತೆ ಅನ್ನಿಸುತ್ತಿದೆ. ಕೈಕಾಲುಗಳೆಲ್ಲ ಹೊತ್ತಿಕೊಂಡು ಉರಿಯುತ್ತಿರುವ ಹಾಗಿದೆ" ಎಂದು ಅವರೇ ಉದ್ಗರಿಸುತ್ತಾರೆ. ಭಕ್ತರೂ ಶಿಷ್ಯರೂ ನಿಸ್ಸಹಾಯಕರಾಗಿ ಕೈಕಟ್ಟಿಕೊಂಡು ನಿಂತಿದ್ದಾರೆ; ಮುಖಗಳು ಬಾಡಿಹೋಗಿವೆ.

ಈ ಸಮಯಕ್ಕೆ ಸರಿಯಾಗಿ, ಶ್ರೀರಾಮಕೃಷ್ಣರ ದರ್ಶನಕ್ಕಾಗಿ, ಅವರ ಶ್ರೀಮುಖದಿಂದ ಕೆಲವು ಬೋಧನೆಗಳನ್ನು ಕೇಳುವುದಕ್ಕಾಗಿ, ಆಗಂತುಕನೊಬ್ಬ ಬಂದು ಕಾತರದಿಂದ ಕಾದು ನಿಂತಿದ್ದಾನೆ ಎಂದು ತಿಳಿದು ಬಂತು. ಈಗ ಕೆಲವು ದಿನಗಳಲ್ಲಿ, ಅವರ ಕಾಯಿಲೆ ಉಲ್ಬಣಿಸಿದೆಯೆಂದು ಕೇಳಿ ಎಷ್ಟೋ ಹೊಸಬರೂ ಹಳಬರೂ ಬಂದುಹೋಗಿದ್ದರು. ಆದರೆ ಇಂಥ ವಿಷಮ ಘಳಿಗೆಯಲ್ಲಿ ಯಾರನ್ನಾದರೂ ಒಳಗೆ ಬಿಡಲು ಸಾಧ್ಯವೆ? "ದಯವಿಟ್ಟು ಇನ್ನೊಂದು ದಿನ ಬನ್ನಿ" ಎಂದು ಹೇಳಿ ಭಕ್ತರು ಆ ಆಗಂತುಕನನ್ನು ಕಳಿಸಲು ನೋಡಿದರು. ಆದರೆ ಅವನು ಅಲ್ಲಿಂದ ಕದಲದೆ, ವ್ಯಾಕುಲತೆಯಿಂದ ಪ್ರಾರ್ಥಿಸಿಕೊಳ್ಳುತ್ತ ಅಲ್ಲೇ ನಿಂತ. ಶ್ರೀರಾಮಕೃಷ್ಣರಿಗೆ ಈ ವಿಷಯ ತಿಳಿಯಿತು. "ಅವನಿಲ್ಲಿಗೆ ಬರಲಿ ಬಿಡಿ, ಪರವಾಗಿಲ್ಲ" ಎಂದರು. ಆತ ಬಂದು ಪ್ರಣಾಮ ಮಾಡಿ ನಿಂತ. ಶ್ರೀರಾಮಕೃಷ್ಣರು ಅವನನ್ನು ಪ್ರೀತಿಯಿಂದ ಸನಿಹಕ್ಕೆ ಕರೆದು, ಪಿಸುದನಿಯಲ್ಲೇ ಮಾತನಾಡಿಸತೊಡಗಿದರು. ಆತನೊಬ್ಬ ಪ್ರಾಮಾಣಿಕ ಸಾಧಕನೆಂದರಿತು, ಅವನಿಗೆ

ಅಗತ್ಯವಿದ್ದ ಅನೇಕ ಆಧ್ಯಾತ್ಮಿಕ ರಹಸ್ಯಗಳನ್ನು ತಿಳಿಸಿಕೊಟ್ಟರು; ಅವನ ಸಂದೇಹಗಳಿಗೆ ಪರಿಹಾರವಿತ್ತರು. ಇದನ್ನು ನೋಡನೋಡುತ್ತ ಅಲ್ಲಿದ್ದವರ ಆಶ್ಚರ್ಯಕ್ಕೆ ಪಾರವೇ ಇಲ್ಲ. ಶ್ರೀರಾಮಕೃಷ್ಣರು ತಮ್ಮ ಕಾಯಿಲೆಯ ಅಥವಾ ನಿಶ್ಶಕ್ತಿಯ ಪರಿವೆಯೇ ಇಲ್ಲದವರಂತೆ, ಆತನೊಂದಿಗೆ ಸುಮಾರು ಎರಡು ತಾಸು ಮಾತನಾಡಿ, ಅವನನ್ನು ಹರಸಿ ಬೀಳ್ಕೊಟ್ಟರು.* ಪವಾಡದಂತೆ ನಡೆದ ಈ ಘಟನೆಯನ್ನು ಕಂಡು ಅನೇಕರಿಗೆ, ಗೌತಮ ಬುದ್ಧನ ಜೀವನದ ಕಡೆಯ ಘಳಿಗೆಯಲ್ಲೂ ನಡೆಯುವ ಇದೇ ರೀತಿಯ ಘಟನೆಯ ನೆನಪು ಒತ್ತರಿಸಿ ಬಂತು. ಆ ಸಾದೃಶ್ಯವನ್ನು ಭಾವಿಸುತ್ತ ಅವರು ಬೆಕ್ಕಸ ಬೆರಗಾದರು. ಮತ್ತು ಶ್ರೀರಾಮಕೃಷ್ಣರು ತಮ್ಮ ಚೈತನ್ಯದ ಕಟ್ಟಕಡೆಯ ತುಣಕನ್ನೂ ಮಾನವಮಂಗಲಕ್ಕಾಗಿ ಧಾರೆಯೆರೆಯುತ್ತಿರುವ ಪರಿಯನ್ನು ಕಂಡು ಅವರ ಹೃದಯಗಳು ತುಂಬಿಬಂದುವು.

ಇದಾದ ಸ್ವಲ್ಪ ಹೊತ್ತಿಗೆ ಶ್ರೀರಾಮಕೃಷ್ಣರಿಗೆ ಪ್ರಜ್ಞೆ ತಪ್ಪಿಹೋಯಿತು. ಶಶಿ ತುಂಬ ಕಳವಳಗೊಂಡ. ಕೆಲಕಾಲದಿಂದ ಶ್ರೀರಾಮಕೃಷ್ಣರ ಚಿಕಿತ್ಸೆಯನ್ನು ನೋಡಿಕೊಳ್ಳುತ್ತಿದ್ದ ಕವಿರಾಜ ನವೀನ್‌ಪಾಲನನ್ನು ಕರೆತರಲು ನಿಶ್ಚಯಿಸಿ, ಆ ಕೆಲಸವನ್ನು ಬೇರೆ ಯಾರಿಗೂ ಒಪ್ಪಿಸದೆ ತಾನೇ ಹೊರಟ. ಕವಿರಾಜನ ಮನೆಯಿದ್ದುದು ಎಷ್ಟೋ ಮೈಲಿ ದೂರದಲ್ಲಿ. ಶಶಿ ಓಡಿಕೊಂಡೇ ಹೋದ. ಆದರೆ ಅವನು ಮನೆಯಲ್ಲಿರಲಿಲ್ಲ. ಆತ ಈಗೆಲ್ಲಿರಬಹುದೆಂದು ವಿಚಾರಿಸಿ ಶಶಿ ಅಲ್ಲಿಗೇ ಓಡಿದ. ದಾರಿಯಲ್ಲೇ ವೈದ್ಯನ ಭೇಟಿಯಾಯಿತು. "ದಯವಿಟ್ಟು ನೀವು ಈಗಲೇ ಬರಬೇಕು; ಪರಿಸ್ಥಿತಿ ಬಹಳ ಗಂಭೀರವಾಗಿದೆ" ಎಂದು ಒತ್ತಾಯಿಸಿ ಶಶಿ ಅವನನ್ನು ಕಾಶೀಪುರಕ್ಕೆ ಕರೆತಂದ.

ಈ ವೇಳೆಗೆ ಶ್ರೀರಾಮಕೃಷ್ಣರಿಗೆ ಪ್ರಜ್ಞೆ ಮರಳಿತ್ತು. ಆದರೆ ಮೆಲ್ಲನೆ ಅವರ ತ್ರಾಣ ಇಂಗಿಹೋಗುತ್ತಿರುವಂತೆ ತೋರಿತು. ನವೀನ್ ಪಾಲ ಅವರನ್ನು ಪರೀಕ್ಷಿಸತೊಡಗಿದ. ಶ್ರೀರಾಮಕೃಷ್ಣರು ತಮ್ಮ ಯಾತನೆಯ ಬಗ್ಗೆ ಅವನೆದುರು ತೋಡಿಕೊಂಡರು. ಆದರೆ ವೈದ್ಯನೇನು ಸರ್ವಶಕ್ತನೆ? ನಾಡಿ ನೋಡಿ, 'ಪರಿಸ್ಥಿತಿ ಕೈಮೀರಿದೆ' ಎಂಬ ಸೂಚನೆ ಕೊಟ್ಟು ಸುಮ್ಮನಾದ. ದೇವೇಂದ್ರನಾಥ ಶ್ರೀರಾಮಕೃಷ್ಣರ ನಾಡಿ ಹಿಡಿದು ನೋಡಲು ಪ್ರಯತ್ನಿಸಿದ. ಆದರೆ ನಾಡಿ ಸಿಗದೆ ಅವನ ಮುಖವೂ ಕಳಾಹೀನವಾಯಿತು. ಆಗ ಉಳಿದವರೂ ನಾಡಿ ನೋಡುವ ಯತ್ನಮಾಡಿದರು. ವೈದ್ಯನಿಗೇ ಸಿಗದ ನಾಡಿ ಅವರಿಗೆ ಸಿಕ್ಕೀತೆ? ಇಷ್ಟಾದರೂ ಶ್ರೀರಾಮಕೃಷ್ಣರು ಇನ್ನು ಕೆಲಕಾಲವಾದರೂ ನಮ್ಮನ್ನು ತೊರೆಯಲಾರರು ಎನ್ನುವ ಆಶಾಪೂರ್ಣ ನಿರೀಕ್ಷೆ ಮಾತ್ರ ಎಲ್ಲರ ಮನಸ್ಸಿನಲ್ಲೂ ಜೀವಂತವಾಗಿಯೇ ಇತ್ತು.

ಸೂರ್ಯಾಸ್ತಕ್ಕೆ ಸ್ವಲ್ಪ ಮೊದಲು ಶ್ರೀರಾಮಕೃಷ್ಣರ ಉಸಿರಾಟ ಪ್ರಯಾಸಕರವಾಯಿತು. ಉಸಿರು ನಾಭಿಯಿಂದ ಒತ್ತಿ ಬರುತ್ತಿತ್ತು. ಇದರತ್ತ ಪರಿಚಾರಕರ ಗಮನ

---

*ಆ ವ್ಯಕ್ತಿಯ ಪೂರ್ವಾಪರಗಳಾಗಲಿ, ಶ್ರೀರಾಮಕೃಷ್ಣರು ಅವನಿಗೆ ನೀಡಿದ ಬೋಧನೆಯ ಸ್ವರೂಪವೇನು ಎಂಬುದಾಗಲಿ ಯಾವ ಆಧಾರಗ್ರಂಥದಲ್ಲೂ ದಾಖಲಾಗಿಲ್ಲ. ಆದರೆ ಮುಂದೆ ಸ್ವಾಮಿ ವಿವೇಕಾನಂದರಿಂದ ಈ ವೃತ್ತಾಂತವನ್ನು ಕೇಳಿದ ಸೋದರಿ ನಿವೇದಿತಾ ಅದನ್ನು ತನ್ನ ಸ್ಮೃತಿಚಿತ್ರಣದಲ್ಲಿ ಪ್ರಸ್ತಾಪಿಸಿದ್ದಾಳೆ. ಮತ್ತು ಇನ್ನೊಬ್ಬ ಶಿಷ್ಯೆ ಸೋದರಿ ದೇವಮಾತಾ ಕೂಡ ತಾನು ಬರೆದ ಶ್ರೀರಾಮಕೃಷ್ಣರ ಜೀವನ ಚರಿತ್ರೆಯಲ್ಲಿ ಈ ಘಟನೆಯನ್ನು ಉಲ್ಲೇಖಿಸಿದ್ದಾಳೆ.

ಸೆಳೆವು ಶ್ರೀರಾಮಕೃಷ್ಣರು, "ನೋಡಿ, ಇದಕ್ಕೆ ಅಂತಿಮ ಶ್ವಾಸೋಚ್ಛ್ವಾಸ ಎನ್ನುತ್ತಾರೆ" ಎಂದರು. ಆದರೂ ಪರಿಚಾರಕರು ಹತಾಶರಾಗಲಿಲ್ಲ. ಬಟ್ಟಲಲ್ಲಿ ಗಂಜಿತಂದು, ಅದನ್ನು ಕುಡಿಯುವಂತೆ ಪ್ರೀತಿಯಿಂದ ಒತ್ತಾಯಿಸಿದರು. ಶ್ರೀರಾಮಕೃಷ್ಣರಿಗೆ ಹಸಿವೆಯೇನೋ ಆಗುತ್ತಿದೆ. ಆದರೆ ಗಂಟಲೊಳಗೆ ಇಳಿಯಬೇಕಲ್ಲ? ಭಕ್ತರ ಸಮಾಧಾನಕ್ಕಾಗಿ, ಗಂಜಿಯ ಬಟ್ಟಲನ್ನು ತುಟಿಗಿಟ್ಟುಕೊಂಡರು. ಆದರೆ ಒಳಗೆ ಹೋದದ್ದು ಮಾತ್ರ ಎಲ್ಲೋ ಒಂದು ಗುಟುಕು. ಆಗ ಅವರು ಡಾಕ್ಟರಿಗೆ ಅರ್ಧಹಾಸ್ಯವಾಗಿ ಹೇಳುತ್ತಾರೆ, "ನೋಡು, ನನಗೀಗ ಕೊಳಗಗಟ್ಟಲೆ ಅನ್ನ-ತೊವ್ವೆ ತಿನ್ನಬೇಕು ಅಂತನ್ನಿಸುತ್ತಿದೆ. ಆದರೆ ಮಹಾ ಮಾಯೆ ಸ್ವಲ್ಪ ತಿನ್ನಲೂ ಬಿಡುವುದಿಲ್ಲ." ಆಗ ದೇವೇಂದ್ರನಾಥ ಅವರನ್ನು ಸಮಾಧಾನ ಪಡಿಸಲು ನೋಡಿದ.

ಈಗ ಶ್ರೀರಾಮಕೃಷ್ಣರು, ತಾವು ಪ್ರತಿರಾತ್ರಿಯೂ ಮಲಗುವ ಮುನ್ನ ಹೇಳುತ್ತಿದ್ದಂತೆ, "ಹರಿಃ ಓಂ ತತ್‌ಸತ್!" ಎಂದು ಉಚ್ಚರಿಸಿದರು. ಅಕ್ಷಯ, ವೈಕುಂಠ ಮತ್ತು ಲಾಟು ಗಾಳಿ ಹಾಕಲಾರಂಭಿಸಿದರು. ರಾತ್ರಿ ಒಂಬತ್ತು ಗಂಟೆಗೆ ಶ್ರೀರಾಮಕೃಷ್ಣರು ದೀರ್ಘ ನಿಶ್ವಾಸ ಬಿಟ್ಟು ಸಮಾಧಿಸ್ಥರಾದರು. ಅವರು ಸಮಾಧಿಗೇರಿದ ಪರಿ ಎಂದಿನಂತಿಲ್ಲದೆ ವಿಚಿತ್ರವಾಗಿದ್ದುದನ್ನು ಕಂಡು ಶಶಿ ಆತಂಕಗೊಂಡು ಅಳಲಾರಂಭಿಸಿದ. ಕೂಡಲೇ ರಾಮಚಂದ್ರ, ಗಿರೀಶ ಇವರಿಗೆಲ್ಲ ಸುದ್ದಿ ತಲುಪಿಸಿ ಬರಲು ಒಂದಿಬ್ಬರು ತರುಣರು ಹೊರಟರು. ಉಳಿದವರೆಲ್ಲರೂ ಶ್ರೀರಾಮಕೃಷ್ಣರ ಕೋಣೆಯಲ್ಲಿ ನೆರೆದರು. ನರೇಂದ್ರನ ಸೂಚನೆಯಂತೆ, ಶ್ರೀರಾಮಕೃಷ್ಣರಿಗೆ ಬಾಹ್ಯಪ್ರಜ್ಞೆ ಮರಳುವಂತೆ ಮಾಡಲು, ಎಲ್ಲರೂ 'ಹರಿಃ ಓಂ ತತ್‌ಸತ್' ಮಂತ್ರವನ್ನು ಉಚ್ಚರಿಸಲಾರಂಭಿಸಿದರು.

ಮಧ್ಯರಾತ್ರಿಯ ಹೊತ್ತಿಗೆ ಶ್ರೀರಾಮಕೃಷ್ಣರು ಎಚ್ಚತ್ತರು. ಅವರಿಗೆ ಗಂಜಿ ಕುಡಿಸಲು ಪರಿಚಾರಕರು ಅವರನ್ನು ಮೆಲ್ಲನೆ ಎಬ್ಬಿಸಿ, ದಿಂಬುಗಳಿಗೆ ಒರಗಿಸಿ ಕುಳ್ಳಿರಿಸಿದರು. ಆಶ್ಚರ್ಯಕರವಾಗಿ ಶ್ರೀರಾಮಕೃಷ್ಣರು ಒಂದು ಇಡೀ ಬಟ್ಟಲು ಗಂಜಿಯನ್ನು ಕುಡಿದುಬಿಟ್ಟರು. ಮತ್ತು, "ಆಹ್! ಈಗ ಎಷ್ಟೋ ವಾಸಿ. ನಾನು ಹುಶಾರಾಗಿಬಿಟ್ಟೆ!" ಎಂದು ಉದ್ಗಾರ ಮಾಡಿದರು. ಅವರು ಅಷ್ಟೊಂದು ಗಂಜಿಯನ್ನು ಸುಲಭವಾಗಿ ಕುಡಿದದ್ದನ್ನು ಕಂಡು ಪರಿಚಾರಕರಿಗೂ ಸ್ವಲ್ಪ ಸಮಾಧಾನವಾಯಿತು.

ಶಶಿ ಅವರಿಗೆ ಗಾಳಿ ಹಾಕುತ್ತ ನಿಂತ. ಅವನು ಎಷ್ಟೇ ಸ್ಥಿರವಾಗಿರಲು ಪ್ರಯತ್ನಿಸುತ್ತಿದ್ದರೂ ಅವರು, "ಯಾಕೆ ನಡುಗುತ್ತಿದ್ದೀಯ?" ಎಂದು ಎರಡು ಬಾರಿ ಕೇಳಿದರು. ತನ್ನ ಅತ್ಯಲ್ಪ ಚಲನೆಯನ್ನೂ ಗುರುತಿಸುವಷ್ಟು ಸೂಕ್ಷ್ಮವಾಗಿಬಿಟ್ಟಿದೆ ಶ್ರೀರಾಮಕೃಷ್ಣರ ಮನಸ್ಸು ಎಂದು ಶಶಿ ಗ್ರಹಿಸಿದ.

ನರೇಂದ್ರ ಶ್ರೀರಾಮಕೃಷ್ಣರ ಪಾದಗಳನ್ನು ತನ್ನ ಮಡಿಲಲ್ಲಿರಿಸಿಕೊಂಡು ಪ್ರೀತಿಯಿಂದ ಒತ್ತತೊಡಗಿದ. ಅವರು ಆತನೊಂದಿಗೆ ಮೆಲುದನಿಯಲ್ಲಿ ಮಾತನಾಡುತ್ತ, "ನರೇನ್, ಈ ಹುಡುಗರನ್ನೆಲ್ಲ ನೋಡಿಕೊ" ಎಂದು ಮತ್ತೆಮತ್ತೆ ಹೇಳಿದರು. ಸ್ವಲ್ಪ ಹೊತ್ತಿನ ಮೇಲೆ ನರೇಂದ್ರ ಅವರನ್ನು ನಿದ್ರೆ ಮಾಡುವಂತೆ ವಿನಂತಿಸಿಕೊಂಡ.

ಈಗ ಶ್ರೀರಾಮಕೃಷ್ಣರು, "ಕಾಳಿ ಕಾಳಿ ಕಾಳಿ!" ಎಂದು ಮೂರು ಬಾರಿ ತಮ್ಮ ಪ್ರಿಯ ಜಗನ್ಮಾತೆಯ ನಾಮವನ್ನು ಸ್ಪಷ್ಟವಾಗಿ ಉಚ್ಚರಿಸಿ, ಉದ್ದಕ್ಕೆ ಮಲಗಿಕೊಂಡರು. ನರೇಂದ್ರ ಅವರ ಪಾದ ಒತ್ತುವುದನ್ನು ಮುಂದುವರಿಸಿದ. ಇನ್ನು ಕೆಲವರು ಗಾಳಿ ಹಾಕುತ್ತ ಮೌನವಾಗಿ ಅವರನ್ನೇ ಈಕ್ಷಿಸುತ್ತ ನಿಂತರು.

ಮಧ್ಯರಾತ್ರಿ ಕಳೆಯಿತು. ಈಗ ೧೬ನೇ ಆಗಸ್ಟ್ ೧೮೮೬, ಸೋಮವಾರ. ಸಮಯ ರಾತ್ರಿ ಒಂದು ಗಂಟೆಯಾಗಿ ಎರಡು ನಿಮಿಷವಾಗಿದೆ. ಇದ್ದಕ್ಕಿದ್ದಂತೆ ಶ್ರೀರಾಮ ಕೃಷ್ಣರ ಶರೀರದಲ್ಲೊಂದು ಛಳಕು ಹರಿದಂತಾಗಿ ರೋಮಗಳೆಲ್ಲ ನಿಮಿರಿ ನಿಂತುವು; ಅವರ ದೃಷ್ಟಿ ನಾಸಾಗ್ರದಲ್ಲಿ ನೆಟ್ಟಿತು. ಮೊಗದಲ್ಲಿ ದೈವಿಕ ಮಂದಹಾಸ ಬೆಳಗಿ ಅದು ಹಾಗೇ ಸ್ಥಿರವಾಗಿ ನಿಂತುಬಿಟ್ಟಿತು; ಶರೀರ ಸ್ಥಿಮಿತ ತಪ್ಪಿ ಬದಿಗೆ ಹೊರಳಿತು—ಶ್ರೀರಾಮ ಕೃಷ್ಣರು ಗಾಢ ಸಮಾಧಿಸ್ಥಿತಿಗೇರಿದ್ದರು. ಅದು ಭಕ್ತರಿಗೆಲ್ಲ ಚಿರಪರಿತವಾದ ನೋಟವೇ.

ಆದರೆ ಆ ಸಮಾಧಿಯೆಂಬುದು ಮತ್ತೆ ಹಿಂದಿರುಗಿ ಬರಲಾರದಂತಹ ಮಹಾ ಸಮಾಧಿಯಾಗಿ ಪರಿಣಮಿಸಿತ್ತು.

ತಕ್ಷಣವೇ ಕಟ್ಟಡದಲ್ಲಿದ್ದವರೆಲ್ಲ ಓಡಿಬಂದು ಅಲ್ಲಿ ಸೇರಿದರು. ಶ್ರೀರಾಮಕೃಷ್ಣರು ಭಾವಸಮಾಧಿಯಲ್ಲಿದ್ದಾರೆ ಎಂದೇ ಅನೇಕರ ನಂಬಿಕೆ. ಅಲ್ಲದೆ, ಅವರ ಗಾಢವಾದ ಭಾವಸಮಾಧಿಸ್ಥಿತಿಯನ್ನೂ ಮಹಾಸಮಾಧಿಸ್ಥಿತಿಯನ್ನೂ ಬಾಹ್ಯಲಕ್ಷಣಗಳ ಆಧಾರದ ಮೇಲೆ ಪ್ರತ್ಯೇಕಿಸಲು ಹೇಗೆ ಸಾಧ್ಯ? ಯಾರಿಂದ ಸಾಧ್ಯ! ಆದ್ದರಿಂದ ಅವರನ್ನು ಎಚ್ಚರಗೊಳಿಸಲು ಮತ್ತೆ ಏಕ ಕಂಠದಿಂದ 'ಹರಿಃ ಓಂ ತತ್‌ಸತ್' ಮಂತ್ರೋಚ್ಚಾರಣೆ ಯಲ್ಲಿ ತೊಡಗಿದರು. ಸಮಾಧಿಸ್ಥರಾಗುವ ಮುನ್ನ ಶ್ರೀರಾಮಕೃಷ್ಣರು ಕಾಳೀನಾಮ ವನ್ನು ಹೇಳಿದರಾದ್ದರಿಂದ, ಆಗಾಗ "ಓಂ ಕಾಳಿ ಓಂ ಕಾಳಿ" ಎಂದೂ ಘೋಷಿಸಿದರು. ಇದು ರಾತ್ರಿಯೆಲ್ಲ ನಡೆಯಿತು. ಆದರೂ ಅವರ ಸ್ಥಿತಿಯಲ್ಲಿ ಸ್ವಲ್ಪವೂ ವ್ಯತ್ಯಾಸ ಕಾಣದ್ದರಿಂದ ಎಲ್ಲರೂ ವ್ಯಾಕುಲಿತರಾದರು.

ಶ್ರೀರಾಮಕೃಷ್ಣರು ಸಮಾಧಿಸ್ಥರಾದ ಸ್ವಲ್ಪ ಹೊತ್ತಿಗೆ, ರಾಮಲಾಲನನ್ನು ಕರೆತರು ವಂತೆ ನರೇಂದ್ರ ಲಾಟುವನ್ನೂ ಹಿರಿಯ ಗೋಪಾಲನನ್ನೂ ಕಳಿಸಿದ. ರಾಮಲಾಲ ಕೂಡಲೇ ಹೊರಟು, ಬೆಳಕು ಹರಿಯುವ ಮೊದಲೇ ಬಂದ. ಶ್ರೀರಾಮಕೃಷ್ಣರ ಶರೀರವನ್ನು ಪರೀಕ್ಷಿಸಿ, "ನೆತ್ತಿಯಿನ್ನೂ ಬಿಸಿಯಾಗಿಯೇ ಇದೆ. ಬೇಗ ಕ್ಯಾಪ್ಟನ್ನಿಗೆ ಹೇಳಿ ಕಳಿಸಿ" ಎಂದ. ನಾವು ಹಿಂದೆಯೇ ನೋಡಿದಂತೆ ಸಮಾಧಿಸ್ಥಿತಿಯ ಬಗ್ಗೆ ಒಳ್ಳೆಯ ಪರಿಜ್ಞಾನವಿದ್ದವನು ಕ್ಯಾಪ್ಟನ್ ವಿಶ್ವನಾಥ ಉಪಾಧ್ಯಾಯ. ಅಲ್ಲದೆ ಬಹಳ ಹಿಂದಿ ನಿಂದಲೂ ಶ್ರೀರಾಮಕೃಷ್ಣರ ಸಂಪರ್ಕದಲ್ಲಿದ್ದು, ಎಷ್ಟೋಸಲ ಅವರನ್ನು ಬಾಹ್ಯ ಪ್ರಜ್ಞೆಗೆ ತರುವಲ್ಲಿ ನೆರವಾಗಿದ್ದವನು. ಆದ್ದರಿಂದ ಈಗ ರಾಮಲಾಲ ಅವನನ್ನು ನೆನಪಿಸಿ ಕೊಂಡದ್ದು ಸಹಜವೇ. ವಿಶ್ವನಾಥ ಬಂದಾಗ ಬೆಳಗ್ಗೆ ಎಂಟು ಗಂಟೆ. ಶ್ರೀರಾಮಕೃಷ್ಣರ ಶರೀರ ಆಗಲೇ ತಣ್ಣಗಾಗುತ್ತ ಬಂದಿತ್ತು. ಆದರೆ ಬೆನ್ನುಮೂಳೆಯಿನ್ನೂ ಬೆಚ್ಚಗಿರುವು ದನ್ನು ಕಂಡು, ಶರೀರದಲ್ಲಿ ಶಾಖೋತ್ಪನ್ನವಾಗುವಂತೆ ಮಾಡಲು ಮೈಗೆ ಹಸುವಿನ ತುಪ್ಪವನ್ನು ತಿಕ್ಕುವಂತೆ ಆತ ಹೇಳಿದ. ಶಶಿ ಶ್ರೀರಾಮಕೃಷ್ಣರ ಬೆನ್ನನ್ನೂ ವೈಕುಂಠನಾಥ ಪಾದಗಳನ್ನೂ ತುಪ್ಪ ಸವರಿ ತೀಡಿದರು. ಆದರೆ ಪ್ರಯೋಜನವೇನೂ ಕಾಣಲಿಲ್ಲ.

ಇಷ್ಟು ಹೊತ್ತೂ ಶ್ರೀರಾಮಕೃಷ್ಣರ ಸ್ಥಿತಿಯ ಬಗ್ಗೆ ಶಾರದಾದೇವಿಯವರಿಗೆ ಆಗಾಗ ತಿಳಿಸಲಾಗುತ್ತಿತ್ತು. ಇನ್ನು ತಮ್ಮ ದುಃಖ ಕಾತರಗಳನ್ನು ತಾಳಲಾರದೆ ಅವರೀಗ ಪತಿಯ ಸನ್ನಿಧಿಗೆ ಬಂದರು. ದಿವ್ಯ ಮಂದಹಾಸವನ್ನು ಸೂಸುತ್ತ ಚಿರನಿದ್ರೆಯಲ್ಲಿ ಮುಳುಗಿದ್ದ ಪತಿದೇವನನ್ನು ಕಂಡಾಗ ದುಃಖದ ಕಟ್ಟೆಯೊಡೆದು, "ಅಮ್ಮಾ, ಕಾಳಿ!* ನಾನೇನು

*ಶ್ರೀರಾಮಕೃಷ್ಣರನ್ನು ಅವರು ಕಾಳೀಮಾತೆಯೆಂಬ ದೃಷ್ಟಿಯಿಂದ ನೋಡುತ್ತಿದ್ದರು.

ಮಾಡಿದೆ ಅಂತ ನನ್ನೊಬ್ಬಳನ್ನೇ ಬಿಟ್ಟು ಹೊರಟು ಹೋದೆ?" ಎಂದು ಹೃದಯ ವಿದ್ರಾವಕವಾಗಿ ಉದ್ಗರಿಸಿ ಕಣ್ಣೀರ್ಗರೆದರು. ಬಾಬುರಾಮನೂ ಯೋಗೀಂದ್ರನೂ ಅವರ ಬಳಿಸಾರಿ ಸಾಂತ್ವನದ ಮಾತುಗಳನ್ನು ಹೇಳಿದರು. ಗೋಲಾಪ್ ಮಾ ಕೂಡ ಅವರನ್ನು ಸಂತೈಸುತ್ತ ಕೋಣೆಗೆ ವಾಪಸು ಕರೆದುಕೊಂಡು ಹೋದಳು. ಅಷ್ಟರಲ್ಲೇ ಶಾರದಾದೇವಿಯವರು ತಮ್ಮನ್ನು ನಿಯಂತ್ರಿಸಿಕೊಂಡು ಸ್ಥಿರಚಿತ್ತರಾಗಿಬಿಟ್ಟಿದ್ದರು.

ಶ್ರೀರಾಮಕೃಷ್ಣರ ನಿರ್ಯಾಣದ ದಾರುಣ ವಾರ್ತೆ ಕಲ್ಕತ್ತದಲ್ಲಿ ಕಾಡ್ಗಿಚ್ಚಿನಂತೆ ಹರಡಿತು. ಬ್ರಾಹ್ಮಸಮಾಜದ 'ಧರ್ಮತತ್ತ್ವ' ಎಂಬ ಪತ್ರಿಕೆ ೧೬ನೇ ತಾರೀಕಿನ ಸಂಚಿಕೆಯಲ್ಲಿ ಈ ಸುದ್ದಿಯನ್ನು ಬಿತ್ತರಿಸಿ, ಬಾರಾನಾಗೋರಿನ ಸ್ಮಶಾನ ಘಟ್ಟದಲ್ಲಿ ಸಂಜೆ ಐದು ಘಂಟೆಗೆ ಅಪರಕಾರ್ಯಗಳು ನೆರವೇರುವುವೆಂದೂ ತಿಳಿಸಿತು. ಮುಂಜಾನೆಯಿಂದಲೇ ಜನ ತಂಡತಂಡವಾಗಿ ಬರಲಾರಂಭಿಸಿದರು. ಸೂರ್ಯ ಮೇಲೇರಿದಂತೆ ನೂರಾರು ಜನ ಪರಿಚಿತರೂ ಅಪರಿಚಿತರೂ ಬಂದು ಶ್ರೀರಾಮಕೃಷ್ಣರ ಅಂತಿಮ ದರ್ಶನ ಪಡೆದು, ಅಶ್ರುತರ್ಪಣ ನೀಡಿದರು.

ಇಷ್ಟಾದರೂ ಶ್ರೀರಾಮಕೃಷ್ಣರ ಶರೀರದಲ್ಲಿ ಶಾಖವಿನ್ನೂ ಇದ್ದುದರಿಂದ ಅನೇಕರು ಪೂರ್ತಿ ಹತಾಶರಾಗಿರಲಿಲ್ಲ. 'ಇದು ಅತಿ ಗಾಢ ಸಮಾಧಿಸ್ಥಿತಿ; ಶ್ರೀರಾಮಕೃಷ್ಣರು ಆದರಿಂದ ಮತ್ತೆ ಹಿಂದಿರುಗುವ ಸಾಧ್ಯತೆಯಿದ್ದೇ ಇದೆ. ಇನ್ನೂ ಕಾದು ನೋಡುವುದೇ ವಿಹಿತ' ಎಂದು ವಿಶ್ವನಾಥನೂ ಅಭಿಪ್ರಾಯಪಟ್ಟ. ಇಷ್ಟರಲ್ಲಿ, ಡಾ. ಮಹೇಂದ್ರಲಾಲ ಸರ್ಕಾರನಿಗೆ ಸುದ್ದಿ ತಲುಪಿಸಲಾಗಿತ್ತು. ಆತ ಸುಮಾರು ಹನ್ನೆರಡು ಗಂಟೆಯ ವೇಳೆಗೆ ಬಂದು ಶರೀರವನ್ನು ಪರೀಕ್ಷೆ ಮಾಡಿ, 'ಶ್ರೀರಾಮಕೃಷ್ಣರು ಇನ್ನಿಲ್ಲ, ಪ್ರಾಣೋತ್ಕ್ರಮಣವಾಗಿ ಅರ್ಧಗಂಟೆಯಾಗಿದೆ' ಎಂದು ತಿಳಿಸಿದ. ಅವನ ಮಾತನ್ನೇ ಅಂತಿಮವೆಂದು ಸ್ವೀಕರಿಸಲಾಯಿತು.

ಅಭೂತಪೂರ್ವ ಲೀಲಾನಾಟಕದ ಅಂಕದ ಪರದೆ ಇಳಿಬಿದ್ದಿತ್ತು. ಆದರೆ ಈ ದೇಹಾಂತ್ಯವನ್ನು ಸಾವೆಂದು ಕರೆಯುವುದೆ! ಯಾವ ಮಹಾಚೇತನವು ನಾಮ-ರೂಪಗಳ ಕೋಶದೊಳಗೆ ನಿಬದ್ಧವಾಗಿತ್ತೋ ಅದೀಗ ಸಕಲ ಬಂಧನಗಳನ್ನೂ ಹರಿದು ಹೊರಬಂದು ಅನಂತಾತ್ಮದಲ್ಲಿ ಲಯವಾಗಿತ್ತು. ಶ್ರೀರಾಮಕೃಷ್ಣರು ದೇಶಕಾಲಗಳ ಎಲ್ಲೆಯನ್ನು ಮೀರಿ ವಿಶ್ವವ್ಯಾಪಿಯಾದರು; ಎಲ್ಲರಿಗೆ, ಎಲ್ಲ ಕಾಲಕ್ಕೆ ಸೇರಿದವರಾದರು. ಸ್ಥೂಲಶರೀರದಲ್ಲಿರುವವರೆಗೂ ತಮ್ಮ ಬಳಿಗೆ ಬಂದ ಕೆಲವರಿಗೆ ಮಾತ್ರ ಲಭ್ಯರಾಗಿದ್ದ ಅವರು ಇನ್ನು ಸರ್ವರಿಗೂ ಮಾರ್ಗದರ್ಶಕರಾದ ವಿಶ್ವಜ್ಯೋತಿಯಾದರು. ಅವರ ಭಕ್ತ-ಶಿಷ್ಯವೃಂದಕ್ಕೆ ಇವೆಲ್ಲ ತಿಳಿದಿರುವಂಥದೇ. ಆದರೂ ಉಕ್ಕಿ ಬರುವ ದುಃಖವನ್ನು ಅಷ್ಟು ಸುಲಭವಾಗಿ ಹತ್ತಿಕ್ಕಲಾದೀತೆ? ಭಕ್ತರ ಪ್ರಾಣದ ಪ್ರಾಣವಲ್ಲವೇ ಅವರು?

ಅಪರಾಹ್ನ ಐದು ಗಂಟೆಗೆ ಶ್ರೀರಾಮಕೃಷ್ಣರ ಪವಿತ್ರ ಕಳೇಬರವನ್ನು ಮಹಡಿಯಿಂದ ಮೆಲ್ಲನೆ ಕೆಳಗಿಳಿಸಿ, ಹೊರಾಂಗಣಕ್ಕೆ ತಂದು, ಅಲಂಕರಿಸಿದ ಮಂಚದ ಮೇಲಿರಿಸಲಾಯಿತು. ಶರೀರಕ್ಕೆ ಕಾವಿ ಬಣ್ಣದ ಬಟ್ಟೆಯನ್ನು ತೊಡಿಸಿ ಶ್ರೀಗಂಧ, ಹೂಹಾರಗಳಿಂದ ಸಿಂಗರಿಸಲಾಗಿತ್ತು. ಡಾ. ಸರ್ಕಾರನ ಸಲಹೆಯಂತೆ ಫೋಟೋಗ್ರಾಫರನ್ನು ಕರೆಸಿ, ಕಳೇಬರದ ಸುತ್ತಲೂ ಭಕ್ತರೆಲ್ಲ ನಿಂತಿರುವ ಎರಡು ಛಾಯಾಚಿತ್ರಗಳನ್ನು ತೆಗೆಸಲಾಯಿತು. ಕಾರಣಾಂತರದಿಂದ ಈವರೆಗೆ ಬರಲಾಗಿರದಿದ್ದ ಭಕ್ತವರೇಣ್ಯ ಸುರೇಂದ್ರನಾಥ ಮಿತ್ರ ಈ ವೇಳೆಗೆ ಬಂದ. ಕಳೇಬರದ ಬದಿಯಲ್ಲೇ ಕುಳಿತು ಬಿಕ್ಕಿ ಬಿಕ್ಕಿ ಅತ್ತು,

ಪಾದಗಳಿಗೆ ಪುಷ್ಪಾಂಜಲಿಯನ್ನಿತ್ತು ಪ್ರಣಾಮ ಸಲ್ಲಿಸಿದ.

ಭಕ್ತವೃಂದದಲ್ಲಿ ಪ್ರಸಿದ್ಧ ಗ್ರಂಥಕರ್ತನಾದ ನಾಗೇಂದ್ರನಾಥ ಗುಪ್ತನೂ ಇದ್ದ. ಇವನು ಶ್ರೀರಾಮಕೃಷ್ಣರಲ್ಲಿಗೆ ಬಂದದ್ದು ಇದು ಎರಡನೇ ಸಲ. ಅಂದಿನ ಸನ್ನಿವೇಶ ವನ್ನು ಇವನು ತನ್ನ ಸ್ಮೃತಿಚಿತ್ರಣದಲ್ಲಿ ಹೀಗೆ ಬಣ್ಣಿಸುತ್ತಾನೆ:

"...ಹೂಗಳಿಂದಾವೃತವಾದ ಹೊಸ ಹಾಸುಗೆಯ ಮೇಲೆ ಶ್ರೀರಾಮಕೃಷ್ಣರ ಶರೀರ ಒರಗಿತ್ತು. ಕ್ಯಾನ್ಸರಿನ ಅಸಹನೀಯ ವೇದನೆಯ ನಡುವೆಯೂ ಬೋಧಾಮೃತ ವರ್ಷವನ್ನು ನಿಲ್ಲಿಸಿರದಿದ್ದ ಆ ತುಟಿಗಳು, ಸಾವಿನಲ್ಲೀಗ ಮೌನ ತಾಳಿದ್ದುವು. ಅವರ ಮುಖಭಾವ ಕೋಮಲವಾಗಿತ್ತು, ನಿಶ್ಚಿಂತವಾಗಿತ್ತು. ಅದು ಚರಮಶಾಂತಿಯನ್ನೂ ಪರಮಗಾಂಭೀರ್ಯವನ್ನೂ ಸೂಸುತ್ತಿತ್ತು. ತುಟಿಗಳಂಚಿನ ಮುಗುಳ್ನಗೆಯನ್ನು ಕಂಡೊಡನೆ, ಸಮಾಧಿಯ ಉತ್ತುಂಗ ಆನಂದಸ್ಥಿತಿಯಲ್ಲೇ ಅವರ ಪ್ರಾಣ ವಾಯು ನಿರ್ಗಮಿಸಿದೆ ಎನ್ನುವುದು ತಿಳಿಯುವಂತಿತ್ತು."

ಶೋಕತಪ್ತವಾದ ಭಕ್ತವೃಂದ ಸೂರ್ಯಾಸ್ತವನ್ನು ಇದಿರುನೋಡುತ್ತ ಕುಳಿತಿದ್ದಂತೆ, ಮೇಲೆ ನೀಲಾಕಾಶದಲ್ಲಿ ಒಂಟಿ ಮೋಡವೊಂದು ತೇಲಿಕೊಂಡು ಬಂದಿತು. ಅವರ ದುಃಖಾಗ್ನಿಯನ್ನು ಶಮನಗೊಳಿಸಲೆಂದೋ ಅಥವಾ ತನ್ನ ತರ್ಪಣವನ್ನು ಸಲ್ಲಿಸಲೆಂದೋ ನಾಲ್ಕು ದೊಡ್ಡ ಹನಿಗಳನ್ನು ಉದುರಿಸಿತು. ಇದು ಸ್ವರ್ಗದಿಂದಾದ ಪುಷ್ಪ ವೃಷ್ಟಿ ಎಂದು ಕೆಲವರು ಭಾವಿಸಿದರು.

ಸಂಜೆಯಾದ ಮೇಲೆ ಅಂತಿಮ ಯಾತ್ರೆ ಹೊರಟಿತು. ಕಲ್ಕತ್ತದ ಅನೇಕ ಗಣ್ಯರೂ ಸೇರಿದಂತೆ ಸುಮಾರು ನೂರೈವತ್ತು ಜನರು, ಭಜನೆ-ನಾಮಸಂಕೀರ್ತನೆ ಮಾಡುತ್ತ ಗಂಗಾತೀರದ ಸ್ಮಶಾನ ಘಟ್ಟದೆಡೆಗೆ ನಡೆದರು. ದಾರಿಯ ಇಕ್ಕೆಲಗಳಲ್ಲಿ ನೆರೆದಿದ್ದ ಸಾವಿರಾರು ಜನ ಕಣ್ಣೀರಿನ ವಿದಾಯ ಹೇಳಿದರು. ಮೆರವಣಿಗೆಯಲ್ಲಿ ಕೆಲವರು ಪತಾಕೆಗಳನ್ನೂ, ಇನ್ನು ಕೆಲವರು ಬೌದ್ಧ, ಕ್ರೈಸ್ತ, ಇಸ್ಲಾಂ ಧರ್ಮಗಳ ಹಾಗೂ ಹಿಂದೂ ಧರ್ಮದ ಅನೇಕ ಮತಪಂಥಗಳ ಲಾಂಛನಗಳಾದ ಓಂಕಾರ ಶಿಲುಬೆ ಅರ್ಧಚಂದ್ರ ಸ್ವಸ್ತಿಕ ಮೊದಲಾದುವನ್ನೂ ಹಿಡಿದಿದ್ದರು. ಶ್ರೀರಾಮಕೃಷ್ಣರ ಪವಿತ್ರ ಶರೀರವನ್ನು ಹೊರುವ ಪುಣ್ಯಕಾರ್ಯದಲ್ಲಿ ಎಲ್ಲರೂ ಸರದಿಯ ಮೇಲೆ ಪಾಲ್ಗೊಂಡರು. ಸ್ಮಶಾನ ಘಟ್ಟದಲ್ಲಿ ಶರೀರಕ್ಕೆ ಗಂಗಾಜಲದಿಂದ ಸ್ನಾನ ಮಾಡಿಸಿ, ಹೊಸ ಕಾಷಾಯ ವಸ್ತ್ರವನ್ನು ತೊಡಿಸಿ, ಮತ್ತೊಮ್ಮೆ ಹೂಹಾರಗಳಿಂದ ಅಲಂಕರಿಸಿ ಪೂಜೆ ಸಲ್ಲಿಸಲಾಯಿತು. ನೆರೆದವರೆಲ್ಲರೂ ಅವರ ಪಾದಸ್ಪರ್ಶಮಾಡಿ ಅಂತಿಮ ಪ್ರಣಾಮ ಸಲ್ಲಿಸಿದರು. ಈಗ ಆ ಸುಕೋಮಲ ಶರೀರವನ್ನು ಚಿತೆಯ ಮೇಲಿರಿಸಿ ಅಗ್ನಿಸ್ಪರ್ಶ ಮಾಡಿದರು. ತ್ರೈಲೋಕ್ಯ ನಾಥ ಸನ್ಯಾಲ ಆ ಸಂದರ್ಭಕ್ಕೆ ಅನುಗುಣವಾದ ಮೂರ್ನಾಲ್ಕು ಹಾಡುಗಳನ್ನು ಹಾಡಿ ಎಲ್ಲರ ಮನವನ್ನೂ ಸಾಂತ್ವನಗೊಳಿಸಿದ.

ಇತ್ತ ಕಾಶೀಪುರದ ಉದ್ಯಾನಗೃಹದಲ್ಲಿ ಶಾರದಾದೇವಿಯವರನ್ನು ನೋಡಿಕೊಳ್ಳಲು ಲಾಟು ಉಳಿದುಕೊಂಡಿದ್ದ. ಶ್ರೀರಾಮಕೃಷ್ಣರ ಶರೀರವನ್ನು ಅಲ್ಲಿಂದ ಕೊಂಡೊಯ್ಯುವಾಗ ಶಾರದಾದೇವಿಯವರು ಒಮ್ಮೆ ಅತ್ತರಾದರೂ ಬಳಿಕ ಶಾಂತರಾಗಿಬಿಟ್ಟರು. ಅವರ ಅಪಾರ ಮನಶ್ಶಕ್ತಿ ಸಂಯಮಗಳನ್ನು ಕಂಡು ಲಾಟು ಬೆರಗಾದ.

ಒಂದೆರಡು ತಾಸಿನ ಬಳಿಕ, ಚಿತೆ ಉರಿದು ಮುಗಿಯುವ ವೇಳೆಗೆ, ಅವನು ಸ್ಮಶಾನಕ್ಕೆ ಬಂದ. ಅನೇಕರು ಇನ್ನೂ ಅಲ್ಲೇ ಗಂಗಾತೀರದಲ್ಲಿ ಮೌನವಾಗಿ ಕುಳಿತಿದ್ದರು.

ಶಶಿ ಚಿತೆಯ ಪಕ್ಕದಲ್ಲೇ ಬೀಸಣಿಗೆ ಹಿಡಿದು ಕುಳಿತಿದ್ದ. ಶರತ್ ಹಾಗೂ ನರೇಂದ್ರ ಅವನನ್ನು ಸಮಾಧಾನಗೊಳಿಸಲು ಯತ್ನಿಸುತ್ತಿದ್ದರು. ಲಾಟುವೂ ಆತನ ಕೈಹಿಡಿದು ಹುರಿದುಂಬಿಸಿ ಮೇಲೆಬ್ಬಿಸಲು ನೋಡಿದ. ಆದರೆ ಶಶಿ ದುಃಖಭರಿತನಾಗಿ ಹಾಗೇ ಕುಳಿತಿದ್ದ. ಸ್ವಲ್ಪಹೊತ್ತಿನ ಮೇಲೆ ಎದ್ದು ಶ್ರೀರಾಮಕೃಷ್ಣರ ಅಸ್ಥಿಯನ್ನೆಲ್ಲ ಸಂಗ್ರಹಿಸಿ ಕಲಶದಲ್ಲಿ ತುಂಬಿದ. ಈಗ ಎಲ್ಲರೂ ಹೊರಡಲನುವಾದರು. ಕಲಶವನ್ನು ಶಶಿ ತನ್ನ ತಲೆಯ ಮೇಲೆ ಹೊತ್ತು ತಂದ. "ಜಯ ರಾಮಕೃಷ್ಣ!" "ಜಯ ಜಯ ಗುರುದೇವ!" ಎಂದು ಉದ್ಘೋಷಿಸುತ್ತ, ಅಸಂಖ್ಯಾತ ಸಿಹಿಕಹಿ ನೆನಪುಗಳ ಗೂಡಾದ ಉದ್ಯಾನಗೃಹಕ್ಕೆ ಬಂದರು. ಶ್ರೀರಾಮಕೃಷ್ಣರ ಹಾಸಿಗೆಯ ಮೇಲೆ ಅಸ್ಥಿಯ ಕಲಶವನ್ನು ತಾತ್ಕಾಲಿಕವಾಗಿ ಇರಿಸಲಾಯಿತು.

ಅಂದು ಸಂಜೆ ಶಾರದಾದೇವಿಯವರು, ಹಿಂದೂ ಸಂಪ್ರದಾಯದಂತೆ, ತಾವು ಧರಿಸಿದ್ದ ಆಭರಣಗಳೆಲ್ಲವನ್ನೂ ಕಳಚತೊಡಗಿದರು. ಕೊನೆಯದಾಗಿ ತಮ್ಮ ಚಿನ್ನದ ಕೈಬಳೆಗಳನ್ನು ಬಿಚ್ಚಬೇಕು, ಅಷ್ಟರಲ್ಲಿ ಶ್ರೀರಾಮಕೃಷ್ಣರು—ಅವರು ಕಾಯಿಲೆ ಬೀಳುವುದಕ್ಕೆ ಮೊದಲು ಹೇಗಿದ್ದರೋ ಅದೇ ರೂಪದಲ್ಲಿ—ಸತಿಯೆದುರು ಕಾಣಿಸಿಕೊಂಡರು! ಅವರ ಕೈಯನ್ನು ಒತ್ತಿ ಹಿಡಿದು ಮೃದುದನಿಯಲ್ಲಿ ನುಡಿದರು: "ಯಾಕೆ, ನಾನೇನು ಮರಣ ಹೊಂದಿದ್ದೇನೆ ಅಂತ ತಿಳಿದುಕೊಂಡೆಯಾ! ನಾನು ಆ ಕೋಣೆಯಿಂದ ಈ ಕೋಣೆಗೆ ಬಂದಿದ್ದೇನೆ ಅಷ್ಟೆ." ಹೀಗೆಂದು ಹೇಳಿ ಅವರು ಅದೃಶ್ಯರಾಗಿಬಿಟ್ಟರು.

ಶಾರದಾದೇವಿಯವರಿಗೆ ಅತ್ಯಾಶ್ಚರ್ಯವಾಯಿತು. ಶ್ರೀರಾಮಕೃಷ್ಣರು ಜೀವಂತವಾಗಿ ಎದುರಿಗೆ ಬಂದು ನಿಂತಷ್ಟೇ ಸ್ಪಷ್ಟವಾದ ಅನುಭವ ಅದು! ಆದ್ದರಿಂದ ಅಂದು ಅವರು ಶ್ರೀರಾಮಕೃಷ್ಣರ ಸೂಚನೆಯಂತೆ, ಬಳೆಗಳನ್ನು ಕಳಚಲಿಲ್ಲ. ಆದರೆ ಇನ್ನೂ ಎರಡು ಬಾರಿ ಅವರು ಆ ವಿಷಯದಲ್ಲಿ ಶಂಕೆ ತಾಳಿ ಬಳೆಗಳನ್ನು ತೆಗೆಯಹೋದರು. ಆ ಎರಡು ಸಲವೂ ಪುನಃ ಶ್ರೀರಾಮಕೃಷ್ಣರು ಕಾಣಿಸಿಕೊಂಡು ಹಾಗೆ ಮಾಡದಂತೆ ತಡೆದರು. ಆಮೇಲೆ ಶಾರದಾದೇವಿಯವರು ಬಳೆ ತೆಗೆಯುವ ಯೋಚನೆಯನ್ನು ತ್ಯಜಿಸಿದರು. ಅಲ್ಲದೆ, ಬಂಗಾಳದಲ್ಲಿ ವಿಧವೆಯರು ಉಡುವಂತಹ ಅಂಚಿಲ್ಲದ ಬಿಳಿ ಸೀರೆಯನ್ನು ಉಡದೆ, ಸಣ್ಣ ಅಂಚಿನ ಸೀರೆಯನ್ನೇ ಉಡತೊಡಗಿದರು. ಏಕೆಂದರೆ, 'ಶ್ರೀರಾಮಕೃಷ್ಣರು ಎಂದೆಂದಿಗೂ ಇರುವವರು, ಆದ್ದರಿಂದ ತಮಗೆ ವೈಧವ್ಯವೆಂಬುದಿಲ್ಲ' ಎಂಬ ನಂಬಿಕೆ ಅವರಿಗುಂಟಾಯಿತು. ಶಾರದಾದೇವಿಯವರಿಗಾದ ದರ್ಶನದ ವಿಷಯ ತಿಳಿದಾಗ ತಮ್ಮ ಪ್ರಿಯ ಶ್ರೀರಾಮಕೃಷ್ಣರು ತಮ್ಮೊಂದಿಗೇ ಇದ್ದಾರೆ ಎಂದರಿತು ಭಕ್ತರೆಲ್ಲರೂ ಆಶ್ಚರ್ಯಾನಂದಭರಿತರಾದರು; ಹೊಸ ಉತ್ಸಾಹ-ಭರವಸೆ ತಾಳಿದರು.

* * * *

ಆದರೆ, ಯಾರು ಶ್ರೀರಾಮಕೃಷ್ಣರೊಂದಿಗೆ ಜೀವಿಸಿದ್ದರೋ ಅವರ ಪಾಲಿಗಷ್ಟೇ ಆ ಲೀಲೆಯೆಲ್ಲ ಸೀಮಿತವಾಯಿತೇನು? ಕೊನೆಗೂ ಅದೊಂದು ದಂತಕಥೆಯ ಸಾಲಿಗೇ ಸೇರಿಕೊಂಡಿತೇನು? ಖಂಡಿತ ಇಲ್ಲ! ಭಕ್ತರಿಗೆ ಮತ್ತೆಮತ್ತೆ ಆದ ಶ್ರೀರಾಮಕೃಷ್ಣರ ದರ್ಶನದಿಂದಲೇ ಅದು ಸ್ಪಷ್ಟವಾಗುತ್ತದೆ. ಸ್ವಾಮಿ ವಿವೇಕಾನಂದರೂ ಘೋಷಿಸಿದರು:

"ಭಗವಂತನು ರಾಮಕೃಷ್ಣರೂಪವನ್ನಿನ್ನೂ ತ್ಯಜಿಸಿಲ್ಲ. ಈಗಲೂ ಅನೇಕರು ಅವರನ್ನು ಆ ರೂಪದಲ್ಲಿ ಕಾಣುತ್ತಾರೆ, ಬೋಧನೆಗಳನ್ನು ಪಡೆಯುತ್ತಾರೆ. ಮತ್ತು ಇಚ್ಛೆಪಟ್ಟರೆ ಯಾರು ಬೇಕಾದರೂ ಅವರನ್ನು ನೋಡಬಹುದು."

ಪೀತ್ವಾ ಪೀತ್ವಾ ಪರಮಮಮೃತಂ ವೀತಸಂಸಾರರಾಗಾಃ
ಹಿತ್ವಾ ಹಿತ್ವಾ ಸಕಲಕಲಹಪ್ರಾಪಿಣೀಂ ಸ್ವಾರ್ಥಸಿದ್ಧಿಮ್।
ಧ್ಯಾತ್ವಾ ಧ್ಯಾತ್ವಾ ಗುರುವರಪದಂ ಸರ್ವಕಲ್ಯಾಣರೂಪಂ
ನತ್ವಾ ನತ್ವಾ ಸಕಲಭುವನಂ ಪಾತುಮಾಮಂತ್ರಯಾಮಃ॥

ಪ್ರಾಪ್ತಂ ಯದ್ವೈ ತ್ವನಾದಿನಿಧನಂ ವೇದೋದಧಿಂ ಮಥಿತ್ವಾ
ದತ್ತಂ ಯಸ್ಯ ಪ್ರಕರಣೇ ಹರಿಹರಬ್ರಹ್ಮಾದಿ-ದೇವೈರ್ಬಲಮ್।
ಪೂರ್ಣಂ ಯತ್ತು ಪ್ರಾಣಸಾರೈರ್ಭೌಮನಾರಾಯಣಾನಾಂ
ರಾಮಕೃಷ್ಣಸ್ತನುಂ ಧತ್ತೇ ತತ್ಪೂರ್ಣಮಾತ್ರಮಿದಂ ಭೋಃ॥

—ಸ್ವಾಮಿ ವಿವೇಕಾನಂದ

ಇಹ ಜಗತ್ತಿನ ಮೋಹವನ್ನು ತೊರೆದು, ಅಮರತ್ವದ ಪರಮ ಅಮೃತವನ್ನು ಕುಡಿಯುತ್ತ, ಸಕಲ ಕಲಹಗಳಿಗೂ ಕಾರಣವಾದ ಸ್ವಾರ್ಥ ಬುದ್ಧಿಯನ್ನು ತ್ಯಜಿಸಿ, ಸರ್ವಕಲ್ಯಾಣರೂಪವಾದ ಗುರುವಿನ ಪವಿತ್ರ ಪಾದಗಳನ್ನು ಸದಾ ಧ್ಯಾನಿಸುತ್ತ, ನಮಿಸುತ್ತ, ಆ ಅಮೃತದಲ್ಲಿ ಪಾಲ್ಗೊಳ್ಳುವಂತೆ ಲೋಕದ ಸಮಸ್ತರನ್ನೂ ಆಮಂತ್ರಿಸುತ್ತೇವೆ!

ಅನಂತ ಸಾಗರದಂತಿರುವ ವೇದಗಳ ಮಂಥನದಿಂದ ಉತ್ಪತ್ತಿ ಯಾದುದು ಆ ಜ್ಞಾನಸುಧೆ! ಬ್ರಹ್ಮ-ವಿಷ್ಣು-ಮಹೇಶ್ವರಾದಿ ದೇವತೆಗಳೂ ತಮ್ಮ ಶಕ್ತಿಯನ್ನು ಅದರೊಳಕ್ಕೆ ಬಸಿದಿದ್ದಾರೆ. ಅವತಾರಪುರುಷರ ಜೀವನಸಾರದಿಂದ ಅದು ಸಮೃದ್ಧವಾಗಿದೆ. ಆ ಅಮೃತವು ಶ್ರೀರಾಮಕೃಷ್ಣ ರಲ್ಲಿ ಪರಿಪೂರ್ಣವಾಗಿ ಪ್ರಕಟಗೊಂಡಿದೆ!

* * * *

ಇನ್ನು ಐನೂರು ವರ್ಷಗಳವರೆಗೆ ಈ ಜಗತ್ತಿಗೆ ಶ್ರೀರಾಮಕೃಷ್ಣ ಪರಮಹಂಸರಂತಹ ಮತ್ತೊಂದು ಅವತಾರದ ಅಗತ್ಯವಿಲ್ಲ. ಅವರು ಬಿಟ್ಟುಹೋಗಿರುವ ಚಿಂತನರಾಶಿ ಮೊದಲು ಕಾರ್ಯಗತವಾಗಬೇಕಾಗಿದೆ. ಅವರು ಹೊಮ್ಮಿಸಿದ ಆಧ್ಯಾತ್ಮಿಕಶಕ್ತಿಯು ರಾಷ್ಟ್ರದ ಧಮನಿಗಳನ್ನು ಸೇರ ಬೇಕು. ಇದು ನೆರವೇರುವವರೆಗೆ, ಇನ್ನೂ ಹೆಚ್ಚಿನದನ್ನು ಅಪೇಕ್ಷಿಸಲು ನಮಗೆಲ್ಲಿದೆ ಹಕ್ಕು? ಇನ್ನೇನು ದೊರೆತರೂ ಅದರಿಂದ ಏನಾದೀತು?

—ಮಹರ್ಷಿ ಅರವಿಂದರು

# ಉತ್ತರಕಾಂಡ

ಶ್ರೀರಾಮಕೃಷ್ಣರ ಮಹಾಸಮಾಧಿಯ ಬಳಿಕ ಭಕ್ತರಿಗೆದುರಾದ ಮುಖ್ಯ ಪ್ರಶ್ನೆಯೆಂದರೆ ಅವರ ಪವಿತ್ರ ಅಸ್ಥಿಯನ್ನು ಯೋಗ್ಯ ರೀತಿಯಲ್ಲಿ ಕಾಪಿಡುವುದು ಹೇಗೆ ಎನ್ನುವುದು. ಗಂಗಾ ತೀರದಲ್ಲೊಂದು ಸ್ಥಳವನ್ನು ಕೊಂಡು, ಅಲ್ಲಿ ಅಸ್ಥಿಯನ್ನು ಪ್ರತಿಷ್ಠಾಪಿಸಬೇಕು ಎಂಬ ಆಲೋಚನೆಗೆ ಬಹುಮಂದಿಯ ಸಮ್ಮತವಿತ್ತು. ಆದರೆ ಹಣ...? ಸದ್ಯಕ್ಕಂತೂ ಅದಕ್ಕೆ ಬೇಕಾಗುವಷ್ಟು ಹಣ ಸಂಗ್ರಹವಾಗುವ ಸಾಧ್ಯತೆಯೇ ಇಲ್ಲ ಎಂಬ ಕಾರಣದಿಂದ ಆ ಸಲಹೆ ಹಾಗೆಯೇ ಬಿದ್ದು ಹೋಯಿತು. ಆಗ, ಕಲ್ಕತ್ತಕ್ಕೆ ಸಮೀಪದ ಕಾಂಕುರ್‌ಗಾಚಿ ಎಂಬಲ್ಲಿದ್ದ ತನ್ನ ಉದ್ಯಾನಗೃಹದಲ್ಲಿ ಅದನ್ನು ಪ್ರತಿಷ್ಠಾಪಿಸಲು ರಾಮಚಂದ್ರದತ್ತ ಉತ್ಸಾಹದಿಂದ ಮುಂದಾದ. ದೇವೇಂದ್ರ ಮಜುಮದಾರ, ಮನಮೋಹನನೇ ಮೊದಲಾದ ಗೃಹೀಭಕ್ತರು ಇದನ್ನು ಬೆಂಬಲಿಸಿದರು. ಆದರೆ ತರುಣ ಶಿಷ್ಯರಾರಿಗೂ ಇದು ಒಪ್ಪಿಗೆಯಾಗಲಿಲ್ಲ. ಶ್ರೀರಾಮಕೃಷ್ಣರ 'ಅಂತರಂಗ ವಲಯ'ಕ್ಕೆ ಸೇರಿದವರಾದ ತಮಗೇ ಅದು ಸೇರಬೇಕು ಎಂದು ಅವರು ವಾದಿಸಿದರು. ಸಾಕಷ್ಟು ಖಾರದ ವಾಗ್ವಾದವೇ ನಡೆಯಿತು. ಆ ಸಮಯದಲ್ಲಿ ಅವಶೇಷಗಳ ಕಳಶ ಶಿಷ್ಯರ ವಶದಲ್ಲೇ ಇತ್ತು. ನರೇಂದ್ರ ತನ್ನ ಗುರುಭಾಯಿಗಳನ್ನು ಸಮಾಧಾನ ಪಡಿಸಿ ಅದನ್ನು ಗೃಹೀಭಕ್ತರಿಗೇ ಒಪ್ಪಿಸಿಬಿಡುವಂತೆ ಕೇಳಿಕೊಂಡ. ಆದರೂ ಶಿಷ್ಯರು ಒಪ್ಪಲಿಲ್ಲ. ಕಡೆಗೆ ಅವರೊಂದು ಉಪಾಯ ಮಾಡಿದರು. ಅಸ್ಥಿಯ ಹೆಚ್ಚಿನ ಭಾಗವನ್ನು ಮತ್ತೊಂದು ತಾಮ್ರದ ಪಾತ್ರೆಗೆ ಹಾಕಿ ಭದ್ರಪಡಿಸಿ ತಾವು ಎತ್ತಿಟ್ಟುಕೊಂಡು, ಉಳಿದುದನ್ನು ನಿಶ್ಶಬ್ದವಾಗಿ ಹಿಂದಿರುಗಿಸಿದರು. ಮತ್ತು ತಮ್ಮ ಪಾಲಿನದನ್ನು, ತಮಗೆ ಬೆಂಬಲಿಗನಾಗಿದ್ದ ಬಲರಾಮನ ಮನೆಗೆ ರಹಸ್ಯವಾಗಿ ಕಳಿಸಿಕೊಟ್ಟು, ಅಲ್ಲಿ ಅದರ ನಿತ್ಯಪೂಜೆ ನಡೆಯಲು ವ್ಯವಸ್ಥೆ ಮಾಡಿಸಿದರು. ಸಾಧ್ಯವಾದಷ್ಟು ಬೇಗನೆ ಅದನ್ನು ಗಂಗಾತೀರದಲ್ಲಿ ವೈಭವಯುತವಾಗಿ ಪ್ರತಿಷ್ಠಾಪನೆ ಮಾಡಬೇಕೆಂಬ ಹಂಬಲ ಅವರದು. ಅಂತೂ ಕೊನೆಗೆ ಏನಾಗಬೇಕೋ ಅದೇ ಆಯಿತು—ಶ್ರೀರಾಮಕೃಷ್ಣರು ಗೃಹಸ್ಥ-ಸಂನ್ಯಾಸೀ ಭಕ್ತರಿಬ್ಬರಿಗೂ ಸೇರಿದವರಾದರು!!

ಕೆಲವು ದಿನಗಳ ಬಳಿಕ, ಕೃಷ್ಣಾಷ್ಟಮಿಯ ಶುಭದಿನದಂದು (ಆಗಸ್ಟ್ ೨೩) ಭಕ್ತರ ವಶದಲ್ಲಿದ್ದ ಅಸ್ಥಿಪಾತ್ರೆಯನ್ನು ಕಾಂಕುರಗಾಚಿಯಲ್ಲಿ ವಿಧಿಯುಕ್ತವಾಗಿ ಸ್ಥಾಪಿಸಲಾಯಿತು. ಭಕ್ತರು-ಶಿಷ್ಯರೆಲ್ಲರೂ ಸಮಾರಂಭದಲ್ಲಿ ಪಾಲ್ಗೊಂಡರು. ಇಲ್ಲಿ ಪ್ರತಿದಿನದ ಪೂಜೆ ನೈವೇದ್ಯಾದಿಗಳಿಗೆ ಏರ್ಪಾಡಾಯಿತು. ಕಾಲಾಂತರದಲ್ಲಿ ಸಮಾಧಿಯ ಮೇಲೊಂದು ದೇವಾಲಯವೂ ನಿರ್ಮಾಣಗೊಂಡಿತು. ಈಗ ಈ ಕ್ಷೇತ್ರ 'ಶ್ರೀರಾಮಕೃಷ್ಣ ಯೋಗೋದ್ಯಾನ' ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ.

ಇಷ್ಟರಲ್ಲಿ ಶಾರದಾದೇವಿಯವರನ್ನು, ಶ್ರೀರಾಮಕೃಷ್ಣರಿಗೆ ಅತ್ಯಂತ ಪ್ರಿಯ ಭಕ್ತರಲ್ಲೊಬ್ಬನಾದ ಬಲರಾಮ ಬಾಬು ತನ್ನ ಮನೆಗೆ ಆದರದಿಂದ ಕರೆತಂದಿದ್ದ. ಮತ್ತು ದುಃಖತಪ್ತರಾಗಿದ್ದ ಅವರ ಮನಸ್ಸು ಸಮಾಧಾನಗೊಳ್ಳಲು ಅನುಕೂಲವಾಗುವಂತೆ ತೀರ್ಥಯಾತ್ರೆಯ ಏರ್ಪಾಡು ಮಾಡಿದ. ಇದಕ್ಕೊಪ್ಪಿದ ಶಾರದಾದೇವಿಯವರು ಅದೇ

ತಿಂಗಳ ಅಂತ್ಯದಲ್ಲಿ, ಗೋಲಾಪ್ ಮಾ, ಲಕ್ಷ್ಮಿ, ನಿಕುಂಜಾ ದೇವಿ (ಮಾಸ್ಟರ್ ಮಹಾಶಯನ ಹೆಂಡತಿ) ಹಾಗೂ ತರುಣಶಿಷ್ಯರಾದ ಯೋಗೀಂದ್ರ, ಲಾಟು ಮತ್ತು ಕಾಳೀಪ್ರಸಾದ—ಇಷ್ಟು ಜನರೊಂದಿಗೆ ಯಾತ್ರೆ ಹೊರಟರು. ಬಲರಾಮನ ಮನೆಯಲ್ಲಿದ್ದ ಶ್ರೀರಾಮಕೃಷ್ಣರ ಅವಶೇಷದ ಪಾತ್ರೆಯನ್ನೂ ಅವರು ತಮ್ಮೊಂದಿಗೆ ಒಯ್ದು, ದಿನವೂ ಅದಕ್ಕೆ ಪೂಜೆ ಸಲ್ಲಿಸುತ್ತಿದ್ದರು. ಅವಶೇಷದ ಸ್ವಲ್ಪ ಭಾಗವನ್ನು ಗಂಗೆಯಲ್ಲಿ ವಿಸರ್ಜಿಸಲು ಹರಿದ್ವಾರ ಮತ್ತಿತರ ಕ್ಷೇತ್ರಗಳಿಗೆ ಕಳಿಸಿಕೊಡಲಾಯಿತು. ಒಂದು ವರ್ಷ ಕಾಲ ಬೃಂದಾವನದಲ್ಲಿ ವಾಸಿಸಿ, ಇತರ ಕೆಲವು ಸ್ಥಳಗಳನ್ನು ಸಂದರ್ಶಿಸಿದ ಬಳಿಕ ಶಾರದಾ ದೇವಿಯವರು ಕಲ್ಕತ್ತಕ್ಕೆ ಹಿಂದಿರುಗಿ ಅಸ್ಥಿ ಪಾತ್ರೆಯನ್ನು ಶಿಷ್ಯರ ನಾಯಕನಾದ ನರೇಂದ್ರನಿಗೆ ಹಿಂದಿರುಗಿಸಿದರು.

ಶ್ರೀರಾಮಕೃಷ್ಣರ ನಿರ್ಯಾಣದೊಂದಿಗೆ ಶ್ರೀಶಾರದಾದೇವಿಯವರ ದಿವ್ಯಜೀವನದ ಒಂದು ಭಾಗ ಮುಕ್ತಾಯಗೊಂಡಿತು. ಅದರಲ್ಲಿ ಅವರಿರ್ವರು ಅಭೂತಪೂರ್ವವೂ ಪರಮಾದ್ಭುತವೂ ಆದ 'ದಾಂಪತ್ಯಜೀವನ'ವನ್ನು ನಡೆಸಿ, ಗೃಹಸ್ಥರಿಗೆ ಅತ್ಯುಚ್ಚ ಆದರ್ಶವನ್ನು ತೋರಿಸಿಕೊಟ್ಟ ಪರಿಯನ್ನು ಓದುಗರು ಬಲ್ಲರು. ಈಗ ಶಾರದಾದೇವಿಯವರ ಜೀವನದ ಉತ್ತರಾರ್ಧದ ಪ್ರಾರಂಭ. ಶ್ರೀರಾಮಕೃಷ್ಣರ ಆಧ್ಯಾತ್ಮಿಕ ಶಕ್ತಿಯನ್ನು ಅಸಂಖ್ಯಾತ ಭಕ್ತರಿಗೆ ಹರಿಸುವ ಮಾಧ್ಯಮವಾಗಿ, ನೊಂದುಬೆಂದ ಜನಕೋಟಿಗೆ ಮಾತೃವಾತ್ಸಲ್ಯದ ಸುಧೆಯನ್ನುಣಿಸುವ ಜೀವಂತ ಜಗನ್ಮಾತೆಯಾಗಿ, ಮತ್ತು ಸಂನ್ಯಾಸೀ ಶಿಷ್ಯರ ಪಾಲಿಗೆ ಶ್ರೀರಾಮಕೃಷ್ಣರ ಪ್ರತಿಬಿಂಬವಾಗಿ ಅಭಿವ್ಯಕ್ತಿಗೊಳ್ಳುತ್ತ ಅವರ ಜೀವನಗಂಗಾಪ್ರವಾಹ ಮುಂಬರಿಯಿತು.

ಈ ನಡುವೆ, ತರುಣಶಿಷ್ಯರು ಮುಂದೇನು ಮಾಡಬೇಕು ಎನ್ನುವ ಬಗ್ಗೆ ಚರ್ಚೆ ನಡೆಯುತ್ತಿತ್ತು. ಕಾಶೀಪುರದ ಉದ್ಯಾನಗೃಹಕ್ಕೆ ಮುಂಗಡವಾಗಿ ಕೊಟ್ಟಿದ್ದ ಹಣದ ವಾಯಿದೆ ಆ ಮಾಸಾಂತ್ಯಕ್ಕೆ ಮುಗಿಯಲಿತ್ತು. ಆಮೇಲೆ ಅದನ್ನು ತೆರವು ಮಾಡಲೇಬೇಕು. ಆದರೆ ಶಿಷ್ಯರ ಪೈಕಿ ಕೆಲವರು ಆದಾಗಲೇ ಈ ಮನೆಯಲ್ಲೇ ನೆಲೆಯೂರಿದ್ದರು. ಅವರಿಗೆ ತಮ್ಮವರೆನ್ನುವವರು ಬೇರೆ ಯಾರೂ ಇರಲೇ ಇಲ್ಲ! ಉಳಿದವರೂ ಕೂಡ ತಮ್ಮ ಮನೆಗಳನ್ನು ಬಿಟ್ಟು ತ್ಯಾಗಿಗಳಾಗಿ ಬರುವ ಆಲೋಚನೆಯಲ್ಲಿದ್ದರು. ಈಗ ಇವರಿಗೆಲ್ಲ ವಾಸಕ್ಕೆ ಜಾಗವೆಲ್ಲಿ? ಉದ್ಯಾನಗೃಹದಲ್ಲೇ ಇದ್ದುಕೊಂಡು ತಮ್ಮ ಸಾಧನೆಗಳನ್ನು ಮುಂದುವರಿಸಿಕೊಂಡು ಹೋಗಲು ಅವರಿಗೇನೋ ಇಷ್ಟವೇ. ಆದರೆ ಅಷ್ಟೊಂದು ಖರ್ಚನ್ನು ಭರಿಸುವವರು ಯಾರು? ತಾವೆಲ್ಲ ಸಂಘಟಿತರಾಗಿ ತ್ಯಾಗಜೀವನ ನಡೆಸುವುದಾಗಿ ನರೇಂದ್ರ ಹೇಳಿದ. ಆದರೆ ಗೃಹೀಭಕ್ತರಲ್ಲಿ ಹೆಚ್ಚಿನವರಿಗೆ ಅದು ಒಪ್ಪಿಗೆಯಾಗಲಿಲ್ಲ. "ಸುಮ್ಮನೆ ನಿಮ್ಮನಿಮ್ಮ ಮನೆಗಳಿಗೆ ಹೋಗಿ; ಓದಿ ಬುದ್ಧಿವಂತರಾಗಿ. ಇದರಿಂದ ನಿಮಗೂ ಹಿತ, ಹೆತ್ತವರಿಗೂ ಸಂತೋಷ" ಎಂದು ಬೋಧಿಸಿದರು. ತಾವು ಇಷ್ಟು ದಿನ ನೀಡುತ್ತಿದ್ದ ನೆರವನ್ನು ನಿಲ್ಲಿಸಿಬಿಟ್ಟರು. ಮತ್ತು "ಸಂಸಾರಜೀವನವೇ ಶ್ರೇಷ್ಠ ಅಂತಲೇ ಶ್ರೀರಾಮಕೃಷ್ಣರು ಹೇಳುತ್ತಿದ್ದುದು. ಅವರೇ ಸ್ವತಃ ಗೃಹಸ್ಥರಾಗಿದ್ದರಲ್ಲವೆ!" ಎಂದೂ ಕೆಲವು ಭಕ್ತರು ತರ್ಕ ಮಾಡಿದರು. ಆದರೆ ನರೇಂದ್ರ ಈ ವಾದವನ್ನೆಲ್ಲ ಧಿಕ್ಕರಿಸಿ, ತಾವೆಲ್ಲ ತ್ಯಾಗ ಜೀವನವನ್ನೇ ಕೈಗೊಳ್ಳುವವರು, ಮತ್ತು ಶ್ರೀರಾಮಕೃಷ್ಣರು ತಮಗೆ ತೋರಿಸಿಕೊಟ್ಟ ಮಾರ್ಗವೂ ಅದೇ ಎಂದು ಖಡಾಖಂಡಿತವಾಗಿ ಹೇಳಿಬಿಟ್ಟ. ಬಲರಾಮ, ಮಾಸ್ಟರ್, ಸುರೇಂದ್ರ ಮೊದಲಾದ ಕೆಲವೇ ಮಂದಿ ಭಕ್ತರಿಗೆ

ಅವನ ಮಾತಿನ ತಥ್ಯ ಮನವರಿಕೆಯಾಯಿತು. ಅವರುಗಳು ಶಿಷ್ಯರ ಬೆಂಬಲಕ್ಕೆ ನಿಂತರು.

ಇವರಲ್ಲದೆ, ಶಿಷ್ಯರ ನಿಲುವನ್ನು ಸಂಪೂರ್ಣವಾಗಿ ಸಮರ್ಥಿಸುತ್ತಿದ್ದ ಮತ್ತೊಬ್ಬ ವ್ಯಕ್ತಿಯೆಂದರೆ ಶಾರದಾದೇವಿಯವರು. ತಮ್ಮ ಆಧ್ಯಾತ್ಮಿಕ ಪುತ್ರರ ಶ್ರೇಯಸ್ಸಿಗಾಗಿ ಅವರು ಶ್ರೀರಾಮಕೃಷ್ಣರಲ್ಲಿ ಮೊರೆಯಿಡುತ್ತಿದ್ದರು: "ಪ್ರಭು! ನೀವು ನರವೇಷಧಾರಿಯಾಗಿ ಬಂದು ಈ ಕೆಲವರೊಡನೆ ಲೀಲೆಯಾಡಿದಿರಿ. ಆದರೆ ಅಷ್ಟಕ್ಕೇ ಎಲ್ಲವೂ ಮುಗಿದುಹೋಯಿತೆ? ಹಾಗಾದರೆ ನೀವು ಈ ದುಃಖಪೂರ್ಣ ಜಗತ್ತಿಗೆ ಅವತರಿಸಿ ಬಂದದ್ದಾದರೂ ಏಕೆ? ಆಹಾರಕ್ಕಾಗಿ, ಆಶ್ರಯಕ್ಕಾಗಿ, ಒಂದೆಡೆಯಿಂದ ಇನ್ನೊಂದೆಡೆಗೆ ಅಲೆದಾಡುವ ಸಾಧುಗಳು ಬೇಕಾದಷ್ಟಿದ್ದಾರೆ. ಆದರೆ ನಿಮ್ಮ ಹೆಸರಿನಲ್ಲಿ ಮನೆಬಿಟ್ಟು ಬಂದ ನನ್ನ ಮಕ್ಕಳು, ತುತ್ತು ಅನ್ನಕ್ಕಾಗಿ ಪರದಾಡುವುದನ್ನು ನಾನು ಸಹಿಸಲಾರೆ. ಅವರಿಗೆ ಯಾವುದಕ್ಕೂ ಕೊರತೆಯಾಗಬಾರದು. ಅವರೆಲ್ಲ ಒಟ್ಟಿಗೆ ಇದ್ದು ನೀವು ತೋರಿಸಿಕೊಟ್ಟ ಆದರ್ಶಗಳನ್ನು ಅನುಷ್ಠಾನ ಮಾಡಿಕೊಂಡಿರುವಂತಾಗಬೇಕು..."

ಶಾರದಾದೇವಿಯವರ ಈ ಪ್ರಾರ್ಥನೆಯನ್ನು ಶ್ರೀರಾಮಕೃಷ್ಣರು ನಡೆಸಿಕೊಡದಿದ್ದಾರೆಯೆ? ಒಂದು ಸಂಜೆ ಸುರೇಂದ್ರ ಮನೆಯಲ್ಲಿ ಧ್ಯಾನಕ್ಕೆ ಕುಳಿತಿದ್ದಾನೆ; ಆಗ ಇದ್ದಕ್ಕಿದ್ದಂತೆ ಶ್ರೀರಾಮಕೃಷ್ಣರು ಅವನಿಗೆ ದರ್ಶನವಿತ್ತು, "ಆಹ್! ಏನು ಮಾಡುತ್ತಿದ್ದೀಯೆ ನೀನು? ಅಲ್ಲಿ ನನ್ನ ಮಕ್ಕಳೆಲ್ಲ ನಿರ್ಗತಿಕರಂತಿದ್ದಾರೆ! ಹೋಗು, ತಡಮಾಡದೆ ಅವರಿಗೊಂದು ವ್ಯವಸ್ಥೆ ಮಾಡು" ಎಂದು ಆದೇಶಿಸಿದರು. ತಕ್ಷಣ ಸುರೇಂದ್ರ ದಡಬಡಿಸಿ ಎದ್ದು ನರೇಂದ್ರನ ಮನೆಗೆ ಓಡಿದ. ತನಗಾದ ದರ್ಶನವನ್ನು ಬಣ್ಣಿಸಿ, ಅಶ್ರುಭರಿತನಾಗಿ ಹೇಳಿದ: "ನರೇನ್, ನೀವೆಲ್ಲ ಎಲ್ಲಿಗೆ ಹೋಗುತ್ತೀರಿ? ನಾವೀಗ ಒಂದು ಬಾಡಿಗೆ ಮನೆ ಹಿಡಿಯೋಣ. ನೀವು ಹುಡುಗರೆಲ್ಲ ಅದರಲ್ಲಿ ವಾಸವಾಗಿರಿ. ಅದು ಶ್ರೀರಾಮಕೃಷ್ಣರ ಮಂದಿರವಾಗಲಿ. ನಾವು ಗೃಹಸ್ಥರು ಆಗಾಗ ಬಂದು ನಿಮ್ಮೊಡನಿದ್ದು ನಿಮ್ಮ ದಿವ್ಯಾನಂದದಲ್ಲಿ ಪಾಲ್ಗೊಳ್ಳುತ್ತೇವೆ. ಇದುವರೆಗೂ ನಾನು ಉದ್ಯಾನಗೃಹದಲ್ಲಿ ಶ್ರೀರಾಮಕೃಷ್ಣರಿಗಾಗಿ ಅಂತ ಒಂದಿಷ್ಟು ಹಣವನ್ನು ವಿನಿಯೋಗ ಮಾಡುತ್ತಿದ್ದೆ. ಇನ್ನು ಮೇಲೆ ಅದನ್ನೇ ಸಂತೋಷದಿಂದ ನಿಮಗೆ ಕೊಡುತ್ತೇನೆ." ಇದನ್ನು ಕೇಳುತ್ತಿದ್ದಂತೆ ನರೇಂದ್ರನಿಗೆ ಶ್ರೀರಾಮಕೃಷ್ಣರೇ ಹಿನ್ನೆಲೆಯಲ್ಲಿದ್ದುಕೊಂಡು ತಮ್ಮನ್ನು ಮುನ್ನಡೆಸುತ್ತಿದ್ದಾರೆ ಎನ್ನುವುದು ಸ್ಪಷ್ಟವಾಗಿ ಗೋಚರವಾಯಿತು. ಹನಿಗೂಡಿದ ಕಂಗಳಿಂದ ಆತ ಸುರೇಂದ್ರನಿಗೆ ಧನ್ಯವಾದ ಹೇಳಿದ. ಮತ್ತು ಇಮ್ಮಡಿ ಉತ್ಸಾಹದಿಂದ ಮುಂದಿನ ಕಾರ್ಯದಲ್ಲಿ ತೊಡಗಿದ.

ದಕ್ಷಿಣೇಶ್ವರ-ಕಲ್ಕತ್ತಗಳ ನಡುವಿನ ಬಾರಾನಾಗೋರಿನಲ್ಲಿ ಗಂಗಾತೀರದಲ್ಲೇ ಶಿಥಿಲವಾದ ಒಂದು ಮಹಡಿಯ ಕಟ್ಟಡವೊಂದು ಸಿಕ್ಕಿತು. ಬಾಡಿಗೆ ಕೇವಲ ಹನ್ನೊಂದು ರೂಪಾಯಿ. ಆದ್ದರಿಂದ ಹೆಚ್ಚು ಆಲೋಚಿಸದೆ ಅದನ್ನೇ ಹಿಡಿದರು. ಇದರ ಮೊಟ್ಟ ಮೊದಲ ನಿವಾಸಿಗಳೆಂದರೆ ತಾರಕನಾಥ ಮತ್ತು ಹಿರಿಯ ಗೋಪಾಲ. ಶ್ರೀರಾಮಕೃಷ್ಣರ ಸ್ಮರಣಾರ್ಥವಾಗಿ, ಅವರಿಗೆ ಸೇರಿದ್ದ ಪದಾರ್ಥಗಳನ್ನೆಲ್ಲ ಇಲ್ಲಿಗೇ ತಂದಿಟ್ಟುಕೊಂಡರು. ಹೀಗೆ 'ಶ್ರೀರಾಮಕೃಷ್ಣ ಮಠ' ಅಸ್ತಿತ್ವಕ್ಕೆ ಬಂತು. ಉಳಿದ ಯುವಕರು ಮಠಕ್ಕೆ ಸೇರುವ ವಿಷಯದಲ್ಲಿ ಇಬ್ಬಂದಿಗೆ ಸಿಲುಕಿದ್ದರು. ಒಂದೆಡೆ ತಮ್ಮಲ್ಲಿ ಸಹಜವಾಗಿದ್ದ ವೈರಾಗ್ಯದ ಒತ್ತಡ; ಇನ್ನೊಂದೆಡೆ ಪ್ರೀತಿಪಾತ್ರರಾದ ತಾಯಿ-ತಂದೆ-ಒಡಹುಟ್ಟಿದವರೆಲ್ಲರ ಬಲಾ

ತ್ಕಾರ. ಜೊತೆಗೆ ಅವರಿಂದ ಆಮಿಷಗಳು, ಗದರಿಕೆ-ಬೆದರಿಕೆ ಕೂಡ. ಹೀಗಿರುವಾಗ ನರೇಂದ್ರ ಅವರ ಮನೆಗಳಿಗೇ ಹೋಗಿ ತನ್ನ ಪ್ರಖರ ವಾಗ್ಧಾರೆಯಿಂದ ಅವರ ಮನಸ್ಸನ್ನು ಗೆದ್ದುಕೊಳ್ಳಲಾರಂಭಿಸಿದ.

ಈ ಯುವಕರ ನಿರ್ಧಾರ ಬಲಗೊಳ್ಳುವಂತೆ, ಶ್ರದ್ಧೆ ದೃಢವಾಗುವಂತೆ, ಮತ್ತು ಅವರ ಪರಸ್ಪರ ಸ್ನೇಹ ಬಿಗಿಯಾಗುವಂತೆ ಮಾಡಿದ ಒಂದು ಪ್ರಸಂಗ ಈ ವೇಳೆಗೆ ತಾನಾಗಿಯೇ ಒದಗಿ ಬಂತು.

ಶಿಷ್ಯರಲ್ಲೊಬ್ಬನಾದ ಬಾಬುರಾಮನ ತಾಯಿ ಮಾತಂಗಿನೀದೇವಿ ಶ್ರೀರಾಮಕೃಷ್ಣರ ಪರಮಭಕ್ತೆ; ಸ್ವಸಂತೋಷದಿಂದ ತನ್ನ ಮಗನನ್ನು ಶ್ರೀರಾಮಕೃಷ್ಣರ ಚರಣಗಳಲ್ಲಿ ಅರ್ಪಿಸಿದ್ದ ಮಹಾತಾಯಿ. ಅವರ ಆಧ್ಯಾತ್ಮಿಕ ಸಂತಾನರಾದ ತರುಣಶಿಷ್ಯರ ಬಗ್ಗೆ ಇವಳಿಗೆ ವಿಶೇಷ ಆದರ, ಅಭಿಮಾನ. ಇವಳು, ತ್ಯಾಗಜೀವನವನ್ನು ಸ್ವೀಕರಿಸಿದ್ದ ನರೇಂದ್ರ ಹಾಗೂ ಇನ್ನಿಬ್ಬರು-ಮೂವರನ್ನು ತನ್ನ ಹಳ್ಳಿಗೆ ಬಂದು ತನ್ನ ಆತಿಥ್ಯ ಸ್ವೀಕರಿಸುವಂತೆ ಆಮಂತ್ರಿಸಿದಳು. ಈ ಸುದ್ದಿ ತಿಳಿದಾಗ ಇನ್ನೂ ಅನೇಕಯುವಕರು ತಾವೂ ಬರುವ ಉತ್ಸಾಹ ತೋರಿದರು. ಕಡೆಗೆ ಅದು ಸಾಕಷ್ಟು ದೊಡ್ಡ ಗುಂಪೇ ಆಯಿತು. ೧೮೮೬ರ ಡಿಸೆಂಬರಿನಲ್ಲೊಂದು ದಿನ ಎಲ್ಲರೂ ಹೊರಟರು. ಇನ್ನೂ ಮಠಕ್ಕೆ ಸೇರಿರದಿದ್ದವರೂ ಈ ಗುಂಪಿನಲ್ಲಿದ್ದರು. ಎಲ್ಲರನ್ನೂ ಮಾತಂಗಿನೀ ದೇವಿ ತನ್ನ ಊರಾದ ಆಂಟ್‌ಪುರಕ್ಕೆ ವಾತ್ಸಲ್ಯದಿಂದ ಬರಮಾಡಿಕೊಂಡಳು.

ಆಂಟ್‌ಪುರವೊಂದು ಸುಂದರ ಗ್ರಾಮ; ಪ್ರಶಾಂತ ಪರಿಸರ. ಇಂತಹ ವಾತಾವರಣದಲ್ಲಿ ಸಹಜವಾಗಿಯೇ ತರುಣ ಸಾಧಕರ ಅಂತರ್ಯದಲ್ಲಿ ಅಧ್ಯಾತ್ಮದ ಕಿಡಿ ಭುಗಿಲೆದ್ದಿತು. ಅದಕ್ಕೆ ನರೇಂದ್ರನ ಪ್ರೋತ್ಸಾಹದ ಬಿರುಗಾಳಿ ಬೇರೆ. ಒಂದು ರಾತ್ರಿ ಅವರೆಲ್ಲ ಧುನಿ ಹೊತ್ತಿಸಿಕೊಂಡು ಕುಳಿತು ಧ್ಯಾನ ಮಾಡಿ, ಬಳಿಕ ಸಲ್ಲಾಪದಲ್ಲಿ ತೊಡಗಿದ್ದಾರೆ; ತ್ಯಾಗಜೀವನದ ಮಹಿಮೆಯ ಬಗ್ಗೆ ಮಾತಾಡುತ್ತಿದ್ದಂತೆ ನರೇಂದ್ರನಿಗೆ ಮಹಾಕಾರುಣಿಕ ಏಸುಕ್ರಿಸ್ತನ ಸ್ಫುರಣೆಯಾಗಿಬಿಟ್ಟಿತು. ಅವನು ಆವೇಶಭರಿತನಾಗಿ, ಕೇಳುವವರ ಮೈ ನವಿರೇಳುವಂತೆ, ಮಾನವಮಂಗಲಕ್ಕಾಗಿ ತನ್ನ ನೆತ್ತರನ್ನೇ ಬಸಿದ ಏಸುವಿನ ಜೀವನ-ಸಂದೇಶಗಳನ್ನು ಬಣ್ಣಿಸತೊಡಗಿದ.* ಇದೆಲ್ಲದರ ಪರಿಣಾಮವಾಗಿ, ಆ ಗುರುಭಾಯಿಗಳ ಹೃದಯದಲ್ಲಿ ಸರ್ವಸಂಗ ಪರಿತ್ಯಾಗದ ಆದರ್ಶ ಅಚ್ಚಳಿಯದಂತೆ ಮುದ್ರಿತವಾಯಿತು. ತಾವೆಲ್ಲ ಸಂನ್ಯಾಸ ಸ್ವೀಕರಿಸಿ ಸಾಂಘಿಕ ಜೀವನ ನಡೆಸಬೇಕು ಎಂಬ ಅವರ ನಿರ್ಧಾರ ಅಚಲವಾಯಿತು.

ಸುಮಾರು ಒಂದು ವಾರದ ಬಳಿಕ ಇವರೆಲ್ಲ ಊರಿಗೆ ಮರಳಿದರು. ಮತ್ತು ತಮ್ಮ ಮನೋಭಿಲಾಷೆಯಂತೆ ಒಬ್ಬೊಬ್ಬರಾಗಿ ಬಂದು ಮಠಕ್ಕೆ ಸೇರಿಕೊಂಡರು. ಕ್ರಮೇಣ ಸದಸ್ಯರ ಸಂಖ್ಯೆ ಹಿಗ್ಗಿತು. ಕೆಲವೇ ತಿಂಗಳು ಕಳೆಯುವಷ್ಟರಲ್ಲಿ, ತಾರಕ ಮತ್ತು ಹಿರಿಯಗೋಪಾಲನಲ್ಲದೆ ರಾಖಾಲ, ಶಶಿ, ಶರತ್, ಬಾಬುರಾಮ, ನಿರಂಜನ, ಕಾಳೀಪ್ರಸಾದ, ಲಾಟು, ಯೋಗೀಂದ್ರ, ಶಾರದಾಪ್ರಸನ್ನ, ಸುಬೋಧ, ಹರಿನಾಥ ಹಾಗೂ ನರೇಂದ್ರ ಇವರಿಷ್ಟು ಜನರೂ ಮಠದಲ್ಲಿ ನೆಲೆಯೂರಿದ್ದರು.

---

* ಆಶ್ಚರ್ಯದ ಸಂಗತಿಯೆಂದರೆ ಅಂದು ಕ್ರಿಸ್‌ಮಸ್ ಹಬ್ಬದ ಮುನ್ನಾದಿನವಾಗಿತ್ತು. ಇದು ಅವರಿಗೆ ತಿಳಿದುಬಂದದ್ದು ಮಾತ್ರ ಆಮೇಲೆಯೇ !

ಕೆಲವೊಮ್ಮೆ ಈ ತರುಣರ ಮಾತಾಪಿತೃಗಳು ಬಂದು, ಮನೆಗೆ ಹಿಂದಿರುಗುವಂತೆ ಒತ್ತಾಯಿಸುತ್ತಿದ್ದರು. ನಾನಾ ರೀತಿಯಿಂದ ಬುದ್ಧಿ ಹೇಳುತ್ತಿದ್ದರು; ಎದೆ ಕರಗುವಂತೆ ಕಣ್ಣೀರ್ಗರೆದು ಬೇಡಿಕೊಳ್ಳುತ್ತಿದ್ದರು. ಆದರೆ ಶಿಷ್ಯರು ಶಿಲೆಯಂತೆ ದೃಢವಾಗಿ ನಿಂತರು. ರಾಖಾಲ ಒಮ್ಮೆ ತನ್ನ ತಂದೆಗೆ ಹೇಳುತ್ತಾನೆ, "ಸುಮ್ಮನೆ ಇಲ್ಲಿಗೆ ಬರುವ ತೊಂದರೆ ಯನ್ನೇಕೆ ತಂದುಕೊಳ್ಳುತ್ತೀರಿ ? ನಾನಿಲ್ಲಿ ಸುಖವಾಗಿದ್ದೇನೆ. ನನ್ನ ದಾರಿ ಸುಗಮವಾಗು ವಂತೆ ದಯವಿಟ್ಟು ಹರಸಿ. ಮತ್ತು ನನ್ನನ್ನು ಸಂಪೂರ್ಣ ಮರೆತುಬಿಡಿ. ನಾನೂ ನಿಮ್ಮನ್ನು ಮರೆತುಬಿಡುತ್ತೇನೆ." ಇದೇ ಆ ಯುವಕರೆಲ್ಲರ ಧೋರಣೆ. ಕಟ್ಟಕಡೆಗೆ, ಹತಾಶರಾದ ಹಿರಿಯರು, 'ಇದಕ್ಕೆಲ್ಲ ಆ ನರೇಂದ್ರನೇ ಕಾರಣ. ನಮ್ಮ ಮಕ್ಕಳು ಮನೆ ಗಳಿಗೆ ಹಿಂದಿರುಗಿ, ಸರಿದಾರಿಗೆ ಬಂದಿದ್ದರು. ಆದರೆ ನರೇಂದ್ರ ಬಂದು ಇವರ ಬುದ್ಧಿ ಯನ್ನೆಲ್ಲ ಪುನಃ ಕೆಡಿಸಿಬಿಟ್ಟ' ಎಂದು ಬೈದು, ತಮ್ಮ ದುರ್ದೈವವನ್ನು ಶಪಿಸಿ, ಸುಮ್ಮ ನಾಗಬೇಕಾಯಿತು.

* * * *

ಶ್ರೀರಾಮಕೃಷ್ಣರ ವಿಯೋಗದಿಂದ ಗೃಹೀಭಕ್ತರು ಅನುಭವಿಸಿದ ಆಘಾತವೇನೂ ಕಡಿಮೆಯದಲ್ಲ. ಮಹೇಂದ್ರ, ಬಲರಾಮ, ಗಿರೀಶ, ದೇವೇಂದ್ರ ಮತ್ತಿತರರು ಆಗಾಗ ಏಕಾಂತದಲ್ಲಿ ಕಣ್ಣೀರ್ಗರೆಯುತ್ತ ಹೃದಯವನ್ನು ಹಗುರಗೊಳಿಸಿಕೊಳ್ಳಲೆತ್ನಿಸುತ್ತಿದ್ದರು. ಮತ್ತು ಆಗಾಗ ಬಾರಾನಾಗೋರಿನ ಮಠಕ್ಕೆ ಭೇಟಿಯಿತ್ತು, ದಕ್ಷಿಣೇಶ್ವರದ ಆನಂದದ ದಿನಗಳನ್ನು ಮೆಲುಕು ಹಾಕುತ್ತ, ಸಾಂತ್ವನ ತಂದುಕೊಳ್ಳುತ್ತಿದ್ದರು. ಅಲ್ಲಿ ಪ್ರಕಾಶಯುತ ವಾಗಿ ಉರಿಯುತ್ತಿದ್ದ ಅಧ್ಯಾತ್ಮದ ಹಣತೆಯನ್ನು ಕಂಡಾಗ ಅವರಲ್ಲಿ ಹೊಸ ಉತ್ಸಾಹ-ಭರವಸೆ ಉದಿಸುತ್ತಿತ್ತು. ತಮ್ಮ ಗುರುಮಹಾರಾಜರು ಭೌತಿಕವಾಗಿ ಕಣ್ಮರೆಯಾದರೂ ಸೂಕ್ಷ್ಮರೂಪದಿಂದ ಇಲ್ಲಿ ವಾಸಿಸುತ್ತಿದ್ದಾರೆ ಎಂಬ ಭಾವನೆ ಅವರಲ್ಲಿ ಒತ್ತರಿಸಿ ಬರು ತ್ತಿತ್ತು. ಆ ತರುಣಸಾಧಕರನ್ನು ನೋಡಿದಾಗ ಶ್ರೀರಾಮಕೃಷ್ಣರ ಗುಣವಿಶೇಷಗಳೇ ಒಬ್ಬೊಬ್ಬನಲ್ಲೂ ಒಂದೊಂದು ಅಂಶವಾಗಿ ಪ್ರಕಟಗೊಂಡಿರುವಂತೆ ಕಂಡುಬರುತ್ತಿತ್ತು. ಅವರೇ ಈಗ ಈ ರೂಪದಲ್ಲಿ ವೈ ವೆತ್ತಿದ್ದಾರೋ ಎಂದು ಅಚ್ಚರಿಪಡುತ್ತಿದ್ದರು.

ಬಾರಾನಾಗೋರಿನ ಮಠದಲ್ಲಿ ಈ ಕಿರಿಯ ವಿರಾಗಿಗಳು ನಡೆಸುತ್ತಿದ್ದ ಸಾಧನಾ ಜೀವನದ ಉತ್ಕಟತೆಯನ್ನು ಶಬ್ದಗಳಿಂದ ವರ್ಣಿಸಿ ಮುಗಿಸಲಾಗದು. ಭಕ್ತಿ ಭಾವ ಸಂಕೀರ್ತನೆ ಜಪ ಧ್ಯಾನ ಅಧ್ಯಯನ ಶಾಸ್ತ್ರವಿಚಾರ, ಶ್ರೀರಾಮಕೃಷ್ಣಸ್ಮರಣೆ—ಇವೇ ಅವರ ಒಳಹೊರಗನ್ನೆಲ್ಲ ವ್ಯಾಪಿಸಿಬಿಟ್ಟಿದ್ದ ದಿನಗಳು ಅವು. ಪ್ರಾಪಂಚಿಕವಾದ ಯಾವ ವಿಷಯವೂ ಅಲ್ಲಿಗೆ ನುಸುಳಲು ಅವಕಾಶವಿರಲಿಲ್ಲ. ಬಾಹ್ಯ ಜಗತ್ತಿನ ಮಟ್ಟಿಗೆ ಅವರು ಮೃತರಾದಂತೆಯೇ ಇದ್ದುಬಿಟ್ಟಿದ್ದರು. ಭಗವತ್ಸಾಕ್ಷಾತ್ಕಾರದ ಹಂಬಲ ಅವರನ್ನು ಬಡ ಬಾಗ್ನಿಯಂತೆ ದಹಿಸುತ್ತಿತ್ತು. ಆಗಾಗ ಸಂಶಯಗಳೇಳುತ್ತಿದ್ದುವು, ನಿರಾಶೆ ಎದುರಾಗು ತ್ತಿತ್ತು, ಇಲ್ಲವೆಂದಲ್ಲ. ಆದರೆ ಅವೆಲ್ಲ ತಾತ್ಕಾಲಿಕ—ಕಡಿದಾದ ಸಾಧನಾಪಥದಲ್ಲಿ ಹಾದುಹೋಗಲೇಬೇಕಾದ ಘಟ್ಟಗಳು.

ಸ್ವತಃ ತಮ್ಮ ಗುರುದೇವನ ಅಭೂತಪೂರ್ವ ಸಾಧನಾವಿಧಾನಗಳ ಕತೆಗಳ ನೆನಪು ಅವರಲ್ಲಿ ಉತ್ಸಾಹದ ಬುಗ್ಗೆಯನ್ನೇ ಉಕ್ಕಿಸುತ್ತಿತ್ತು. ತಾವೂ ಆ ಹೆಜ್ಜೆಗುರುತು ಗಳನ್ನು ಅನುಸರಿಸಿ ಸಾಗಬೇಕೆಂಬ ಛಲ ಅವರಲ್ಲುಂಟಾಗುತ್ತಿತ್ತು. ಅಶನ-ವಸನಗಳ

ವಿಚಾರದಲ್ಲಂತೂ ಅವರು ಅತಿ ಕಠಿಣ. ಆ ತರುಣರೆಲ್ಲ ಅನುಕೂಲಸ್ಥ ಕುಟುಂಬಗಳಿಂದ ಬಂದವರು. ಅಂಥವರು ಕೂಡ ಈಗ ಎಂತಹ ಸರಳ ಜೀವನಕ್ಕೆ ಒಗ್ಗಿಹೋದರು! ಮುಂಜಾನೆ ಮೂರು ಗಂಟೆಗೆಲ್ಲ ಎದ್ದು ಸ್ನಾನ ಮಾಡಿ ಪೂಜಾ ಗೃಹದಲ್ಲಿ ಧ್ಯಾನಕ್ಕೆ ಕುಳಿತುಬಿಡುತ್ತಿದ್ದರು. ಇನ್ನು ಆಸನ ಬಿಟ್ಟೇಳುವುದು ಅಪರಾಹ್ನ ಅಥವಾ ಸಾಯಂ ಕಾಲವೇ!

ಸಾಮಾನ್ಯವಾಗಿ ಅವರ ಊಟವೆಂದರೆ ಅನ್ನ, ನೆಂಜಿಕೊಳ್ಳಲು ಉಪ್ಪು, ಬೇಯಿ ಸಿದ ಸೊಪ್ಪು ಇಷ್ಟೆ! ಅದೂ ಇದ್ದರಿತ್ತು, ಇಲ್ಲದಿದ್ದರಿಲ್ಲ. ಕೆಲವು ಗೃಹೀಭಕ್ತರು—ಮುಖ್ಯವಾಗಿ ಸುರೇಂದ್ರ—ತಮ್ಮಿಂದಾದಷ್ಟು ಸಹಾಯವನ್ನೇನೋ ಮಾಡುತ್ತಿದ್ದರು. ಆದರೆ ಹತ್ತುಹನ್ನೆರಡು ಜನರಿಗೆ ಅದೆಲ್ಲಿ ಸಾಕಾಗಬೇಕು? ಏನೂ ಇಲ್ಲದ ದಿನಗಳಂದು ನಿಶ್ಚಿಂತೆಯಿಂದ ಜಪಸಂಕೀರ್ತನೆಗಳಲ್ಲೇ ಹಗಲಿರುಳೂ ಮುಳುಗಿದ್ದುಬಿಡುತ್ತಿದ್ದರು! ಭಗವದಾನಂದವನ್ನು ಸವಿಯುವಾಗ ಅವರಿಗೆ ಭಿಕ್ಷಾಟನೆಗೆ ಹೋಗಲೂ ಮನಸ್ಸಿರು ತ್ತಿರಲಿಲ್ಲ. ಅವರಲ್ಲಿದ್ದ ಉಡುಗೆಯೆಂದರೆ ಕೌಪೀನ, ಒಂದೆರಡು ತುಂಡು ಕಾವಿ ಬಟ್ಟೆ ಗಳು ಮಾತ್ರ. ಎಲ್ಲರಿಗೂ ಸೇರಿದಂತೆ ಒಂದು ಪಂಚೆ, ಉತ್ತರೀಯ. ಯಾರಾದರೂ ಪೇಟೆಗೋ ನಗರಕ್ಕೋ ಹೋಗಬೇಕಾಗಿ ಬಂದರೆ ಅವರು ಇದನ್ನು ಧರಿಸಿ ಹೋಗು ತ್ತಿದ್ದರು. ಹಾಸಿಕೊಳ್ಳಲೊಂದು ಚಾಪೆ, ಜಪಮಾಲೆಗಳು, ಒಂದು ತಂಬೂರಿ—ಇಷ್ಟೇ ಅವರ ಆಸ್ತಿ.

ಇತರರು ಜಪತಪಗಳಲ್ಲಿ ಮುಳುಗಿದ್ದರೆ, ಶಶಿಭೂಷಣನಿಗೆ ಮಾತ್ರ ಗುರು ದೇವನ ಕೈಂಕರ್ಯವೇ ಪರಮಸಾಧನೆ. ಆತನ ಪಾಲಿಗೆ ಶ್ರೀರಾಮಕೃಷ್ಣರ ಪಟ ವೆಂಬುದು ಒಂದು ಜಡವಸ್ತುವಲ್ಲ. ಅದರಲ್ಲಿ ಸ್ವಯಂ ಶ್ರೀರಾಮಕೃಷ್ಣರೇ ಆವಿರ್ಭಾವ ಗೊಂಡು ಜೀವಂತವಾಗಿ ಕುಳಿತಿರುವುದನ್ನು ಅವನು ಕಾಣುತ್ತಿದ್ದ. ಗುರುದೇವನ ಪೂಜೆ-ಕೈಂಕರ್ಯಗಳ ಜೊತೆಯಲ್ಲಿ, ಇತರೆಲ್ಲ ಸೋದರರ ಯೋಗಕ್ಷೇಮದ ಹೊಣೆ ಯನ್ನೂ ಅವನೇ ಹೊತ್ತಿದ್ದ. ಮನೆಗೆ ತಾಯಿ ಹೇಗೋ ಹಾಗೆ ಮಠಕ್ಕೆ ಶಶಿ! ಶ್ರೀರಾಮ ಕೃಷ್ಣರ ನೈವೇದ್ಯಕ್ಕಾಗಿ, ಗುರುಭಾಯಿಗಳ ಊಟಕ್ಕಾಗಿ, ಆಹಾರ ಪದಾರ್ಥಗಳನ್ನು ಭಿಕ್ಷೆ ಯೆತ್ತಿ ತರುತ್ತಿದ್ದವನು ಹೆಚ್ಚಾಗಿ ಇವನೇ. ಅಡುಗೆ ತಯಾರಿಸಿ, ಅದನ್ನು ಶ್ರೀರಾಮ ಕೃಷ್ಣರಿಗೆ ನೈವೇದ್ಯ ಮಾಡಿ, ಗುರುಭಾಯಿಗಳು ಧ್ಯಾನದಿಂದ ಎದ್ದೇಳುವುದನ್ನೇ ಎದುರು ನೋಡುತ್ತ ಇವನು ತಾಳ್ಮೆಯಿಂದ ಕುಳಿತಿರುತ್ತಿದ್ದ. ತೀರಾ ತಡವಾಯಿತೆಂದರೆ ತಾನೇ ಅವರನ್ನು ಒತ್ತಾಯದಿಂದ ಎಬ್ಬಿಸಿ, ಬಲವಂತವಾಗಿ ನಾಲ್ಕು ತುತ್ತು ತಿನ್ನಿಸುತ್ತಿದ್ದ.

ಹಿಂದಿನಂತೆಯೇ ಈಗಲೂ ನರೇಂದ್ರನೇ ಎಲ್ಲರ ನಾಯಕ. ಮಠದ ಆಧಾರ ಸ್ತಂಭವೇ ಅವನಾಗಿದ್ದ. ಅವನಿಗೆ ಇತರ ಎಲ್ಲ ಸೋದರರ ಸ್ವಭಾವ-ಸಾಮರ್ಥ್ಯಗಳ, ಸುಪ್ತ ಪ್ರತಿಭೆಗಳ ಗಾಢ ಪರಿಚಯವಿತ್ತು. ಆಧ್ಯಾತ್ಮಿಕ ಜೀವನದ ಕಷ್ಟಕೋಟಲೆಗಳ ಅರಿವಿತ್ತು. ಈ ಪರಿಜ್ಞಾನದ ಆಧಾರದ ಮೇಲೆ ಅವನು ಎಚ್ಚರಿಕೆಯಿಂದ ಅವರ ವ್ಯಕ್ತಿತ್ವ ಗಳನ್ನು ತಿದ್ದುತ್ತಿದ್ದ. ಸಾಧನೆಯಲ್ಲಿ ಮುನ್ನಡೆಯಲು ಅವರಿಗೆ ಎಲ್ಲ ಬಗೆಯ ನೈತಿಕ-ಬೌದ್ಧಿಕ ನೆರವನ್ನೀಯುತ್ತಿದ್ದ. ತಮ್ಮ ಭವಿಷ್ಯದ ಧ್ಯೇಯೋದ್ದೇಶಗಳ ಬಗ್ಗೆ ವಿಚಾರ ಮಾಡುತ್ತಿದ್ದ. ವಿವಿಧ ಧರ್ಮಗಳ ಬಗ್ಗೆ, ತತ್ತ್ವ-ಸಿದ್ಧಾಂತಗಳ ಬಗ್ಗೆ, ಅಷ್ಟೇ ಅಲ್ಲದೆ ಜನಜೀವನದ ವಿವಿಧ ಮುಖಗಳ ಬಗ್ಗೆ, ವಿಜ್ಞಾನ ಸಮಾಜಶಾಸ್ತ್ರ ಕಲೆಗಳ ಬಗ್ಗೆ ತಿಳಿಸಿ ಕೊಡುತ್ತ ಅವರ ದೃಷ್ಟಿಕೋನವನ್ನು ವಿಶಾಲವಾಗಿಸಿದ. ಶ್ರೀರಾಮಕೃಷ್ಣರ ಬೋಧನೆ

ಗಳನ್ನು ಮತ್ತೆಮತ್ತೆ ನೆನಪಿಸುತ್ತ, ಅವುಗಳ ಅರ್ಥವೈಶಾಲ್ಯವನ್ನು ವಿವರಿಸಿ ಬೆರಗುಗೊಳಿಸುತ್ತಿದ್ದ. ಅಗತ್ಯ ಬಿದ್ದಾಗ ಅವರನ್ನು ಛೇಡಿಸಲೂ ಹಿಂಜರಿಯುತ್ತಿರಲಿಲ್ಲ. ಯಾರಾದರೂ ಅತಿಯಾದ ಸಾಧನೆಯಲ್ಲಿ ತೊಡಗಿ ದೇಹದಂಡನೆ ಮಾಡುವುದನ್ನು ಕಂಡರೆ ಅದಕ್ಕೆ ಅವಕಾಶ ಕೊಡುತ್ತಿರಲಿಲ್ಲ. ಗುರುಭಾಯಿಗಳ ಹಿತಚಿಂತನೆ ಅವನ ಉಸಿರಾಟದಲ್ಲೇ ಇದ್ದಂತಿತ್ತು. ಇದನ್ನೆಲ್ಲ ಕಂಡು ಇತರೆಲ್ಲ ಶಿಷ್ಯರೂ ಅವನನ್ನು ಸ್ವಯಂ ಶ್ರೀರಾಮಕೃಷ್ಣರ ಪ್ರತಿನಿಧಿಯೆಂಬ ದೃಷ್ಟಿಯಿಂದ ಕಾಣುತ್ತ ಅಷ್ಟೇ ಪ್ರೀತಿ-ಗೌರವ ಸಲ್ಲಿಸುತ್ತಿದ್ದುದರಲ್ಲಿ ಆಚ್ಚರಿಯೇನು ?

ಈ ಯುವಸಾಧಕರಲ್ಲಿ ಒಬ್ಬೊಬ್ಬನದೂ ಒಂದೊಂದು ಬಗೆಯ ವಿಶಿಷ್ಟ ವ್ಯಕ್ತಿತ್ವ. ಎಲ್ಲರೂ ವೈರಾಗ್ಯಮೂರ್ತಿಗಳೇ. ಶ್ರೀರಾಮಕೃಷ್ಣರ ಮಾನಸಪುತ್ರನಾದ ರಾಖಾಲ ಎಲ್ಲ ಗುರುಭಾಯಿಗಳ ಪಾಲಿಗೆ ಹಿರಿಯಣ್ಣನಂತೆ. ಅವರೆಲ್ಲ ಅವನನ್ನು ಕರೆಯುತ್ತಿದ್ದುದು 'ರಾಜಾ' ಎಂದು. ಅದು ಆತನ ಸತ್ತ್ವ-ಸಾಮರ್ಥ್ಯಗಳನ್ನು ಗಮನಿಸಿ ನರೇಂದ್ರನಿತ್ತ ಹೆಸರು. ಮೊದಲಿನಿಂದಲೂ ರಾಖಾಲ ತಪಸ್ಸಿಗೆಂದು ನರ್ಮದಾತೀರಕ್ಕೋ ಇನ್ನಾವುದಾವರೂ ಏಕಾಂತ ಸ್ಥಳಕ್ಕೋ ಹೋಗುವ ಇಚ್ಛೆಯನ್ನು ಆಗಾಗ ವ್ಯಕ್ತಪಡಿಸುತ್ತಿದ್ದ. ಕಾಳೀಪ್ರಸಾದನಿಗಂತೂ ದಿನದ ಇಪ್ಪತ್ನಾಲ್ಕು ಗಂಟೆಯೂ ತಾನಾಯಿತು, ತನ್ನ ಧ್ಯಾನ ಜಪ ಅಧ್ಯಯನವಾಯಿತು. ಅದನ್ನು ಕಂಡು ಅವನಿಗೆ 'ಕಾಳೀತಪಸ್ವಿ' ಎಂಬ ಅನ್ವರ್ಥ ನಾಮವನ್ನೇ ಇಟ್ಟುಬಿಟ್ಟಿದ್ದರು.

ಈ ಕಿರಿಯ ಸಾಧಕರು ಮಠದ ಸ್ಥಾಪನೆಯಾದಾಗಿನಿಂದಲೂ ಸಂನ್ಯಾಸಿಗಳಂತೆ ಜೀವನ ನಡೆಸುತ್ತಿದ್ದರಾದರೂ ಅವರು ವಿಧಿವತ್ತಾಗಿ ಸಂನ್ಯಾಸದೀಕ್ಷೆ ಪಡೆದುಕೊಂಡದ್ದು ಕೆಲತಿಂಗಳ ಮೇಲೆಯೇ. ಕಾಳೀಪ್ರಸಾದ ತೀರ್ಥಯಾತ್ರೆಗೆಂದು ಹೋಗಿದ್ದಾಗ ದೀಕ್ಷೆಗೆ ಸಂಬಂಧಪಟ್ಟ ನಿಯಮಗಳನ್ನು ವಿವರವಾಗಿ ತಿಳಿದುಕೊಂಡು ಬಂದಿದ್ದ. ಆ ಪ್ರಕಾರ ತಾವೆಲ್ಲ, ಶ್ರೀಶಂಕರಾಚಾರ್ಯರಿಂದ ಪ್ರಾರಂಭಿಸಲ್ಪಟ್ಟ ದಶನಾಮೀ ಸಂಪ್ರದಾಯದಂತೆ ಸಂನ್ಯಾಸ ಸ್ವೀಕಾರ ಮಾಡಬೇಕೆಂಬ ಇಚ್ಛೆ ಅವರಲ್ಲುದಿಸಿತು. ೧೮೮೭ರ ಜನವರಿಯ ಮೂರನೇ ವಾರದಲ್ಲೊಂದು ದಿನವನ್ನು ಅದಕ್ಕಾಗಿ ಗೊತ್ತುಪಡಿಸಿದರು. ಅಂದು ಮುಂಜಾನೆ, ಪ್ರತಿದಿನದಂತೆ ಶ್ರೀರಾಮಕೃಷ್ಣರ ಪೂಜೆ ನೆರವೇರಿತು. ಬಳಿಕ ವಿರಜಾ ಹೋಮ. (ಇದರ ವಿವರಗಳಿಗೆ ಈ ಗ್ರಂಥದ ಮೊದಲನೆಯ ಸಂಪುಟವನ್ನು ನೋಡಬಹುದು.) ವಿಧಿಗಳೆಲ್ಲ ಮುಗಿದ ಮೇಲೆ ನರೇಂದ್ರ ಎಲ್ಲರಿಗೂ ಹೊಸ ಸಂನ್ಯಾಸನಾಮಗಳನ್ನಿತ್ತ. ಅವು ಹೀಗಿವೆ:

ನರೇಂದ್ರ — ಸ್ವಾಮಿ ವಿವೇಕಾನಂದ
ರಾಖಾಲ — ಸ್ವಾಮಿ ಬ್ರಹ್ಮಾನಂದ
ಬಾಬುರಾಮ — ಸ್ವಾಮಿ ಪ್ರೇಮಾನಂದ
ಶಶಿಭೂಷಣ — ಸ್ವಾಮಿ ರಾಮಕೃಷ್ಣಾನಂದ
ಶರಚ್ಚಂದ್ರ — ಸ್ವಾಮಿ ಸಾರದಾನಂದ
ನಿರಂಜನ — ಸ್ವಾಮಿ ನಿರಂಜನಾನಂದ
ಕಾಳೀಪ್ರಸಾದ — ಸ್ವಾಮಿ ಅಭೇದಾನಂದ
ಶಾರದಾಪ್ರಸನ್ನ — ಸ್ವಾಮಿ ತ್ರಿಗುಣಾತೀತಾನಂದ

ಆ ಸಮಯದಲ್ಲಿ ಮಠದಲ್ಲಿ ಇರದಿದ್ದ, ಅಥವಾ ಇನ್ನೂ ಸೇರಿರದಿದ್ದ, ತಾರಕ ನಾಥ, ಹಿರಿಯ ಗೋಪಾಲ, ಲಾಟು, ಯೋಗೇಂದ್ರ, ಹರಿನಾಥ, ಗಂಗಾಧರ, ಸುಬೋಧ ಹಾಗೂ ಹರಿಪ್ರಸನ್ನ ಇವರುಗಳು ಅನಂತರ ಬೇರೆಬೇರೆ ಸಮಯಗಳಲ್ಲಿ ವಿಧಿವತ್ತಾಗಿ ಸಂನ್ಯಾಸದೀಕ್ಷೆ ಪಡೆದುಕೊಂಡರು. ಅವರ ಹೊಸ ಹೆಸರುಗಳು ಇವು:

| | | |
|---|---|---|
| ತಾರಕ | — | ಸ್ವಾಮಿ ಶಿವಾನಂದ |
| ಹರಿನಾಥ | — | ಸ್ವಾಮಿ ತುರೀಯಾನಂದ |
| ಲಾಟು | — | ಸ್ವಾಮಿ ಅದ್ಭುತಾನಂದ |
| ಯೋಗೀಂದ್ರ | — | ಸ್ವಾಮಿ ಯೋಗಾನಂದ |
| ಸುಬೋಧ | — | ಸ್ವಾಮಿ ಸುಬೋಧಾನಂದ |
| ಹಿರಿಯ ಗೋಪಾಲ | — | ಸ್ವಾಮಿ ಅದ್ವೈತಾನಂದ |
| ಗಂಗಾಧರ | — | ಸ್ವಾಮಿ ಅಖಂಡಾನಂದ |
| ಹರಿಪ್ರಸನ್ನ | — | ಸ್ವಾಮಿ ವಿಜ್ಞಾನಾನಂದ |

ಈ ತರುಣ ಸಂನ್ಯಾಸಿಗಳು ಆದರ್ಶಪ್ರಾಯವಾದ ತ್ಯಾಗಜೀವನವನ್ನು ನಡೆಸುತ್ತ ಕೆಲಕಾಲ ಮಠದಲ್ಲಿ ವಾಸಿಸಿದರು. ಆದರೆ ಬರಬರುತ್ತ ಅವರಿಗೆ ಮಠದ ಆವರಣ ದೊಳಗಿನ ಜೀವನವೂ ಬಹಳ ಸಂಕುಚಿತವೆನಿಸತೊಡಗಿತು; ವ್ಯಕ್ತಿತ್ವದ ಪೂರ್ಣ ವಿಕಾ ಸಕ್ಕೆ ತಡೆಯಾಗಿರುವಂತೆ ಭಾಸವಾಗತೊಡಗಿತು. ಅವರೀಗ ಭಗವಂತನಲ್ಲೇ ಸಂಪೂರ್ಣ ನಿರ್ಭರರಾಗಿದ್ದುಕೊಂಡು ಪರಿವ್ರಾಜಕ ಸಂನ್ಯಾಸಿಗಳಾಗಿ ದೇಶಪರ್ಯಟನ ಮಾಡುವ ಇಚ್ಛೆ ತಳೆದರು. ಆ ಪ್ರಕಾರವೇ ಅವರು ಒಬ್ಬೊಬ್ಬರಾಗಿ, ಇಬ್ಬಿಬ್ಬರಾಗಿ ಮಠದಿಂದ ಹೊರಟು ಚದರಿದರು. ತಾವು ಹೀಗೆ ಪರಸ್ಪರರಿಂದ ದೂರವಾಗುವುದರ ಯುಕ್ತಾ ಯುಕ್ತತೆಯ ಬಗ್ಗೆ ಸ್ವಾಮಿ ವಿವೇಕಾನಂದರು ಮೊದಲು ತುಂಬ ಚಿಂತಿತರಾದರೂ, ಕೊನೆಗೆ ಅದೇ ಸರಿಯೆಂದು ಅವರಿಗೆ ಮನವರಿಕೆಯಾಯಿತು. ಇದು ದೈವೇಚ್ಛೆಯೇ ಹೌದೆಂಬ ವಿಶ್ವಾಸ ಅವರಲ್ಲುಂಟಾಯಿತು. ಆದರೆ ರಾಮಕೃಷ್ಣಾನಂದರು (ಶಶಿ) ಮಾತ್ರ ಮಠವನ್ನು ಬಿಟ್ಟು ಎಲ್ಲಿಗೂ ಹೋಗಲಿಚ್ಛಿಸಲಿಲ್ಲ. ಶ್ರೀರಾಮಕೃಷ್ಣರ ಪವಿತ್ರ ಅಸ್ಥಿ ಯಿರುವ ಆ ತಾಣವೇ ಅವರ ಪಾಲಿನ ಪರಮಧಾಮ.

ಈ ಸಂನ್ಯಾಸಿಗಳು ಹೀಗೆ ಮಠದಿಂದ ಹೊರಟುಬಿಟ್ಟರಾದರೂ ಆಗಾಗ ಪರಸ್ಪರ ರನ್ನು ಸಂಧಿಸುತ್ತಿದ್ದರು. ಇಲ್ಲವೆ, ಪತ್ರಮುಖೇನ ಸಂಪರ್ಕವಿಟ್ಟುಕೊಂಡು ತಮ್ಮ ಇರವಿನ ಬಗ್ಗೆ ಒಬ್ಬರಿಗೊಬ್ಬರು ಮಾಹಿತಿ ಕೊಡುತ್ತಿದ್ದರು. ಇವರಲ್ಲಿ ಕೆಲವರು ವಿಶಾಲ ಭಾರತದಾದ್ಯಂತ ಸಂಚರಿಸಿದರು. ತೀರ್ಥಕ್ಷೇತ್ರಗಳಲ್ಲೂ ನಿರ್ಜನ ಪ್ರದೇಶಗಳಲ್ಲೂ ಉಳಿದುಕೊಳ್ಳುತ್ತ ತೀವ್ರ ಸಾಧನೆಗೈದರು. ಪರಿವ್ರಾಜಕ ಜೀವನದ ಕಷ್ಟಕಾರ್ಪಣ್ಯಗಳ ನ್ನೆಲ್ಲ ಎದುರಿಸಿ ಅವರ ವ್ಯಕ್ತಿತ್ವ ಪರಿಪಾಕಗೊಂಡಿತು. ಈ ಮೂಲಕ ಅವರು ಶ್ರೇಷ್ಠ ಸಂತರಾಗಿ, ಯೋಗಿಗಳಾಗಿ, ಆಧ್ಯಾತ್ಮಿಕ ಶಕ್ತಿಯ ಸಾಕಾರರೂಪವಾಗಿ ನಿರ್ಮಾಣ ಗೊಂಡರು.

ಸ್ವಾಮಿ ವಿವೇಕಾನಂದರೂ ಮಠವನ್ನು ಬಿಟ್ಟು ಹೊರಟ ಮೇಲೆ ವ್ಯಾಪಕವಾಗಿ ಸಂಚರಿಸಿದರು. ಗಂಗಾತೀರದಲ್ಲಿ ಶ್ರೀರಾಮಕೃಷ್ಣರ ಒಂದು ಭವ್ಯ ದೇವಾಲಯವನ್ನು

ಕಟ್ಟಿ, ಅವರ ಪವಿತ್ರ ನಾಮವು ಚಿರಸ್ಥಾಯಿಯಾಗುವಂತೆ ಮಾಡಬೇಕು; ಆ ಮೂಲಕ ಅವರ ಅಮೃತ ಸಂದೇಶಗಳು ಜಗತ್ತಿನೆಲ್ಲೆಡೆ ವೃಷ್ಟಿಯಾಗುವಂತೆ ಶ್ರಮಿಸಬೇಕು ಎಂಬ ಹೆಬ್ಬಯಕೆಯನ್ನು ಹೊತ್ತು ಸ್ವಾಮೀಜಿಯವರು ಮೊದಲ ಕೆಲವು ವರ್ಷಗಳ ಕಾಲ ಹೆಣಗಾಡಿದರು. ಅದಕ್ಕೆ ಬೇಕಾದ ನೆರವು ಎಲ್ಲೂ ಒದಗದಿದ್ದಾಗಲೂ ಅವರು ಹತಾಶರಾಗಲಿಲ್ಲ. ಅದನ್ನೊಂದು ಸವಾಲಿನಂತೆ ಸ್ವೀಕರಿಸಿ, ಇಂದಲ್ಲ ನಾಳೆ ಅದನ್ನು ತಾವು ನಿರ್ಮಿಸಿಯೇ ಸಿದ್ಧ ಎಂದು ಛಲ ತೊಟ್ಟರು.

ಈಗ ಅವರು ತಮಗರಿವಿಲ್ಲದಂತೆಯೇ ತಮ್ಮ ಜೀವನದ ಮಹೋದ್ದೇಶವನ್ನು ಈಡೇರಿಸುವ ದಿಸೆಯಲ್ಲಿ ಕಾರ್ಯಪ್ರವೃತ್ತರಾದರು. ಮಾತೆ ಶ್ರೀಶಾರದಾದೇವಿಯವರ ಆಶೀರ್ವಾದ ಪಡೆದು, ತಮ್ಮೆಲ್ಲ ಗುರುಭಾಯಿಗಳ ಸ್ನೇಹಸಂಕಲೆಯನ್ನು ಕಡಿದು ಕೊಂಡು ಹೊರಟುಬಿಟ್ಟರು; ಭಾರತದ ಉದ್ದಗಲಕ್ಕೂ ಅನೇಕ ವರ್ಷ ಸಂಚರಿಸಿದರು. ಭಾರತೀಯತೆಯ ಜೀವನಾಡಿಯನ್ನು ಹಿಡಿದು ನೋಡಿದರು. ಭಾರತವು ಸಕಲ ವಿಧ ದಿಂದಲೂ ಅವನತಿ ಹೊಂದಿರುವುದನ್ನು ಕಣ್ಣಾರೆ ಕಂಡರು. ಆದರೆ ಒಳಗೆ ಅಧ್ಯಾತ್ಮದ ಪ್ರಾಣವಿನ್ನೂ ಸ್ಪಂದಿಸುತ್ತಿರುವುದು ಅವರಿಗೆ ಗೋಚರಿಸಿತು. ಭಾರತದ ಪುನರುದ್ಧಾರದ ದಾರಿಯೇನೆಂದು ಗಾಢವಾಗಿ ಚಿಂತಿಸಿ, ಅದಕ್ಕೆ ಉತ್ತರವನ್ನೂ ಕಂಡುಕೊಂಡರು. ಸುದೀರ್ಘಕಾಲದಿಂದಲೂ ದಾಸ್ಯದಲ್ಲಿಯೇ ಬದುಕಿ, ತಮ್ಮ ಭವ್ಯ ಧಾರ್ಮಿಕ-ಆಧ್ಯಾತ್ಮಿಕ ಪರಂಪರೆಯನ್ನು ಮರೆತಿರುವ ಭಾರತೀಯರಿಗೆ ಅದನ್ನು ನೆನಪಿಸಿಕೊಟ್ಟು ಅವರ ಸುಪ್ತ ಚೇತನವನ್ನು ಜಾಗೃತಗೊಳಿಸಬೇಕು; ಆತ್ಮಾಭಿಮಾನ, ಆತ್ಮವಿಶ್ವಾಸಗಳನ್ನು ಬಡಿದೆಬ್ಬಿಸ ಬೇಕು; ಇದು ಸಾಧ್ಯವಾಗಬೇಕಾದರೆ, ನಮ್ಮ ಆಳರಸರಾಗಿರುವ ಪಾಶ್ಚಾತ್ಯರ ಮುಂದೆ ವೇದಧರ್ಮದ ಭವ್ಯತೆಯನ್ನು ಮೆರೆಸಿ, ಅವರ ಗೌರವವನ್ನು ಗಳಿಸಬೇಕು; ಅಲ್ಲದೆ ಪಾಶ್ಚಾತ್ಯರ ವಿಜ್ಞಾನ-ತಂತ್ರಜ್ಞಾನ, ಸಂಘಟನ ಸಾಮರ್ಥ್ಯಗಳನ್ನೆಲ್ಲ ಅಳವಡಿಸಿಕೊಂಡು ಭಾರತವು ಆರ್ಥಿಕವಾಗಿ, ಬೌದ್ಧಿಕವಾಗಿ ಶ್ರೀಮಂತವಾಗಬೇಕು; ಶ್ರೀರಾಮಕೃಷ್ಣರು ತಮ್ಮ ಅವತಾರಕಾಲದಲ್ಲಿ ಬದುಕಿ ಬೋಧಿಸಿದ ಅತ್ಯುಚ್ಚ ಆದರ್ಶಗಳ ಅಮೃತಕ್ಕಾಗಿ, ಭಾರತ ಮಾತ್ರವಲ್ಲ, ಸಮಸ್ತ ಜಗತ್ತೇ ಬಳಲಿ ಬಾಯಾರಿ ಕಾತರತೆಯಿಂದ ಇದಿರುನೋಡು ತ್ತಿದೆ; ಆ ಸಂದೇಶಗಳನ್ನು ಎಲ್ಲೆಡೆ ಸಿಂಚನ ಮಾಡಬೇಕು; ಈ ಎಲ್ಲ ಕಾರ್ಯಗಳನ್ನೂ ಸಾಧಿಸಬೇಕಾದರೆ ಮೊಟ್ಟಮೊದಲು ಯುವಜನತೆಯನ್ನು ಎಚ್ಚರಗೊಳಿಸಬೇಕು; ಅತ್ಯಂತ ಸಾಮರ್ಥ್ಯವಂತರಾದ, ಸರ್ವಸಂಗ ಪರಿತ್ಯಾಗಿಗಳಾದ ಸಾವಿರಾರು ಜನರು ಒಗ್ಗೂಡಬೇಕು; ಸಂನ್ಯಾಸಿಗಳ ಒಂದು ಬೃಹತ್ ಸಂಸ್ಥೆ ನಿರ್ಮಾಣಗೊಳ್ಳಬೇಕು; ಇವರು ಜಗದ್ಧಿತವನ್ನು ಸಾಧಿಸುತ್ತ, ಜೊತೆಗೇ ಕರ್ಮ-ಜ್ಞಾನ-ಭಕ್ತಿಯೋಗಗಳ ಅನುಷ್ಠಾನದ ಮೂಲಕ, ಆತ್ಮಸಾಕ್ಷಾತ್ಕಾರವನ್ನು ಸಿದ್ಧಿಸಿಕೊಳ್ಳಬೇಕು ಮತ್ತು ಅಖಿಲ ಮಾನವಜನಾಂಗ ವನ್ನು ಬೆಳಕಿನೆಡೆಗೆ ಮುನ್ನಡೆಸಬೇಕು—ಇದು ಸ್ವಾಮಿ ವಿವೇಕಾನಂದರ ಮನದಲ್ಲಿ ಮೂಡಿ ನಿಂತ ಬೃಹತ್ ಯೋಜನೆ.

ಇದೊಂದು ಅತ್ಯದ್ಭುತವಾದ ಕನಸೇ ಸರಿ! ಆದರೆ ಇದು ಒಬ್ಬ ವ್ಯಕ್ತಿಯ ಜೀವಿತಾವಧಿಯಲ್ಲಿ ಈಡೇರಬಹುದಾದದ್ದೆ? ಕೈಯಲ್ಲಿ ಬಿಡಿಗಾಸಿಲ್ಲದ ಅಲೆಮಾರಿ ಸಂನ್ಯಾಸಿಯೊಬ್ಬನಿಂದ ಸಾಧ್ಯವಾಗಬಹುದಾದ ಕಾರ್ಯವೆ ಇದು? ನಿಜ; ಇದು ಭಗೀರಥಸಾಧ್ಯವಾದುದೇ ಸರಿ. ಆದರೆ ವಿವೇಕಾನಂದರ ಹಿಂದಿದ್ದ ಶಕ್ತಿ ಯಾವುದು? ಸ್ವಯಂ ಶ್ರೀರಾಮಕೃಷ್ಣರು! ಸ್ವಾಮೀಜಿಯವರನ್ನು ಎಡೆಬಿಡದೆ ಮುನ್ನಡೆಸಿ ಕಾಪಾಡಿ

ದವರು ಯಾರು ? ಸ್ವಯಂ ಶ್ರೀರಾಮಕೃಷ್ಣರು ! ಇದನ್ನು ಸ್ವಾಮೀಜಿಯವರು ಮತ್ತೆ ಮತ್ತೆ ಸ್ಪಷ್ಟವಾಗಿ ಕಾಣುತ್ತಿದ್ದರು. ಈ ಶಕ್ತಿಯಿಂದ ಪ್ರೇರಿತರಾಗಿ ಅವರು ಶ್ರೀರಾಮ ಕಾರ್ಯವನ್ನು ನೆರವೇರಿಸಲು ಹೊರಟ ಆಂಜನೇಯನಂತೆ, ಪ್ರಚಂಡ ಶಕ್ತ್ಯುತ್ಸಾಹ ಧೈರ್ಯಗಳಿಂದ ಕಾರ್ಯಪ್ರವೃತ್ತರಾದರು. ಮುಂದಿನ ದಾರಿ ತಾನಾಗಿಯೇ ತೆರೆದು ಕೊಳ್ಳುತ್ತಹೋಯಿತು. ಅನೇಕಾನೇಕ ವಿದ್ಯಾವಂತ ಯುವಕರ ಮತ್ತು ಧರ್ಮಪ್ರೇಮಿ ಗಳಾದ ರಾಜರ ಬೆಂಬಲ ಗಳಿಸಿ, ೧೮೯೩ರಲ್ಲಿ ಅಮೆರಿಕ ದೇಶಕ್ಕೆ ಹೋದರು. ಅಲ್ಲಿ ಏರ್ಪಾಡಾಗಿದ್ದ ವಿಶ್ವಧರ್ಮ ಸಮ್ಮೇಳನದ ಮೇಲೆ ಸನಾತನ ಧರ್ಮದ ಕೀರ್ತಿಪತಾಕೆ ಯನ್ನು ಹಾರಿಸಿ, ವಿಶ್ವವಿಖ್ಯಾತಿ ಗಳಿಸಿದರು. ಹಲವು ವರ್ಷಗಳ ಕಾಲ ಪಾಶ್ಚಾತ್ಯ ರಾಷ್ಟ್ರ ಗಳಲ್ಲಿ ಸಂಚರಿಸಿ, ಆಧುನಿಕ ಮಹರ್ಷಿಯಂತೆ ವೇದವಾಣಿಯನ್ನು ಮೊಳಗಿ ಲೋಕ ಸಂಗ್ರಹಕಾರ್ಯವನ್ನು ಯಶಸ್ವಿಯಾಗಿ ಸಾಧಿಸಿದರು. ಬಳಿಕ ಅವರು ತಾಯ್ನಾಡಿಗೆ ಮರಳಿದಾಗ ಸಮಸ್ತ ಭಾರತವೇ ಅವರಿಗೆ ಪ್ರೀತ್ಯಾದರಪೂರ್ವಕ ಸ್ವಾಗತ ನೀಡಿತು; ಅವರ ತೂರ್ಯವಾಣಿಯನ್ನಾಲಿಸಿ ನವೋತ್ಸಾಹದಿಂದ ಗರಿಗೆದರಿ ನಿಂತಿತು.

ಈಗ ಸ್ವಾಮೀಜಿಯವರು ತಮ್ಮ ಸೋದರ ಸಂನ್ಯಾಸಿಗಳ ನೆರವಿನಿಂದ, ತಾವೀ ಗಾಗಲೇ ಹುಟ್ಟು ಹಾಕಿದ್ದ ನೂತನ ಸಂನ್ಯಾಸ ಪರಂಪರೆಯನ್ನು ವಿಸ್ತರಿಸಿದರು. ಅದೊಂದು ಸುವ್ಯವಸ್ಥಿತ ಸಂಸ್ಥೆಯಾಗಿ ಬೆಳೆದು, ಭಾರತದಲ್ಲೂ ವಿಶ್ವದ ಹಲವೆಡೆ ಗಳಲ್ಲೂ ಅದರ ಶಾಖೆಗಳು ಹುಟ್ಟಿಕೊಂಡುವು. 'ಶ್ರೀರಾಮಕೃಷ್ಣ ಮಠ ಮತ್ತು ಮಿಷನ್' ಎಂಬ ಹೆಸರಿನಿಂದ ಅದು ಪ್ರಸಿದ್ಧಿ ಹೊಂದಿತು. ಬಳಿಕ ಸ್ವಾಮೀಜಿಯವರು ಕಲ್ಕತ್ತದ ಬಳಿಯ ಬೇಲೂರು ಎಂಬಲ್ಲಿ ಗಂಗಾತೀರದ ದೊಡ್ಡ ನಿವೇಶನವೊಂದನ್ನು ಖರೀದಿಸಿ, ಅಲ್ಲಿ ಶ್ರೀರಾಮಕೃಷ್ಣರ ಅಸ್ಥಿಯನ್ನು ಪ್ರತಿಷ್ಠಾಪಿಸಿ, ಸುಂದರವಾದ ಬೃಹತ್ ದೇವಾಲಯದ ನಿರ್ಮಾಣಕ್ಕೆ ಸಕಲ ಸಿದ್ಧತೆಯನ್ನೂ ಮಾಡಿದರು. ಇಂದು ನಾವು ಕಾಣುವ ಶ್ರೀರಾಮಕೃಷ್ಣ ಮಹಾಸಂಸ್ಥೆ ಸ್ವಾಮೀಜಿಯವರ ತಪಶ್ಶಕ್ತಿಯ ಹಾಗೂ ಅಪಾರ ಶ್ರಮದ ಮಹಾಫಲ.

ಹೀಗೆ ಸ್ವಾಮಿ ವಿವೇಕಾನಂದರು ಅತ್ಯಂತ ಅಲ್ಪಾವಧಿಯಲ್ಲಿ, ಅಭೂತಪೂರ್ವ ವಾದ ಮಹಾಕಾರ್ಯಗಳನ್ನು ನೆರವೇರಿಸಿದರು. ಆದರೆ ಅವರು ಯಶಸ್ಸಿನ, ಪ್ರಸಿದ್ಧಿಯ ಶೃಂಗವನ್ನೇರಿದ್ದಾಗ ಅವರನ್ನು ಗೌರವಿಸಲು ಪೌರ್ವಾತ್ಯ-ಪಾಶ್ಚಾತ್ಯ ರಾಷ್ಟ್ರಗಳು ನಾಮುಂದು ತಾಮುಂದೆಂದು ಸೆಣಸುತ್ತಿದ್ದ ಸಮಯದಲ್ಲಿ, ತಮಗೆ ಸಂದ ಸಮ್ಮಾನ ವನ್ನೆಲ್ಲ ಗುರುದೇವನ ಶ್ರೀಚರಣಗಳಲ್ಲಿ ಸಮರ್ಪಣ ಮಾಡುತ್ತ ಘೋಷಿಸುತ್ತಾರೆ:

"ನನ್ನ ಭಾವನೆಗಳಿಂದಾಗಲಿ, ಮಾತುಗಳಿಂದಾಗಲಿ, ಕೃತಿಗಳಿಂದಾಗಲಿ ಏನಾದರೂ ಒಳ್ಳೆಯದಾಗಿದ್ದರೆ, ನನ್ನ ಬಾಯಿಂದ ಯಾರಿಗಾದರೂ ಸಹಾಯವಾಗುವಂಥ ನುಡಿ ಯೊಂದು ಹೊರಬಿದ್ದಿದ್ದರೆ ಅದು ನನ್ನದಲ್ಲ, ಅದೆಲ್ಲ ಅವರದು (ಶ್ರೀರಾಮಕೃಷ್ಣರದು). ಅವುಗಳಲ್ಲಿ ದೌರ್ಬಲ್ಯಕಾರಕವಾದದ್ದು ಏನಿದ್ದರೂ ಅದು ಮಾತ್ರ ನನ್ನದು. ಆದರೆ ಯಾವುದು ಚೈತನ್ಯದಾಯಕವಾದುದೋ, ಪವಿತ್ರವಾದುದೋ ಅದು ಅವರ ಶಕ್ತಿಲೀಲೆ, ಅದು ಅವರ ವಾಣಿ, ಅದು ಸ್ವಯಂ ಅವರೇ. ಬಂಧುಗಳೇ, ಅವರನ್ನು ಜಗತ್ತಿನ್ನೂ ಅರಿಯಬೇಕು. . ."

# ಅನುಬಂಧ-೧

ಶ್ರೀಕೃಷ್ಣಚೈತನ್ಯನ ಅಂತರಂಗಭಕ್ತರಲ್ಲಿ ರಘುನಾಥ ದಾಸ ಎನ್ನುವವನೊಬ್ಬನು. ಇವನ ತ್ಯಾಗ ವೈರಾಗ್ಯಗಳ ವಿಚಾರ ಬಹಳ ಪ್ರಸಿದ್ಧವಾದದ್ದು. ಈತ ತನ್ನ ತಾಯ್ತಂದೆಯರಿಗೆ ಒಬ್ಬನೇ ಮಗ. ಅಪಾರ ಸಂಪತ್ತು, ಲಾವಣ್ಯವತಿಯಾದ ಪತ್ನಿ—ಹೀಗೆ ಎಲ್ಲ ಲೌಕಿಕ ಸುಖಗಳೂ ಅವನ ಪಾಲಿಗಿದ್ದುವು. ಹೀಗಿದ್ದರೂ ಅವನಲ್ಲಿ ಸಂಸಾರದ ಬಗ್ಗೆ ವೈರಾಗ್ಯವುದಿಸಿತು. ಸಂಸಾರವನ್ನು ತ್ಯಜಿಸಿ, ಚೈತನ್ಯದೇವನಲ್ಲಿ ಶರಣಾಗುವ ಇಚ್ಛೆ ತಳೆದು ಶಾಂತಿಪುರಕ್ಕೆ ಧಾವಿಸಿದ. ಆದರೆ ಚೈತನ್ಯನು ಅವನನ್ನು ಒಮ್ಮೆಗೇ ಸ್ವೀಕರಿಸದೆ, ಅವನ ವೈರಾಗ್ಯವನ್ನು 'ಮರ್ಕಟವೈರಾಗ್ಯ' ಎಂದು ಕರೆದು, ಇನ್ನೂ ಕೆಲಕಾಲ ಸಂಸಾರಸ್ಥನಾಗಿರುವಂತೆ ಆದೇಶಿಸಿದ. ಅದನ್ನು ಶಿರಸಾವಹಿಸಿ ರಘುನಾಥದಾಸ ಮನೆಗೆ ಹಿಂದಿರುಗಿ, ಒಲ್ಲದ ಮನಸ್ಸಿನಿಂದಲೇ ಸಂಸಾರಜೀವನವನ್ನು ಮುಂದುವರಿಸಿದ.

ಆದರೂ ಅವನು ಆಗಾಗ ಚೈತನ್ಯನ ಭಕ್ತರನ್ನು ಭೇಟಿಯಾಗದೆ ಇರುತ್ತಿರಲಿಲ್ಲ. ತನ್ನ ಹಂಬಲ ಯಾವಾಗ ಕೈಗೂಡೀತೋ ಎಂಬ ನಿರೀಕ್ಷೆಯಲ್ಲೇ ದಿನ ತಳ್ಳುತ್ತಿದ್ದ. ಈ ನಡುವೆ ಚೈತನ್ಯನು ಸಂನ್ಯಾಸಿಯಾಗಿ ನೀಲಾಚಲ(ಪುರೀ ಕ್ಷೇತ್ರ)ದಲ್ಲಿ ನೆಲೆ ನಿಂತ. ಆತನ ಸಖನೂ ಪ್ರಧಾನ ಶಿಷ್ಯನೂ ಆದ ನಿತ್ಯಾನಂದನೀಗ ವೈಷ್ಣವದ ಮತ ಪ್ರಚಾರದ ಹೊಣೆ ಹೊತ್ತ; ನಾಮಸಂಕೀರ್ತನಾದಿಗಳ ಮೂಲಕ ಅದನ್ನು ಜನಪ್ರಿಯಗೊಳಿಸುತ್ತ ಬಂಗಾಳದಲ್ಲೆಲ್ಲ ಸಂಚರಿಸಲಾರಂಭಿಸಿದ.

ಅವನು ಹೀಗೇ ಧರ್ಮಪ್ರಚಾರಕ್ಕಾಗಿ ಅನುಯಾಯಿಗಳೊಂದಿಗೆ ಪಾನಿಹಾಟಿ ಗ್ರಾಮಕ್ಕೆ ಬಂದಿದ್ದಾಗ ರಘುನಾಥ ದಾಸ ಆತನ ದರ್ಶನಕ್ಕಾಗಿ ಬಂದ. ರಘುನಾಥನು ಆಗಾಗ ಮನೆಯಿಂದ ಓಡಿಹೋಗಿ ಏಕಾಂತದಲ್ಲಿದ್ದು ಭಗವದಾನಂದವನ್ನು ಸವಿಯುತ್ತಾನೆ ಎಂಬ ವಿಷಯವನ್ನು ತಿಳಿದ ನಿತ್ಯಾನಂದ ಅವನಿಗೊಂದು 'ಶಿಕ್ಷೆ' ವಿಧಿಸುತ್ತಾನೆ: "ಕಳ್ಳ ! ನೀನು ಯಾರಿಗೂ ಗೊತ್ತಾಗದಂತೆ ಒಬ್ಬನೇ ಏಕಾಂತದಲ್ಲಿ ಭಗವದಾನಂದವನ್ನು ಅನುಭವಿಸುತ್ತಿದ್ದೀಯಾ ? ತಾಳು, ನಿನಗೆ ಶಿಕ್ಷೆ ವಿಧಿಸುತ್ತೇನೆ—ನೀನು ಒಂದು ಉತ್ಸವವನ್ನು ಏರ್ಪಾಡು ಮಾಡಿ ಭಕ್ತರಿಗೆಲ್ಲ ಅವಲಕ್ಕಿ, ಮೊಸರು, ಹಾಲು, ಸಕ್ಕರೆ, ಬಾಳೆಹಣ್ಣು ಇವನ್ನೆಲ್ಲ ಹಂಚಬೇಕು." ರಘುನಾಥ ಅತ್ಯಾನಂದಿತನಾಗಿ, ನಿತ್ಯಾನಂದನ ದರ್ಶನಕ್ಕಾಗಿ ಬಂದಿದ್ದ ನೂರಾರು ಜನರಿಗೆ ಅಂದು ಗಂಗಾತೀರದಲ್ಲಿ ಭೋಜನವಿತ್ತು ಉಪಚರಿಸಿದ. ಆತನ ಭಕ್ತಿ ಶ್ರದ್ಧೆಗಳಿಂದ ಸಂತುಷ್ಟನಾದ ನಿತ್ಯಾನಂದ ಅವನನ್ನು "ಚೈತನ್ಯ ಮಹಾಪ್ರಭು ನಿನಗೆ ಆಶ್ರಯ ಕೊಡುತ್ತಾನೆ, ಹೋಗು" ಎಂದು ಹೇಳಿ ಕಳಿಸಿಕೊಟ್ಟ. ಆ ತರುವಾಯ ವೈಷ್ಣವಭಕ್ತರು ಅವನ ಸ್ಮರಣಾರ್ಥವಾಗಿ ಪ್ರತಿವರ್ಷವೂ ಆ ಸ್ಥಳದಲ್ಲಿ ಉತ್ಸವ ನಡೆಸಲಾರಂಭಿಸಿದರು. ಕ್ರಮೇಣ ಅದಕ್ಕೆ 'ಅವಲಕ್ಕಿ ಉತ್ಸವ' ಎಂದೇ ಹೆಸರಾಯಿತು.

# ಅನುಬಂಧ-೨

ಶ್ರೀರಾಮಕೃಷ್ಣರು ತಮ್ಮ ದಿವ್ಯತೆಯನ್ನು ಸಾರ್ವಜನಿಕವಾಗಿ ಬಹಿರಂಗಪಡಿಸಿದ ಮತ್ತು ಭೇದಭಾವವಿಲ್ಲದೆ ಎಲ್ಲರ ಮೇಲೂ ವಿಶೇಷ ಕೃಪೆಯನ್ನು ವರ್ಷಿಸಿದ ದಿನವು (ಜನವರಿ ಒಂದನೇ ತಾರೀಕು) ಶ್ರೀರಾಮಕೃಷ್ಣ ಪರಂಪರೆಯಲ್ಲಿ, ಅದರಲ್ಲೂ ಬಂಗಾಳ ದಲ್ಲಿ, 'ಕಲ್ಪತರು ದಿನ' ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಅಂದು, ಆ ಲೀಲಾಘಟನೆ ಸಂಭವಿಸಿದ ಕಾಶೀಪುರದ ಉದ್ಯಾನಗೃಹಶಾಖೆಯಲ್ಲಿ ನಡೆಯುವ ಉತ್ಸವದ ಸಂಭ್ರ ಮವೇ ಸಂಭ್ರಮ! (ಆ ದಿನ ರಾಮಕೃಷ್ಣ ಸಂಚಲನದ ಕೇಂದ್ರಸ್ಥಾನವಾದ ಬೇಲೂರು ಮಠದಲ್ಲಿ ವಿಶೇಷ ಉತ್ಸವ ಇರುವುದಿಲ್ಲ.) ಯಾವುದೇ ಆಹ್ವಾನವಾಗಲಿ ಪ್ರಚಾರ ವಾಗಲಿ ಇಲ್ಲದೆಯೇ ಅಂದು ಲಕ್ಷಾಂತರ ಜನರು ಉದ್ಯಾನಗೃಹದಲ್ಲಿ ನೆರೆದು, ಕಾರ್ಯ ಕ್ರಮಗಳಲ್ಲಿ ಶಾಂತವಾಗಿ ಪಾಲ್ಗೊಳ್ಳುತ್ತಾರೆ.

ಶ್ರೀರಾಮಕೃಷ್ಣಲೀಲೆಯ ಅತ್ಯಂತ ಅದ್ಭುತ-ರೋಮಾಂಚಕ ದೃಶ್ಯಗಳಿಗೆಲ್ಲ ಸಾಕ್ಷಿ ಯಾಗಿದ್ದ ಸ್ಥಳ—ಈ ಉದ್ಯಾನಗೃಹ. ಭಕ್ತರ, ಭಾವುಕರ ಪಾಲಿಗೆ ಅದೊಂದು ಅನರ್ಘ್ಯ ನಿಧಿ. ಅದರ ಮಹಿಮೆ ಹಿನ್ನೆಲೆಗಳನ್ನರಿತವರಿಗೆ ನಿರಂತರ ಸ್ಫೂರ್ತಿಯ ಸೆಲೆ. ಈ ಪರಮಪವಿತ್ರ ತಾಣವನ್ನು ಯಥಾವತ್ತಾಗಿ ಸಂರಕ್ಷಿಸಬೇಕು; ಇದು ತಮ್ಮ ವಶವಾಗ ಬೇಕು; ಇಲ್ಲಿನ ಆಧ್ಯಾತ್ಮಿಕ ಭಾವತರಂಗಗಳು ತಲೆತಲಾಂತರಗಳವರೆಗೂ ಭಕ್ತಜನರನ್ನು ಪ್ರಚೋದಿಸುತ್ತಿರಬೇಕು—ಇದು ಮೊದಲಿನಿಂದಲೂ ಶ್ರೀರಾಮಕೃಷ್ಣ ಸಂಘದ ಸದಸ್ಯರ ತೀವ್ರ ಹಂಬಲ. ಆದರೆ ಆಗಿನ ಕಾಲಕ್ಕೇ ಲಕ್ಷಾಂತರ ರೂಪಾಯಿ ಬೆಲೆ ಬಾಳುತ್ತಿದ್ದ ಆ ಆಸ್ತಿ ಅವರ ಕೈಗೆಟಕುವ ಬಗೆಯೆಂತು? ಆದರೂ ಅವರ ಬಯಕೆಯೇನೂ ಕುಂದ ಲಿಲ್ಲ. ಎಷ್ಟೋ ದಶಕಗಳೇ ಕಳೆದ ಮೇಲೂ ಅವರ ಈ ಬಯಕೆ ಅಷ್ಟೇ ದೃಢವಾಗಿತ್ತು. ಆದರೆ ಕಾರಣಾಂತರಗಳಿಂದ, ಖಾಸಗಿಯವರ ಕೈಯಲ್ಲಿದ್ದ ಆ ಭೂಮಿಯನ್ನು ವಶಪಡಿಸಿಕೊಳ್ಳಲು ಮಠಕ್ಕೆ ಸಾಧ್ಯವಾಗಲಿಲ್ಲ. ಈ ನಡುವೆ (ಆಂಗ್ಲರ ಒಡೆತನದ ಸ್ವಾತಂತ್ರ್ಯಪೂರ್ವದಲ್ಲಿ) ರೈಲ್ವೇ ಕಂಪೆನಿಯ ಕಣ್ಣು ಆ ಜಾಗದ ಮೇಲೆ ಬಿದ್ದಿತ್ತು. ತಾನು ಅದನ್ನು ಕೊಂಡುಕೊಳ್ಳಲು ಕಂಪೆನಿ ಪ್ರಯತ್ನಿಸಿತು. 'ಇಂತಹ ಪಾವನಕರ ತೀರ್ಥಕ್ಷೇತ್ರವು ಕಲ್ಲಿದ್ದಲಿನ ಅಥವಾ ಸೆಣಬಿನ ಗೋದಾಮಾಗಿ ವಿರೂಪಗೊಳ್ಳುವು ದಲ್ಲಾ!' ಎಂದು ಭಕ್ತರೆಲ್ಲ ಸಂಕಟಪಟ್ಟು ಚಡಪಡಿಸಿದರು. ಆದರೆ ಸುದೈವವಶಾತ್, ರೈಲ್ವೇ ಕಂಪೆನಿಯ ಪ್ರಯತ್ನ ಫಲಿಸಲಿಲ್ಲ. ಅಂತೂ ಇಂತೂ, ಮುಂದೆ ೧೯೪೬ರಲ್ಲಿ, ಆ ಇಡೀ ಉದ್ಯಾನಗೃಹವನ್ನು ಸ್ವಾಧೀನಪಡಿಸಿಕೊಳ್ಳುವಲ್ಲಿ ರಾಮಕೃಷ್ಣ ಸಂಘ ಯಶಸ್ವಿ ಯಾಯಿತು.

ಈಗ ಇಲ್ಲಿ ರಾಮಕೃಷ್ಣ ಮಠದ ಶಾಖೆಯೊಂದು ಕಾರ್ಯ ನಿರ್ವಹಿಸುತ್ತಿದೆ. ಹಳೆಯ ಕಟ್ಟಡಗಳನ್ನು ಕೆಡವದೆ, ಹಾಗೆಯೇ ರಿಪೇರಿ ಮಾಡಿ ಮೂಲರೂಪದಲ್ಲಿ ಉಳಿಸಿಕೊಳ್ಳಲಾಗಿದೆ. ಮತ್ತು ಶ್ರೀರಾಮಕೃಷ್ಣ ಲೀಲೆಗೆ ಸಂಬಂಧಿಸಿದ ವಿಶೇಷ ಸ್ಥಾನ ಗಳನ್ನು ಗುರುತು ಮಾಡಿಡಲಾಗಿದೆ.

# ಗ್ರಂಥಋಣ


1. *Sri Ramakrishna, The Great Master* – (Tr.) Swami Jagadananda
2. *Life of Sri Ramakrishna* – Advaita Ashrama
3. *First Meetings with Sri Ramakrishna* – Swami Prabhananda
4. *The Gospel of Sri Ramakrishna* – (Tr.) Swami Nikhilananda
5. *A Bridge to Eternity* – Advaita Ashrama
6. *Swami Adbhutananda: Teachings and Reminiscences* – Swami Chetanananda
7. *The Disiciples of Sri Ramakrishna* – Advaita Ashrama
8. *Sri Ramakrishna and His Disiciples* – Sister Devamata
9. *Sri Ramakrishna Centenary Souvenir* – Sri Ramakrishna Centenary Committee, Belur Math
10. *Swami Akhandananda And His Memoirs of Sri Ramakrishna* – Swami Jagadiswarananda
11. *Swami Vijnanananda – His Life and Sayings* – Swami Vishwashrayananda
12. *Swami Abhedananda – A Spiritual Biography* – Moni Bagchi
13. *Dakshineshwar of Sri Ramakrishna* – Pravrajka Atmaprana
14. *Life of Swami Turiyananda* – Swami Ritajananda
15. *They Lived With God* – Swami Chetanananda

Also: Various issues of *Prabuddha Bharata* and *Vedanta Kesari*

1. *ಶ್ರೀರಾಮಕೃಷ್ಣ ಲೀಲಾಪ್ರಸಂಗ* —(ಅನು.) ಸ್ವಾಮಿ ಪ್ರಣವೇಶಾನಂದ
2. *ಶ್ರೀರಾಮಕೃಷ್ಣ ವಚನವೇದ (ಸಂ. 1, 2)* —ಶ್ರೀರಾಮಕೃಷ್ಣಾಶ್ರಮ, ಮೈಸೂರು
3. *ಸತ್ಕಥಾ* —ಶ್ರೀರಾಮಕೃಷ್ಣಾಶ್ರಮ, ಮೈಸೂರು
4. *ಶ್ರೀಶಾರದಾದೇವೀ ಜೀವನಗಂಗಾ* —ಸ್ವಾಮಿ ಪುರುಷೋತ್ತಮಾನಂದ
5. *ವೀರಸಂನ್ಯಾಸಿ ವಿವೇಕಾನಂದ* —ಸ್ವಾಮಿ ಪುರುಷೋತ್ತಮಾನಂದ

## ಇದೇ ಲೇಖಕರ ಇತರ ಕೃತಿಗಳು

1. **ಶ್ರೀಶಾರದಾದೇವೀ ಜೀವನಗಂಗಾ**
   ಶ್ರೀಮಾತೆ ಶಾರದಾದೇವಿಯವರ ವಿವರಪೂರ್ಣ ಜೀವನಕಥೆ.
2. **ಸ್ವಾಮಿ ವಿವೇಕಾನಂದರ ಸಮಗ್ರ ಜೀವನ ಚರಿತ್ರೆ** — *ಮೂರು ಸಂಪುಟಗಳಲ್ಲಿ*
   ಸಂ. 1 : ವೀರಸಂನ್ಯಾಸಿ ವಿವೇಕಾನಂದ
   ಸಂ. 2 : ವಿಶ್ವವಿಜೇತ ವಿವೇಕಾನಂದ
   ಸಂ. 3 : ವಿಶ್ವಮಾನವ ವಿವೇಕಾನಂದ
3. ಬ್ರಹ್ಮಾನುಭವಿ — *ಸ್ವಾಮಿ ಬ್ರಹ್ಮಾನಂದರ ಜೀವನ ಚರಿತ್ರೆ*
4. ಶ್ರೀಶಾರದಾದೇವೀ ಸಂದೇಶಮಂದಾರ

ಕಿರುಹೊತ್ತಗೆಗಳು

5. ಬಾಲಕ ಸಂಘ — ಒಂದು ವಿನೂತನ ಪ್ರಯೋಗ
6. ವಿನಯಮೂರುತಿ ಶ್ರೀರಾಮಕೃಷ್ಣ
7. ಪ್ರಿಯದರ್ಶನ ಶ್ರೀರಾಮ
8. ವಿವೇಕವಾಹಿನಿ
9. ಚಿಂತನ-ಮಂಥನ
10. ಮಿಂಚಿನ ಗೊಂಚಲು
11. ವಿದ್ಯೆಯ ವೈಭವ
12. ಧೀರತೆಯ ದುಂದುಭಿ
13. ವಿಶ್ವಮಾನವನಾಗಿ ವಿವೇಕಾನಂದ
14. ಕರ್ನಾಟಕದ ಯುವಜನತೆಗೊಂದು ಕರೆ
15. ಶ್ರೀಗುರುಮಹಿಮೆ
16. ವಿದ್ಯಾರ್ಥಿಗೊಂದು ಪತ್ರ
17. ಅಧ್ಯಯನದಲ್ಲಿ ಏಕಾಗ್ರತೆ
18. Secret of Concentration
19. Letter to a Student

"ದಿನಸಿ ವ್ಯಾಪಾರಿ ತನ್ನ ಉಗ್ರಾಣದಲ್ಲಿ ಮೂಟೆಗಳಲ್ಲಿ ಅಕ್ಕಿಯನ್ನು ತುಂಬಿಟ್ಟಿರುತ್ತಾನೆ. ಇಲಿಗಳು ಆ ಮೂಟೆಗಳ ಹತ್ತಿರ ಹೋಗದಿರಲಿ ಅಂತ ಹತ್ತಿರವೇ ಒಂದು ಮೊರದಲ್ಲಿ ಪುರಿಯನ್ನೂ ಇಡುತ್ತಾನೆ. ಇಲಿಗಳಿಗೆ ಆ ಪುರಿ ಬಹಳ ಸಿಹಿಯಾಗಿ ತೋರುತ್ತದೆ. ಆದ್ದರಿಂದ ಅವು ರಾತ್ರಿಯಿಡೀ 'ಕರ್‌ಕ್, ಕರ್‌ಕ್' ಅಂತ ಆ ಪುರಿಯನ್ನು ತಿನ್ನುತ್ತಲೇ ಇರುತ್ತವೆ, ಅಕ್ಕಿ ಮೂಟೆಗಳ ಕಡೆಗೆ ಹೋಗುವುದೇ ಇಲ್ಲ. ಆದರೆ ನೋಡು! ಒಂದು ಸೇರು ಅಕ್ಕಿಯನ್ನು ಹುರಿದರೆ ಹದಿನಾರು ಸೇರು ಪುರಿಯಾಗುತ್ತದೆ. ಕಾಮಕಾಂಚನಗಳ ಸುಖದೊಡನೆ ಹೋಲಿಸಿ ನೋಡಿದರೆ, ಭಗವದಾನಂದ ಎಷ್ಟು ಅಮಿತವಾದದ್ದು! ಭಗವಂತನ ರೂಪವನ್ನು ಚಿಂತಿಸಿದುದೇ ಆದರೆ, ರಂಭೆ ತಿಲೋತ್ತಮೆಯರ ರೂಪವೂ ಹೆಣಸುಟ್ಟ ಬೂದಿಯ ಹಾಗೆ ತೋರಿಬರುತ್ತದೆ."

—ಶ್ರೀರಾಮಕೃಷ್ಣ

ಶ್ರೀರಾಮಕೃಷ್ಣ ಆಶ್ರಮ, ಬೆಂಗಳೂರು